ಶ್ರೀ ಜಯಚಾಮರಾಜೇಂದ್ರ ಗ್ರಂಥರತ್ನಮಾಲಾ

ನಂ—೧೬

ಶ್ರೀ ವ್ಯಾಸಮಹರ್ಷಿಪ್ರಣೀತಂ

ಶ್ರೀ

# ಪದ್ಮಮಹಾಪುರಾಣಂ

(ಸಂಸ್ಕೃತಮೂಲ, ಕನ್ನಡದ ಅರ್ಥಾನುವಾದವಿವರಣೆಗಳೊಡನೆ)

## ಉತ್ತರಖಂಡ—ಮೂರನೆಯ ಭಾಗ

(೬೬--೧೨೫ ಅಧ್ಯಾಯಗಳು)



ಅನುವಾದಕ:

**ಬೇಲದಕೆರೆ ಸೂರ್ಯನಾರಾಯಣಶಾಸ್ತ್ರೀ**

ಸಾಹಿತ್ಯ ವಿದ್ವಾನ್

ಕನ್ನಡ ಪಂಡಿತ (ಮೈಸೂರು) ಕನ್ನಡ ವಿದ್ವಾನ್ (ಮದ್ರಾಸು)



ಮೈಸೂರು:

ಶ್ರೀ ಹನುಮಾನ್ ಪ್ರೆಸ್

೧೯೪೫

॥ ಶ್ರೀಃ ॥

-X-

# ಮುನ್ನುಡಿ



ಇದು ಪದ್ಮಪುರಾಣದ ಉತ್ತರಖಂಡದ ಮೂರನೆಯ ಭಾಗವು. ಇದರಲ್ಲಿ ಅರವತ್ತಾರನೆಯ ಅಧ್ಯಾಯದಿಂದ ನೂರ ಇಪ್ಪತ್ತೈದನೆಯ ಅಧ್ಯಾಯದವರೆಗೆ ಸಂಗ್ರಹಿಸಿದೆ.

ಇದರಲ್ಲಿ ವ್ರತಗಳಲ್ಲಿ ಪ್ರಸಿದ್ಧವಾದ ಚಾತುರ್ಮಾಸ್ಯವ್ರತವು ವಿಶದವಾಗಿ ಹೇಳಲ್ಪಟ್ಟಿದೆ. ಗೋಪೀಚಂದನದ ವಿಧಾನವೂ ಮಹಿಮೆಯೂ ಉತ್ತಮವಾಗಿದೆ. ವೈಷ್ಣವರ ಲಕ್ಷಣ, ಶ್ರವಣ ದ್ವಾದಶಿಯ ವಿಧಾನ, ನದೀ ತ್ರಿರಾತ್ರ ವಿಧಿ, ವಿಷ್ಣು ಸಹಸ್ರನಾಮಸ್ತೋತ್ರ, ಅಪಾಮಾರ್ಜನಸ್ತೋತ್ರ, ಡೋಲೋತ್ಸವ, ದಮನ ಕೋತ್ಸವ, ಪವಿತ್ರಾರೋಪಣವಿಧಿ ಇವೆಲ್ಲವೂ ವಿವರವಾಗಿ ಕಥೆಗಳೊಡನೆ ವಿವೃತವಾಗಿವೆ.

ಅನಂತರ ಕಾರ್ತಿಕಮಹಿಮೆಯನ್ನು ವಿವರಿಸುವುದಕ್ಕೆ ಮೊದಲುಮಾಡಿ ಅದರಲ್ಲಿ ಶಂಖಾನುಪಾಖ್ಯಾನ, ಪ್ರಯಾಗದ ಉತ್ಪತ್ತಿ, ತುಲಸೀಮಹಿಮೆ, ಕೀರ್ತಿ ಮುಖೋತ್ಪತ್ತಿ, ರಾಹುವಿಗೆ ಬರ್ಬರ ದೇಶದಲ್ಲಿ ಹುಟ್ಟಿದನೆಂಬ ಹೆಸರು ಬರಲು ಕಾರಣ, ಕಲಹೋಪಾಖ್ಯಾನ, ಚೋಳರಾಜ ಕಥೆಯನ್ನು ಹೇಳುತ್ತಾ ಚೋಳರು ಮಗಳ ಮಗನಿಗೆ ರಾಜ್ಯವನ್ನು ಕೊಡಲು ಕಾರಣ, ಮುದ್ಗಲರು ಜುಟ್ಟನ್ನು ತೆಗೆಸಲು ಕಾರಣ ಇವನ್ನು ವರ್ಣಿಸಿರುವುದು. ಕಾರ್ತಿಕದ ಮಹಿಮೆಯಲ್ಲಿ ದೀಪಾವಳಿಯ ವಿಧಿ, ಭೀಷ್ಮಪಂಚವಿಧಾನವನ್ನು ವಿವರಿಸಿದೆ.

ಜಲಂಧರನ ಕಥೆಯು ಹಿಂದೆ ಬಂದಿದ್ದರೂ ಇಲ್ಲಿ ಸ್ವಲ್ಪ ವಿಶೇಷವನ್ನು ತೋರಿಸುತ್ತಾ ವಿಷ್ಣುವನ್ನು ಬೃಂದೆಯು ಚಿತಿಯಿಂದ ಎಬ್ಬಿಸಲು ಲಕ್ಷ್ಮೀ, ಗೌರಿ, ಸರಸ್ವತಿಯರು ಕೊಟ್ಟ ಬೀಜಗಳು ಅವರ ರೂಪವಾಗಿ ತೊಳಸಿ, ನೆಲ್ಲಿ, ಬರ್ಬರ ಗಳಾದುವು ಎಂದು ವರ್ಣಿಸಿ ಅವಕ್ಕೆ ಪ್ರಾಶಸ್ತ್ಯವನ್ನು ಹೇಳಿದೆ. ಇದರಿಂದಲೇ ತೊಳಸಿ, ನೆಲ್ಲಿಗಳು ವಿಷ್ಣುವಿಗೆ ಬಹು ಪ್ರಿಯವಾಗಿವೆಯೆಂದು ವರ್ಣಿಸಿರುತ್ತದೆ.

ಈ ಭಾಗದಲ್ಲಿ ಕಾರ್ತಿಕ ವ್ರತಗಳು ಬಹುವಾಗಿ ಹೇಳಲ್ಪಟ್ಟು ಅವಕ್ಕೆ ಕಾರಣ ಗಳನ್ನಾಗಿ ಅನೇಕ ಕಥೆಗಳನ್ನು ಉದಹರಿಸಿದೆ. ಇವೆಲ್ಲವೂ ಬಹು ಸೊಗಸಾಗಿ ವರ್ಣಿತವಾಗಿವೆ.

ಪಂಡಿತರುಗಳಿಗೆ ಆಶ್ರಯವನ್ನು ಕೊಟ್ಟು ಅವರನ್ನು ಪ್ರೋತ್ಸಾಹಿಸುತ್ತ ಅವರುಗಳಿಂದ ಅನೇಕ ಗ್ರಂಥಗಳು ಕನ್ನಡದಲ್ಲಿ ಹೊರಹೊಮ್ಮುವಂತೆ ಮಾಡಿ ತನ್ಮೂಲಕ ಜನಸಾಮಾನ್ಯರಿಗೂ ಜ್ಞಾನಾಮೃತಪಾನವು ಸುಲಭದಲ್ಲಿ ದೊರಕುವಂತೆ ಲೋಕೋಪಕಾರಮಾಡುತ್ತಲಿರುವ ನಮ್ಮನ್ನಾಳುವ ಮಹಾಸ್ವಾಮಿಯವರಾದ **ಶ್ರೀ ಜಯಚಾಮರಾಜೇಂದ್ರ ಒಡೆಯರ್ ಬಹದ್ದೂರ್, ಜಿ. ಸಿ. ಎಸ್. ಐ.** ಮಹಾಪ್ರಭುಗಳವರಿಗೆ ಭಗವಂತನು ಆಯುರಾರೋಗ್ಯ ಸತ್ಸಂತಾನಗಳನ್ನು ಕೊಟ್ಟು ಕಾಪಾಡಲೆಂದು ಅನನ್ಯಮನಸ್ಕನಾಗಿ ಪ್ರಾರ್ಥಿಸುತ್ತೇನೆ.

ಮೈಸೂರು, ಅನುವಾದಕ,
3—11—1945 **ಬೇಲದಕೆರೆ ಸೂರ್ಯನಾರಾಯಣಶಾಸ್ತ್ರಿ.**



## ಪದ್ಮಮಹಾಪುರಾಣದ ಉತ್ತರಖಂಡದಲ್ಲಿ ಮೂರನೆಯ ಭಾಗದ

## ವಿಷಯಾನುಕ್ರಮಣಿಕೆ



**ಕಾರ್ತಿಕ ಮಹಿಮೆಯು ಮುಗಿದುದು.**



|| ಶ್ರೀಃ ||

-X-

# ಅಥ ಶ್ರೀ ಮಹಾಪುರಾಣೇ ಪಾದ್ಮೇ ಉತ್ತರಖಂಡೇ

## || ಷಟ್‌ಷಷ್ಟಿತಮೋಽಧ್ಯಾಯಃ ||



### || ನಾರದ ಉವಾಚ ||

**ಚಾತುರ್ಮಾಸ್ಯೇ ತು ನಿಯಮಾ ಯೇ ಕೇಚಿದ್ಭುವಿ ವಿಶ್ರುತಾಃ |**
**ತಾನಹಂ ಶ್ರೋತುಮಿಚ್ಛಾಮಿ ಕಥಯಸ್ವ ಮಹೇಶ್ವರ || ೧ ||**

**ಚಾತುರ್ಮಾಸ್ಯೇ ಹರೌ ಸುಪ್ತೇ ಕರ್ತವ್ಯಂ ಕಿಂ ಜನಾರ್ದನೇ |**
**ಷಡ್ರಸಾನಾಂ ಪರಿತ್ಯಾಗೇ ನಖಕೇಶವಿಧಾರಣೇ ||**
**ಅನ್ಯೈಶ್ಚ ನಿಯಮೈಃ ಸ್ವಾಮಿನ್ ಯತ್ಫಲಂ ತದ್ಬ್ರವೀಹಿ ಮೇ || ೨ ||**

---

### ಅರವತ್ತಾರನೆಯ ಅಧ್ಯಾಯವು



೧. ನಾರದನು ಹೇಳಿದನು–ಚಾತುರ್ಮಾಸ್ಯದ ನಿಯಮಗಳು ಭೂಮಿಯಲ್ಲಿ ಯಾವು ಯಾವುವು ಇವೆಯೋ ಅವೆಲ್ಲವನ್ನೂ ದಯವಿಟ್ಟು ಹೇಳು.

೨. ಚಾತುರ್ಮಾಸ್ಯಗಳೆಂದರೆ ಆಷಾಡ ಶ್ರಾವಣ ಭಾದ್ರಪದ ಆಶ್ವಯುಜ ಕಾರ್ತೀಕಗಳು. ಮೊದಲಿನದರ ಶುಕ್ಲ ಏಕಾದಶಿಯಿಂದ ಕಾರ್ತಿಕದ ಶುಕ್ಲ ದ್ವಾದಶಿಯವರೆವಿಗೆ ಆಗುತ್ತವೆ. ಈ ತಿಂಗಳುಗಳಲ್ಲಿ ಹರಿಯು ಮಲಗಿರುತ್ತಾನೆ. ಆಗ ಮಾಡಬೇಕಾದುದೇನು? ಉಪ್ಪು, ಸಿಹಿ, ಕಾರ, ಒಗರು, ಕಹಿ, ಹುಳಿ ಇವೇ ಆರು ರಸಗಳು. ಇವುಗಳನ್ನು ಬಿಡುವುದರಿಂದ ಫಲವೇನು? ಉಗುರು ಕೂದಲುಗಳನ್ನು ಧರಿಸಿಕೊಂಡಿದ್ದರೆ ಫಲವೇನು? ಮತ್ತೆ ಬೇರೆ ಬೇರೆ ನಿಯಮಗಳಿಂದ ಬರತಕ್ಕ ಫಲವೇನು? ನನಗೆ ಹೇಳು.

|| ಸೂತ ಉವಾಚ ||

ಏತಚ್ಛ್ರುತ್ವಾ ತ್ವಸೌ ದೇವಃ ಪ್ರಹಸ್ಯೋತ್ಫುಲ್ಲಲೋಚನಃ ।
ಪ್ರೋವಾಚ ತಂ ದ್ವಿಜವರಂ ನಾರದಂ ತಪಸಾಂ ನಿಧಿಂ || ೩ ||

|| ಮಹಾದೇವ ಉವಾಚ ||

ಶೃಣು ತ್ವಮಿಹ ದೇವರ್ಷೇ ಕಥಯಾಮಿ ಸವಿಸ್ತರಂ ।
ಆಷಾಢಸ್ಯ ಸಿತೇ ಪಕ್ಷೇ ಏಕಾದಶ್ಯಾಮುಪೋಷಿತಃ || ೪ ||

ಚಾತುರ್ಮಾಸ್ಯವ್ರತಾನೀಹ ಗೃಹ್ಣೀಯಾದ್ಭಕ್ತಿಪೂರ್ವಕಂ ।
ಭೂಮಿಶಯ್ಯಾಸಮಾರೂಢೋ ಯೋಗನಿದ್ರಾಂ ಗತೇ ಹರೌ || ೫ ||

ನಯೇತ ಚತುರೋ ಮಾಸಾನ್ ಯಾವದ್ಭವತಿ ಕಾರ್ತಿಕೀ ||
ಪ್ರತಿಷ್ಠಾ ನ ಪ್ರವರ್ತಂತೇ ತಥಾ ಯಜ್ಞಾದಿಕಾಃ ಕ್ರಿಯಾಃ || ೬ ||

ವಿವಾಹವ್ರತಸಂಬಂಧಾಃ ಅನ್ಯನ್ಮಾಂಗಲ್ಯಕರ್ಮ ಚ ।
ಭೂಮಿಪಾನಾಂ ತಥಾ ಯಾತ್ರಾ ಅನ್ಯಾಶ್ಚ ವಿವಿಧಾಃ ಕ್ರಿಯಾಃ || ೭ ||

---

೩. ಸೂತನು ಹೇಳಿದನು–ಇದನ್ನು ಮಹಾದೇವನು ಕೇಳಿ ಕಣ್ಣುಗಳನ್ನು ಅರಳಿಸಿ ನಗುತ್ತ ತಪೋನಿಧಿಯಾದ ಆ ನಾರದನನ್ನು ಕುರಿತು ಇಂತೆಂದನು.

೪–೭. ಮಹಾದೇವನು ಹೇಳಿದನು– ಎಲೈ ದೇವರ್ಷಿಯಾದ ನಾರದನೇ! ವಿಸ್ತಾರವಾಗಿ ಹೇಳುತ್ತೇನೆ. ಕೇಳು. ಆಷಾಢಮಾಸದ ಶುಕ್ಲ ಏಕಾದಶಿಯ ದಿವಸ ಉಪವಾಸಮಾಡಿ ಚಾತುರ್ಮಾಸ್ಯವ್ರತಗಳನ್ನು ಭಕ್ತಿಯಿಂದ ಹಿಡಿಯಬೇಕು. ಹರಿಯು ಯೋಗನಿದ್ರೆಯನ್ನು ಹೊಂದಿದಾಗ ಮನುಷ್ಯನು ನೆಲದಮೇಲೆ ಮಲಗುತ್ತ ಆಷಾಢಶುದ್ಧ ಏಕಾದಶಿ ದಿನದಿಂದ ಕಾರ್ತಿಕ ಶುದ್ಧ ಏಕಾದಶಿಯವರೆಗೂ ನಾಲ್ಕು ತಿಂಗಳನ್ನು ಕಳೆಯಬೇಕು. ಆ ಕಾಲದಲ್ಲಿ ದೇವಸ್ಥಾನಾದಿ ಪ್ರತಿಷ್ಠೆಗಳನ್ನು ಮಾಡಬಾರದು. ಯಾಗಾದಿ ಕ್ರಿಯೆಗಳನ್ನು ಮಾಡಬಾರದು. ಮತ್ತು ಮಂಗಳ ಕರ್ಮಗಳನ್ನು ಯಾವುದನ್ನೂ ಮಾಡಬಾರದು. ರಾಜರು ಜೈತ್ರಯಾತ್ರೆಗೆ ಹೊರಡಕೂಡದು. ಮತ್ತೆ ಯಾವ ಒಳ್ಳೆಯ ಕೆಲಸಗಳನ್ನೂ ಮಾಡಬಾರದು.

ಪ್ರಸುಪ್ತೇ ಚ ಜಗನ್ನಾಥೇ ಅಚ್ಯುತೇ ಗರುಡಧ್ವಜೇ ।
ವ್ರತಕ್ರಿಯಾಂ ಚರೇದ್ಯಸ್ತು ತಸ್ಯ ವ್ರತಫಲಂ ಶೃಣು ॥ ೮ ॥

ಅಶ್ವಮೇಧಸಹಸ್ರೈಸ್ತು ಯತ್ಫಲಂ ಪ್ರಾಪ್ನುಯಾನ್ನರಃ ।
ಚಾತುರ್ಮಾಸ್ಯವ್ರತೈಶ್ಚೀರ್ಣೈಸ್ತತ್ಫಲಂ ಸಮವಾಪ್ನುಯಾತ್ ॥ ೯ ॥

ಮಿಥುನಸ್ಥೇ ಸಹಸ್ರಾಂಶೌ ಸ್ವಾಪಯೇನ್ಮಧುಸೂದನಂ ।
ತುಲಾರಾಶೌ ಗತೇ ಸೂರ್ಯೇ ಪುನರುತ್ಥಾಪಯೇದ್ಧರಿಂ ॥ ೧೦ ॥

ಅಧಿಮಾಸೇ ತು ಪತಿತೇ ತದಾ ಚೈಷ ವಿಧಿಕ್ರಮಃ ।
ಸ್ಥಾಪಯೇತ್ಪ್ರತಿಮಾಂ ವಿಷ್ಣೋಃ ಶಂಖಚಕ್ರಗದಾಧರಾಂ ॥ ೧೧ ॥

ಪಿತಾಂಬರಧರಾಂ ಸೌಮ್ಯಾಂ ಪರ್ಯಂಕೇ ಸ್ಥಾಪಯೇಚ್ಛುಚೌ ।
ಶ್ವೇತವಸ್ತ್ರಸಮಾಚ್ಛನ್ನೇ ಸೋಪಧಾನೇ ತು ನಾರದ ॥ ೧೨ ॥

---

೮. ಗರುಢಧ್ವಜನಾದ ಅಚ್ಯುತನು ಮಲಗಿರುವಾಗ ಕಾಮ್ಯವ್ರತಗಳನ್ನು ಮಾಡುವವನಿಗೆ ಬರುವ ಫಲಗಳನ್ನು ಹೇಳುತ್ತೇನೆ ಕೇಳು.

೯. ಈ ಚಾತುರ್ಮಾಸ್ಯ ವ್ರತವನ್ನು ಮಾಡಿದರೆ ಮನುಷ್ಯನು ಸಾವಿರ ಅಶ್ವಮೇಧಗಳ ಫಲವನ್ನು ಹೊಂದುತ್ತಾನೆ.

೧೦. ಸೂರ್ಯನು ಮಿಥುನರಾಶಿಯನ್ನು ಹೊಂದಿದಾಗ ವಿಷ್ಣುವನ್ನು ಮಲಗಿಸಬೇಕು. ತುಲಾರಾಶಿಗೆ ಸೂರ್ಯನು ಬಂದಾಗ ನಿದ್ದೆಯಿಂದ ಎಬ್ಬಿಸಬೇಕು.

೧೧-೧೨. ಈ ಚಾತುರ್ಮಾಸ್ಯದೊಳಗೆ ಅಧಿಕಮಾಸವು ಬಂದರೆ ಈ ರೀತಿಯಾದ ವಿಧಿಯನ್ನು ಮಾಡಬೇಕು. ಒಂದು ವಿಷ್ಣುವಿನ ಪ್ರತಿಮೆಯನ್ನು ಮಾಡಿಸಬೇಕು. ಆ ಪ್ರತಿಮೆಯು ಶಂಖ ಚಕ್ರ ಗದೆಗಳನ್ನು ಧರಿಸಿರಬೇಕು. ಅದಕ್ಕೆ ಹೊಂಬಣ್ಣದ ಬಟ್ಟೆಯನ್ನು ಹೊದಿಸಿರಬೇಕು. ಆ ಪ್ರತಿಮೆಯನ್ನು ಇಂತಹ ಮಂಚದಮೇಲಿನ ಹಾಸಿಗೆಯಲ್ಲಿ ತಲೆದಿಂಬು ಹಾಕಿ ಮಲಗಿಸಬೇಕು.

ಇತಿಹಾಸಪುರಾಣಜ್ಞೋ ವಿಷ್ಣುಭಕ್ತೋಽಥವಾ ಪುನಃ ।
ಸ್ನಾಪಯಿತ್ವಾ ದಧಿಕ್ಷೀರಮಧುಲಾಜಘೃತೈಸ್ತಥಾ ॥ ೧೩ ॥

ಸಮಾಲಭ್ಯ ಶುಭೈರ್ಗಂಧೈರ್ಧೂಪೈಃ ಪುಷ್ಪೈರ್ಮನೋರಮೈಃ ।
ಪೂಜಿತಾಂ ಕುಸುಮೈಶ್ಶುಭ್ರೈಃ ಮಂತ್ರೇಣಾನೇನ ಬಾಡವ ॥ ೧೪ ॥

ಸುಪ್ತೇ ತ್ವಯಿ ಜಗನ್ನಾಥೇ ಜಗತ್ಸುಪ್ತಂ ಭವೇದಿದಂ ॥
ವಿಬುದ್ಧೇ ತ್ವಯಿ ಬುದ್ಧ್ಯೇತ ಜಗತ್ಸರ್ವಂ ಚರಾಚರಂ ॥ ೧೫ ॥

ಏವಂ ತಾಂ ಪ್ರತಿಮಾಂ ವಿಷ್ಣೋಃ ಸ್ಥಾಪಯಿತ್ವಾ ತು ನಾರದ ।
ತಸ್ಯೈವಾಗ್ರೇ ಸ್ವಯಂ ವಾಚಾ ಗೃಹ್ಣೀಯಾನ್ನಿಯಮಾಂಸ್ತತಃ ॥ ೧೬ ॥

ಸ್ತ್ರೀ ವಾ ನರೋ ವಾ ತದ್ಭಕ್ತೋ ಧರ್ಮಾಧರ್ಮವಿಭಾಗತಃ ।
ಚತುರೋ ವಾರ್ಷಿಕಾನ್ಮಾಸಾನ್ ದೇವಸ್ಯೋತ್ಥಾಪನಾವಧಿ ॥ ೧೭ ॥

---

೧೩–೧೫. ಇತಿಹಾಸ ಪುರಾಣಗಳನ್ನು ಬಲ್ಲವನಾಗಲೀ ಅಥವಾ ವಿಷ್ಣು ಭಕ್ತನಾಗಲೀ ಆ ಪ್ರತಿಮೆಯನ್ನು ಹಾಲು ಮೊಸರು ತುಪ್ಪ ಜೇನು ಅರಳುಗಳಿಂದ ಸ್ನಾನಮಾಡಿಸಿ ಒಳ್ಳೆಯ ಗಂಧದಿಂದಲೂ ಧೂಪದಿಂದಲೂ ಆ ಪ್ರತಿಮೆಗೆ ವಾಸನೆ ಬರುವಂತೆ ಬಳಿದು ಒಳ್ಳೆಯ ಪುಷ್ಪಗಳಿಂದ ಪೂಜಿಸಬೇಕು. ಈ ರೀತಿಯಾಗಿ ಪೂಜಿಸಿದಮೇಲೆ ಮುಂದಿನ ಮಂತ್ರವನ್ನು ಹೇಳಿ ಮಲಗಿಸಬೇಕು. ಎಲೈ ಜಗನ್ನಾಥನೇ ! ಜಗನ್ನಾಥನಾದ ನೀನು ಮಲಗಲು ಪ್ರಪಂಚವೇ ಮಲಗಿದಂತಾಗುವುದು ನೀನಿದ್ದರೆ ಚರಾಚರದಿಂದ ಕೂಡಿದ ಈ ಮೂರು ಜಗತ್ತೂ ಎದ್ದಂತೆ ಆಗುವುದು.

೧೬. ಈ ರೀತಿಯಾದ ನಿಯಮದಿಂದ ಆ ಪ್ರತಿಮೆಯನ್ನು ಮಲಗಿಸಿ ಅದರ ಮುಂದೆ ತಾನು ಬಾಯಲ್ಲಿ ಹೇಳುತ್ತ ನಿಯಮಗಳನ್ನು ಸ್ವೀಕರಿಸಬೇಕು.

೧೭. ಗಂಡಸಾಗಲೀ ಹೆಂಗಸಾಗಲೀ ವಿಷ್ಣುಭಕ್ತರಾಗಿ ಧರ್ಮ ಅಧರ್ಮಗಳನ್ನು ಯೋಚಿಸಿ ತಿಳಿದು ದೇವರು ಮಲಗಿದ ಮೊದಲು ಏಳುವವರೆಗೆ ನಾಲ್ಕು ತಿಂಗಳುಗಳವರೆಗೂ ಬೆಳಗ್ಗೆ ಎದ್ದು ಹಲ್ಲುಜ್ಜಿಕೊಂಡು ನಿಯಮದಿಂದ ಸಂಕಲ್ಪ ಮಾಡಿಕೊಂಡು ನಿಯಮವನ್ನು ಹಿಡಿಯಬೇಕು.

**ಗೃಹ್ಣೀಯಾನ್ನಿಯಮಾನೇತಾನ್ ತಂದಧಾವನಪೂರ್ವಕಂ |**
**ಉಪವಾಸಂ ತತಃ ಕೃತ್ವಾ ಪ್ರಭಾತೇ ವಿಮಲೇ ಸತಿ || ೧೮ ||**

**ನಿತ್ಯಂ ಕರ್ಮ ಚರಿತ್ವಾ ತು ವಿಷ್ಣೋರಗ್ರೇ ಜಿತಾತ್ಮವಾನ್ |**
**ತೇಷಾಂ ಫಲಾನಿ ವಕ್ಷ್ಯಾಮಿ ತತ್ಕರ್ತ್ರೂಣಾಂ ಪೃಥಕ್ ಪೃಥಕ್ || ೧೯ ||**

**ಮಧುರತ್ವಂ ಲಭೇದ್ವಿದ್ವನ್ಪುರುಷೋ ಗುಡವರ್ಜನಾತ್ |**
**ತಥೈವ ಸಂತತಿಂ ದೀರ್ಘಾಂ ತೈಲಸ್ಯ ವರ್ಜನಾದ್ಯತಃ || ೨೦ ||**

**ಘೃತಸ್ಯ ವರ್ಜನಾದ್ವಿಪ್ರ ಸುಂದರಾಂಗಃ ಪ್ರಜಾಯತೇ |**
**ಕಟುತೈಲಪರಿತ್ಯಾಗೇ ಶತ್ರುನಾಶಮವಾಪ್ನುಯಾತ್ || ೨೧ ||**

**ಸುಗಂಧತೈಲತ್ಯಾಗೇನ ಸೌಭಾಗ್ಯಮತುಲಂ ಲಭೇತ್ |**
**ಪುಷ್ಪಭೋಗಪರಿತ್ಯಾಗೇ ಸ್ವರ್ಗೇ ವಿದ್ಯಾಧರೋ ಭವೇತ್ || ೨೨ ||**

**ಯೋಗಾಭ್ಯಾಸೀ ನರೋ ಯಸ್ತು ಸಬ್ರಹ್ಮ ಪದಮಾಪ್ನುಯಾತ್ |**
**ಕಟ್ವಮ್ಲಮಧುರಕ್ಷಾರತಿಕ್ತಕಾಷಾಯಷಡ್ರಸಾನ್ || ೨೩ ||**

---

೧೮–೧೯. ಅನಂತರ ಬೆಳಗಿನಿಂದ ಉಪವಾಸಮಾಡುತ್ತಾ ವಿಷ್ಣುವಿನ ಎದುರಿಗೆ ನಿತ್ಯಕರ್ಮಗಳನ್ನು ಮಾಡಬೇಕು. ಆ ಉಪವಾಸವನ್ನು ಮಾಡುವವರಿಗೆ ಬೇರೆಬೇರೆಯಾಗಿ ಫಲಗಳನ್ನು ಹೇಳುತ್ತೇನೆ.

೨೦–೨೧. ಈ ಚಾತುರ್ಮಾಸ್ಯದಲ್ಲಿ ಬೆಲ್ಲವನ್ನು ಬಿಟ್ಟವನು ಮಧುರ (ಚೆನ್ನಾಗಿರುವಿಕೆ) ತನವನ್ನು ಹೊಂದುತ್ತಾನೆ. ಎಣ್ಣೆಯನ್ನು ಬಿಟ್ಟವನು ಸಂತತಿಯ ವೃದ್ಧಿಯನ್ನು ಹೊಂದುತ್ತಾನೆ. ತುಪ್ಪವನ್ನು ಬಿಟ್ಟವನು ಸುಂದರನಾಗುತ್ತಾನೆ. ಸಾಸುವೆ ಮುಂತಾದುವುಗಳ ಎಣ್ಣೆಯನ್ನು ಬಿಟ್ಟರೆ ಶತ್ರುಗಳು ನಾಶವಾಗುತ್ತಾರೆ.

೨೨. ಒಳ್ಳೆಯ ವಾಸನೆಯ ಎಣ್ಣೆಗಳನ್ನೂ ಬಿಟ್ಟರೆ ಹೆಚ್ಚಾದ ಐಶ್ವರ್ಯ ಬರುತ್ತದೆ. ಹೂವನ್ನು ಬಿಟ್ಟರೆ ಸ್ವರ್ಗದಲ್ಲಿ ವಿದ್ಯಾಧರನಾಗುತ್ತಾನೆ.

೨೩–೨೪. ಯೋಗಾಭ್ಯಾಸ ಮಾಡುವ ಮನುಷ್ಯನು ಬ್ರಹ್ಮನ ಸಾಯುಜ್ಯ ವನ್ನು ಹೊಂದುತ್ತಾನೆ. ಕಾರ ಹುಳಿ ಸಿಹಿ ಕಹಿ ಒಗರು ಉಪ್ಪು ಈ ಆರು

ವರ್ಜಯೇದ್ಯಸ್ತು ವೈ ರೂಪ್ಯಂ ದೌರ್ಗಂಧ್ಯಂ ನಾಪ್ನುಯಾನ್ನರಃ ।
ತಾಂಬೂಲವರ್ಜನಾದ್ಭೋಗೀ ರಕ್ತಕಂಠಸ್ತು ಜಾಯತೇ ॥ ೨೪ ॥

ಘೃತತ್ಯಾಗಾಚ ಲಾವಣ್ಯಂ ಸದಾ ಸ್ನಿಗ್ಧತನುರ್ಭವೇತ್ ।
ಫಲತ್ಯಾಗೀ ಚ ವಿಪ್ರೇಂದ್ರ ಬಹುಪುತ್ರಶ್ಚ ಜಾಯತೇ ॥ ೨೫ ॥

ಪಲಾಶಪತ್ರಾಶನಕೃತ್ ರೂಪವಾನ್ ಭೋಗವಾನ್ಭವೇತ್ ।
ಪಾದಾಭ್ಯಂಗಶಿರೋಭ್ಯಂಗತ್ಯಾಗೇನೈವ ದ್ವಿಜೋತ್ತಮ ॥ ೨೬ ॥

ದೀಪ್ತಿಮಾನ್ದೀಪ್ತಕರಣಃ ಸದಾ ದ್ರವ್ಯಪತಿರ್ಭವೇತ್ ।
ದಧಿದುಗ್ಧಪರಿತ್ಯಾಗೀ ಗೋಲೋಕಂ ಲಭತೇ ನರಃ ॥ ೨೭ ॥

ಮೌನವ್ರತೀ ಭವೇದ್ಯಸ್ತು ತಸ್ಯಾಜ್ಞಾಽಸ್ಖಲಿತಾ ಭವೇತ್ ।
ಇಂದ್ರಾಸನಮವಾಪ್ನೋತಿ ಸ್ಥಾಲೀಪಾಕಸ್ಯ ವರ್ಜನಾತ್ ॥ ೨೮ ॥

---

ರಸಗಳನ್ನೂ ಬಿಟ್ಟವನು ಕುರೂಪವನ್ನಾಗಲೀ ದೇಹದಲ್ಲಿ ದುರ್ಗಂಧವನ್ನಾಗಲೀ ಹೊಂದುವುದಿಲ್ಲ. ತಾಂಬೂಲವನ್ನು ಬಿಟ್ಟವನು ಭೋಗವುಳ್ಳವನೂ ಒಳ್ಳೆಯ ಧ್ವನಿಯುಳ್ಳವನೂ ಆಗುತ್ತಾನೆ.

೨೫. ತುಪ್ಪವನ್ನು ಬಿಟ್ಟವನು ಸೌಂದರ್ಯವನ್ನೂ ಮೃದು ದೇಹವನ್ನೂ ಹೊಂದುತ್ತಾನೆ. ಹಣ್ಣುಗಳನ್ನು ಬಿಟ್ಟವನು ಬಹುವಾದ ಮಕ್ಕಳನ್ನು ಹೊಂದುತ್ತಾನೆ.

೨೬–೨೮. ಮುತ್ತುಗದ ಎಲೆಯಲ್ಲಿ ಊಟ ಮಾಡುವವನು ರೂಪವಂತನೂ ಭೋಗಿಯೂ ಆಗುತ್ತಾನೆ. ಕಾಲಿಗೆ ಎಣ್ಣೆ ಹಚ್ಚುವುದು ತಲೆಗೆ ಎಣ್ಣೆ ಹಚ್ಚುವುದು ಇವನ್ನು ಬಿಟ್ಟುಬಿಡುವವನು ಕಾಂತಿಮಂತನೂ ಇಂದ್ರಿಯಪಾಟವವುಳ್ಳವನೂ ಆಗುತ್ತಾನೆ. ಮತ್ತು ಬಹು ಧನವನ್ನು ಹೊಂದುತ್ತಾನೆ. ಹಾಲು ಮೊಸರನ್ನು ಬಿಟ್ಟವನು ಗೋಲೋಕವನ್ನು ಹೊಂದುತ್ತಾನೆ. ಯಾವನು ಮೌನದಿಂದರುವನೋ ಅವನ ಆಜ್ಞೆಯು ತಡೆಯಿಲ್ಲದೆ ನಡೆಯುವುದು. ಸ್ಥಾಲೀಪಾಕವನ್ನು ಬಿಟ್ಟವನು ಇಂದ್ರನಸ್ಥಾನವನ್ನು ಹೊಂದುತ್ತಾನೆ.

ಏವಮಾದಿಪರಿತ್ಯಾಗಾದ್ಧರ್ಮಾಃ ಸ್ಯಾದ್ವಿಧಿನಂದನ ।
ನಮೋ ನಾರಾಯಣಾಯೇತಿ ಜಪ್ತ್ವಾ ಶತಗುಣಂ ಫಲಂ ॥ ೨೯ ॥

ಏಕ ಏವ ಸ ವೈ ಸ್ವರ್ಗೇ ವಿದ್ಯಾಧರಪತಿರ್ಭವೇತ್ ।
ಪುಷ್ಕರಸ್ನಾನಮಾತ್ರೇಣ ಗಂಗಾಯಾ ಸ್ನಾನಜಂ ಫಲಂ ॥ ೩೦ ॥

ಭೂಮೌ ಭುಂಕ್ತೇ ಸದಾ ಯಸ್ತು ಸ ಪೃಥಿವ್ಯಧಿಪೋ ಭವೇತ್ ।
ಪಾದಾಭಿವಂದನಾದ್ವಿಷ್ಣೋಃ ಲಭೇದ್ಗೋದಾನಜಂ ಫಲಂ ॥ ೩೧ ॥

ವಿಷ್ಣುಪಾದಾಂಬುಜಸ್ಪರ್ಶಾತ್ಕೃತಕೃತ್ಯೋ ಭವೇನ್ನರಃ ।
ಏಕಭುಕ್ತಾಶನೋ ನಿತ್ಯಮಗ್ನಿಷ್ಟೋಮಫಲಂ ಲಭೇತ್ ॥ ೩೨ ॥

ವಿಷ್ಣೋಶ್ಚೈವ ಗೃಹೇ ಕುರ್ಯಾದುಪಲೇಪನಮಾರ್ಜನೇ ।
ಕಲ್ಪಸ್ಥಾಯೀ ಭವೇದ್ವಿದ್ವಾನ್ವೈಕುಂಠೇ ನಾತ್ರ ಸಂಶಯಃ ॥ ೩೩ ॥

---

೨೯. ಈ ರೀತಿಯಾಗಿ ಬಿಡುವುದರಿಂದ ಅನೇಕ ಧರ್ಮಗಳು ಬರುತ್ತವೆ. "ಓಂ ನಮೋ ನಾರಾಯಣಾಯ" ಎಂದು ಜಪಿಸಿದರೆ ನೂರರಷ್ಟು ಫಲವು ಬರುತ್ತದೆ.

೩೦. ಹಾಗೆ ಜಪಿಸಿದವನು ಸ್ವರ್ಗದಲ್ಲಿ ವಿಧ್ಯಾಧರರಿಗೆ ಒಡೆಯನಾಗುವನು. ಚಾತುರ್ಮಾಸ್ಯದಲ್ಲಿ ಪುಷ್ಕರದಲ್ಲಿ ಸ್ನಾನ ಮಾಡಿದರೆ ಗಂಗಾಸ್ನಾನದ ಫಲವು ಬರುತ್ತದೆ.

೩೧. ಯಾವಾಗಲೂ ನೆಲದಮೇಲೆ ಊಟಮಾಡುವವನು ರಾಜನಾಗುತ್ತಾನೆ. ವಿಷ್ಣುವಿನ ಪಾದಗಳಿಗೆ ನಮಸ್ಕರಿಸಿದವನು ಗೋದಾನದ ಫಲವನ್ನು ಹೊಂದುತ್ತಾನೆ.

೩೨. ವಿಷ್ಣುವಿನ ಪಾದಗಳನ್ನು ಮುಟ್ಟಿದವನು ಕೃತಕೃತ್ಯನಾಗುವನು. ನಿತ್ಯವೂ ಒಪ್ಪತ್ತು ಊಟಮಾಡಿದವನು ಅಗ್ನಿಷ್ಟೋಮಯಾಗದ ಫಲವನ್ನು ಹೊಂದುತ್ತಾನೆ.

೩೩. ಯಾವನು ವಿಷ್ಣುವಿನ ದೇವಸ್ಥಾನದಲ್ಲಿ ಗುಡಿಸಿ ರಂಗವಲ್ಲಿ ಮುಂತಾದುವನ್ನು ಇಡುವನೋ ಅವನು ವಿದ್ವಾಂಸನಾಗಿ ಕಲ್ಪ ಪರ್ಯಂತವಾಗಿ ವೈಕುಂಠದಲ್ಲಿರುತ್ತಾನೆ. ಸಂಶಯವಿಲ್ಲ.

ಪ್ರದಕ್ಷಿಣಂ ಚ ಯಃ ಕುರ್ಯಾಚ್ಛತಮಷ್ಟೋತ್ತರಂ ನರಃ ।
ಹಂಸಯುಕ್ತವಿಮಾನೇನ ದಿವ್ಯೇನ ಸಹ ಗಚ್ಛತಿ ॥ ೩೪ ॥

ಗೀತವಾದ್ಯಕರೋ ವಿಷ್ಣೋರ್ಗಾಂಧರ್ವಂ ಲೋಕಮಾಪ್ನುಯಾತ್ ।
ಪಂಚಗವ್ಯಾಶನೋ ವಿದ್ವಾಂಶ್ಚಾಂದ್ರಾಯಣಫಲಂ ಲಭೇತ್ ॥ ೩೫ ॥

ನಿತ್ಯಂ ಶಾಸ್ತ್ರವಿನೋದೇನ ಲೋಕಾನ್ಯಸ್ತು ಪ್ರಬೋಧಯೇತ್ ।
ಸ ವ್ಯಾಸರೂಪೀ ವಿಷ್ಣ್ವಗ್ರೇ ತತೋ ವಿಷ್ಣುಪದಂ ಲಭೇತ್ ॥ ೩೬ ॥

ತುಳಸೀದಳಪೂಜಾಂ ತು ಕೃತ್ವಾ ವಿಷ್ಣುಪದಂ ವ್ರಜೇತ್ ।
ಕೃತ್ವಾ ಪ್ರೋಕ್ಷಣಕಂ ದಿವ್ಯಂ ಸ್ಥಾನಮಪ್ಸರಸಾಂ ಲಭೇತ್ ॥ ೩೭ ॥

ಶೀತಾಂಬುನಾ ಗೃಹೇ ಸ್ನಾನಾನ್ನಿರ್ಮಲಂ ದೇಹಮಾಪ್ನುಯಾತ್ ।
ಉಷ್ಣೋದಕಂ ಪರಿತ್ಯಜ್ಯ ಸ್ನಾನಂ ವೈ ಪೌಷ್ಕರಂ ಲಭೇತ್ ॥ ೩೮ ॥

---

೩೪. ಆ ಹರಿಗೆ ನೂರೆಂಟು ನಮಸ್ಕಾರಗಳನ್ನು ಮಾಡಿದವನು ಹಂಸದಿಂದ ಕೂಡಿರುವ ವಿಮಾನದಲ್ಲಿ ಕುಳಿತುಕೊಂಡು ಹೋಗುತ್ತಾನೆ.

೩೫. ವಿಷ್ಣುವಿನೆದುರಿಗೆ ಗೀತವನ್ನು ಹಾಡುವವನು ವಾದ್ಯವನ್ನು ಬಾರಿಸುವವನು ಗಂಧರ್ವಲೋಕವನ್ನು ಹೊಂದುತ್ತಾರೆ. ಪಂಚಗವ್ಯವನ್ನು ಕುಡಿಯುವವನು ಚಾಂದ್ರಾಯಣ ಫಲವನ್ನು ಹೊಂದುತ್ತಾನೆ.

೩೬. ದೇವರ ಎದುರಿನಲ್ಲಿ ಜನರಿಗೆ ಶಾಸ್ತ್ರಗಳನ್ನು ಬೋಧಿಸುತ್ತಲಿರುವವನು ಸಾಕ್ಷಾತ್ ವ್ಯಾಸನೇ ಆಗಿದ್ದು ಕೊನೆಯಲ್ಲಿ ವಿಷ್ಣುಪದವನ್ನು ಹೊಂದುತ್ತಾನೆ.

೩೭. ತುಳಸೀದಳದಿಂದ ಪೂಜಿಸಿದವನು ವೈಕುಂಠವನ್ನು ಹೊಂದುತ್ತಾನೆ. ದೇವರನ್ನು ಆ ತುಳಸಿಯಿಂದ ಪ್ರೋಕ್ಷಿಸಿದರೆ ಅಪ್ಸರರ ಸ್ಥಾನವನ್ನು ಹೊಂದುತ್ತಾನೆ.

೩೮. ಮನೆಯಲ್ಲಿ ತಣ್ಣೀರಿನಲ್ಲಿ ಸ್ನಾನಮಾಡಿದವನು ನಿರ್ಮಲವಾದ ದೇಹವನ್ನು ಹೊಂದುತ್ತಾನೆ. ಬಿಸಿನೀರನ್ನು ಉಪಯೋಗಿಸದಿದ್ದರೆ ಅದು ಪುಷ್ಕರದಲ್ಲಿ ಸ್ನಾನಮಾಡಿದಂತಾಗುವುದು.

ಪತ್ರೇಷು ಯೋ ನರೋ ಭುಂಕ್ತೇ ಕುರುಕ್ಷೇತ್ರಫಲಂ ಲಭೇತ್ ।
ಭುಂಕ್ತೆ ಶಿಲಾಯಾಂ ಯೋ ನಿತ್ಯಂ ತಸ್ಯ ಪುಣ್ಯಂ ಪ್ರಯಾಗಜಂ ॥ ೩೯ ॥

ಘರ್ಮೋದಯಜಲತ್ಯಾಗೀ ನ ರೋಗೈಃ ಪರಿಭೂಯತೇ ।
ತಾಮ್ರಪಾತ್ರೇಷು ಭುಂಜಾನೋ ನೈಮಿಷಂ ಫಲಮಾಪ್ನುಯಾತ್ ॥ ೪೦ ॥

ಕಾಂಸ್ಯಪಾತ್ರಂ ಪರಿತ್ಯಜ್ಯ ಶೇಷಪಾತ್ರಮುಪಾಚರೇತ್ ।
ಅಲಾಭೇ ಸರ್ವಪಾತ್ರಾಣಾಂ ಮೃಣ್ಮಯಂ ಪಾತ್ರಮುತ್ತಮಂ ॥ ೪೧ ॥

ಸ್ವಗೃಹೀತಕೃತೈರ್ವಾ ಪಿ ಪಾತ್ರೈಃ ಪಾಲಾಶಸಂಭವೈಃ ।
ಯಸ್ತು ಸಂವತ್ಸರಂ ಪೂರ್ಣಮಗ್ನಿಹೋತ್ರಮುಪಾಸತೇ ॥ ೪೨ ॥

ಪತ್ರೈರ್ವಾ ಭೋಜನಂ ವಿದ್ವನ್ ವನೇ ವಾ ತತ್ಸಮಂ ಸ್ಮೃತಂ ।
ಚಾಂದ್ರಾಯಣಸಮಂ ಪ್ರೋಕ್ತಂ ಬ್ರಹ್ಮಪತ್ರೇಷು ಭೋಜನಂ ॥ ೪೩ ॥

---

೩೯. ಎಲೆಗಳಲ್ಲಿ ಊಟಮಾಡಿದರೆ ಅವನಿಗೆ ಕುರುಕ್ಷೇತ್ರದ ತೀರ್ಥದಲ್ಲಿ ಸ್ನಾನಮಾಡಿದ ಫಲವು ಬರುತ್ತದೆ. ಕಲ್ಲಿನಮೇಲೆ ದಿನವೂ ಊಟಮಾಡಿದರೆ ಪ್ರಯಾಗದಲ್ಲಿ ಸ್ನಾನಮಾಡಿದ ಫಲವು ಬರುತ್ತದೆ.

೪೦. ಬೆಳಗ್ಗೆ ಬಿಸಿನೀರಿನಲ್ಲಿ ಸ್ನಾನಮಾಡುವವನು ರೋಗಿಯಾಗುವುದಿಲ್ಲ. ತಾಮ್ರಪಾತ್ರೆಯಲ್ಲಿ ಊಟಮಾಡಿದರೆ ನೈಮಿಷಕ್ಷೇತ್ರದ ತೀರ್ಥದ ಫಲವನ್ನು ಹೊಂದುತ್ತಾನೆ.

೪೧. ಕಂಚಿನಪಾತ್ರೆಗಳನ್ನು ಬಿಟ್ಟು ಬೇರೆ ಪಾತ್ರೆಗಳನ್ನು ಉಪಯೋಗಿಸ ಬೇಕು. ಯಾವ ಪಾತ್ರೆಯೂ ಸಿಕ್ಕದಿದ್ದರೆ ಮಣ್ಣಿನಪಾತ್ರೆಗಳೇ ಉತ್ತಮವು.

೪೨. ಮುತ್ತುಗದ ಪಾತ್ರೆಗಳನ್ನು ತಾನು ತಂದಾಗಲೀ ಮಾಡಿಯಾಗಲೀ ಅದರಿಂದಲೇ ಊಟಮಾಡಿದರೆ ಒಂದುವರ್ಷ ಪೂರ್ತಿಯಾಗಿ ಯಾವನು ಅಗ್ನಿ ಹೋತ್ರವನ್ನು ಮಾಡುತ್ತಾನೆಯೋ ಅಥವಾ ವರ್ಷಪರ್ಯಂತರವೂ ಎಲೆಯಲ್ಲಿಯೇ ಊಟ ಮಾಡುವವನು ಯಾವ ಪುಣ್ಯವನ್ನು ಹೊಂದುತ್ತಾನೆಯೋ ಆ ಪುಣ್ಯವನ್ನು ಮುತ್ತುಗದ ಎಲೆಯಲ್ಲಿ ಈ ಚಾತುರ್ಮಾಸ್ಯದ ಮೂರುರಾತ್ರಿಗಳು ಊಟಮಾಡಿ ದವನು ಹೊಂದುತ್ತಾನೆ.

೪೩–೪೪. ಮುತ್ತುಗದ ಎಲೆಯಲ್ಲಿ ಊಟ ಮಾಡುವುದು ಚಾಂದ್ರಾಯಣ ವ್ರತಕ್ಕೆ ಸಮವಾದುದು. ಬ್ರಹ್ಮಪತ್ರದಲ್ಲಿ (ಅರಳಿಯಲೆ) ಊಟ ಮಾಡಿದರೆ

ಏಕೈಕಂ ಭೋಜನಂ ವಿದ್ವನ್ ಬ್ರಹ್ಮಪತ್ರೇಷು ಭುಂಜತಃ ।
ತ್ರಿರಾತ್ರೇಣ ಸಮಂ ಪ್ರೋಕ್ತಂ ಮಹಾಪಾತಕನಾಶನಂ ॥ ೪೪ ॥

ಏಕಾದಶ್ಯುಪವಾಸೇನ ಯತ್ಪುಣ್ಯಂ ಪರಿಕೀರ್ತಿತಂ ।
ಸರ್ವದಾನಫಲಂ ಚೈವ ಸರ್ವತೀರ್ಥಫಲಂ ಲಭೇತ್ ॥ ೪೫ ॥

ನ ಚಾಪಿ ನರಕಂ ಪಶ್ಯೇತ್ಪದ್ಮಪತ್ರೇಷು ಭೋಜನಾತ್ ।
ಬ್ರಾಹ್ಮಣೋ ಯಾತಿ ವೈಕುಂಠೇSನ್ಯೋ ಜನಃ ಸ್ವರ್ಗಮವಾಪ್ನುಯಾತ್ ॥೪೬

ಏಷ ಬ್ರಹ್ಮಮಹಾವೃಕ್ಷಃ ಪಾಪಹಾ ಸರ್ವಕಾಮದಃ ।
ಮಧ್ಯಮಂ ವರ್ಜಿತಂ ಪತ್ರಂ ಶೂದ್ರಜಾತೌ ನೃಪೋತ್ತಮ ॥ ೪೭ ॥

ಭುಂಜನ್ನರಕಮಾಪ್ನೋತಿ ಯಾವದಿಂದ್ರಾಶ್ಚತುರ್ದಶ ।
ವರ್ಜಯೇನ್ಮಧ್ಯಮಂ ಪತ್ರಂ ಶೇಷಪತ್ರೇಷು ಭೋಜನಂ ॥ ೪೮ ॥

---

ಆ ಒಂದೊಂದು ಊಟವೂ ಮೂರು ದಿನ ಉಪವಾಸವಿದ್ದು ಊಟಮಾಡಿದಂತಾಗುತ್ತದೆ. ಪಾಪಗಳನ್ನು ನಾಶಮಾಡುತ್ತದೆ.

೪೫. ಏಕಾದಶಿಯ ಉಪವಾಸದಿಂದ ಯಾವ ಪುಣ್ಯವು ಹೇಳಲ್ಪಟ್ಟಿದೆಯೋ ಆ ಪುಣ್ಯವು ಮುತ್ತುಗದ ಎಲೆಯಲ್ಲಿ ಊಟ ಮಾಡಿದರೆ ಬರುತ್ತದೆ. ಎಲ್ಲಾ ದಾನಗಳನ್ನೂ ಮಾಡಿದ ಫಲವೂ ಎಲ್ಲಾ ತೀರ್ಥಗಳಲ್ಲಿ ಸ್ನಾನಮಾಡಿದ ಫಲವೂ ಅವನಿಗೆ ಬರುತ್ತದೆ.

೪೬. ಪದ್ಮದ ಎಲೆಯಲ್ಲಿ ಊಟ ಮಾಡಿದರೆ ನರಕವನ್ನು ನೋಡುವುದೇ ಇಲ್ಲವು. ಬ್ರಾಹ್ಮಣನು ವೈಕುಂಠವನ್ನೂ ಮಿಕ್ಕವರು ಸ್ವರ್ಗವನ್ನೂ ಹೊಂದುತ್ತಾರೆ.

೪೭. ಈ ಮುತ್ತುಗದ ಮರವು ಉತ್ತಮವಾದ ಮರವು. ಪಾಪನಾಶಕವಾದುದು. ಇಷ್ಟಾರ್ಥವನ್ನು ಕೊಡುತ್ತದೆ. ಶೂದ್ರರು ಮಧ್ಯದ ಎಲೆಯನ್ನು ಬಿಟ್ಟು ಮಿಕ್ಕ ಎಲೆಗಳಲ್ಲಿ ಊಟ ಮಾಡಬೇಕು. ಹಾಗೆ ಮಧ್ಯ ಎಲೆಯಲ್ಲಿ ಊಟ ಮಾಡಿದರೆ ಹದಿನಾಲ್ಕುಜನರಿಂದ್ರರಿರುವವರೆಗೂ ನರಕವನ್ನು ಹೊಂದುತ್ತಾನೆ.

೪೮–೪೯. ಆದ್ದರಿಂದ ಮಧ್ಯದ ಎಲೆಯನ್ನು ಬಿಡಬೇಕು ಮಿಕ್ಕ ಎಲೆಗಳಲ್ಲಿ ಊಟ ಮಾಡಬೇಕು. ಶೂದ್ರನಾದವನು ಮುತ್ತುಗದ ಮಧ್ಯದ

ಮಧ್ಯಪತ್ರೇ ತು ಯಃ ಶೂದ್ರೋ ಭೋಜನಂ ಕುರುತೇ ದ್ವಿಜ ।
ಕಪಿಲಾಂ ಬ್ರಹ್ಮಣೇ ದತ್ವಾ ಶುದ್ಧಿರ್ಭವತಿ ನಾನ್ಯಥಾ ॥ ೪೯ ॥

ಕಪಿಲಾಂ ದೋಹಯೇದ್ಯಸ್ತು ಶೂದ್ರೋ ಭೂತ್ವಾ ನಿಜೇ ಗೃಹೇ ।
ದಶವರ್ಷಸಹಸ್ರಾಣಿ ವಿಷ್ಠಾಯಾಂ ಜಾಯತೇ ಕೃಮಿಃ ॥ ೫೦ ॥

ಕ್ರಿಮಿಯೋನಿವಿನಿರ್ಮುಕ್ತಃ ಪಶುಯೋನಿಮವಾಪ್ನುಯಾತ್ ।
ಕಪಿಲಂ ಯೋಽಹ್ಯನಡ್ವಾಹಂ ಶೂದ್ರೋ ಭೂತ್ವಾ ಪ್ರವಾಹಯೇತ್ ॥೫೧॥

ಯಾವನ್ತಿ ತಸ್ಯ ರೋಮಾಣಿ ತಾವದ್ವರ್ಷಾಣಿ ನಾರದ ।
ಕುಂಭೀಪಾಕೇಷು ಪಚ್ಯೇತ ಸ ನರೋ ನಾತ್ರ ಸಂಶಯಃ ॥ ೫೨ ॥

ಅಜಾ ಚೈವ ಗೃಹೇ ಯಸ್ಯ ಶೂದ್ರ ಸ್ಯ ಚ ವಿಶೇಷತಃ ।
ತಸ್ಯಾ ವೈ ದುಗ್ಧಪಾನೇನ ಶೂದ್ರೋ ಯಾತೀಹ ರೌರವಂ ॥ ೫೩ ॥

---

ಎಲೆಯಲ್ಲಿ ಊಟ ಮಾಡಿದರೆ ಒಂದು ಕಪಿಲೆಯ ಹಸುವನ್ನು ಬ್ರಾಹ್ಮಣನಿಗೆ ದಾನ ಮಾಡಿದರೆ ಶುದ್ಧನಾಗುತ್ತಾನೆ.

೫೦. ಶೂದ್ರನಾದವನು ಮನೆಯಲ್ಲಿ ಕಪಿಲವರ್ಣದ ಹಸುವನ್ನು ಕರೆದು ಆ ಹಾಲನ್ನೂ ಮೊಸರನ್ನೂ ಊಟ ಮಾಡಿದರೆ ಹತ್ತು ಸಾವಿರ ವರ್ಷಗಳವರೆವಿಗೆ ಅಮೇಧ್ಯದಲ್ಲಿ ಹುಳುವಾಗಿ ಹುಟ್ಟುತ್ತಾನೆ.

೫೧-೫೨. ಅನಂತರ ಆ ಕೃಮಿಯ ಜನ್ಮವನ್ನು ಬಿಟ್ಟು ಗೋವಿನ ಜನ್ಮದಲ್ಲಿ ಹುಟ್ಟುತ್ತಾನೆ. ಯಾವ ಶೂದ್ರನು ಮನೆಯಲ್ಲಿ ಕಪಿಲವರ್ಣದ ಹೋರಿಯನ್ನಿಟ್ಟು ಕೊಂಡು ಅದರಿಂದ ಕೆಲಸಮಾಡಿಸುತ್ತಾನೆಯೋ ಅವನು ಆ ಹೋರಿಯಲ್ಲಿರುವ ರೋಮಗಳ ವರ್ಷಗಳಕಾಲ ಕುಂಭೀಪಾಕದಲ್ಲಿ ಬಿದ್ದಿರುತ್ತಾನೆ. ಸಂಶಯವಿಲ್ಲ.

೫೩. ಆಡನ್ನು ಬ್ರಾಹ್ಮಣನಾಗಲೀ ವಿಶೇಷವಾಗಿ ಶೂದ್ರನಾಗಲೀ ಮನೆಯಲ್ಲಿಟ್ಟುಕೊಂಡು ಅದರ ಹಾಲನ್ನು ಕುಡಿಯುತ್ತ ಬಂದಲ್ಲಿ ಅವನು ರೌರವ ನರಕವನ್ನು ಹೊಂದುತ್ತಾನೆ.

ಬ್ರಾಹ್ಮಣೈಸ್ಸಹ ವ್ಯಾಪಾರೋ ಯಸ್ಯ ಶೂದ್ರಸ್ಯ ದೃಶ್ಯತೇ ।
ಸ ವಿಪ್ರೋ ವೇದಬಾಹ್ಯಸ್ಸ್ಯಾತ್ ಶೂದ್ರಃ ಕೌಳಿಕ ಉಚ್ಯತೇ ॥ ೫೪ ॥

ವ್ಯಾಪಾರೇ ಪ್ರೇರಿತೋ ವಿಪ್ರಃ ಶೂದ್ರಾಜ್ಞಾಂ ಚ ಕರೋತಿ ಯಃ ।
ಯಾವತ್ಪದಾನಿ ಚಲತೇ ತಾವದ್ಭವತಿ ನಾರಕೀ ॥ ೫೫ ॥

ಉದಕಾರ್ಥಂ ತು ಯೋ ವಿಪ್ರಃ ಶೂದ್ರೇಣ ಪ್ರೇಷಿತೋ ಗೃಹೇ ।
ಉದಕಂ ಮದ್ಯತುಲ್ಯಂ ಸ್ಯಾತ್ ಪೀತ್ವಾ ವೈ ನರಕಂ ವ್ರಜೇತ್ ॥ ೫೬ ॥

ಆಮಂತ್ರಿತಸ್ತು ಯಶ್ಶೂದ್ರೋ ಬ್ರಾಹ್ಮಣಾನಾಂ ಗೃಹೇಷು ವೈ ।
ತದನ್ನಂ ಚಾಮೃತಕಲ್ಪಂ ಭುಕ್ತ್ವಾ ಮೋಕ್ಷಮವಾಪ್ನುಯಾತ್ ॥ ೫೭ ॥

ಸೌವರ್ಣಂ ಚಾಥ ರೌಪ್ಯಂ ವಾ ದ್ವಿಜಾತೀನಾಂ ವಿಶೇಷತಃ ।
ಯೋ ಗೃಹ್ಣಾತಿ ಹಿ ಲೋಭೇನ ಸ ಶೂದ್ರೋ ನರಕಂ ವ್ರಜೇತ್ ॥ ೫೮ ॥

---

೫೪. ಬಾಹ್ಮಣನಾದವನು ಶೂದ್ರನೊಡನೆ ವ್ಯಾಪಾರಮಾಡಬಾರದು. ಹಾಗೆ ವ್ಯಾಪಾರ ಮಾಡಿದರೆ ಅವನಿಗೆ ವೇದ ಓದಲು ಅಧಿಕಾರವಿರುವುದಿಲ್ಲ. ಅವನಿಗೆ ಕೌಳಿಕನೆಂದು ಹೆಸರು.

೫೫. ಶೂದ್ರನ ಮಾತಿನಂತೆ ಬ್ರಾಹ್ಮಣನಾದವನು ನಡೆಯುತ್ತ ಅವನ ಮಾತಿನಂತೆ ಅವನ ಕೆಲಸಕ್ಕೋಸ್ಕರ ಎಷ್ಟು ಹೆಜ್ಜೆಗಳನ್ನು ಇಡುತ್ತಾನೆಯೋ ಅಷ್ಟು ನರಕಗಳು ಆ ಬ್ರಾಹ್ಮಣನಿಗೆ ಬರುತ್ತವೆ.

೫೬. ಶೂದ್ರನ ಮಾತಿನಂತೆ ಬ್ರಾಹ್ಮಣನು ಹೋಗಿ ನೀರನ್ನು ತರಬಾರದು. ಹಾಗೆ ಅವನು ತಂದ ನೀರು ಮದ್ಯಕ್ಕೆ ಸಮವಾಗುತ್ತದೆ. ಕುಡಿದರೆ ನರಕವನ್ನು ಹೊಂದುತ್ತಾನೆ.

೫೭. ಶೂದ್ರನಾದವನನ್ನು ಬ್ರಾಹ್ಮಣನು ಕರೆದು ಅನ್ನ ಹಾಕಿದರೆ ಆ ಅನ್ನವು ಅಮೃತಕ್ಕೆ ಸಮವಾಗಿರುತ್ತದೆ. ಅದನ್ನು ಊಟಮಾಡಿದರೆ ಮೋಕ್ಷ ಸಿಕ್ಕುತ್ತದೆ.

೫೮. ಚಿನ್ನವನ್ನಾಗಲೀ ಬೆಳ್ಳಿಯನ್ನಾಗಲೀ ಶೂದ್ರನು ತೆಗೆದುಕೊಂಡರೆ ಅದರಲ್ಲಿಯೂ ಬ್ರಾಹ್ಮಣನದನ್ನು ತೆಗೆದುಕೊಂಡರೆ ಅವನು ನರಕಕ್ಕೆ ಬೀಳುತ್ತಾನೆ.

ಶೂದ್ರೇಣ ಸರ್ವದಾ ನಿತ್ಯಂ ದಾನಂ ದೇಯಂ ದ್ವಿಜನ್ಮನೇ || ೫೯ ||

ತೇಷಾಂ ಚೈವ ತು ವೈ ಭಕ್ತಿಃ ಕರ್ತವ್ಯಾ ಚ ವಿಶೇಷತಃ ।
ಯಥಾ ವಿಷ್ಣುಸ್ತಥಾ ವಿಪ್ರಃ ಚಾತುರ್ಮಾಸ್ಯೇ ವಿಶೇಷತಃ || ೬೦ ||

ತೇಷಾಂ ಪೂಜಾ ಪ್ರಕರ್ತವ್ಯಾ ವಿಧಿಪೂರ್ವಾ ತು ನಾರದ ।
ಪ್ರಾಪ್ತೇ ಭಾದ್ರಪದೇ ಮಾಸೇ ಮಹಾಪೂಜಾ ಪ್ರವರ್ತತೇ || ೬೧ ||

ಕಟಿದಾನಂ ಭವೇದ್ವಿಷ್ಣೋರ್ಗಾವಃ ಪ್ರಜಾ ಚ ವಿವರ್ಧತೇ ।
ಚಾತುರ್ಮಾಸ್ಯೇ ತು ಸಂಪ್ರಾಪ್ತೇ ಶರೀರಂ ದಾಪಯೇದ್ದ್ವಿಜ || ೬೨ ||

ಉತ್ಥಾಪನಂ ತತಃ ಪೂರ್ವಂ ದತ್ವಾ ಚೈವ ಸುಖೀ ಭವೇತ್ ।
ಶೂದ್ರೋ ವಾಪ್ಯಥ ಶೂದ್ರೀ ವಾ ಯೋ ದದಾತಿ ದ್ವಿಜನ್ಮನೇ || ೬೩ ||

---

೫೯. ಶೂದ್ರನು ಬ್ರಾಹ್ಮಣನಿಗೆ ಯಾವಾಗಲೂ ದಾನ ಮಾಡುತ್ತಿರಬೇಕು. ಆ ಬ್ರಾಹ್ಮಣರಲ್ಲಿ ಶೂದ್ರನು ಭಕ್ತಿಯನ್ನು ಮಾಡುತ್ತಿರಬೇಕು.

೬೦–೬೧. ಈ ಚಾತುರ್ಮಾಸ್ಯದಲ್ಲಿ ಬ್ರಾಹ್ಮಣನಾದವನು ವಿಷ್ಣುವಿಗೆ ಸಮನು. ಆದ್ದರಿಂದ ಆ ಬ್ರಾಹ್ಮಣರಿಗೆ ಪೂಜೆಯನ್ನು ಮಾಡಬೇಕು. ಈ ಭಾದ್ರಪದ ಮಾಸದಲ್ಲಿ ಮಾಡುವ ಪೂಜೆಯು ಮಹಾಪೂಜೆಯು.

೬೨. ಆ ಚಾತುರ್ಮಾಸ್ಯದಲ್ಲಿ ವಿಷ್ಣುವಿಗೆ ಮಂಚವನ್ನು ದಾನಮಾಡಬೇಕು. ಅದರಿಂದ ಗೋವೂ ಮಕ್ಕಳೂ ವೃದ್ಧಿಯಾಗುತ್ತವೆ. ಈ ಚಾತುರ್ಮಾಸ್ಯದಲ್ಲಿ ಶರೀರವನ್ನೇ ದಾನಮಾಡಬೇಕು. ಅಂದರೆ ಸಾಧ್ಯವಾದುವುಗಳೆಲ್ಲವನ್ನೂ ದಾನ ಮಾಡಬೇಕು.

೬೩. ಶೂದ್ರನಾಗಲೀ ಶೂದ್ರಳಾಗಲೀ ಈ ಚಾತುರ್ಮಾಸ್ಯದಲ್ಲಿ ವಿಷ್ಣುವು ಏಳುವುದರೊಳಗೆ ಯಾವ ದಾನವನ್ನಾದರೂ ಮಾಡಬೇಕು. ಹಾಗೆ ಮಾಡಿದರೆ ಸುಖವುಳ್ಳವರಾಗುತ್ತಾರೆ.

ದೇವತ್ರಯಂ ತಚ್ಛರೀರಂ ಜ್ಞಾತವ್ಯಂ ವೈಷ್ಣವಾದಿಭಿಃ ।
ಗುರುಸ್ತು ವಿಷ್ಣುರೂಪೋಽಯಂ ತಸ್ಯ ದೇಯಂ ವಿಶೇಷತಃ ॥ ೬೪ ॥

ಇಹ ಲೋಕೇ ಸುಖಂ ಭುಕ್ತ್ವಾ ಪರಲೋಕಂ ಚ ಗಚ್ಛತಿ ।
ಪಾಂಚಭೌತಿಕಮೇತದ್ಧಿ ಅನರ್ಥಕಮುದಾಹೃತಂ ॥ ೬೫ ॥

ಅತೋ ದೇಯಂ ಹಿ ಗುರವೇ ಯತೋಽನಂತಫಲಂ ಲಭೇತ್ ।
ಅಸ್ಮಿನ್ಕಲಿಯುಗೇ ಘೋರೇ ಪಾಪಾಚಾರೇ ದುರಾತ್ಮನಃ ॥ ೬೬ ॥

ನಿಂದಾಂ ಕುರ್ವಂತಿ ವಿಪ್ರೇಂದ್ರ ಜನಾನಾಂ ಪುಣ್ಯಕರ್ಮಣಾಂ ।
ನಿಂದಯಾ ಲಭತೇ ದುಃಖಂ ಯಾವದಾಭೂತಸಂಪ್ಲವಂ ॥ ೬೭ ॥

ನಾನಾಧರ್ಮಾಃ ಪ್ರವರ್ತನ್ತೇ ಕಲೌ ಚೈವ ಮಹಾಮತೇ ।
ಧರ್ಮೋಽಯಂ ದುರ್ಲಭೋ ಲೋಕೇ ಧರ್ಮಕಾಮಾರ್ಥಮೋಕ್ಷದಃ॥೬೮॥

---

೬೪. ಆ ಬ್ರಾಹ್ಮಣನ ಶರೀರವು ಚಾತುರ್ಮಾಸ್ಯದಲ್ಲಿ ಬ್ರಹ್ಮ ವಿಷ್ಣು ಶಿವಾತ್ಮಕವಾದುದು ಎಂದು ತಿಳಿಯಬೇಕು. ಗುರುವು ವಿಷ್ಣುರೂಪನೇ ಆಗಿರುವುದರಿಂದ ಅವನಿಗೆ ಕೊಟ್ಟದ್ದು ಅತಿಶಯ ಫಲವನ್ನು ಕೊಡುತ್ತದೆ.

೬೫. ಹಾಗೆ ದಾನ ಮಾಡಿದರೆ ಈ ಲೋಕದಲ್ಲಿ ಸುಖವನ್ನು ಅನುಭವಿಸಿ ಪರದಲ್ಲಿ ಮೋಕ್ಷವನ್ನು ಹೊಂದುತ್ತಾನೆ. ಪಂಚಭೂತಗಳಿಂದ ಹುಟ್ಟಿದ ಈ ದೇಹವು ಉಪಯೋಗವಿಲ್ಲದ್ದು. ಆದ್ದರಿಂದ ಗುರುಗಳಿಗೆ ಈ ದೇಹವಿರುವಾಗಲೇ ದಾನ ಮಾಡಿದರೆ ಅನಂತವಾದ ಲಾಭವು ಬರುತ್ತದೆ.

೬೬-೬೮. ದುಷ್ಟರು ಪಾಪರೂಪವಾದ ಆಚರಣೆಯುಳ್ಳ ಈ ಘೋರವಾದ ಕಲಿಯುಗದಲ್ಲಿ ಪುಣ್ಯಶಾಲಿಗಳಾದವರನ್ನು ನಿಂದಿಸುತ್ತಾರೆ ಈ ನಿಂದೆಯಿಂದ ಪ್ರಳಯಕಾಲದವರೆಗೂ ದುಃಖವನ್ನು ಅನುಭವಿಸುತ್ತಾರೆ. ಎಲೈ ನಾರದನೇ! ಈ ಕಲಿಯುಗದಲ್ಲಿಯೂ ಕೂಡ ಬಗೆಬಗೆಯಾದ ಧರ್ಮಗಳು ನಡೆಯುತ್ತವೆ. ಧರ್ಮ ಕಾಮ ಅರ್ಥ ಮೋಕ್ಷಗಳನ್ನು ಕೊಡುವ ಈಧರ್ಮವು ಲೋಕದಲ್ಲಿ ದುರ್ಲಭವು.

**ಭೂಮೀಶಾಯೀ ನರೋ ಯಸ್ತು ವಿಮಾನಂ ಚಾಪ್ನುಯಾನ್ನರಃ ।**
**ತೈಲಾಭ್ಯಂಗಂ ನ ಕುರ್ವೀತ ನರಃ ಕೋಪಿ ಮಹೀತಳೇ　　|| ೬೯ ||**

**ದಶವರ್ಷಸಹಸ್ರಾಣಿ ನ ರೋಗೈಃ ಪರಿಪೀಡ್ಯತೇ ।**
**ಬಹುಪುತ್ರೋ ಧನೈರ್ಯುಕ್ತೋ ಹ್ಯಕುಷ್ಠೀ ಜಾಯತೇ ನರಃ　　|| ೭೦ ||**

**ನಕ್ತಭೋಜೀ ನರೋ ಯಸ್ತು ತೀರ್ಥಯಾತ್ರಾಫಲಂ ಲಭೇತ್ ।**
**ಅಯಾಚಿತೇನ ಚಾಪ್ನೋತಿ ವಾಪೀಕೂಪಕ್ರಿಯಾಫಲಂ　　|| ೭೧ ||**

**ವರ್ಜಯೇದ್ಯಸ್ತು ವೈ ದ್ರೋಹಂ ಪ್ರಾಣಿಹಿಂಸಾಪರಾಙ್ಮುಖಃ ।**
**ಅಹಿಂಸಾ ಪರಮೋ ಧರ್ಮ ಇತಿ ವೇದೇಷು ಗೀಯತೇ　　|| ೭೨ ||**

**ದಾನಂ ದಯಾ ದಮ ಇತಿ ಸರ್ವತ್ರೈವ ಶ್ರುತಂ ಮಯಾ ।**
**ತಸ್ಮಾತ್ಸರ್ವಪ್ರಯತ್ನೇನ ಕಾರ್ಯಂ ವೈ ಮಹತಾಮಪಿ　　|| ೭೩ ||**

---

೬೯. ಈ ಪ್ರಪಂಚದಲ್ಲಿರುವ ಯಾವನೊಬ್ಬನೂ ಚಾತುರ್ಮಾಸ್ಯದಲ್ಲಿ ಎಣ್ಣೆ ಹಚ್ಚಿಕೊಂಡು ಸ್ನಾನಮಾಡಬಾರದು. ನೆಲದಮೇಲೆ ಮಲಗತಕ್ಕವನು ಸತ್ತನಂತರ ಒಳ್ಳೆಯ ವಿಮಾನವನ್ನು ಹೊಂದುತ್ತಾನೆ.

೭೦. ಹಾಗೆ ನೆಲದಮೇಲೆ ಮಲಗಿ ತೈಲಾಭ್ಯಂಜನ ಮಾಡದಿದ್ದರೆ ಹತ್ತು ಸಾವಿರ ವರ್ಷಗಳವರೆವಿಗೆ ರೋಗ ಬರುವುದಿಲ್ಲ. ಬಹಳ ಜನ ಮಕ್ಕಳನ್ನು ಹೊಂದುತ್ತಾನೆ. ಐಶ್ವರ್ಯವನ್ನು ಹೊಂದುತ್ತಾನೆ. ಕುಷ್ಠರೋಗವೂ ಬರುವುದಿಲ್ಲವು.

೭೧. ನಕ್ತಭೋಜನ ಮಾಡುವವನು ತೀರ್ಥಯಾತ್ರೆಯ ಫಲವನ್ನು ಹೊಂದುತ್ತಾನೆ. ಮತ್ತೊಬ್ಬರನ್ನು ಯಾಚಿಸದಿದ್ದರೆ ಕೆರೆ ಕಟ್ಟೆಗಳನ್ನು ಕಟ್ಟಿಸಿದ ಪುಣ್ಯವು ಬರುತ್ತದೆ.

೭೨. ಮನುಷ್ಯನು ದ್ರೋಹ (ಕೆಡಕು) ಮಾಡುವುದನ್ನು ಬಿಡಬೇಕು. ಪ್ರಾಣಿಗಳನ್ನು ಹಿಂಸಿಸಬಾರದು ಪ್ರಾಣಿಗಳನ್ನು ಹಿಂಸಿಸದಿರುವುದೇ ಉತ್ತಮವಾದ ಧರ್ಮವೆಂದು ವೇದಗಳಲ್ಲಿ ಹೇಳಿದ್ದಾರೆ.

೭೩. ದಾನ ದಯೆ ಇಂದ್ರಿಯ ನಿಗ್ರಹಗಳೆಂಬುದು ಎಲ್ಲರಲ್ಲಿಯೂ ಇರಬೇಕೆಂದು ಕೇಳಿದ್ದೇವೆ. ಆದ್ದರಿಂದ ಅವನ್ನು ಎಲ್ಲರೂ ಆಚರಿಸಬೇಕು.

ಗುರವೇ ಯೇ ಪ್ರಯಚ್ಛಂತಿ ಶರೀರಂ ಪುತ್ರಪೌತ್ರಕಂ ।
ತತ್ರ ದಾನಪ್ರಭಾವೇನ ವಿಷ್ಣೋರ್ವಲ್ಲಭತಾಮಿಯಾತ್ || ೭೪ ||

ಶೂದ್ರೇಣ ದೀಕ್ಷಿತೋ ಯಸ್ತು ಶೂದ್ರಃ ಶೂದ್ರೇಣ ದೀಕ್ಷಿತಃ ।
ಉಭೌ ತೌ ಪಾಪಿನೌ ಪ್ರೋಕ್ತೌ ಯಾವದಾಭೂತಸಂಪ್ಲವಂ || ೭೫ ||

ಹಿಂಸಾಮತಿಂ ಯದಾ ಧತ್ತೇ ಶೂದ್ರೋ ವೈ ಪಾಪಿಸತ್ತಮಃ ।
ಏಕವಿಂಶತಿಕುಲಂ ತೇನ ನರಕಂ ಪ್ರತಿಪದ್ಯತೇ || ೭೬ ||

ಕಲೌ ಪಾಷಂಡಿನಶ್ಶೂದ್ರಾಃ ದೃಶ್ಯಂತೇ ಬಹವೋ ಭುವಿ ।
ತೇಷಾಂ ಸಂಭಾಷಣಾದೇವ ನರಕಂ ಭವತಿ ದ್ವಿಜ || ೭೭ ||

ಬ್ರಹ್ಮಜ್ಞಾನರತಾ ಯೇ ಚ ಗಾಯಿತ್ರೀಜಾಪಕಾ ಹಿ ಯೇ ।
ತೇಷಾಂ ದರ್ಶನಮಾತ್ರೇಣ ಬ್ರಹ್ಮಹತ್ಯಾ ವಿನಶ್ಯತಿ || ೭೮ ||

---

೭೪, ಯಾವನು ಮಕ್ಕಳು ಮೊಮ್ಮಕ್ಕಳುಗಳೊಡನೆ ಗುರುವಿಗೆ ಶುಶ್ರೂಷೆ ಮಾಡುತ್ತಾ ದಾನಮಾಡುವನೋ ಆ ದಾನದ ಪ್ರಭಾವದಿಂದ ಅವನು ವಿಷ್ಣುವಿಗೆ ಪ್ರೀತಿಪಾತ್ರನಾಗುತ್ತಾನೆ.

೭೫. ಶೂದ್ರನಿಂದ ದೀಕ್ಷೆಯನ್ನು ಹೊಂದಿದ ಬ್ರಾಹ್ಮಣನಾಗಲೀ ಶೂದ್ರನಿಂದ ದೀಕ್ಷೆಯನ್ನು ಹೊಂದಿದ ಶೂದ್ರನೇ ಆಗಲೀ ಇಬ್ಬರೂ ಕೂಡ ಪ್ರಳಯ ಕಾಲದವರೆಗೂ ಪಾಪಿಗಳಾಗಿರುವರೆಂದು ಹೇಳುತ್ತಾರೆ.

೭೬, ಯಾವನು ಹಿಂಸೆಯಲ್ಲಿ ಆಸಕ್ತನಾಗುತ್ತಾನೆಯೋ ಅವನೇ ಪಾಪಿಯು. ಅವನು ಇಪ್ಪತ್ತೊಂದು ಕುಲಗಳವರೆವಿಗೆ ನರಕವನ್ನು ಹೊಂದುತ್ತಾನೆ.

೭೭. ಕಲಿಯುಗದಲ್ಲಿ ಪಾಷಂಡಿಗಳಾದ ಶೂದ್ರರು ಎಲ್ಲಾ ಕಡೆಯಲ್ಲಿಯೂ ಕಾಣುವರು. ಅವರೊಡನೆ ಮಾತನಾಡುವುದರಿಂದಲೇ ನರಕವು ಬರುತ್ತದೆ.

೭೮. ಬ್ರಹ್ಮಜ್ಞಾನಿಗಳು ಮತ್ತು ಗಾಯತ್ರೀಜಪ ಮಾಡುವವರು ಇವರನ್ನು ನೋಡಿದೊಡನೆಯೇ ಬ್ರಹ್ಮಹತ್ಯೆಯೂ ಕೂಡ ಹೋಗುತ್ತದೆ.

**ಶಂಖಚಕ್ರಧರಾ ವಿಪ್ರಾ ವಿಷ್ಣುಧರ್ಮೇಷು ಸಮ್ಮತಾಃ ।**
**ವೇದಧರ್ಮರತಾ ನಿತ್ಯಂ ಪಂಕ್ತಿಪಾವನಪಾವನಾಃ ॥ ೭೯ ॥**

**ಚಾತುರ್ಮಾಸ್ಯಮಿದಂ ಕರ್ಮ ಕರ್ತವ್ಯಂ ತೈಸ್ಸದಾ ನರೈಃ ।**
**ಕಿಮನ್ಯದ್ಬಹುನೋಕ್ತೇನ ಭೂಯೋ ಭೂಯಶ್ಚ ಬಾಡವ ॥ ೮೦ ॥**

**ತೇ ಧನ್ಯಾಃ ಪೃಥಿವೀಮಧ್ಯೇ ನರಾ ಯೇ ವೈಷ್ಣವಾ ಭುವಿ ।**
**ತೇಷಾಂ ಕುಲಂ ಧನ್ಯತಮಂ ಜಾತಿರ್ಧನ್ಯತಮಾ ಸ್ಮೃತಾ ॥ ೮೧ ॥**

**ಮಧು ಭಕ್ಷಯತೇ ಯಸ್ತು ಸುಪ್ತೇ ದೇವೇ ಜನಾರ್ದನೇ ।**
**ಮಹತ್ಪಾಪಂ ಭವೇತ್ತಸ್ಯ ವರ್ಜನೇ ಯಚ್ಛೃಣುಷ್ವ ತತ್ ॥ ೮೨ ॥**

**ಸರ್ವಯಜ್ಞೈಶ್ಚ ವಿವಿಧೈರ್ಯತ್ಫಲಂ ತದವಾಪ್ನುಯಾತ್ ।**
**ದಾಡಿಮಂ ಮಾತುಲಿಂಗಂ ಚ ನಾರಿಕೇಳಂ ಚ ವರ್ಜಯೇತ್ ॥ ೮೩ ॥**

---

೭೯. ಶಂಖಚಕ್ರಗಳನ್ನು ಧರಿಸಿರುವ (ಮುದ್ರಾಧಾರಣೆ ಮಾಡಿಸಿಕೊಂಡು) ಮತ್ತು ವಿಷ್ಣುಧರ್ಮವನ್ನು ಅನುಸರಿಸುತ್ತಿರುವ ಜನರು ಪಂಕ್ತಿಪಾವನಮಾಡುವವರನ್ನು ಪಾವನಮಾಡುತ್ತಾರೆ.

೮೦. ಆದ್ದರಿಂದ ಈ ಚಾತುರ್ಮಾಸ್ಯವ್ರತಗಳನ್ನು ಜನರು ಯಾವಾಗಲೂ ಆಚರಿಸಬೇಕು. ಬೇರೆ ಎಷ್ಟು ಹೇಳಿದುದರಿಂದ ಪ್ರಯೋಜನವೇನು ?

೮೧. ಯಾರು ಚಾತುರ್ಮಾಸ್ಯ ವ್ರತವನ್ನು ಆಚರಿಸುತ್ತಾರೆಯೋ ಅವರೇ ಈ ಲೋಕದಲ್ಲಿ ಧನ್ಯರು. ಅವರ ಕುಲವೂ ಧನ್ಯವು. ಜಾತಿಯಂತೂ ಬಹು ಧನ್ಯವಾದುದು.

೮೨. ಜನಾರ್ದನನು ಮಲಗಿರುವ ಚಾತುರ್ಮಾಸ್ಯದಲ್ಲಿ ಜೇನನ್ನು ಉಪಯೋಗಿಸಿದರೆ ಬಹುವಾದ ಪಾಪವು ಬರುವುದು. ಅದನ್ನು ಬಿಟ್ಟರೆ ಬರುವ ಪುಣ್ಯವನ್ನು ಕೇಳಿ.

೮೩–೮೪. ಎಲ್ಲಾ ಯಜ್ಞಗಳನ್ನು ಮಾಡಿದರೆ ಬರುವ ಫಲವನ್ನು ಅದರಿಂದ ಹೊಂದುತ್ತಾನೆ. ದಾಳಿಂಬೆ ಮಾದಳ ತೆಂಗಿನಕಾಯಿ ಇವನ್ನು ಚಾತುರ್ಮಾಸ್ಯದಲ್ಲಿ

ದೇವೋ ವೈಮಾನಿಕೋ ಭೂತ್ವಾ ಹ್ಯಂತೇ ವಿಷ್ಣುಪದಂ ವ್ರಜೇತ್ ।
ವಿತ್ತವಾನ್ಸುಭಗಶ್ಚೈವ ಕುಲೇ ಶ್ರೀಮತಿ ಜಾಯತೇ ॥ ೮೪ ॥

ಯಃ ಕ್ಷಿಪೇದೇಕಭುಕ್ತೇನ ನರೋ ಮಾಸಚತುಷ್ಟಯಂ ।
ಯಾವಂತಿ ಚ ಮುಹೂರ್ತಾನಿ ಉದಿತೇ ಭಾಸ್ಕರೇಪಿ ಚ ॥ ೮೫ ॥

ತಾವದ್ವರ್ಷಸಹಸ್ರಾಣಿ ವಿಷ್ಣುಲೋಕೇ ಮಹೀಯತೇ ।
ವ್ರೀಹೀಂಶ್ಚ ಯವಗೋಧೂಮಾನ್ ವರ್ಜಯೇದ್ಯಸ್ತು ಮಾನವಃ ॥ ೮೬ ॥

ಅಶ್ವಮೇಧಾದಿಕೇ ಕೃತೇ ವಿಧಿವದ್ವೈ ಸದಕ್ಷಿಣೇ ।
ಯತ್ಫಲಂ ಮುನಿಭಿಃ ಪ್ರೋಕ್ತಂ ತತ್ಫಲಂ ಲಭತೇ ನರಃ ॥ ೮೭ ॥

ಧನಧಾನ್ಯಸಮಾಯುಕ್ತೋ ಬಹುಪುತ್ರಶ್ಚ ಜಾಯತೇ ।
ತುಳಸೀದಳದರ್ಭೈಶ್ಚ ಯೇ ಕುರ್ವಂತಿ ಚ ತರ್ಪಣಂ ॥ ೮೮ ॥

---

ಬಿಡಬೇಕು. ಹಾಗೆ ಬಿಟ್ಟರೆ ಅವನು ದೇವತೆಯೇ ಆಗಿ ವಿಮಾನದಲ್ಲಿ ಕುಳಿತು ವೈಕುಂಠವನ್ನು ಹೊಂದುತ್ತಾನೆ. ಅನಂತರ ಧನಿಕನಾಗಿ ಸುಂದರನಾಗಿ ಉತ್ತಮವಾದ ಕುಲದಲ್ಲಿ ಹುಟ್ಟುತ್ತಾನೆ.

೮೫-೮೭. ಯಾವನು ಈ ಚಾತುರ್ಮಾಸ್ಯದಲ್ಲಿ ಒಂದೇ ಹೊತ್ತು ಊಟ ಮಾಡುತ್ತಾನೆಯೋ ಅವನು ಸೂರ್ಯನು ಹುಟ್ಟಿದಮೇಲೆ ಎಷ್ಟು ಮುಹೂರ್ತಗಳ ಅನಂತರ ಊಟಮಾಡುವನೋ ಅಷ್ಟು ಸಾವಿರ ವರ್ಷಗಳವರೆವಿಗೆ ವೈಕುಂಠದಲ್ಲಿ ಸುಖಿಸುತ್ತಾನೆ. ಅಕ್ಕಿ ಯವ ಗೋಧುವೆಗಳನ್ನು ಬಿಟ್ಟವನು ಶಾಸ್ತ್ರೋಕ್ತವಾಗಿ ಮಾಡಿ ಸರಿಯಾಗಿ ದಕ್ಷಿಣೆ ಕೊಟ್ಟರೆ ಅಶ್ವಮೇಧಕ್ಕೆ ಯಾವ ಪುಣ್ಯವು ಬರುವುದೋ ಆ ಪುಣ್ಯವನ್ನು ಹೊಂದುತ್ತಾನೆ.

೮೮-೯೪. ಮತ್ತು ಧನಧಾನ್ಯಗಳಿಂದ ಕೂಡಿದವನಾಗಿ ಬಹಳ ಮಕ್ಕಳನ್ನು ಹೊಂದುತ್ತಾನೆ. ತುಳಸೀದಳ ದರ್ಭೆಗಳನ್ನು ಇಟ್ಟುಕೊಂಡು ಈ ಚಾತುರ್ಮಾಸ್ಯದಲ್ಲಿ ತರ್ಪಣ ಮಾಡಿದರೆ ಅದಕ್ಕೆ ಬರುವ ಫಲಕ್ಕಿಂತಲೂ ಕೋಟಿಯಷ್ಟು

ತತ್ಫಲಂ ಕೋಟಿಗುಣಿತಂ ಚಾತುರ್ಮಾಸ್ಯೇ ವಿಶೇಷತಃ ।
ಯದಾ ಸುಪ್ತೇ ಹೃಷೀಕೇಶೇ ಕುರ್ಯಾದೇತತ್ಪ್ರಯಾನ್ವಿತಂ ॥ ೮೯ ॥

ತೇಪಿ ಯುಗಸಹಸ್ರಾಣಿ ಮೋದಂತೇ ವಿಷ್ಣುಸನ್ನಿಧೌ ।
ಪದಂ ವಾ ಪದಮರ್ಧಂ ವಾ ಋಚಂ ಚಾರ್ಧಮೃಚಂ ತಥಾ ॥ ೯೦ ॥

ವಿಷ್ಣ್ವಗ್ರೇ ಯೇ ಪ್ರಣಮಂತಿ ಭಕ್ತಾಸ್ತೇ ವೈ ನ ಸಂಶಯಃ ।
ಮೈಥುನಂ ವರ್ಜಯೇದ್ಯಸ್ತು ಸುಪ್ತೇ ದೇವೇ ಜನಾರ್ದನೇ ॥ ೯೧ ॥

ಏಕಮನ್ವಂತರಂ ಸೋಪಿ ವಿಷ್ಣುಲೋಕೇ ಮಹೀಯತೇ ।
ದಧಿ ದುಗ್ಧಂ ತಥಾ ತಕ್ರಂ ಗುಡಂ ಶಾಕಂ ತಥೈವ ಚ ॥ ೯೨ ॥

ವರ್ಜಯೇದ್ಯಸ್ತು ಭೋ ವಿಪ್ರ ಮುಕ್ತಿಭಾಗೀ ನ ಸಂಶಯಃ ।
ಸ್ನಾನಮಾಮಲಕೇನೈವ ಯೇ ಕುರ್ವಂತಿ ಚ ಮಾನವಾಃ ॥ ೯೩ ॥

---

ಹೆಚ್ಚಾಗಿ ಪುಣ್ಯವು ಬರುತ್ತದೆ. ಯಾರು ಒಂದು ಹೊತ್ತಿನ ಊಟ ಅಕ್ಕಿ ಮುಂತಾದುವನ್ನು ಬಿಡುವುದು ತರ್ಪಣ ಕೊಡುವುದು ಈ ಮೂರನ್ನು ಮಾಡುತ್ತಾರೆಯೋ ಅವರು ಸಾವಿರವರ್ಷಗಳವರೆವಿಗೆ ವೈಕುಂಠದಲ್ಲಿ ಸುಖಿಸುತ್ತಾರೆ. ಒಂದು ಶ್ಲೋಕವನ್ನಾಗಲೀ ಇಲ್ಲವೇ ಅರ್ಧಶ್ಲೋಕವನ್ನಾಗಲೀ ಒಂದು ಋಕ್ಕನ್ನಾಗಲೀ ಅರ್ಧ ಋಕ್ಕನ್ನಾಗಲೀ ವಿಷ್ಣುವಿನ ಎದುರಿನಲ್ಲಿ ಗಾನ ಮಾಡಿದರೆ ಅವರು ಅತ್ಯಂತ ಭಕ್ತರಾಗಿರುವರು. ಸಂಶಯವೇ ಇಲ್ಲ. ಈ ಚಾತುರ್ಮಾಸ್ಯದಲ್ಲಿ ಯಾವನು ಸ್ತ್ರೀಸಂಗವನ್ನು ಬಿಡುವನೋ ಅವನು ಒಂದು ಮನುವಿನ ಕಾಲದವರೆವಿಗೆ ವಿಷ್ಣುಲೋಕದಲ್ಲಿ ಸುಖಿಸುತ್ತಾನೆ. ಹಾಲು ಮೊಸರು ಮಜ್ಜಿಗೆ ಬೆಲ್ಲ ಕಾಯಿಪಲ್ಯಗಳನ್ನು ಬಿಟ್ಟರೆ ಅವನು ಮುಕ್ತಿಯನ್ನು ಹೊಂದುವುದರಲ್ಲಿ ಸಂಶಯವಿಲ್ಲ. ನೆಲ್ಲಿಯಕಾಯಿಯನ್ನು ಜಜ್ಜಿಹಾಕಿಕೊಂಡು ಚಾತುರ್ಮಾಸ್ಯದಲ್ಲಿ ಸ್ನಾನಮಾಡಿದವರು ಪ್ರತಿದಿನವೂ ಬಹು ಪುಣ್ಯವನ್ನು ಹೊಂದುತ್ತಾರೆ. ನೆಲ್ಲಿಕಾಯಿಯು ಪಾಪವನ್ನು ನಾಶ ಮಾಡುತ್ತದೆ. ಎಂದು ಬಲ್ಲವರು ಹೇಳುತ್ತಾರೆ.

ದಿನೇದಿನೇ ಮಹತ್ಪುಣ್ಯಂ ಪ್ರಾಪ್ನುವಂತಿ ಚ ತೇ ಮುನೇ ।
ಧಾತ್ರೀಫಲಂ ಪಾಪಹರಂ ಪ್ರವದಂತಿ ಮನೀಷಿಣಃ ॥ ೯೪ ॥

ತ್ರೈಲೋಕ್ಯಕಾರಣಾರ್ಥಾಯ ನಿರ್ಮಿತಾ ಬ್ರಹ್ಮಣಾ ಪುರಾ ।
ಸಂಧ್ಯಾಮೌನಂ ಚರೇದ್ಯಸ್ತು ನರೋ ಮಾಸಚತುಷ್ಟಯಂ ॥ ೯೫ ॥

ಸತ್ಯೇ ಚಾಧಿಕಪುಣ್ಯಂ ಚ ಪ್ರವದಂತಿ ಮನೀಷಿಣಃ ।
ನಿತ್ಯಸ್ನಾಯೀ ನರೋ ಯಸ್ತು ಯಾವನ್ಮಾಸಚತುಷ್ಟಯಂ ॥ ೯೬ ॥

ಮನ್ವಂತರಾಣಿ ಚತ್ವಾರಿ ವೈಕುಂಠೇ ಮೋದತೇ ಪುನಃ ।
ಸ್ವಯಂಪಾಕೀ ನರೋ ಯಸ್ತು ಭುಂಕ್ತೇ ಮಾಸಚತುಷ್ಟಯಂ ॥ ೯೭ ॥

ದಶವರ್ಷಸಹಸ್ರಾಣಿ ಇಂದ್ರಲೋಕೇ ಮಹೀಯತೇ ।
ಚತುರೋ ವಾರ್ಷಿಕಾನ್ ಮಾಸಾನ್ ಮೌನಂ ಚೈವ ಸಮಾಚರೇತ್ ॥ ೯೮ ॥

ಸ ಚ ವಿಷ್ಣುಪುರಂ ಗಚ್ಛೇದ್ಬ್ರಾಹ್ಮಂ ಚ ತದನಂತರಂ ।
ಮೌನಭೋಜೀ ನರೋ ಯಸ್ತು ಕದಾಚಿನ್ನಾವಸೀದತಿ ॥ ೯೯ ॥

---

೯೪-೯೯. ಮೂರು ಲೋಕದಲ್ಲಿರುವ ಜನರನ್ನೂ ಕಾಪಾಡುವುದಕ್ಕೋಸ್ಕರವಾಗಿಯೇ ಬ್ರಹ್ಮನು ಈ ನೆಲ್ಲಿಯನ್ನು ಸೃಷ್ಟಿಮಾಡಿರುವನು. ಯಾರು ಈ ಚಾತುರ್ಮಾಸ್ಯದಲ್ಲಿ ಸಂಧ್ಯಾಕಾಲದಲ್ಲಿ ಮೌನವಾಗಿರುವರೋ ಅವರಿಗೆ ಸತ್ಯವಾಡಿದುದಕ್ಕಿಂತಲೂ ಹೆಚ್ಚಿನ ಪುಣ್ಯವು ಬರುವುದು. ಚಾತುರ್ಮಾಸ್ಯಗಳು ಪೂರ್ತಿಯಾಗಿ ದಿನವೂ ಸ್ನಾನಮಾಡುವವನು ನಾಲ್ಕು ಮನ್ವಂತರಗಳವರೆಗೆ ವೈಕುಂಠವನ್ನು ಹೊಂದುತ್ತಾನೆ. ಈ ಚಾತುರ್ಮಾಸ್ಯದ ನಾಲ್ಕು ತಿಂಗಳೂ ತಾನೇ ಅಡಿಗೆ ಮಾಡಿಕೊಂಡು ಊಟ ಮಾಡಿದರೆ ಹತ್ತುಸಾವಿರ ವರ್ಷಗಳವರೆವಿಗೂ ಇಂದ್ರಲೋಕದಲ್ಲಿ ಸುಖಿಸುವನು. ಈ ನಾಲ್ಕು ಮಾಸಗಳಲ್ಲಿಯೂ ಯಾರು ಮೌನವಾಗಿರುವರೋ ಅವರು ವೈಕುಂಠವನ್ನು ಹೊಂದಿ ಅನಂತರ ಬ್ರಹ್ಮಲೋಕವನ್ನು ಹೊಂದುತ್ತಾರೆ. ಮೌನದಿಂದ ಊಟಮಾಡುವವನು ದುಃಖವನ್ನು ಹೊಂದುವುದೇ ಇಲ್ಲ.

ಮೌನೇನ ಭುಂಜಮಾನಾಸ್ತು ರಾಕ್ಷಸಾಸ್ತ್ರಿದಿವಂ ಗತಾಃ ।
ಕ್ರಿಮಿಕೀಟಸಮಾಯುಕ್ತಂ ಪಕ್ವಾನ್ನಮಶುಚಿರ್ಭವೇತ್ ॥ ೧೦೦ ॥

ಗವಾಂ ಮಾಂಸಸಮಂ ಜ್ಞೇಯಮನ್ನಂ ಚಾಪಿ ದ್ವಿಜೋತ್ತಮ ।
ತದನ್ನಮಶುಚಿಶ್ಚೈವ ಗ್ರಸತೇ ಮಾನುಷೋ ಯದಿ ॥ ೧೦೧ ॥

ಏತದ್ವೈ ಭೋಜನಂ ಪ್ರೋಕ್ತಂ ರಾಕ್ಷಸಾನಾಂ ಪ್ರಿಯಂ ಸದಾ ।
ತೋಷಿತೋ ಹಿ ಪುರಾ ಬ್ರಹ್ಮಾ ತೇನ ದತ್ತಂ ಮಹಾತ್ಮನಾ ॥ ೧೦೨ ॥

ಮೌನೇನ ಬೋಜಯಿತ್ವಾ ತು ಸ್ವರ್ಗಂ ಪ್ರಾಪ್ತಾ ನ ಸಂಶಯಃ ।
ಸಂಜಲ್ಪನ್ ಭುಂಜತೇ ಯಸ್ತು ತೇನಾನ್ನಮಶುಚಿರ್ಭವೇತ್ ॥ ೧೦೩ ॥

ಪಾಪಂ ಸ ಕೇವಲಂ ಭುಂಕ್ತೇ ತಸ್ಮಾನ್ಮೌನಂ ಸಮಾಚರೇತ್ ।
ಉಪವಾಸಸಮಂ ಭೋಜ್ಯಂ ಜ್ಞೇಯಂ ಮೌನೇನ ನಾರದ ॥ ೧೦೪ ॥

---

೧೦೦-೧೦೨. ಮೌನದಿಂದ ಊಟಮಾಡುತ್ತ ರಾಕ್ಷಸರೂ ಕೂಡ ಸ್ವರ್ಗವನ್ನು ಹೊಂದಿದರು. ಹುಳುಗಳಿಂದ ಕೂಡಿದ ಅನ್ನವು ಈ ಚಾತುರ್ಮಾಸ್ಯದಲ್ಲಿ ಅಶುಚಿಯು. ಅದು ಗೋಮಾಂಸ ಸಮವಾಗುವುದು. ಆ ಅಶುಚಿಯಾದ ಅನ್ನವನ್ನು ಮನುಷ್ಯನು ಊಟಮಾಡಿದರೆ ರಾಕ್ಷಸನಾಗುತ್ತಾನೆ. ಈ ಊಟವು ಯಾವಾಗಲೂ ರಾಕ್ಷಸರಿಗೆ ಪ್ರೀತಿದಾಯಕವಾದುದು. ಈ ಕ್ರಿಮಿಕೀಟಗಳಿಂದ ಕೂಡಿದ ಅನ್ನದಿಂದ ರಾಕ್ಷಸರು ಬ್ರಹ್ಮನನ್ನು ಸಂತೋಷಪಡಿಸಿದರು.

೧೦೩-೧೦೪. ಮೌನದಿಂದ ಊಟಮಾಡಿದವರು ಸ್ವರ್ಗವನ್ನು ಹೊಂದಿದರು. ಮಾತನಾಡುತ್ತ ಊಟಮಾಡಿದರೆ ಆ ಅನ್ನವು ಅಶುಚಿಯಾಗುತ್ತದೆ. ಅದನ್ನು ಊಟಮಾಡಿದರೆ ಪಾಪವನ್ನು ಹೊಂದುತ್ತಾನೆ. ಮೌನದಿಂದ ಊಟ ಮಾಡಿದರೆ ಉಪವಾಸಕ್ಕೆ ಸಮವಾಗಿರುತ್ತದೆ.

ಪಂಚಪ್ರಾಣಾಹುತೀರ್ಯಸ್ತು ಮೌನಭೋಜೀ ನರೋತ್ತಮಃ ।
ಪಂಚ ವೈ ಪಾತಕಾನ್ಯಸ್ಯ ನಶ್ಯಂತಿ ನಾತ್ರ ಸಂಶಯಃ ॥ ೧೦೫ ॥

ನ ಕುರ್ಯಾತ್ಸಂಧಿತಂ ವಸ್ತ್ರಂ ಪಿತೃಕರ್ಮಣಿ ಬಾಡಬ ।
ಅಶುಚ್ಯಂಗಸ್ಥಿತಂ ಚೈವ ವಸ್ತ್ರಂ ತದಶುಚಿರ್ಭವೇತ್ ॥ ೧೦೬ ॥

ಕಟಿಪೃಷ್ಠಸ್ಥಿತೇ ವಸ್ತ್ರೇ ಪುರೀಷಂ ಕುರುತೇ ತು ಯಃ ।
ಮೂತ್ರಂ ವಾ ಮೈಥುನಂ ವಾಪಿ ತದ್ವಸ್ತ್ರಂ ಪರಿವರ್ಜಯೇತ್ ॥ ೧೦೭ ॥

ಪಿತೃಕರ್ಮವಿಶೇಷೇ ತು ವರ್ಜನೀಯಂ ಚ ಬಾಡಬ ।
ಸರ್ವದಾ ಚ ಮುನೇ ಪ್ರಾಜ್ಞೈಃ ದೇವಾರ್ಚಾ ಚಕ್ರಪಾಣಿನಃ ॥ ೧೦೮ ॥

ಕರ್ತವ್ಯಾ ಚ ವಿಶೇಷೇಣ ಶುಚಿಭಿರ್ವಿಜಿತೇಂದ್ರಿಯೈಃ ।
ಸಂಪ್ರಸುಪ್ತೇ ಹೃಷೀಕೇಶೇ ತೃಣಶಾಕಕುಸುಂಭಿಕಾಃ ॥ ೧೦೯ ॥

---

೧೦೫. ಪ್ರಾಣಾಹುತಿಗಳೈದನ್ನು ಮೌನದಿಂದ ತೆಗೆದುಕೊಂಡರೆ ಅದರಿಂದ ಪಂಚಮಹಾಪಾಪಗಳು ಹೋಗುತ್ತವೆ. ಸಂಶಯವಿಲ್ಲ.

೧೦೬. ಪಿತೃಕರ್ಮ ಮಾಡುವಾಗ ಹೊಲೆದಿರುವ ಬಟ್ಟೆಗಳನ್ನು ಹಾಕಿಕೊಂಡಿರಬಾರದು. ಅಶುಚಿಯಾದ ಅವಯುವಗಳ ಮೇಲಿರುವ ಬಟ್ಟೆಯೂ ಕೂಡ ಅಶುಚಿಯಾಗುತ್ತದೆ.

೧೦೭. ಮೂತ್ರ ಮಲಗಳನ್ನು ವಿಸರ್ಜಿಸುವಾಗ ಮಡಿಯಾದ ಬಟ್ಟೆಯು ಸೊಂಟದಲ್ಲಿದ್ದರೂ ಅದು ಅಶುಚಿಯಾಗುತ್ತದೆ. ಮೈಥುನಮಾಡುವಾಗ ಇದ್ದರೂ ಅಶುಚಿಯಾಗುತ್ತದೆ. ಆದ್ದರಿಂದ ಅವನ್ನು ಬಿಟ್ಟುಬಿಡಬೇಕು.

೧೦೮–೧೧೨. ಅಶುಚಿಪದಾರ್ಥಗಳನ್ನು ಪಿತೃಕರ್ಮಗಳಲ್ಲಿ ಬಿಡಬೇಕು. ಎಲೈ ಋಷಿಯೆ! ಇವೆಲ್ಲವನ್ನೂ ಶ್ರೀ ವಿಷ್ಣುವಿನ ಪೂಜೆಯಲ್ಲಿ ಮನಸ್ಸಿಟ್ಟ ಯೋಗ್ಯರಾದವರು ಮಾಡಬೇಕು. ಚಾತುರ್ಮಾಸ್ಯದಲ್ಲಿ ಹುಲ್ಲು ಕಾಯಿಪಲ್ಯ

ಸಂಧಿತಾನಿ ಚ ವಸ್ತ್ರಾಣಿ ವರ್ಜನೀಯಾನಿ ಯತ್ನತಃ ।
ಚಾತುರ್ಮಾಸ್ಯೇ ಹರೌ ಸುಪ್ತೇ ಯಸ್ತು ಏತಾನಿ ವರ್ಜಯೇತ್ ॥ ೧೧೦ ॥

ನರಕಂ ಸ ತು ನೋ ಗಚ್ಛೇದ್ಯಾವದಾಭೂತಸಂಪ್ಲವಂ ।
ಮದ್ಯಂ ಮಾಂಸಂ ನ ಭಕ್ಷೇತ ಶಾಶಕಂ ಸೌಕರಂ ತಥಾ ॥ ೧೧೧ ॥

ಚಾತುರ್ಮಾಸ್ಯೇ ವಿಶೇಷೇಣ ಸುಪ್ತೇ ದೇವೇ ಜನಾರ್ದನೇ ।
ಸೋಽಪಿ ದೇವತ್ವಮಾಪ್ನೋತಿ ಅಹಿಂಸಾನಿರತೋ ನರಃ ॥ ೧೧೨ ॥

ಮಿಥ್ಯಾಕ್ರೋಧಸ್ತಥಾ ಕ್ಷ್ವೆದ್ರಂ ತಥಾ ಪರ್ವಸು ಮೈಥುನಂ ।
ವರ್ಜಿತಂ ಯೇನ ವಿಪ್ರೇಂದ್ರ ಸೋಽಶ್ವಮೇಧಫಲಂ ಲಭೇತ್ ॥ ೧೧೩ ॥

ಬ್ರಹ್ಮಚರ್ಯಂ ಪ್ರಜಾವೃದ್ಧಿಮಾಯುರ್ವೃದ್ಧಿಂ ತಥೈವ ಚ ।
ಪುಷ್ಪಂ ಪತ್ರಂ ಫಲಂ ಶಯ್ಯಾಮಭ್ಯಂಗಂ ಚ ವಿಲೇಪನಂ ॥ ೧೧೪ ॥

ವೃಥಾದುಗ್ಧಾನಿ ಮಾಂಸಂ ಚ ಮದ್ಯಂ ಚ ಪರಿವರ್ಜಯೇತ್ ।
ಚಾತುರ್ಮಾಸ್ಯೇ ಹರೌ ಸುಪ್ತೇ ನಿಯತಂ ಯದ್ವಿವರ್ಜಿತಂ ॥ ೧೧೫ ॥

---

ಅಲಂಕಾರದ ರಂಗು ಹೊಲಿದ ವಸ್ತುಗಳು ಇವನ್ನು ಪ್ರಯತ್ನಪೂರ್ವಕವಾಗಿ ಬಿಡಬೇಕು. ಚಾತುರ್ಮಾಸ್ಯದಲ್ಲಿ ಯಾವನು ಇವೆಲ್ಲವನ್ನೂ ಬಿಡುತ್ತಾನೆಯೋ ಅವನು ಚರಾಚರಗಳಿರುವವರೆಗೂ ನರಕವನ್ನು ಹೊಂದುವುದಿಲ್ಲ. ಚಾತುರ್ಮಾಸ್ಯದಲ್ಲಿ ಮದ್ಯಮಾಂಸಗಳನ್ನು ಉಪಯೋಗಿಸಕೂಡದು. ಅದರಲ್ಲಿಯೂ ಮೊಲ ಹಂದಿಗಳ ಮಾಂಸವಂತೂ ಕೂಡಬೇಕೂಡದು. ಹೀಗೆ ಹಿಂಸೆಮಾಡದೆ ಬಿಟ್ಟವನು ದೇವತೆಯಾಗುತ್ತಾನೆ.

೧೧೩. ಸುಳ್ಳುಹೇಳುವುದು ಕೋಪ ಚಾಡಿ ಪರ್ವಕಾಲಗಳಲ್ಲಿ ಸ್ತ್ರೀಸಂಗ ಇವನ್ನು ಬಿಡಬೇಕು. ಬಿಟ್ಟರೆ ಅಶ್ವಮೇಧ ಫಲವು ಬರುತ್ತದೆ.

೧೧೪-೧೨೧. ಬ್ರಹ್ಮಚರ್ಯದಿಂದಿರಬೇಕು. ಹಾಗಿದ್ದರೆ ಪ್ರಜಾಭಿವೃದ್ಧಿ ಆಯುರ್ವೃದ್ಧಿಗಳನ್ನು ಹೊಂದುತ್ತಾನೆ. ಹೂ, ಹಣ್ಣು, ಎಲೆ, ಹಾಸಿಗೆ, ಅಭ್ಯಂಜನ, ಗಂಧ ಪೂಸಿಕೊಳ್ಳುವುದೇ ಮುಂತಾದುದು ಇವನ್ನು ಬಿಡಬೇಕು. ಕಾರಣವಿಲ್ಲದೆ ಹಾಲು ಕುಡಿಯುವುದು, ಮಾಂಸ ಮದ್ಯ ಇವನ್ನು ಚಾತುರ್ಮಾಸ್ಯದಲ್ಲಿ

ಪ್ರಥಮಂ ತತ್ತು ದಾತವ್ಯಂ ಬ್ರಾಹ್ಮಣಾಯ ನ ಸಂಶಯಃ ।
ತದ್ಧನಂ ಚಾಕ್ಷಯಂ ವಿಪ್ರ ಪ್ರದತ್ತಂ ಯದ್ದ್ವಿಜಾತಯೇ ॥ ೧೧೬ ॥

ಕೋಟಿಕೋಟಿಗುಣಂ ವಿಪ್ರ ಲಭತೇ ನಾತ್ರ ಸಂಶಯಃ ।
ಯೇನ ಕೇನಾಪಿ ವಿಪ್ರೇಂದ್ರ ನಿಯಮೇನಾರ್ಚಿತೋ ಹರಿಃ ॥ ೧೧೭ ॥

ದದಾತಿ ವಿಷ್ಣುಭವನಂ ನಾತ್ರ ಕಾರ್ಯಾ ವಿಚಾರಣಾ ।
ಚಾತುರ್ಮಾಸ್ಯೇ ಹರೌ ಸುಪ್ತೇ ನಿಯಮಂ ಯೋ ನ ಕಾರಯೇತ್ ॥೧೧೮॥

ನರಕಂ ಸೋಽಪ್ಯವಾಪ್ನೋತಿ ತಸ್ಯ ಜನ್ಮ ವೃಥಾ ಗತಂ ।
ಯಃ ಪುಮಾನ್ಕಾರಯೇನ್ನಿತ್ಯಂ ದ್ವಿಜೋಕ್ತಂ ವಿಧಿಮುತ್ತಮಂ ॥ ೧೧೯ ॥

ತಥೋಕ್ತಾನ್ನಿಯಮಾಂಶ್ಚೈವ ಸ ಯಾತಿ ಪರಮಂ ಪದಂ ।
ತ್ರಿವರ್ಗರಹಿತಂ ದಾನಂ ದತ್ತಂ ಭವತಿ ನಿಷ್ಫಲಂ ॥ ೧೨೦ ॥

ತಸ್ಮಾತ್ಸರ್ವಪ್ರಯತ್ನೇನ ದೇವದೇವಂ ಜನಾರ್ದನಂ ।
ತೋಷಯೇನ್ನಿಯಮೈರ್ದಾನೈರ್ಯಥಾಶಕ್ತಿ ನರೋತ್ತಮ ॥ ೧೨೧ ॥

---

ಬಿಡಬೇಕು. ವಿಷ್ಣುವು ಮಲಗಿರುವಾಗ ಚಾತುರ್ಮಾಸ್ಯದಲ್ಲಿ ನಿಯಮದಿಂದ ಬಿಡಬೇಕಾದ ಪದಾರ್ಥಗಳನ್ನು ಮೊದಲು ಬ್ರಾಹ್ಮಣನಿಗೆ ಕೊಡಬೇಕು. ನಾವು ಬ್ರಾಹ್ಮಣರಿಗೆ ಕೊಟ್ಟ ಆ ವಸ್ತುವು ಕೋಟಿಯಕೋಟಿಯಷ್ಟು ಹೆಚ್ಚುತ್ತದೆ. ಸಂಶಯವಿಲ್ಲ. ಯಾವ ರೀತಿಯಿಂದ ನಾವು ವಿಷ್ಣುವನ್ನು ಪೂಜಿಸಿದರೂ ಅವನು ವೈಕುಂಠವನ್ನು ಕೊಡುತ್ತಾನೆ. ಇದರಲ್ಲಿ ಸಂಶಯವಿಲ್ಲ. ಚಾತುರ್ಮಾಸ್ಯದಲ್ಲಿ ಯಾವನು ನಿಯಮದಿಂದಿರುವುದಿಲ್ಲವೋ ಅವನು ನರಕವನ್ನು ಹೊಂದುತ್ತಾನೆ. ಅವನ ಜನ್ಮವು ವ್ಯರ್ಥವು. ಈ ಚಾತುರ್ಮಾಸ್ಯದಲ್ಲಿ ಹೇಳಿರುವ ದಾನಗಳನ್ನು ವಿಧಿಯಂತೆ ಮಾಡಿದವನು ಉತ್ತಮ ಗತಿಯನ್ನು ಹೊಂದುತ್ತಾನೆ. ಧರ್ಮ ಅರ್ಥ ಕಾಮಗಳನ್ನು ಉದ್ದೇಶಿಸದೆ ಕೊಟ್ಟ ದಾನವು ಫಲವಿಲ್ಲದೆ ಹೋಗುತ್ತದೆ. ಆದ್ದರಿಂದ ಸರ್ವಪ್ರಯತ್ನದಿಂದಲೂ ವಿಷ್ಣುವನ್ನು ಶಕ್ತ್ಯನುಗುಣವಾದ ವ್ರತನಿಯಮ ದಾನಗಳಿಂದ ಸಂತೋಷಗೊಳಿಸಬೇಕು.

ನ ಕೃತಂ ಸ್ನಾನದಾನಂ ಚ ಬ್ರಾಹ್ಮಣಾನಾಂ ಚ ಪೂಜನಂ ।
ವೃಥಾ ಗತಂ ತು ತತ್ಸರ್ವಂ ಯಾವದಿಂದ್ರಾಶ್ಚತುರ್ದಶ ॥ ೧೨೨ ॥

॥ ನಾರದ ಉವಾಚ ॥

ಕೀದೃಶಂ ಬ್ರಹ್ಮಚರ್ಯಂ ಚ ವದ ವಿಶ್ವೇಶ್ವರ ಪ್ರಭೋ ।
ಯೇನ ಚೀರ್ಣೇನ ಗೋವಿಂದಃ ಪರಿತುಷ್ಟೋ ಭವೇನ್ನೃಣಾಂ ॥ ೧೨೩ ॥

॥ ಮಹಾದೇವ ಉವಾಚ ॥

ಸ್ವದಾರ ನಿರತಶ್ಚೈವ ಬ್ರಹ್ಮಚಾರೀ ಸ್ಮೃತೋ ಬುಧೈಃ ।
ಚಾಂಡಾಲಾದಧಿಕೋ ವಿದ್ವನ್ಯ ಸ್ಸ್ವಭಾರ್ಯಾಂ ಪರಿತ್ಯಜೇತ್ ॥ ೧೨೪ ॥

ಋತಾವಭಿಗಮಂ ಕೃತ್ವಾ ಬ್ರಹ್ಮಚರ್ಯಂ ವಿಧೀಯತೇ ।
ಪರಿತ್ಯಜತಿ ಯೋ ಭಾರ್ಯಾಂ ಭಕ್ತಾಂ ದೋಷವಿವರ್ಜಿತಾಂ ॥ ೧೨೫ ॥

---

೧೨೨. ಯಾವನು ಸ್ನಾನ ದಾನ ಬ್ರಾಹ್ಮಣಪೂಜೆಗಳನ್ನು ಮಾಡುವುದಿಲ್ಲವೋ ಅವನ ಜನ್ಮವು ಹದಿನಾಲ್ಕು ಜನ ಇಂದ್ರರು ಇರುವವರೆಗೂ ವ್ಯರ್ಥವಾಗಿ ಹೋಗುತ್ತದೆ.

೧೨೩. ನಾರದನು ಹೇಳುತ್ತಾನೆ–ಎಲೈ ವಿಶ್ವೇಶ್ವರನೆ ! ಬ್ರಹ್ಮಚರ್ಯವು ಹೇಗಿರಬೇಕು ? ಅದನ್ನು ಆಚರಿಸಿದರೆ ಗೋವಿಂದನು ಸಂತೋಷಗೊಳ್ಳುವನೆಂದೆನ್ನುವಿಯಲ್ಲ ! ಅದರ ಸ್ವರೂಪವನ್ನು ಹೇಳು.

೧೨೪. ಮಹಾದೇವನು ಹೇಳಿದನು–ಯಾವನು ತನ್ನ ಹೆಂಡತಿಯಲ್ಲಿಯೇ ರಮಿಸುತ್ತ ತೃಪ್ತನಾಗಿ ಪರರ ಹೆಂಡರನ್ನು ಅಪೇಕ್ಷಿಸುವುದಿಲ್ಲವೋ ಅವನೇ ಬ್ರಹ್ಮಚಾರಿಯೆಂದು ತಿಳಿದವರು ಹೇಳುತ್ತಾರೆ. ಯಾವನು ತನ್ನ ಹೆಂಡತಿಯನ್ನು ಬಿಟ್ಟುಬಿಡುತ್ತಾನೆಯೋ ಅವನು ಚಾಂಡಾಲನಿಗಿಂತಲೂ ಕೀಳಾದವನು.

೧೨೫-೧೩೧. ಋತುಕಾಲದಲ್ಲಿ ಹೆಂಡತಿಯಲ್ಲಿ ರಮಿಸಿದರೆ ಅದು ಬ್ರಹ್ಮಚರ್ಯಕ್ಕೆ ಹಾನಿಯಲ್ಲವೆಂದು ಹೇಳುತ್ತಾರೆ. ತನ್ನಲ್ಲಿ ಅನುರಕ್ತಳಾಗಿ ಭಕ್ತಳಾಗಿ

ಪಾಪಕರ್ಮಾ ನರೋ ಲೋಕೇ ಭ್ರೂಣಹತ್ಯಾಮವಾಪ್ನುಯಾತ್ ।
ಅಶ್ವಮೇಧಸಹಸ್ರಾಣಿ ವಾಜಪೇಯ ಶತಾನಿಚ ॥ ೧೨೬ ॥

ಏಕಾದಶ್ಯುಪವಾಸಸ್ಯ ಕಲಾಂ ನಾರ್ಹಂತಿ ಷೋಡಶೀಂ ।
ಸ್ನಾನಂ ದಾನಂ ಜಪೋ ಹೋಮಃ ಸ್ವಾಧ್ಯಾಯೋ ದೇವತಾರ್ಚನಂ॥೧೨೭॥

ಚಾತುರ್ಮಾಸ್ಯೇಕೃತಂ ಯಚ್ಚ ಸರ್ವಂ ಹಿ ಚಾಕ್ಷಯಂ ಭವೇತ್ ।
ಏಕಕಾಲಂ ದ್ವಿಕಾಲಂ ವಾ ಪುರಾಣಂ ಶೃಣುತೇ ತು ಯಃ ॥ ೧೨೮ ॥

ಸರ್ವಪಾಪವಿನಿರ್ಮುಕ್ತೋ ವಿಷ್ಣುಲೋಕಂ ಸ ಗಚ್ಛತಿ ।
ಹರೌ ಸುಪ್ತೇ ವಿಶೇಷೇಣ ಹರ್ನಾಮ ಪಠನ್ ಜಪನ್ ॥ ೧೨೯ ॥

ತತ್ಫಲಂ ಕೋಟಿ ಗುಣಿತಂ ಲಭತೇ ದ್ವಿಜಸತ್ತಮ ।
ವೈಷ್ಣವೋ ಬ್ರಾಹ್ಮಣೋ ಯಸ್ತು ಪೂಜನಂ ಚ ಕರೋತಿ ಹಿ ॥ ೧೩೦ ॥

---

ದೋಷವಿಲ್ಲದಿರುವ ಹೆಂಡತಿಯನ್ನು ಬಿಟ್ಟರೆ ಅವನು ಪಾಪಿಯಾಗಿ ನರಕವನ್ನು ಹೊಂದುತ್ತಾನೆ. ಮತ್ತು ಭ್ರೂಣಹತ್ಯಾ ದೋಷವು ಮೊದಲು ಬರುತ್ತದೆ. ಸಾವಿರ ಅಶ್ವಮೇಧ ಯಾಗಗಳೂ ನೂರು ವಾಜಪೇಯ ಯಾಗಗಳೂ ಏಕಾದಶಿ ಉಪವಾಸದ ಹದಿನಾರನೆಯ ಒಂದು ಭಾಗಕ್ಕೆ ಸಮವಾಗಲಾರವು. ಚಾತುರ್ಮಾಸ್ಯದಲ್ಲಿ ಮಾಡಿದ ಸ್ನಾನ, ದಾನ, ಜಪ, ಹೋಮ, ಅಧ್ಯಯನ, ದೇವತಾರ್ಚನೆ ಇವೆಲ್ಲವೂ ಅಕ್ಷಯವಾಗುತ್ತವೆ. ಎರಡು ಹೊತ್ತು ಅಥವಾ ಒಂದು ಹೊತ್ತು ಆದರೂ ಯಾವನು ಪುರಾಣವನ್ನು ಕೇಳುತ್ತಾನೆಯೋ ಅವನು ತನ್ನ ಪಾಪವನ್ನೆಲ್ಲಾ ಕಳೆದುಕೊಂಡು ವೈಕುಂಠವನ್ನು ಹೊಂದುತ್ತಾನೆ. ಚಾತುರ್ಮಾಸ್ಯದಲ್ಲಿ ಯಾವನು ಹರಿನಾಮವನ್ನು ಬಾಯಲ್ಲಿ ಹೇಳುತ್ತಾನೆಯೋ ಅಥವಾ ಜಪಿಸುತ್ತಾನೆಯೋ ಅವನಿಗೆ ಅದರ ಫಲವು ಕೋಟಿಯಷ್ಟು ಹೆಚ್ಚುತ್ತದೆ. ವಿಷ್ಣುಭಕ್ತನಾಗಿ ಯಾವನು ಹರಿಪೂಜೆಯನ್ನು ಮಾಡುತ್ತಾನೆಯೋ ಅವನು ಸರ್ವಧರ್ಮಗಳನ್ನೂ ಆಚರಿಸಿದಂತೆ ಆಗಿ ಪೂಜೆಗೆ ಯೋಗ್ಯವಾಗುತ್ತಾನೆ. ಚಾತುಮಾಸ್ಯದ

**ಸ ಏವ ಸರ್ವಧರ್ಮಾತ್ಮಾ ಪೂಜ್ಯ ಏವ ನ ಸಂಶಯಃ ।**
**ಚಾತುರ್ಮಾಸ್ಯಮಿದಂ ಪುಣ್ಯಂ ಪವಿತ್ರಂ ಪಾಪನಾಶನಂ ।**
**ಶ್ರುತ್ವಾ ತು ಲಭತೇ ಪುಣ್ಯಂ ಗಂಗಾಸ್ನಾನಭವಂ ಮುನೇ ॥ ೧೩೧ ॥**

**ಇತಿ ಶ್ರೀ ಮಹಾಪುರಾಣೇ ಪಾದ್ಮೇ ಉತ್ತರಖಂಡೇ ಉಮಾಪತಿ ನಾರದ ಸಂವಾದೇ ಚಾತುರ್ಮಾಸ್ಯವ್ರತ ಮಾಹಾತ್ಮ್ಯಕಥನಂ ನಾಮ ಷಟ್ ಷಷ್ಟಿತಮೋಽಧ್ಯಾಯಸ್ಸಮಾಪ್ತಃ**

---

ಈ ಕಥೆಯು ಪವಿತ್ರವಾದುದು. ಪಾಪನಾಶಕವಾದುದು. ಇದನ್ನು ಕೇಳಿದರೆ ಗಂಗೆಯಲ್ಲಿ ಸ್ನಾನಮಾಡಿದ ಪುಣ್ಯವನ್ನು ಹೊಂದುತ್ತಾನೆ.

ಇಂತು ಶ್ರೀ ಪದ್ಮಮಹಾಪುರಾಣದ ಉತ್ತರಖಂಡದ ಉಮಾಪತಿ ನಾರದರ ಸಂವಾದದಲ್ಲಿ ಚಾತುರ್ಮಾಸ ವ್ರತ ಕಥನ ಎಂಬ ಅರವತ್ತಾರನೆಯ ಅಧ್ಯಾಯವು ಮುಗಿದುದು.



॥ ಶ್ರೀಃ ॥

-X-

# ಅಥ ಶ್ರೀ ಮಹಾಪುರಾಣೇ ಪಾದ್ಮೇ ಉತ್ತರಖಂಡೇ

## ॥ ಸಪ್ತಷಷ್ಟಿತಮೋಽಧ್ಯಾಯಃ ॥



॥ ನಾರದ ಉವಾಚ ॥

ಚಾತುರ್ಮಾಸ್ಯವ್ರತಾನಾಂ ಚ ಪ್ರಬ್ರೂಹ್ಯುದ್ಯಾಪನಂ ವಿಭೋ ।
ಉದ್ಯಾಪನೇ ಕೃತೇ ಸರ್ವಂ ಸಂಪೂರ್ಣಂ ಭವತಿ ಧ್ರುವಂ ॥ ೧ ॥

॥ ಮಹಾದೇವ ಉವಾಚ ॥

ವ್ರತಂ ಕೃತ್ವಾ ಮಹಾಭಾಗ ಯದಿ ನೋದ್ಯಾಪನಂ ಚರೇತ್ ।
ಯಸ್ತು ಕರ್ತಾ ಕರ್ಮಣಾಂ ಸ ನ ಸಮ್ಯಕ್ಫಲಭಾಗ್ಭವೇತ್ ॥ ೨ ॥

ವ್ರತವೈಕಲ್ಯಮಾಸಾದ್ಯ ಕುಷ್ಠೀ ಚಾಂಧಃ ಪ್ರಜಾಯತೇ ।
ಏತಸ್ಮಾತ್ಕಾರಣಾಚ್ಚೈವ ಕುರ್ಯಾದುದ್ಯಾಪಸಂ ದ್ವಿಜಃ ॥ ೩ ॥

---

## ಅರವತ್ತೇಳನೆಯ ಅಧ್ಯಾಯವು



೧. ನಾರದನು ಹೇಳಿದನು–ಎಲೈ ಪರಮೇಶ್ವರನೇ ! ಚಾತುರ್ಮಾಸ್ಯ ವ್ರತದ ಉದ್ಯಾಪನವನ್ನು ಹೇಳು. ಉದ್ಯಾಪನೆ ಮಾಡಿದ ಮೇಲೆ ಎಲ್ಲವೂ ಸಂಪೂರ್ಣವಾಗುವುದಷ್ಟೆ. !

೨. ಮಹಾದೇವನು ಹೇಳಿದನು–ಎಲೈ ನಾರದನೆ ! ಯಾವನು ವ್ರತವನ್ನು ಮಾಡಿ ಉದ್ಯಾಪನೆಯನ್ನು ಮಾಡುವುದಿಲ್ಲವೋ ಅಂಥಹವನು ಆ ವ್ರತದ ಪೂರ್ಣಫಲವನ್ನು ಹೊಂದುವುದಿಲ್ಲ.

೩. ವ್ರತವು ಪೂರ್ತಿಯಾಗದಿದ್ದರೆ ಕುಷ್ಠರೋಗವು ಬರುತ್ತದೆ. ಕುರುಡನಾಗುತ್ತಾನೆ. ಈ ಕಾರಣದಿಂದಲೇ ಉದ್ಯಾಪನವನ್ನು ಮಾಡಬೇಕು.

**ಗೃಹಿತ್ವಾ ನಿಯಮಾನೇತಾನ್ಪಾಲಯಿತ್ವಾ ಯಥಾವಿಧಿ ।**
**ಸುಪ್ತೋತ್ಥಿತೇ ಜಗನ್ನಾಥೇ ಗತ್ವಾ ಬ್ರಾಹ್ಮಣಸನ್ನಿಧೌ　　॥ ೪ ॥**

**ಕ್ಷಮಾಪಯೇದ್ದೇವದೇವಂ ಯಥಾವಿಧಿ ಚ ವಿಸ್ತರಾತ್ ।**
**ತೈಲತ್ಯಾಗೇ ಘೃತಂ ದದ್ಯಾದ್ಘೃತತ್ಯಾಗೇ ಪಯಃ ಸ್ಮೃತಂ　　॥ ೫ ॥**

**ಮೌನೇ ಪಿಂಡಾಸ್ತಿಲಾ ದೇಯಾಃ ಸಹಿರಣ್ಯಾ ದ್ವಿಜಾತಯೇ ।**
**ಭೋಜನೇ ಭೋಜನಂ ದದ್ಯಾದ್ದಧ್ಯೋದನಸಮನ್ವಿತಂ　　॥ ೬ ॥**

**ಅನ್ನಂ ದದ್ಯಾದ್ವಿಶೇಷೇಣ ಹಿರಣ್ಯೇನ ಸಮನ್ವಿತಂ ।**
**ಅನ್ನದಾನಾನ್ಮುನಿಶ್ರೇಷ್ಠ ವಿಷ್ಣುಲೋಕೇ ಮಹೀಯತೇ　　॥ ೭ ॥**

**ಪಾಲಾಶಪಾತ್ರೇ ಯೋ ಭುಂಕ್ತೇ ನರೋ ಮಾಸಚತುಷ್ಟಯಂ ।**
**ಭೋಜನಂ ಘೃತಪೂರ್ಣಂ ತು ದದ್ಯಾದುದ್ಯಾಪನೇ ದ್ವಿಜ　　॥ ೮ ॥**

---

೪. ಈ ರೀತಿಯಾಗಿ ಚಾತುರ್ಮಾಸ್ಯದ ವಿಧಿಗಳನ್ನೂ ವ್ರತಗಳನ್ನೂ ಆ ನಾಲ್ಕು ತಿಂಗಳೂ ಪಾಲಿಸಿ ಉತ್ಥಾನೈಕಾದಶಿಯಾದಮೇಲೆ ಬ್ರಾಹ್ಮಣರನ್ನು ಸೇರಿಸಿ ಅವರಿಗೆ ಕೃಚ್ಛ್ರವನ್ನು ಕೊಟ್ಟು ಶಾಸ್ತ್ರದಂತೆ ಕ್ಷಮಾಪಣೆಯನ್ನು ಕೇಳಿಕೊಳ್ಳಬೇಕು.

೫. ಎಣ್ಣೆಯನ್ನು ಚಾತುಮಾಸ್ಯದಲ್ಲಿ ಬಿಟ್ಟಿದ್ದರೆ ವ್ರತ ಮುಗಿದ ಮೇಲೆ ತುಪ್ಪವನ್ನು ದಾನಮಾಡಬೇಕು. ತುಪ್ಪವನ್ನು ಬಿಟ್ಟಿದ್ದರೆ ಹಾಲನ್ನು ದಾನ ಮಾಡಬೇಕು.

೬. ಮೌನವ್ರತಮಾಡಿದ್ದರೆ ಎಳ್ಳುಂಡೆಯನ್ನು ದಕ್ಷಿಣೆಯನ್ನು ಇಟ್ಟು ದಾನಮಾಡಬೇಕು. ಊಟವನ್ನು ಬಿಟ್ಟಿದ್ದರೆ ಊಟವನ್ನು ಹಾಕಬೇಕು. ಇಲ್ಲವೇ ಮೊಸರನ್ನವನ್ನು ದಾನವಾಗಿ ಕೊಡಬೇಕು.

೭. ಯಾವುದನ್ನು ಮಾಡಿದರೂ ಅನ್ನದಾನವನ್ನು ಹೆಚ್ಚಾಗಿ ಮಾಡಬೇಕು. ದಕ್ಷಿಣೆಯನ್ನು ಕೊಡಬೇಕು. ಎಲೈ ನಾರದನೇ! ಅನ್ನದಾನದಿಂದ ವಿಷ್ಣುಲೋಕ ದಲ್ಲಿ ಸುಖಿಸುತ್ತಾನೆ.

೮. ಮುತ್ತುಗದೆಲೆಯಲ್ಲಿ ಈ ಚಾತುರ್ಮಾಸ ಪೂರ್ತಿಯಾಗಿ ಊಟಮಾಡಿದವನು ತುಪ್ಪದ ಅನ್ನವನ್ನು ದಾನ ಮಾಡಬೇಕು. ಬ್ರಾಹ್ಮಣ ಭೋಜನವನ್ನು ಮಾಡಿಸಬೇಕು.

**ಷಡ್ರಸಂ ಭೋಜನಂ ದದ್ಯಾದ್ಬ್ರಾಹ್ಮಣೇ ನಕ್ತಭೋಜನೇ ।**
**ಅಯಾಚಿತೇ ಹ್ಯನಡ್ವಾಹಂ ಸಹಿರಣ್ಯಂ ಪ್ರದಾಪಯೇತ್ ॥ ೯ ॥**

**ಮಾಷಂ ತ್ಯಜನ್ಮುನಿಶ್ರೇಷ್ಠ ಗಾಂ ಚ ದದ್ಯಾತ್ಸವತ್ಸಕಾಂ।**
**ಧಾತ್ರೀಸ್ನಾನೇ ನರೋ ದದ್ಯಾತ್ಸ್ವರ್ಣಂ ಮಾಷಿಕಮೇವ ಚ ॥ ೧೦ ॥**

**ಫಲಾನಾಂ ನಿಯಮೇ ಚೈವ ಫಲಾನಿ ಚ ಪ್ರದಾಪಯೇತ್ ।**
**ಧಾನ್ಯಾನಾಂ ನಿಯಮೇ ಧಾನ್ಯಮಥವಾ ಶಾಲಯಃ ಸ್ಮೃತಾಃ ॥ ೧೧ ॥**

**ದದ್ಯಾದ್ಭೂಶಯನೇ ಶಯ್ಯಾಂ ಸತೂಲಾಂ ಗೇಂದುಕಾನ್ವಿತಾಂ।**
**ಬ್ರಹ್ಮಚರ್ಯಂ ಕೃತಂ ಯೇನ ಚಾತುರ್ಮಾಸ್ಯೇ ದ್ವಿಜೋತ್ತಮ ॥ ೧೨ ॥**

**ದಂಪತ್ಯೋರ್ಭೋಜನಂ ದೇಯಮುಭಯೋರ್ಭಕ್ತಿಪೂರ್ವಕಂ।**
**ಸಭೋಗಂ ದಕ್ಷಿಣೋಪೇತಂ ಸಶಾಕಂ ಲವಣಂ ತಥಾ ॥ ೧೩ ॥**

---

೯. ನಕ್ತವನ್ನು ಮಾಡಿದ್ದರೆ ಉದ್ಯಾಪನೆಯಿಲ್ಲ. ಷಡ್ರಸ ಭೋಜನವನ್ನು ಕೊಡಬೇಕು. ಚಾತುರ್ಮಾಸ ಪೂರ್ತಿಯಾಗಿ ಯಾಚಿಸದೆ ಇದ್ದು ಸಿಕ್ಕಿದುದರಿಂದಲೇ ಊಟಮಾಡಿ ತೃಪ್ತನಾಗಿದ್ದರೆ ಉದ್ಯಾಪನೆಯಿಲ್ಲ. ಗೂಳಿಯನ್ನು ದಾನಮಾಡಬೇಕು.

೧೦. ಉದ್ದನ್ನು ಬಿಟ್ಟವನು ಕರೆಯುವ ಹಸುವನ್ನು ದಾನಮಾಡಬೇಕು. ನೆಲ್ಲಿಕಾಯನ್ನು ಬಳಿದುಕೊಂಡು ಸ್ನಾನಮಾಡಿದವನು ಮಾಷತೂಕದ ಚಿನ್ನವನ್ನು ದಾನಮಾಡಬೇಕು.

೧೧. ಹಣ್ಣುಗಳನ್ನು ಬಿಟ್ಟಿದ್ದರೆ ಆಯಾ ಹಣ್ಣುಗಳನ್ನು ದಾನಮಾಡಬೇಕು. ಧಾನ್ಯಗಳನ್ನು ಬಿಟ್ಟಿದ್ದರೆ ಆಯಾ ಧಾನ್ಯಗಳನ್ನು ದಾನಮಾಡಬೇಕು. ಭತ್ತವನ್ನೂ ಕೊಡಬೇಕು.

೧೨–೧೩. ನೆಲದಮೇಲೆ ಮಲಗಿದ್ದವನು ಹತ್ತಿಯ ಸುಪ್ಪತ್ತಿಗೆಯನ್ನು ದಿಂಬನ್ನಿಟ್ಟುಕೊಡಬೇಕು. ಬ್ರಹ್ಮಚರ್ಯವ್ರತವನ್ನು ಪಾಲಿಸಿದವನು ದಂಪತಿಗಳಿಗೆ ಊಟಕ್ಕೆ ಹೇಳಿ ಭಕ್ತಿಯಿಂದ ಅವರಿಗೆ ಊಟಮಾಡಿಸಿ ಸಂಭೋಗಕ್ಕೆ ಬೇಕಾದ ಪದಾರ್ಥಗಳನ್ನು ಕೊಡಬೇಕು.

ನಿತ್ಯಸ್ನಾನೇ ನರೋ ದದ್ಯಾನ್ನಿಸ್ಸ್ನೇಹೇ ಸರ್ಪಿಸಕ್ತ್ವವಃ ।
ನಖಕೇಶವ್ರತೇ ಚೈವ ಆದರ್ಶಂ ಪರಿಕಲ್ಪಯೇತ್ ॥ ೧೪ ॥

ಉಪಾನಹೌ ಪ್ರದಾತವ್ಯೌ ಉಪಾನಹೋರ್ವಿವರ್ಜನಾತ್ ।
ಆಮಿಷಸ್ಯ ಪರಿತ್ಯಾಗಾತ್ ಸವತ್ಸಾ ಕಪಿಲಾ ಸ್ಮೃತಾ ॥ ೧೫ ॥

ನಿತ್ಯಂ ದೀಪಪ್ರದೋ ಯಸ್ತು ಸೌವರ್ಣಂ ದೀಪಮಾವಹೇತ್ ।
ತಂ ದೀಪಂ ಘೃತಸಂಯುಕ್ತಂ ದದ್ಯಾಚ್ಚೈವ ದ್ವಿಜನ್ಮನೇ ॥ ೧೬ ॥

ವಿಷ್ಣುಭಕ್ತಾಯ ವಿಪ್ರಾಯ ಪರಿಪೂರ್ಣವ್ರತೇಪ್ಸಯಾ ।
ಶಾಕಸ್ಯ ನಿಯಮೇ ಶಾಕಂ ಮಾಷೇ ಸೌವರ್ಣಮಾಷಕಂ ॥ ೧೭ ॥

ಮೈಥುನಾನಾಂ ತು ನಿಯಮೇ ರೌಪ್ಯಂ ವದ್ಯಾದ್ದ್ವಿಜನ್ಮನೇ ।
ನಾಗವಲ್ಲ್ಯಾಸ್ತು ನಿಯಮೇ ಕರ್ಪೂರಂ ಸಹಿರಣ್ಯಕಂ ॥ ೧೮ ॥

---

೧೪. ಚಾತುರ್ಮಾಸ್ಯದಲ್ಲಿ ಸ್ನಾನದಲ್ಲಿ ಎಣ್ಣೆಯನ್ನು ಬಿಟ್ಟಿದ್ದರೆ ತುಪ್ಪವನ್ನೂ ಪಾಯಸವನ್ನೂ ದಾನಮಾಡಬೇಕು. ಕೂದಲು ಉಗರುಗಳನ್ನು ಕತ್ತರಿಸದಿದ್ದರೆ ಕನ್ನಡಿಯನ್ನು ದಾನಮಾಡಬೇಕು.

೧೫. ಕೆರವನ್ನು ಹಾಕದೆ ಬಿಟ್ಟಿದ್ದರೆ ಕೆರದಾನವನ್ನು ಮಾಡಬೇಕು. ಮಾಂಸವನ್ನು ಬಿಟ್ಟಿದ್ದರೆ ಕಪಿಲಾಗೋವನ್ನೂ ಕರುವನ್ನೂ ದಾನ ಮಾಡಬೇಕು.

೧೬. ದಿನವೂ ದೀಪದಾನಮಾಡುವವನು ಚಿನ್ನದ ದೀಪವನ್ನು ದಾನ ಮಾಡಬೇಕು. ಆ ದೀಪಕ್ಕೆ ತುಪ್ಪವನ್ನು ಹಾಕಿ ಹಚ್ಚಿ ಬ್ರಾಹ್ಮಣನಿಗೆ ಕೊಡಬೇಕು ದೀಪವನ್ನು ತೆಗೆದುಕೊಳ್ಳತಕ್ಕವನು ವಿಷ್ಣುಭಕ್ತನಾಗಿರಬೇಕು.

೧೭–೧೮. ಕಾಯಿಪಲ್ಯಗಳನ್ನು ತಿನ್ನದಿದ್ದರೆ ಆಯಾ ಕಾಯಿಪಲ್ಯಗಳನ್ನು ದಾನ ಮಾಡಬೇಕು. ಸ್ತ್ರೀಸಂಗವನ್ನು ಬಿಟ್ಟಿದ್ದರೆ ಚಿನ್ನದಲ್ಲಿ ಉದ್ದನ್ನು ಮಾಡಿಸಿ ದಾನಮಾಡಬೇಕು. ತಾಂಬೂಲವನ್ನೂ ಬಿಟ್ಟವನು ತಾಂಬೂಲವನ್ನೂ ಜೊತೆಗೆ ಪಚ್ಚಕರ್ಪೂರವನ್ನೂ ದಕ್ಷಿಣೆಯನ್ನು ಸೇರಿಸಿ ದಾನಮಾಡಬೇಕು.

ಕಾಲೇ ಕಾಲೇ ದ್ವಿಜಶ್ರೇಷ್ಠ ಯತ್ಕೃತಂ ನಿಯಮೇನ ತು ।
ತತ್ತದ್ದೇಯಂ ವಿಶೇಷೇಣ ಪರಲೋಕಸಮಿಾಪ್ಸಯಾ ॥ ೧೯ ॥

ಆದೌ ಸ್ನಾನಾದಿಕಂ ಕೃತ್ವಾ ವಿಷ್ಣೋಃಶ್ಚಾಗ್ರೇ ಪ್ರಕಾರಯೇತ್ ।
ಅನಾದಿನಿಧನೋ ದೇವಃ ಶಂಖಚಕ್ರಗದಾಧರಃ ॥ ೨೦ ॥

ತಸ್ಯಾಗ್ರೇ ಕೇ ನ ಕುರ್ವಂತಿ ಯತೋ ವಿಷ್ಣುಸ್ತು ಪಾಪಹಾ ॥ ೨೧ ॥

ಇತಿ ಶ್ರೀ ಮಹಾಪುರಾಣೇ ಪಾದ್ಮೇ ಉತ್ತರಖಂಡೇ ಉಮಾಪತಿ ನಾರದ ಸಂವಾದೇ ಚಾತುರ್ಮಾಸ್ಯ ವ್ರತೋದ್ಯಾಪನಂ ನಾಮ ಸಪ್ತಷಷ್ಟಿತಮೋಽಧ್ಯಾಯಸ್ಸಮಾಪ್ತಃ

---

೧೯. ಯಾವ ಯಾವ ಕಾಲದಲ್ಲಿ ಯಾವಯಾವ ನಿಯಮವನ್ನು ಮಾಡಿರುತ್ತಾರೆಯೋ ಅವರು ಅದನ್ನು ದಾನಕೊಟ್ಟರೆ ಉತ್ತಮ ಲೋಕ ಸಿಕ್ಕುವುದು.

೨೦–೨೧. ಮೊದಲು ಸ್ನಾನಾಹ್ನೀಕಗಳನ್ನು ಮಾಡಿಕೊಂಡು ಆನಂತರ ವಿಷ್ಣುವಿನ ಎದುರಿನಲ್ಲಿ ಈ ದಾನಗಳನ್ನು ಮಾಡಬೇಕು. ಶಂಖಚಕ್ರಗದಾಧರನೂ ಆದ್ಯಂತರಹಿತನೂ ಆದ ಆ ವಿಷ್ಣುವು ಪಾಪಗಳನ್ನು ನಾಶಮಾಡುವುದರಿಂದ ಅವನೆದುರಿಗೆ ಯಾರು ತಾನೇ ದಾನ ಮಾಡುವುದಿಲ್ಲ!

ಇಂತು ಶ್ರೀ ಪದ್ಮಮಹಾಪುರಾಣದ ಉತ್ತರಖಂಡದ ಉಮಾಪತಿ ನಾರದರ ಸಂವಾದದಲ್ಲಿ ಚಾತುರ್ಮಾಸ್ಯ ವ್ರತೋದ್ಯಾಪನಂ ನಾಮ ಅರವತ್ತಾರನೆಯ ಅಧ್ಯಾಯವು ಮುಗಿದುದು.



|| ಶ್ರೀಃ ||

-X-

## ಅಥ ಶ್ರೀ ಮಹಾಪುರಾಣೇ ಪಾದ್ಮೇ ಉತ್ತರಖಂಡೇ

## || ಅಷ್ಟಷಷ್ಟಿತಮೋಽಧ್ಯಾಯಃ ||



|| ನಾರದ ಉವಾಚ ||

ಯಮಸ್ಯಾರಾಧನಂ ಬ್ರೂಹಿ ಮದ್ಧಿತಾರ್ಥಂ ಸುರೋತ್ತಮ |
ಕಥಂ ನ ಗಮ್ಯತೇ ದೇವ ನರಕಂ ನರಕಾಂತರಂ || ೧ ||

ಶ್ರೂಯತೇ ಯಮಲೋಕೇ ತು ಸದಾ ವೈತರಣೀ ನದೀ |
ಅನಾಧೃಷ್ಯಾ ತ್ವಪಾರಾ ಚ ದುಸ್ತರಾ ಶೋಣಿತಾವಹಾ || ೨ ||

ದುಸ್ತರಾ ಸರ್ವಭೂತಾನಾಂ ಸಾ ಕಥಂ ಸುತರಾ ಭವೇತ್ |
ಭಯಮೇತನ್ಮಹಾದೇವ ಯಮಲೋಕಂ ಪ್ರತಿ ಪ್ರಭೋ || ೩ ||

---

## ಅರವತ್ತೆಂಟನೆಯ ಅಧ್ಯಾಯವು



೧. ನಾರದನು ಹೇಳುತ್ತಾನೆ–ಎಲೈ ಮಹೇಶ್ವರನೇ ! ಯಮನ ಪೂಜೆಯ ಬಗೆಯನ್ನು ಹೇಳು. ಅವನನ್ನು ಪೂಜಿಸಿದರೆ ಒಂದು ನರಕದಿಂದ ಮತ್ತೊಂದು ನರಕಕ್ಕೆ ಹಾಕುವುದಿಲ್ಲವೆಂದೆನ್ನುತ್ತಾರೆ. ಅದು ಹೇಗೆ ?

೨–೪. ಯಮನಲೋಕದಲ್ಲಿ ವೈತರಿಣೀ ನದಿಯೊಂದಿರುವುದೆಂದೂ ಅದು ಆಳವಾಗಿಯೂ ಅಗಲವಾಗಿಯೂ ಇರುವುದೆಂದೂ ರಕ್ತದ ಪ್ರವಾಹವೇ ನೀರೆಂದೂ ಒಂದುಪ್ರಾಣಿಯೂ ಅದನ್ನು ದಾಟಲಾರದೆಂದೂ ಹೇಳುತ್ತಾರೆ. ಅದರ ವಿಷಯ ವೇನು. ? ಎಲೈ ದೇವದೇವನೇ ! ಯಮಲೋಕವನ್ನು ಕುರಿತು ನನಗೆ ಬಹು

ತಸ್ಮನಿರ್ಮೋಚನಾರ್ಥಾಯ ಬ್ರೂಹಿ ಕೃತ್ಯಮಶೇಷತಃ ।
ಭಗವನ್ಸರ್ವದೇವೇಶ ಕೃಪಾಂ ಕೃತ್ವಾ ಮಮೋಪರಿ ॥ ೪ ॥

ಮಹಾದೇವ ಉವಾಚ ॥

ದ್ವಾರಾವತ್ಯಾಂ ಪುರಾ ವಿಪ್ರ ಸ್ನಾತೋಽಹಂ ಲವಣಾಂಭಸಿ ।
ದದರ್ಶ ಮುನಿಮಾಯಾಂತಂ ಮುದ್ಗಲಿಂ ನಾಮ ಬಾಡಬಂ ॥ ೫ ॥

ಜ್ವಲಂತಮಿವ ಚಾದಿತ್ಯಂ ತಪಸಾ ದ್ಯೋತಿತಾಂಗಕಂ ।
ಮಾಂ ಪ್ರಣಮ್ಯ ಮುನಿಃ ಪ್ರಾಹ ಮುದ್ಗಲೋ ವಿಸ್ಮಯಾನ್ವಿತಃ ॥ ೬ ॥

॥ ಮುದ್ಗಲ ಉವಾಚ ॥

ಅಕಸ್ಮಾನ್ಮೂರ್ಛಿತೋ ದೇವ ಪತಿತೋಽಸ್ಮಿ ಧರಾತಲೇ ।
ಪ್ರಜ್ವಲಂತಿ ಮಮಾಂಗಾನಿ ಗೃಹೀತೋ ಯಮಕಿಂಕರೈಃ ॥ ೭ ॥

ಬಲಾದಾಕೃಷ್ಯಮಾಣೋಽಹಂ ಪುರುಷೋಽಂಗುಷ್ಠಮಾತ್ರಕಃ ।
ಬದ್ಧೋ ಯಮಭಟೈರ್ಗಾಢಂ ನೀತೋಽಸ್ಮಿ ಶಮನಾಂತಿಕಂ ॥ ೮ ॥

---

ಭಯವಾಗುತ್ತದೆ. ಆ ಯಮಪೂಜೆಯನ್ನು ಹೇಳಿ ಆ ಭಯವನ್ನು ತಪ್ಪಿಸು. ನನ್ನ ಮೇಲೆ ಕೃಪೆಯಿಡು.

೫-೬. ಮಹಾದೇವನು ಹೇಳಿದನು–ಎಲೈ ನಾರದನೇ ! ದ್ವಾರವತಿಯಲ್ಲಿ ಸಮುದ್ರದಲ್ಲಿ ಸ್ನಾನಮಾಡಿ ಅಲ್ಲಿದ್ದೆನು. ಆಗ ಅಲ್ಲಿಗೆ ಸೂರ್ಯನಂತೆ ಪ್ರಕಾಶಮಾನನಾದ ತಪಸ್ವಿಯಾದ ಬ್ರಾಹ್ಮಣನಾದ ಮುದ್ಗಲ ಋಷಿಯು ನನ್ನನ್ನು ನೋಡಿದನು. ಒಡನೆಯೇ ನನಗೆ ನಮಸ್ಕರಿಸಿ ಆಶ್ಚರ್ಯದಿಂದ ಇಂತೆಂದನು.

೭. ಮುದ್ಗಲನು ಹೇಳಿದನು–ಎಲೈ ದೇವನೇ ! ಅಕಸ್ಮಾತ್ತಾಗಿ ಮೂರ್ಛೆ ಹೊಂದಿ ಭೂಮಿಯಲ್ಲಿ ಬಿದ್ದೆನು. ಆಗ ಯಮಕಿಂಕರರು ಬಂದು ನನ್ನನ್ನು ಹಿಡಿದುಕೊಂಡರು. ನನ್ನ ಮೈ ಉರಿಯಲಾರಂಭಿಸಿತು.

೮. ಆಗ ಅಂಗುಷ್ಠದ ಪ್ರಮಾಣವುಳ್ಳ ಪುರುಷನಾದವನನ್ನು ಬಲಾತ್ಕಾರದಿಂದ ಕಟ್ಟಿ ಆ ಯಮಭಟರು ಯಮನಬಳಿಗೆ ಕರೆದುಕೊಂಡು ಹೋದರು.

ಕ್ಷಣಾತ್ಸಭಾಯಾಂ ಪಶ್ಯಾಮಿ ಯಮಂ ಪಿಂಗಳಲೋಚನಂ ।
ಕೃಷ್ಣಮುಖಂ ಮಹಾರೌದ್ರಂ ಮೃತ್ಯುವ್ಯಾಧಿಶತಾನ್ವಿತಂ ॥ ೯ ॥

ವಾತಪಿತ್ತಶ್ಲೇಷ್ಮದೋಷೈಃ ಮೂರ್ತಿಮದ್ಭಿಸ್ತು ಸೇವಿತಂ ।
ಕಾಸಶೋಷಜ್ವರಾತಂಕೈಃ ಕೋಟಿಕಾಲೂತಕಾದಿಭಿಃ ॥ ೧೦ ॥

ಜ್ವಾಲಗರ್ದಭಶೀರ್ಷಾರ್ತಿಭಗಂದರಬಲಕ್ಷಯೈಃ ।
ಕಂಠಮಾಲಾಕ್ಷರೋಗೈಶ್ಚ ಮೂತ್ರಕೃಚ್ಛ್ರಜ್ವರವ್ರಣೈಃ ॥ ೧೧ ॥

ವಿಮೂರ್ಛಿಕಾಗಳಗ್ರಾಹಹೃದ್ರೋಗೈರ್ಭೂತತಸ್ಕರೈಃ ।
ಇತ್ಥಂ ಬಹುವಿಧೈ ರೌದ್ರೈರ್ನಾನಾರೂಪೈರ್ಭಯಂಕರಃ ॥ ೧೨ ॥

ಕಪಾಲಶಿರೋಹಸ್ತೈಶ್ಚ ಸಂಗ್ರಾಮೇ ನರಕೇ ತಥಾ ।
ರಾಕ್ಷಸೈರ್ದಾನವೈರ್ಘೋರೈರುಪವಿಷ್ಟೈಃ ಪುರಸ್ಥಿತೈಃ ॥ ೧೩ ॥

---

೯. ಒಂದು ಕ್ಷಣದಲ್ಲಿಯೇ ಅವರು ಯಮನ ಸಭೆಗೆ ಕರೆದುಕೊಂಡು ಹೋದರು. ಅಲ್ಲಿ ಕೆಂಚಗಿರುವ ಕಣ್ಣೂ ಕಪ್ಪಾದ ಮುಖವೂ ಭಯಂಕರವಾದ ಆಕಾರವೂ ಉಳ್ಳ ಮೃತ್ಯುಗಳಿಂದಲೂ ಅನೇಕವ್ಯಾಧಿಗಳಿಂದಲೂ ಸೇವಿತನಾಗಿರುತ್ತಿರುವ ಆ ಯಮನನ್ನು ಕಂಡೆನು.

೧೦–೧೧. ವಾತ, ಪಿತ್ತ, ಕಫ, ದೋಷಗಳು ಆಕಾರವನ್ನು ಹೊಂದಿ ಅವನನ್ನು ಸೇವಿಸುತ್ತಿದ್ದುವು. ಕೆಮ್ಮು, ಶೋಷ, ಜ್ವರ, ಆತಂಕ, ದೊಡ್ಡಹುಣ್ಣು, ಸಣ್ಣಹುಣ್ಣು, ಜ್ವಾಲೆ, ಗರ್ಧಭ ಕ್ರೂರವಾದ ರೋಗ, ತಲೆನೋವು, ಭಗಂದರ, ಕ್ಷಯ, ಗಂಡಮಾಲೆ, ಕಣ್ಣುರೋಗ, ಮೂತ್ರಕೃಚ್ಛ್ರ ಜ್ವರ, ಗಾಯ ಇವೆಲ್ಲವೂ ಆತನನ್ನು ಮೂರ್ತಿಗೊಂಡು ಸಭೆಯಲ್ಲಿ ಸೇವಿಸುತ್ತಿದ್ದುವು.

೧೨. ಮೂರ್ಛೆ, ಗಂಟಲುಹುಣ್ಣು, ಎದೆಬಾವು, ಜ್ಞಾನನಾಶಕ, ಇವೇ ಮುಂತಾದ ಅನೇಕ ರೂಪವಾದ ವ್ಯಾಧಿಗಳಿಂದ ಸೇವಿತನಾಗಿ ಭಯಂಕರನಾಗಿದ್ದನು.

೧೩. ಕಪಾಲಹಸ್ತರು, ಶಿರೋಹಸ್ತರು, ರಾಕ್ಷಸರು, ದಾನವರು ಇವರು ಅವನನ್ನು ಯುದ್ಧ ಮತ್ತು ನರಕಗಳಲ್ಲಿಯೂ ಯಾವಾಗಲೂ ಸೇವಿಸುತ್ತಿರುವರು.

ಧರ್ಮಾಧಿಕಾರಿಭಿಶ್ಚಾತ್ರ ಚಿತ್ರಗುಪ್ತಾದಿಲೇಖಕೈಃ ।
ವ್ಯಾಘ್ರಸಿಂಹವರಾಹೈಶ್ಚ ಶಿವಾಸರ್ಪೈಃ ಸುದುರ್ಧರೈಃ ॥ ೧೪ ॥

ವೃಶ್ಚಿಕೈರ್ದ್ರಂಷ್ಟ್ರಿಭಿರ್ಭೂತೈಃ ಕೀಟಕೈರ್ಮತ್ಕುಣಾದಿಭಿಃ ।
ವೃಕಚಿತ್ರಾದಿಶುನಕೈಃ ಕಂಕೈರ್ಗೃಧ್ರೈಶ್ಚ ಜಂಬುಕೈಃ ॥ ೧೫ ॥

ತಸ್ಕರೈರ್ಭೂತದಾರಿದ್ರೈರ್ಮಾರೀಭಿರ್ಡಾಕಿನೀಗ್ರಹೈಃ ।
ಮುಕ್ತಕೇಶೈಶ್ಚ್ವಾಸಕಾಸೈರ್ಭೃಕುಟೀಕುಟಿಲಾನನೈಃ ॥ ೧೬ ॥

ಬೃಹತ್ಪ್ರತಾಪೈರ್ನೋ ಭೀತೈಶ್ಯಾಸಕೈಃ ಪಾಪಕರ್ಮಣಾಂ ।
ಯಮಸ್ಸಭಾಯಾಂ ಶುಶುಭೇ ಸೇವ್ಯಮಾನಃ ಪರಿಗ್ರಹೈಃ ॥ ೧೭ ॥

ಭೀಮಾಟವಿಕಜೀವೈಶ್ಚ ಯಥಾ ಖ್ಯಾತೋಂಜನೋ ಗಿರಿಃ ।
ತತೋ ವಿಶ್ವೇಶ್ವರ ಪ್ರಾಹ ಸ ಯಮಃ ಕಿಂಕರಾನ್ಪ್ರತಿ ॥ ೧೮ ॥

---

೧೪—೧೫. ಧರ್ಮಾಧಿಕಾರಿಗಳಿಂದಲೂ ಚಿತ್ರಗುಪ್ತನೇ ಮುಂತಾದ ಲೇಖಕರಿಂದಲೂ ಹುಲಿ, ಸಿಂಹ, ಹಂದಿ, ನರಿ, ಹಾವು, ಚೇಳು, ಕೆಟ್ಟಮೃಗಗಳು. ಭೂತಗಳು, ಹುಳುಗಳು, ತಿಗಣೆಗಳು, ತೋಳ, ನಾಯಿ, ಹದ್ದು, ನರಿಗಳಿಂದಲೂ ಸೇವಿಸಲ್ಪಡುತ್ತಿರುವನು.

೧೬—೧೭. ಕಳ್ಳರು, ಭೂತಗಳು, ದರಿದ್ರರು, ಮಾರಿಗಳು, ಡಾಕಿನಿಗಳು, ತಲೆಗೆದರರು, ಶ್ವಾಸಗಳು, ಕಾಸಗಳು, ಹುಬ್ಬು, ಗಂಟಿಕ್ಕಿಕೊಂಡಿರುವವರು, ಬಹುವಾಗಿ ಪ್ರತಾಪವುಳ್ಳವರು, ಹೆದರದವರು, ಪಾಪಿಗಳ ಶಿಕ್ಷಕರು ಇವರುಗಳಿಂದ ಸಭೆಯಲ್ಲಿ ಸೇವಿಸಲ್ಪಡುತ್ತಿರುವ ಯಮನು ಆ ಸಭೆಯಲ್ಲಿ ಕಂಡುಬಂದನು.

೧೮. ಭಯಂಕರವಾದ ಕಾಡಿನ ಪ್ರಾಣಿಗಳಿಂದ ಸೇವಿತವಾದ ಆ ಯಮನು ಅಂಜನಪರ್ವತದಂತೆ ಕಂಡುಬರುತ್ತಿದ್ದನು. ಆಗ ಆ ಸರ್ವಶಕ್ತನಾದ ಯಮನು ಸೇವಕರನ್ನು ಕುರಿತು ಇಂತೆಂದನು.

|| ಯಮ ಉವಾಚ ||

ನಾಮಭ್ರಾನ್ತ್ಯೈರ್ಭವದ್ಭಿಶ್ಚ ಸಮಾನೀತಃ ಕಥಂ ಮುನಿಃ ।
ಭೀಮುಕಸ್ಯಾತ್ಮಜೋ ಗ್ರಾಮೇ ಕೌಂಡಿನ್ಯೇ ಮುದ್ಗಲಾಭಿಧಃ ||
ಕ್ಷೀಣಾಯುಃ ಕ್ಷತ್ರಿಯಸ್ಸೋಽಸ್ತಿ ಆನೇಯೋ ಮುಚ್ಯತಾಮಸೌ || ೧೯ ||

|| ಮುದ್ಗಲ ಉವಾಚ ||

ಶ್ರುತ್ವೈತತ್ತೇ ಗತಾಸ್ತಸ್ಮಾದಾಯಾತಾಃ ಪುನರೇವ ತೇ ।
ಧರ್ಮರಾಜಂ ಪುನಃ ಪ್ರಾಹುಃ ಸರ್ವೇ ತೇ ಯಮಕಿಂಕರಾಃ || ೨೦ ||

|| ಯಮದೂತಾ ಊಚುಃ ||

ತತ್ರಾಸ್ಮಾಭಿರ್ಗತೈರ್ದೇಹೀ ಕ್ಷೀಣಾಯುರ್ನೋಪಲಕ್ಷಿತಃ ।
ಭಾನುಸೂನೋ ನ ಜಾನೀಮಃ ಕಥಂ ಚಿದ್ಭ್ರಾನ್ತಚೇತಸಃ || ೨೧ ||

---

೧೯. ಯಮನು ಹೇಳಿದನು–ಒಂದೇ ಹೆಸರಿನ ತಪ್ಪು ತಿಳಿವಳಿಕೆಯಿಂದ ನೀವು ಈ ಋಷಿಯನ್ನು ಕರೆತಂದಿದ್ದೀರಿ. ಇವನಲ್ಲ. ಕೌಂಡಿನ್ಯಗೋತ್ರದ ಭೀಮುಕನೆಂಬುವನ ಮಗನಾದ ಮುದ್ಗಲನು ಇರುವನು. ಅವನು ಕ್ಷತ್ರಿಯನು. ಅವನ ಆಯಸ್ಸು ಕ್ಷಯಿಸಿಹೋಗಿದೆ. ಇವನನ್ನು ಬಿಟ್ಟು ಅವನನ್ನು ಕರೆದು ಕೊಂಡು ಬನ್ನಿರಿ. ಎಂದನು.

೨೦. ಮುದ್ಗಲನು ಹೇಳಿದನು–ಯಮನ ಈ ಮಾತುಗಳನ್ನು ಕೇಳಿ ಆ ಯಮಕಿಂಕರರು ಒಡನೆಯೇ ಹೊರಟುಹೋಗಿ ನೋಡಿಕೊಂಡು ಮತ್ತೆ ಬಂದು ಯಮನನ್ನು ಕುರಿತು ಇಂತೆಂದರು.

೨೧. ಯಮದೂತರು ಹೇಳಿದರು–ಎಲೈ ಸೂರ್ಯಪುತ್ರನಾದ ಯಮನೇ ! ನಾವು ಅಲ್ಲಿಗೆ ಹೋಗಿದ್ದೆವು. ಅಲ್ಲಿ ಆಯಸ್ಸು ತೀರಿದವನೊಬ್ಬನನ್ನೂ ಕಾಣದೇ ಎಲ್ಲ ಕಡೆಯಲ್ಲಿಯೂ ಸುತ್ತಿ ನೋಡಿದೆವು.

|| ಯಮ ಉವಾಚ ||

ಕಿಂಕರಾಣಾಮದೃಶ್ಯಾಸ್ತೇ ಪ್ರಾಯೇಣ ಭವತಾಂ ನರಾಃ |
ಸುಕೃತಾ ದ್ವಾದಶೀ ಯೈಸ್ತು ಖ್ಯಾತಾ ವೈತರಣೀ ಚ ಯಾ || ೨೨ ||

ಉಜ್ಜಯಿನ್ಯಾಂ ಪ್ರಯಾಗೇ ವಾ ಯಮುನಾಯಾಂ ಚ ಯೇ ಮೃತಾಃ |
ತಿಲಹಸ್ತಿಹಿರಣ್ಯಾದಿ ದತ್ತಂ ಯೈಸ್ತು ಗವಾದಿಕಂ || ೨೩ ||

|| ದೂತಾ ಊಚುಃ ||

ತದ್ವ್ರತಂ ಕೀದೃಶಂ ಸ್ವಾಮಿನ್ ಬ್ರೂಹಿ ಸರ್ವಮಶೇಷತಃ |
ಕಿಂ ತತ್ರ ದೇವ ಕರ್ತವ್ಯಂ ಪುರುಷೈಸ್ತವ ತೋಷದಂ || ೨೪ ||

ಕೃತಾ ಯೇನ ನರಶ್ರೇಷ್ಠ ದ್ವಾದಶೀ ಕೃಷ್ಣಪಕ್ಷಜಾ |
ಉಪವಾಸಕೃತೇ ದೇವ ಕಥಂ ಪಾಪಾತ್ಪ್ರಮುಚ್ಯತೇ || ೨೫ ||

---

೨೨. ಯಮನು ಹೇಳಿದನು–ಎಲೈ ಕಿಂಕರರಿರಾ ! ಯಾರು ವೈತರಣೀ ದ್ವಾದಶೀ ವ್ರತವನ್ನು ಆಚರಿಸುವರೋ ಅವರು ನಿಮಗೆ ಕಾಣುವುದಿಲ್ಲ. ಮತ್ತು ವೈತರಣೀ ನದಿಯು ಅವರಿಗೆ ಕಾಣುವುದಿಲ್ಲ.

೨೩. ಉಜ್ಜಯಿನಿ ಪ್ರಯಾಗ ಯಮುನೆಗಳಲ್ಲಿ ಸತ್ತವರೂ ಎಳ್ಳು, ಆನೆ, ಚಿನ್ನ, ಗೋವುಗಳನ್ನು ದಾನಮಾಡಿದವರೂ ಯಮಕಿಂಕರರಿಗೆ ಕಾಣುವುದಿಲ್ಲ.

೨೪. ದೂತರು ಹೇಳಿದರು–ಎಲೈ ಸ್ವಾಮಿಯೇ ! ಆ ವ್ರತವು ಎಂತಹುದು ? ಅದೆಲ್ಲವನ್ನೂ ಹೇಳು. ಆ ವ್ರತದಲ್ಲಿ ನಿನಗೆ ಸಂತೋಷವನ್ನುಂಟುಮಾಡುವ ಕೆಲಸಗಳನ್ನು ಹೇಳು.

೨೫. ಎಲೈ ಯಮನೇ ! ಆ ಕೃಷ್ಣಪಕ್ಷದ ದ್ವಾದಶಿಯನ್ನು ಯಾರು ಮಾಡಿರುವರು ? ಉಪವಾಸ ಮಾಡಿದ ಮಾತ್ರದಿಂದಲೇ ಆ ಪಾಪಗಳೆಲ್ಲವೂ ಹೇಗೆ ಹೋಗುತ್ತವೆ ?

ತದ್ವ್ರತಂ ಕೇನ ವಿಧಿನಾ ಕರ್ತವ್ಯಂ ಚ ಯಥಾ ವದ ।
ಸುಪ್ರಸನ್ನೇನ ವಕ್ತವ್ಯಂ ದಯಾಂ ಕೃತ್ವಾ ದಯಾನಿಧೇ || ೨೬ ||

|| ಮುದ್ಗಲ ಉವಾಚ ||

ದೂತಾನಾಂ ವಚನಂ ಶ್ರುತ್ವಾ ಉವಾಚ ಮಧುರಂ ತದಾ ।
ಸರ್ವಂ ವದಾಮಿ ಭೋ ದೂತಾ ಯಥಾ ದೃಷ್ಟಂ ಯಥಾ ಶ್ರುತಂ|| ೨೭ ||

|| ಯಮ ಉವಾಚ ||

ಮಾರ್ಗಶೀರ್ಷಾದಿಮಾಸೇಷು ಯಾ ಇಮಾಃ ಕೃಷ್ಣಪಕ್ಷಜಾಃ ।
ತಾಸು ಸರ್ವಾಸು ವಿಧಿವದ್ದ್ವಾದಶ್ಯಾಂ ವೈತರಣೀವ್ರತಂ || ೨೮ ||

ಪ್ರತಿಮಾಸಂ ಚ ಕರ್ತವ್ಯಂ ಯಾವದ್ವರ್ಷಂ ಭವೇದ್ಧ್ರುವಂ ।
ಯತ್ತು ಕೃತ್ವಾ ತು ಭೋ ದೂತಾ ಮುಚ್ಯತೇ ನಾತ್ರ ಸಂಶಯಃ || ೨೯ ||

---

೨೬. ಆ ವ್ರತವನ್ನು ಮಾಡುವ ವಿಧಿಯನ್ನು ನನ್ನ ಮೇಲೆ ಕೃಪೆಮಾಡಿ ತಿಳಿಸು.

೨೭. ಮುದ್ಗಲನು ಹೇಳಿದನು– ದೂತರ ಈ ಮಾತನ್ನು ಕೇಳಿ ಎಲೈ ದೂತರಿರಾ ! ನಾನು ಕಂಡಿರುವಂತೆಯೂ ಕೇಳಿರುವಂತೆಯೂ ಆ ವ್ರತದ ವಿಷಯವನ್ನು ಹೇಳುತ್ತೇನೆ.

೨೮. ಯಮನು ಹೇಳಿದನು– ಮಾರ್ಗಶೀರ್ಷವೇ ಮೊದಲಾದ ಮಾಸಗಳಲ್ಲಿ ಬರುವ ಕೃಷ್ಣಪಕ್ಷದ ದ್ವಾದಶಿಗಳಲ್ಲಿ ವೈತರಣೀ ವ್ರತವನ್ನು ಮಾಡಬೇಕು.

೨೯. ಈ ವ್ರತವನ್ನು ಮಾಡಲೇಬೇಕು. ಅದನ್ನು ಮಾಡಿದರೆ ಪಾಪಗಳಿಂದ ಮುಕ್ತನಾಗುತ್ತಾನೆ. ಸಂಶಯವಿಲ್ಲ.

ಉಪವಾಸಸ್ಯ ನಿಯಮಃ ಕರ್ತವ್ಯೋ ವಿಷ್ಣುತುಷ್ಟಿದಃ ।
ಅದ್ಯ ಮೇ ದೇವದೇವೇಶ ಉಪವಾಸೋ ಭವಿಷ್ಯತಿ ॥ ೩೦ ॥

ದ್ವಾದಶ್ಯಾಂ ಪೂಜ್ಯ ಗೋವಿಂದಂ ಶ್ರದ್ಧಾಭಕ್ತಿಸಮನ್ವಿತಃ ।
ಸ್ವಪ್ನ ಇಂದ್ರಿಯವೈಕಲ್ಯಾದ್ಭೋಜನಂ ಯಚ್ಚ ಮೈಥುನಂ ॥ ೩೧ ॥

ತತ್ಸರ್ವಂ ಕ್ಷಮ ಮೇ ದೇವ ಕೃಪಾಂ ಕೃತ್ವಾ ಮಮೋಪರಿ ।
ಏವಂ ವೈ ನಿಯಮಂ ಕೃತ್ವಾ ಮಧ್ಯಾಹ್ನೇ ತೀರ್ಥಮಾವ್ರಜೇತ್ ॥ ೩೨ ॥

ಮೃದ್ಗೋಮಯತಿಲಾನ್ನೀತ್ವಾ ಗನ್ತವ್ಯಂ ವಿಧಿಪೂರ್ವಕಂ ।
ಸ್ನಾನಂ ತತ್ರ ಪ್ರಕರ್ತವ್ಯಂ ವ್ರತಸಂಪೂರ್ಣಹೇತವೇ ॥ ೩೩ ॥

ಅಶ್ವಕ್ರಾನ್ತೇತಿ ಮಂತ್ರೇಣ ಸ್ನಾನಂ ಕುರ್ಯಾದ್ವಿಶೇಷತಃ ।
ಅಶ್ವಕ್ರಾನ್ತೇ ರಥಕ್ರಾನ್ತೇ ವಿಷ್ಣುಕ್ರಾನ್ತೇ ವಸುಂಧರೇ ॥ ೩೪ ॥

---

೩೦. ಎಲೈ ದೇವದೇವನಾದ ಗೋವಿಂದನೇ! ನಿನಗೆ ಪ್ರೀತಿಕರವಾದ ಉಪವಾಸವನ್ನು ಈದಿನ ಮಾಡುತ್ತೇನೆ. ಎಂದು ಹೇಳಿ ನಿಯಮವನ್ನು ಕೈಗೊಳ್ಳಬೇಕು.

೩೧–೩೨. ದ್ವಾದಶಿಯ ದಿನ ಗೋವಿಂದನನ್ನು ಭಕ್ತಿಯಿಂದ ಪೂಜಿಸಬೇಕು. ಮತ್ತು ಸ್ವಪ್ನದ ಮೈಥುನ ಅದರಿಂದ ಇಂದ್ರಿಯಸ್ಖಲನ ಇಂತಹ ಅನೇಕ ಪಾಪಗಳನ್ನು ಕ್ಷಮಿಸು. ಎಂದು ಪಾರ್ಥಿಸಬೇಕು. ಈ ರೀತಿ ನಿಯಮವನ್ನು ಮಾಡಿಕೊಂಡು ಮಧ್ಯಾಹ್ನದಲ್ಲಿ ಸ್ನಾನಕ್ಕೋಸ್ಕರ ತೀರ್ಥಕ್ಕೆ ಹೋಗಬೇಕು.

೩೩. ಮಣ್ಣು, ಸಗಣಿ, ಎಳ್ಳುಗಳನ್ನು ಆ ಸ್ನಾನಕ್ಕೆ ತೆಗೆದುಕೊಂಡು ಹೋಗಿ ವಿಧಿವತ್ತಾಗಿ ಸ್ನಾನಮಾಡಬೇಕು.

೩೪–೩೫. ಅಶ್ವಕ್ರಾನ್ತೆ ಎಂಬ ಮಂತ್ರವನ್ನು ಹೇಳಿಕೊಂಡು ಸ್ನಾನವನ್ನು ಮಾಡಬೇಕು. ಕುದುರೆಗಳಿಂದಲೂ ರಥಗಳಿಂದಲೂ ಆಕ್ರಮಿಸಲ್ಪಟ್ಟ ವಿಷ್ಣುವಿನಿಂದ

ಮೃತ್ತಿಕೇ ಹನ ಮೇ ಪಾಪಂ ಯನ್ಮಯಾ ಪೂರ್ವಸಂಚಿತಂ ।
ತ್ವಯಾ ಹತೇನ ಪಾಪೇನ ಸರ್ವಪಾಪೈಃ ಪ್ರಮುಚ್ಯತೇ ॥ ೩೫ ॥

ಕಾಶ್ಯಾಂ ಚೈವ ತು ಸಂಭೂತಾಸ್ತಿಲಾ ವೈ ವಿಷ್ಣುರೂಪಿಣಃ ।
ತಿಲಸ್ನಾನೇನ ಗೋವಿಂದಃ ಸರ್ವಪಾಪಂ ವ್ಯಪೋಹತಿ ॥ ೩೬ ॥

ವಿಷ್ಣುದೇಹೋದ್ಭವೇ ದೇವಿ ಮಹಾಪಾಪಾಪಹಾರಿಣಿ ।
ಸರ್ವಪಾಪಂ ಹರ ತ್ವಂ ವೈ ಸರ್ವೌಷಧಿ ನಮೋಽಸ್ತು ತೇ ॥ ೩೭ ॥

ತುಲಸೀ ಪತ್ರಕಂ ಧೃತ್ವಾ ನಾಮೋಚ್ಚಾರಣಪೂರ್ವಕಂ ।
ಸ್ನಾನಂ ಸುಕೃತಿಭಿಃ ಪ್ರೋಕ್ತಂ ಕರ್ತವ್ಯಂ ವಿಧಿಪೂರ್ವಕಂ ॥ ೩೮ ॥

ಏವಂ ಸ್ನಾತ್ವಾ ಸಮುತ್ತೀರ್ಯ ಪರಿಧಾಯ ಸುವಾಸಸೀ ।
ತರ್ಪಯಿತ್ವಾ ಪಿತೄನ್ದೇವಾಂಸ್ತತೋ ವಿಷ್ಣೋಽಸ್ತು ಪೂಜನಂ ॥ ೩೯ ॥

---

ದಾಟಲ್ಪಟ್ಟ ಎಲೈ ವಸುಂಧರೆಯೇ ! ಪೂರ್ವದಲ್ಲಿ ಮಾಡಿದ ಪಾಪವನ್ನು ನಾಶಮಾಡು. ನೀನು ನನ್ನ ಪಾಪವನ್ನು ಹಾಳುಮಾಡಿದರೆ ನನ್ನ, ಪಾಪವೆಲ್ಲವೂ ಹೋಗಿ ಶುದ್ಧನಾಗುತ್ತೇನೆ.

೩೬. ತಿಲವು (ಎಳ್ಳು) ಕಾಶಿಯಲ್ಲಿ ಹುಟ್ಟಿತು. ಅದು ವಿಷ್ಣುರೂಪವಾದುದು. ಈ ತಿಲವನ್ನು ಹಚ್ಚಿಕೊಂಡು ಸ್ನಾನ ಮಾಡುವುದರಿಂದ ನನ್ನ ಪಾಪವೆಲ್ಲವನ್ನೂ ಹಾಳುಮಾಡುತ್ತದೆ.

೩೭. ವಿಷ್ಣುವಿನ ದೇಹದಿಂದ ಹುಟ್ಟಿದ ಎಲೈ ಗಂಗಾದೇವಿಯೇ ! ನೀನು ಎಲ್ಲಾ ಪಾಪಗಳನ್ನೂ ಹಾಳುಮಾಡುತ್ತೀಯೆ. ನೀನು ಎಲ್ಲಾ ಪಾಪಗಳನ್ನೂ ಹಾಳುಮಾಡು. ಎಲ್ಲಾದಕ್ಕೂ ಔಷಧಿ ರೂಪಳಾದ ನಿನಗೆ ನಮಸ್ಕಾರವು.

೩೮. ತುಲಸಿಯ ದಳವನ್ನು ಹಿಡಿದುಕೊಂಡು ವಿಷ್ಣುವಿನ ನಾಮಗಳನ್ನು ಹೇಳುತ್ತಾ ಶಾಸ್ತ್ರದಲ್ಲಿ ಹೇಳಿರುವಂತೆ ಸ್ನಾನವನ್ನು ಮಾಡಬೇಕು. ಎಂದು ಶಾಸ್ತ್ರದಲ್ಲಿ ಹೇಳಿದೆ.

೩೯. ಈ ರೀತಿಯಾಗಿ ಸ್ನಾನಮಾಡಿ ಮೇಲಕ್ಕೆದ್ದು ಒರಸಿಕೊಂಡು ಮಡಿಬಟ್ಟೆಗಳನ್ನು ಧರಿಸಿಕೊಂಡು ದೇವಪಿತೃಗಳಿಗೆ ತರ್ಪಣಕೊಟ್ಟು ಅನಂತರ ವಿಷ್ಣುವನ್ನು ಪೂಜಿಸಬೇಕು.

ಸಂಸ್ಥಾಪ್ಯ ಹ್ಯವ್ರಣಂ ಕುಂಭಂ ಪಂಚಪಲ್ಲವಸಂಯುತಂ ।
ಪಂಚರತ್ನಸಮೋಪೇತಂ ದಿವ್ಯಸ್ರಗ್ಗಂಧವಾಸಿತಂ ॥ ೪೦ ॥

ಜಲಪೂರ್ಣಂ ಚ ಸದ್ರವ್ಯಂ ತಾಮ್ರಪಾತ್ರಸಮನ್ವಿತಂ ।
ತತ್ರಸ್ಥಂ ಶ್ರೀಧರಂ ದೇವಂ ದೇವದೇವಂ ತಪೋನಿಧಿಂ ॥ ೪೧ ॥

ಪೂರ್ವೇಣ ವಿಧಿನಾ ರಾಜರ್ಕುರ್ಯಾತ್ಪೂಜಾಂ ಗರೀಯಸೀಂ
ಮೃದ್ಗೋಮಯಾದಿರಚಿತಂ ಮಂಡಲಂ ಕಾರಯೇಚ್ಛುಭಂ ॥ ೪೨ ॥

ತಂಡುಲೈಶ್ಶುಕ್ಲಧೌತೈಶ್ಚ ಅಂಬುಪಿಷ್ಟೈಶ್ಚ ಕಾರಯೇತ್ ।
ಧರ್ಮರಾಜಃ ಪ್ರಕರ್ತವ್ಯೋ ಹಸ್ತಾದ್ಯವಯವಾನ್ವಿತಃ ॥ ೪೩ ॥

ನದೀಂ ವೈತರಣೀಂ ತಾಮ್ರಂ ಸ್ಥಾಪಯಿತ್ವಾ ತದಗ್ರತಃ ।
ಪೂಜಯೇಚ್ಚ ಪೃಥಕ್ಸಮ್ಯಕ್ತ್ವಮಾವಾಹನಪೂರ್ವಕಂ ॥ ೪೪ ॥

---

೪೦. ಅನಂತರ ತಗ್ಗು ಒಡಕುಗಳಿಲ್ಲದ ಒಂದು ಬಿಂದಿಗೆ ಅಥವಾ ಗಡಿಗೆಯನ್ನಿಡಬೇಕು. ಅದರಲ್ಲಿ ಪಂಚಪಲ್ಲವಗಳ (ಮಾವು ಆಲ ಅರಳಿ ಅತ್ತಿ ಬಸರಿ) ಚಿಗುರನ್ನು ಅದರೊಳಗೆ ಹಾಕಬೇಕು. ಐದುಬಗೆಯ ರತ್ನಗಳನ್ನು ಅದರಲ್ಲಿ ಹಾಕಬೇಕು. ಸಾಂಬ್ರಾಣಿ ಮುಂತಾದ ಗಂಧದ ಹೊಗೆಯನ್ನು ಅದರೊಳಕ್ಕೆ ಬಿಟ್ಟು ಸುವಾಸನೆ ಬರುವಂತೆ ಮಾಡಬೇಕು. ಅನಂತರ ನೀರನ್ನು ಹಾಕಬೇಕು. ದಕ್ಷಿಣೆಯನ್ನಿಡಬೇಕು. ಅದರ ಮೇಲೆ ಒಂದು ತಾಮ್ರದ ಪಾತ್ರೆಯನ್ನಿಡಬೇಕು.

೪೧-೪೪. ಆ ಕುಂಭದಲ್ಲಿ ಶ್ರೀಧರನೂ ದೇವದೇವನೂ ಆದ ವಿಷ್ಣುವನ್ನು ಆವಾಹನೆಮಾಡಿ ಶಾಸ್ತ್ರರೀತಿಯಿಂದ ಪೂಜಿಸಬೇಕು. ಆ ಕಲಶದ ಮುಂದೆ ಮಣ್ಣಿನಿಂದ ಒಂದು ಮಂಡಲವನ್ನು ಮಾಡಿ ಅದನ್ನು ಸಗಣಿಯಿಂದ ಸಾರಿಸಿ ಅದರ ಮೇಲೆ ಹಿಟ್ಟನ್ನು ನೀರಿನಿಂದ ಕಲಸಿ ಅದರಿಂದ ರಂಗೋಲಿಯನ್ನಿಡಬೇಕು ಅದರ ಮೇಲೆ ಅಕ್ಕಿಯನ್ನು ಹಾಕಬೇಕು. ಕೈಕಾಲುಗಳಿಂದ ಕೂಡಿದ ಒಂದು ಧರ್ಮರಾಜನ ಪ್ರತಿಮೆಯನ್ನು ಮಾಡಿಸಬೇಕು. ಆ ಪ್ರತಿಮೆಯನ್ನು ಆ ಮಂಡಲ ದಲ್ಲಿಡಬೇಕು ತಾಮ್ರದಲ್ಲಿ ಒಂದು ವೈತರಣೀ ನದಿಯನ್ನು ಮಾಡಿಸಿ ಆ ಧರ್ಮ ರಾಜ ಪ್ರತಿಮೆಯ ಮುಂದುಗಡೆ ಇಡಬೇಕು. ಅವೆರಡನ್ನೂ ಆವಾಹನಾದಿ ಮಂತ್ರಗಳಿಂದ ಬೇರೆಬೇರೆಯಾಗಿ ಪೂಜಿಸಬೇಕು.

ಆವಾಹಯಾಮಿ ದೇವೇಶಂ ಯಮುಂ ವೈ ವಿಶ್ವರೂಪಿಣಂ ।
ಇಹಾಭ್ಯೇಹಿ ಮಹಾಭಾಗ ಸಾನ್ನಿಧ್ಯಂ ಕುರು ಕೇಶವ ॥ ೪೫ ॥

ಇದಂ ಪಾದ್ಯಂ ಶ್ರಿಯಃ ಕಾನ್ತ ಸೋಪವಿಷ್ಟಂ ಹರೇ ಪ್ರಭೋ ।
ವಿಶ್ವಾಘಾಯ ನಮೋ ನಿತ್ಯಂ ಕೃಪಾಂ ಕುರು ಮಮೋಪರಿ ॥ ೪೬ ॥

ಭೂತಿದಾಯ ನಮಃ ಪಾದೌ ಅಶೋಕಾಯ ಚ ಜಾನುನೀ ।
ಊರೂ ನಮಶ್ಶಿವಾಯೇತಿ ವಿಶ್ವಮೂರ್ತೇ ನಮಃ ಕಟಿಂ ॥ ೪೭ ॥

ಕಂದರ್ಪಾಯ ನಮೋ ಮೇಢ್ರಮಾದಿತ್ಯಾಯ ಫಲಂ ತಥಾ ।
ದಾಮೋದರಾಯ ಜಠರಂ ವಾಸುದೇವಾಯ ವೈ ಸ್ತನೌ ॥ ೪೮ ॥

ಶ್ರೀಧರಾಯ ಮುಖಂ ಕೇಶಾನ್ ಕೇಶವಾಯೇತಿ ವೈ ನಮಃ ।
ಪೃಷ್ಠಂ ಶಾಂರ್ಗಧರಾಯೇತಿ ಚರಣೌ ವರದಾಯ ಚ ॥ ೪೯ ॥

---

೪೫. ದೇವೇಶನೂ ವಿಶ್ವರೂಪಿಯೂ ಆದ ಯಮುನನ್ನು ಆವಾಹನೆ ಮಾಡುತ್ತೇನೆ. ಎಲೈ ಕೇಶವನೇ ! ಇಲ್ಲಿಗೆ ಬಾ. ಇಲ್ಲಿರು.

೪೬. ಎಲೈ ಶ್ರೀಕಾಂತನೇ ಇದು ನಿನಗೆ ಪಾದ್ಯವು. ಇದು ನಿನಗೆ ಆಸನವು. ಎಲೈ ಪ್ರಪಂಚವೇ ಮನೆಯಾಗಿ ಉಳ್ಳ ಸ್ವಾಮಿಯೇ ! ನಿನಗೆ ನಮಸ್ಕಾರವು. ನನ್ನ ಮೇಲೆ ದಯೆಯಿಡು.

೪೭. ಐಶ್ವರ್ಯವನ್ನು ಕೊಡುವವನೇ ! ನಿನ್ನ ಪಾದಗಳಿಗೆ ನಮಸ್ಕಾರವು. ಅಶೋಕನೇ ! ನಿನ್ನ ಮಂಡಿಗಳಿಗೆ ನಮಸ್ಕಾರವು. ವಿಶ್ವಮೂರ್ತಿಯೇ ನಿನ್ನ ಸೊಂಟಕ್ಕೆ ನಮಸ್ಕಾರವು. ಎಂದು ಹೇಳುತ್ತ ಪೂಜಿಸಬೇಕು.

೪೮-೪೯. ಕಂದರ್ಪನಿಗೆ ನಮಸ್ಕಾರವು. ಎಂದು ವೃಷಣವನ್ನೂ ಆದಿತ್ಯನಿಗೆ ನಮಸ್ಕಾರವು ಎಂದು ಮೂತ್ರ ವಿಸರ್ಜನಾಂಗವನ್ನೂ ದಾಮೋದರನಿಗೆ ನಮಸ್ಕಾರವು ಎಂದು ಹೊಟ್ಟೆಯನ್ನೂ ವಾಸುದೇವನಿಗೆ ನಮಸ್ಕಾರವು ಎಂದು ಸ್ತನಗಳನ್ನೂ ಶ್ರೀಧರನಿಗೆ ನಮಸ್ಕಾರವು ಎಂದು ಮುಖವನ್ನೂ ಕೇಶವನಿಗೆ ನಮಸ್ಕಾರವು ಎಂದು ತಲೆಗೂದಲನ್ನೂ ಶಾಂರ್ಗಧರನಿಗೆ ನಮಸ್ಕಾರವು ಎಂದು ಬೆನ್ನನ್ನೂ ವರದನಿಗೆ ನಮಸ್ಕಾರವು ಎಂದು ಪಾದಗಳನ್ನೂ ಪೂಜಿಸಬೇಕು.

ಸ್ವನಾಮ್ನಾ ಶಂಖಚಕ್ರಾಸಿಗದಾಪರಶುಪಾಣಯೇ ।
ಸರ್ವಾತ್ಮನೇ ನಮಸ್ತುಭ್ಯಂ ಶಿರ ಇತ್ಯಭಿಧೀಯತೇ || ೫೦ ||

ಮತ್ಸ್ಯಂ ಕೂರ್ಮಂ ಚ ವಾರಾಹಂ ನಾರಸಿಂಹಂ ಚ ವಾಮನಂ ।
ರಾಮಂ ರಾಮಂ ಚ ಕೃಷ್ಣಂ ಚ ಬುದ್ಧಂ ಕಲ್ಕಿಂ ನಮೋಽಸ್ತು ತೇ || ೫೧ ||

ಸರ್ವಪಾಪೌಘನಾಶಾರ್ಥಂ ಪೂಜಯಾಮಿ ನಮೋ ನಮಃ ।
ಏಭಿಶ್ಚ ಸರ್ವಶೋ ಮಂತ್ರೈರ್ವಿಷ್ಣುಂ ಧ್ಯಾತ್ವಾ ಪ್ರಪೂಜಯೇತ್ || ೫೨ ||

ಧರ್ಮರಾಜ ನಮಸ್ತೇಽಸ್ತು ಧರ್ಮರಾಜ ನಮೋಽಸ್ತು ತೇ ।
ದಕ್ಷಿಣಾಶಾಯ ತೇ ತುಭ್ಯಂ ನಮೋ ಮಹಿಷವಾಹನ || ೫೩ ||

ಚಿತ್ರಗುಪ್ತ ನಮಸ್ತುಭ್ಯಂ ವಿಚಿತ್ರಾಯ ನಮೋ ನಮಃ ।
ನರಕಾರ್ತಿಪ್ರಶಾಂತ್ಯರ್ಥಂ ಕಾಮಾನ್ಯಚ್ಛ ಮಮೇಪ್ಸಿತಾನ್ || ೫೪ ||

---

೫೦. ಶಂಖಪಾಣಯೇ ನಮಃ ಚಕ್ರಪಾಣಯೇ ನಮಃ ಅಸಿಪಾಣಯೇ ನಮಃ ಗದಾಪಾಣಯೇ ನಮಃ ಪರಶುಪಾಣಯೇ ನಮಃ ಎಂಬುದಾಗಿ ಕೈಗಳನ್ನು ಪೂಜೆಮಾಡಬೇಕು. ಸರ್ವಾತ್ಮನೇ ನಮಃ ಎಂದು ತಲೆಯನ್ನು ಪೂಜಿಸಬೇಕು.

೫೧–೫೨. ಮತ್ಸ್ಯಾಯ ನಮಃ ಕೂರ್ಮಾಯ ನಮಃ ವರಾಹಾಯ ನಮಃ ನಾರಸಿಂಹಾಯ ನಮಃ ವಾಮನಾಯ ನಮಃ ರಾಮಾಯ ನಮಃ ಪರಶು ರಾಮಾಯ ನಮಃ ಕೃಷ್ಣಾಯ ನಮಃ ಬುದ್ಧಾಯ ನಮಃ ಕಲ್ಕನೇನಮಃ ಎಂಬು ದಾಗಿ ಪೂಜಿಸಬೇಕು. ಎಲ್ಲಾ ಪಾಪಗಳ ನಾಶಕ್ಕೋಸ್ಕರ ಪೂಜಿಸುತ್ತೇನೆ. ನಿನಗೆ ನಮಸ್ಕಾರವು ಎಂದೆನ್ನಬೇಕು. ಇವೆಲ್ಲವುಗಳಿಂದಲೂ ಇನ್ನೂ ವೇದೋಕ್ತ ವಾದ ಮಂತ್ರಗಳಿಂದಲೂ ವಿಷ್ಣುವನ್ನು ಧ್ಯಾನಿಸಿ ಪೂಜಿಸಬೇಕು.

೫೩. ಧರ್ಮರಾಜನೇ ! ನಿನಗೆ ನಮಸ್ಕಾರವು. ಧರ್ಮರಾಜನೇ ! ನಿನಗೆ ನಮಸ್ಕಾರವು ಇರಲಿ. ದಕ್ಷಿಣ ದಿಕ್ಕಿನಲ್ಲಿರುವವನೇ ! ನಿನಗೆ ನಮಸ್ಕಾರವು. ಕೋಣನಮೇಲೆ ಕೂರುವವನೇ ! ನಿನಗೆ ನಮಸ್ಕಾರವು.

೫೪. ಚಿತ್ರಗುಪ್ತನೇ ! ನಿನಗೆ ನಮಸ್ಕಾರವು. ವಿಚಿತ್ರನೇ ! ನಿನಗೆ ನಮಸ್ಕಾರವು. ನರಕದ ದುಃಖವನ್ನು ನಾಶಮಾಡಿಕೊಳ್ಳಲು ನನಗೆ ಬೇಕಾದು ದೆಲ್ಲವನ್ನೂ ಕೊಡು.

**ಯಮಾಯ ಧರ್ಮರಾಜಾಯ ಮೃತ್ಯವೇ ಚಾಂತಕಾಯ ಚ ।**
**ವೈವಸ್ವತಾಯ ಕಾಲಾಯ ಸರ್ವಭೂತಕ್ಷಯಾಯ ಚ    ॥ ೫೫ ॥**

**ವೃಕೋದರಾಯ ಚಿತ್ರಾಯ ಚಿತ್ರಗುಪ್ತಾಯ ವೈ ನಮಃ ।**
**ನೀಲಾಯ ಚೈವ ದಧ್ನಾಯ ನಿತ್ಯಂ ಕುರ್ಯಾನ್ನಮೋ ನಮಃ    ॥ ೫೬ ॥**

**ಏವಂ ದ್ವಾದಶಭಿಃ ಪ್ರೋಜ್ಯೋ ನಾಮಭಿರ್ಧರ್ಮರಾಟ್ಪ್ರಭುಃ ।**
**ವೈತರಣಿ ತ್ವಂ ಸುದುಷ್ಪಾರೇ ಪಾಪಘ್ನೇ ಸರ್ವಕಾಮದೇ    ॥ ೫೭ ॥**

**ಇಹಾಭ್ಯೇಹಿ ಮಹಾಭಾಗೇ ಗೃಹಾಣಾರ್ಘ್ಯಂ ಮಯಾ ಕೃತಂ ।**
**ಯಮದ್ವಾರಪಥೇ ಘೋರೇ ಖ್ಯಾತಾ ವೈತರಣಿ ನದೀ    ॥ ೫೮ ॥**

**ತಸ್ಯಾ ಉದ್ಧರಣಾರ್ಥಾಯ ಜನ್ಮಮೃತ್ಯುಜರಾತಿಗಾ ।**
**ಯಾ ದುಸ್ತರಾ ದುಷ್ಕೃತಿಭಿಃ ಸರ್ವಪ್ರಾಣಿಭಯಾವಹಾ    ॥ ೫೯ ॥**

---

೫೫. ಯಮನಿಗೆ ನಮಸ್ಕಾರವು. ಧರ್ಮರಾಜನಿಗೆ ನಮಸ್ಕಾರವು. ಮೃತ್ಯುವಿಗೆ ನಮಸ್ಕಾರವು. ಅಂತಕನಿಗೆ ನಮಸ್ಕಾರವು. ವೈವಸ್ವತನಿಗೆ ನಮಸ್ಕಾರವು. ಕಾಲನಿಗೆ ನಮಸ್ಕಾರವು. ಸರ್ವಪ್ರಾಣಿಗಳನ್ನೂ ನಾಶಮಾಡುವವನಿಗೆ ನಮಸ್ಕಾರವು.

೫೬. ವ್ರಕೋದರನಿಗೆ ನಮಸ್ಕಾರವು. ಚಿತ್ರನಿಗೆ ನಮಸ್ಕಾರವು. ವಿಚಿತ್ರಗುಪ್ತನಿಗೆ ನಮಸ್ಕಾರವು. ನೀಲನಿಗೆ ನಮಸ್ಕಾರವು. ದಧ್ನನಿಗೆ ನಮಸ್ಕಾರವು. ನಿಮ್ಮಗಳಿಗೆ ನಿತ್ಯವೂ ನಮಸ್ಕಾರವು.

೫೭-೬೦. ಈ ರೀತಿಯಾಗಿ ಹನ್ನೆರಡು ನಾಮಗಳಿಂದ ಧರ್ಮರಾಜನನು ಪೂಜಿಸಬೇಕು. ಎಲೈ ವೈತರಣಿಯೇ ! ಬಹು ಪ್ರವಾಹವುಳ್ಳವಳೇ ! ಪಾಪನಾಶಕಳೆ ! ಇಷ್ಟಾರ್ಥವನ್ನು ಕೊಡತಕ್ಕವಳೆ! ಅಮ್ಮ ಇಲ್ಲಿಗೆ ಬಾ. ನನ್ನ ಅರ್ಘ್ಯವನ್ನು ತೆಗೆದುಕೋ. ಯಮನಬಾಗಿಲಿನಲ್ಲಿ ಘೋರವಾದ ವೈತರಣೀ ನದಿಯು ಇರುವುದು. ಆ ನದಿಯಲ್ಲಿ ಯಾತನೆಯನ್ನು ಅನುಭವಿಸುವ ಪಾಪಿಗಳು ಬೀಳುತ್ತವೆ. ಆ ಘೋರವಾದ ನದಿಯನ್ನು ದಾಟಲು ಈ ಅರ್ಘ್ಯವನು ಕೊಡುತ್ತೇನೆ. ಎಲೈ ಜಯಾದೇವಿಯೇ! ನಿನಗೆ ನಮಸ್ಕಾರವು. ಪಾಪಿಗಳಿಂದ ದಾಟಲಾಗದ ಎಲ್ಲಾ ಪ್ರಾಣಿಗಳಿಗೂ ಭಯಂಕರವಾದ ಜನ್ಮ ಮೃತ್ಯು

ಯಸ್ಯಾಂ ಭಯಾತ್ಪ್ರಮುಜ್ಜಂತಿ ಪ್ರಾಣಿನೋ ಯಾತನಾರಯಾಃ ।
ತತರ್ತುಕಾಮಸ್ತು ತಾಂ ಘೋರಾಂ ಜಯಾ ದೇವಿ ನಮೋ ನಮಃ ॥ ೬೦ ॥

ತಸ್ಯಾಂ ದೇವಾಧಿತಿಷ್ಠಂತಿ ಯಾ ಸಾ ವೈತರಣೀ ನದೀ ।
ಸಾ ಚಾಪಿ ಪೂಜಿತಾ ಭಕ್ತ್ಯಾ ಪ್ರೀತ್ಯರ್ಥಂ ಕೇಶವಸ್ಯ ಚ ॥ ೬೧ ॥

ಯಸ್ಯಾಸ್ತಟೆ ಪ್ರತಿಷ್ಠಂತಿ ಋಷಯಃ ಪಿತರಸ್ತಥಾ ।
ಸಾ ಚಾಪಿಸಿಂಧುರೂಪೇಣ ಪೂಜಿತಾ ಪಾಪಹಾರಿಕಾ ॥ ೬೨ ॥

ತರಿತುಂ ತಾಂ ಪ್ರದಾಸ್ಯಾಮಿ ಸರ್ವಪಾಪವಿಮುಕ್ತಯೇ ।
ಪುಣ್ಯಾರ್ಥಂ ಸಂಪ್ರಯಚ್ಛಾಮಿ ತುಭ್ಯಂ ವೈತರಣೀಂ ನದೀಂ ॥ ೬೩ ॥

ಮಯಾಪಿ ಪೂಜಿತಾ ಭಕ್ತ್ಯಾ ಪ್ರೀತ್ಯರ್ಥಂ ಕೇಶವಸ್ಯ ಚ ।
ಕೃಷ್ಣ ಕೃಷ್ಣ ಜಗನ್ನಾಥ ಸಂಸಾರಾದುದ್ಧರಸ್ವ ಮಾಂ ॥ ೬೪ ॥

---

ಮುಪ್ಪುಗಳನ್ನು ಮೀರಿದ ಆ ವೈತರಣೀನದಿಯನ್ನು ದಾಟಲು ಈ ಅರ್ಘ್ಯವನ್ನು ಕೊಡುತ್ತೇನೆ. ಸ್ವೀಕರಿಸು ಎಂದೆನ್ನಬೇಕು.

೬೧-೬೩. ಆ ವೈತರಣೀ ನದಿಯ ದಡದಲ್ಲಿ ದೇವತೆಗಳಿರುತ್ತಾರೆ. ಅಂತಹ ವೈತರಣೀ ನದಿಯನ್ನು ಕೇಶವನಲ್ಲಿರುವ ಪ್ರೀತಿಗೋಸ್ಕರ ಪೂಜಿಸಿದೆನು. ಆ ವೈತರಣಿಯನ್ನು ದಾಟುವುದಕ್ಕೂ ಪಾಪವನ್ನು ನಾಶಮಾಡಿಕೊಳ್ಳವುದಕ್ಕೂ ಪುಣ್ಯಕ್ಕೋಸ್ಕರವೂ ನಿನಗೆ ಈ ವೈತರಣೀ ನದಿಯನ್ನು ದಾನ ಮಾಡುತ್ತೇನೆ. ಆ ವೈತರಣೀ ನದಿಯ ದಡದಲ್ಲಿ ಋಷಿಗಳೂ ಪಿತೃಗಳೂ ಇದ್ದಾರೆ. ಅಂತಹ ವೈತರಣಿಯನ್ನು ನದಿಯ ರೂಪದಿಂದ ಪೂಜೆ ಮಾಡಿದ್ದೇನೆ. ಅದು ಪಾಪನಾಶಕವಾದುದು.

೬೪. ಕೇಶವನಲ್ಲಿರುವ ಪ್ರೀತಿಯಿಂದಲೂ ಕೇಶವನ ಪ್ರೀತಿಯನ್ನು ಸಂಪಾದಿಸುವುದಕ್ಕೋಸ್ಕರವೂ ವೈತರಣಿಯನ್ನು ಪೂಜಿಸಿದೆನು. ಎಲೈ ಕೃಷ್ಣನೇ ! ಜಗನ್ನಾಥನೇ ! ಈ ಸಂಸಾರದಿಂದ ನನ್ನನ್ನು ಉದ್ಧರಿಸು.

ನಾಮಗ್ರಹಣಮಾತ್ರೇಣ ಸರ್ವಪಾಪಂ ಹರಸ್ವ ಮೇ ।
ಯಜ್ಞೋಪವೀತಂ ಪರಮಂ ಕಾರಿತಂ ನವತನ್ತುಭಿಃ ॥ ೬೫ ॥

ಪ್ರತಿಗೃಹ್ಣೀಷ್ವ ದೇವೇಶ ಪ್ರೀತೋ ಯಚ್ಛ ಮಮೇಪ್ಸಿತಂ ।
ಇದಂ ದತ್ತಂ ಚ ತಾಂಬೂಲಂ ಯಥಾಶಕ್ತಿ ಸುಶೋಭನಂ ॥ ೬೬ ॥

ಪ್ರತಿಗೃಹ್ಣೀಷ್ವ ದೇವೇಶ ಮಾಮುದ್ಧರ ಭವಾರ್ಣವಾತ್ ।
ಪಂಚವರ್ತಿಪ್ರದೀಪೋಽಯಂ ದೇವೇಶಾರಾರ್ತಿಕಂ ತವ ॥ ೬೭ ॥

ಮೋಹಾಂಧಕಾರದ್ಯುಮಣೇ ಭಕ್ತಿಯುಕ್ತೋ ಭವಾರ್ತಿಹರ್ ।
ಪರಮಾನ್ನಂ ಸುಪಕ್ವಾನ್ನಂ ಸಮಸ್ತರಸಸಂಯುತಂ ॥ ೬೮ ॥

ನಿವೇದಿತಂ ಮಯಾ ಭಕ್ತ್ಯಾ ಭಗವರ್ನ್ ಪ್ರತಿಗೃಹ್ಯತಾಂ ।
ದ್ವಾದಶಾಕ್ಷರಮಂತ್ರೇಣ ಯಥಾಸಂಖ್ಯಜಪೇನ ಚ ॥ ೬೯ ॥

---

೬೫. ಎಲೈ ಕೇಶವನೇ ! ನಿನ್ನ ನಾಮಸ್ಮರಣೆ ಮಾಡಿದರೆ ಪಾಪವೆಲ್ಲವೂ ಹೋಗುತ್ತವೆ. ಈ ಯಜ್ಞೋಪವೀತವು ಹೊಸದಾಗಿ ನಿರ್ಮಿತವಾಗಿರುವುದು. ಇದನ್ನು ತೆಗೆದುಕೋ. ಪ್ರೀತಿಗೊಂಡು ನನಗೆ ಬೇಕಾದುದನ್ನು ಕೊಡು.

೬೬. ನಾನು ಶಕ್ತಿ ಇದ್ದ ಮಟ್ಟಿಗೆ ಈ ತಾಂಬೂಲವನ್ನು ಕೊಟ್ಟಿದ್ದೇನೆ. ಎಲೈ ದೇವೇಶನೇ ! ಇದನ್ನು ತೆಗೆದುಕೋ. ಸಂಸಾರಸಾಗರದಿಂದ ನನ್ನನ್ನು ಉದ್ಧರಿಸು.

೬೭. ಎಲೈ ದೇವಿಶನೇ ! ಐದು ಬತ್ತಿಗಳಿಂದ ಕೂಡಿದ ಈ ಆರತಿಯನ್ನು ಸಮರ್ಪಿಸುತ್ತೇನೆ. ಮೋಹವೆಂಬ ಕತ್ತಲೆಗೆ ಸೂರ್ಯನೆ ! ಸಂಸಾರದ ಕಷ್ಟಗಳನ್ನು ನೀಗುವ ಎಲೈ ಸ್ವಾಮಿಯೇ ! ಇದನ್ನು ಸ್ವೀಕರಿಸು.

೬೮–೭೧. ಎಲೈ ಕೇಶವನೇ ! ಪರಮಾನ್ನವನ್ನೂ ಇನ್ನೂ ಒಳ್ಳೆಯ ಅನ್ನಗಳನ್ನೂ ರಸವತ್ತಾದ ಅನ್ನಗಳನ್ನೂ ಭಕ್ತಿಯಿಂದ ನಿವೇದನ ಮಾಡಿದ್ದೇನೆ. ಸ್ವೀಕರಿಸು ಎನ್ನಬೇಕು. ಅನಂತರ ದ್ವಾದಶಾಕ್ಷರ ಮಂತ್ರವನ್ನು ಜಪಿಸಬೇಕು. ದ್ವಾದಶಾಕ್ಷರ ಮಂತ್ರವನ್ನು ಯಥಾಶಕ್ತಿ ಮಾಡುವುದರಿಂದ ಶ್ರೀಕಾಂತನು

ಪ್ರೀಯತಾಂ ಮೇ ಶ್ರಿಯಃ ಕಾನ್ತಃ ಪ್ರೀತೋ ಯಚ್ಛತು ವಾಂಛಿತಂ ।
ಪಂಚ ಗಾವಸ್ಸಮುತ್ಪನ್ನಾ ಮಥ್ಯಮಾನೇ ಮಹೋದಧೌ ॥ ೭೦ ॥

ತಾಸಾಂ ಮಧ್ಯೇ ತು ಯಾ ನಂದಾ ತಸ್ಯೈ ಧೇನ್ವೈ ನಮೋ ನಮಃ ।
ಗಾಂ ಸಂಪೂಜ್ಯ ವಿಧಾನೇನ ಅರ್ಘ್ಯಂ ದದ್ಯಾತ್ಸಮಾಹಿತಃ ॥ ೭೧ ॥

ಸರ್ವಕಾಮದುಘೇ ದೇವಿ ಸರ್ವಾರ್ತಿಕನಿವಾರಿಣಿ ।
ಆರೋಗ್ಯಂ ಸಂತತಿಂ ದೀರ್ಘಾಂ ದೇಹಿ ನಂದಿನಿ ಮೇ ಸದಾ ॥ ೭೨ ॥

ಪೂಜಿತಾ ಚ ವಸಿಷ್ಠೇನ ವಿಶ್ವಾಮಿತ್ರೇಣ ಧೀಮತಾ ।
ಕಪಿಲೇ ಹರ ಮೇ ಪಾಪಂ ಯನ್ಮಯಾ ಪೂರ್ವಸಂಚಿತಂ ॥ ೭೩ ॥

ಗಾವೋ ಮೇ ಅಗ್ರತಸ್ಸನ್ತು ಗಾವೋ ಮೇ ಸನ್ತು ಪೃಷ್ಠತಃ ।
ನಾಕೇ ಮಾಮುಪತಿಷ್ಠಸ್ವ ಹೇಮಶೃಂಗಿಪಯೋಮುಚಃ ॥ ೭೪ ॥

---

ಪ್ರೀತಿಗೊಂಡು ಇಷ್ಟಾರ್ಥವನ್ನು ಕೊಡಲಿ. ಎಂದು ಪ್ರಾರ್ಥಿಸಬೇಕು. ಕ್ಷೀರ ಸಾಗರವನ್ನು ಕಡೆಯುವಾಗ ಐದು ಹಸುಗಳು ಹುಟ್ಟಿದುವು. ಅವುಗಳ ಮಧ್ಯದಲ್ಲಿ ಹುಟ್ಟಿದ ನಂದೆಗೆ ನಮಸ್ಕಾರವು ಎಂದು ಗೋಪೂಜೆಯನ್ನು ಮಾಡಿ ನಿಯಮದಿಂದ ಅರ್ಘ್ಯವನ್ನು ಕೊಡಬೇಕು.

೭೨. ಎಲ್ಲಾ ಇಷ್ಟವನ್ನೂ ಕೊಡುವ ದೇವಿಯೇ ! ತೊಂದರೆಗಳನ್ನೆಲ್ಲಾ ನಿವಾರಿಸುವವಳೇ ! ನನಗೆ ಆರೋಗ್ಯವನ್ನೂ ನಾಶವಾಗದ ಸಂತತಿಯನ್ನೂ ಯಾವಾಗಲೂ ಕೊಡು.

೭೩. ಎಲೈ ನಂದೆಯೇ ! ನಿನ್ನನ್ನು ವಸಿಷ್ಠನೂ ವಿಶ್ವಾಮಿತ್ರನೂ ಪೂಜಿಸಿದರು. ಅಂತಹ ಕಪಿಲೆಯೇ! ಹಿಂದಿನಿಂದಲೂ ಮಾಡಿರುವ ನನ್ನ ಪಾಪ ಗಳನ್ನು ನಾಶಮಾಡು.

೭೪. ಹಸುಗಳೇ ನನ್ನ ಮುಂದೆಯೂ ಇರಲಿ. ಹಸುಗಳೇ ನನ್ನ ಹಿಂದೆಯೂ ಇರಲಿ. ಇವೆಲ್ಲವೂ ನನಗೆ ಸ್ವರ್ಗದಲ್ಲಿ ಬಂದು ಸೇರಲಿ. ಚಿನ್ನದ ಕೊಂಬುಳ್ಳಹಾಲನ್ನು ಕರೆಯುತ್ತಿರುವ ನಿನಗೆ ನಮಸ್ಕಾರವು.

ಸುರಭ್ಯಃ ಸೌರಭೇಯಾಶ್ಚ ಸರಿತಸ್ಸಾಗರಾಸ್ತಥಾ ।
ಸರ್ವದೇವಮಯೇ ದೇವಿ ಸುಭದ್ರೇ ಭಕ್ತವತ್ಸಲೇ ॥ ೭೫ ॥

ಏವಂ ಸಂಪೂಜ್ಯ ವಿಧಿವದ್ದದ್ಯಾದ್ಗೋಷು ಗವಾಹ್ನಿಕಂ ।
ಸೌರಭೇಯ್ಯಸ್ಸರ್ವಹಿತಾಃ ಪವಿತ್ರಾಃ ಪಾಪನಾಶಿನೀಃ ॥ ೭೬ ॥

ಪ್ರತಿಗೃಹ್ಣನ್ತು ಮೇ ಗ್ರಾಸಂ ಗಾವಸ್ತ್ರೈಲೋಕ್ಯಮಾತರಃ ।
ಗಂ ಗದಾಯೈ ನಮೋ ಭೂತ್ಯೈ ಸರ್ವಪಾಪಪ್ರಹಾಣಯೇ ॥ ೭೭ ॥

ಪ್ರಸನ್ನಾ ಭವ ಮೇ ನಿತ್ಯಮಾಶೀರ್ವಾದಪರಾಯಣಾ ।
ದೌರ್ಗಂಧ್ಯಧ್ವಂಸಿನೀ ಭೂತ್ವಾ ಸರ್ವಪಾಪಹರಾ ಭವ ॥ ೭೮ ॥

ಅನೇನೈವ ತು ಮಂತ್ರೇಣ ಗದಾಂ ವೈ ಧಾರಯೇದ್ಬುಧಃ ।
ಪಂ ನಮಃ ಪದ್ಮನಾಭಾಯ ಪದ್ಮಂ ವೈ ಧಾರಯೇತ್ಸುಧೀಃ ॥ ೭೯ ॥

---

೭೫. ಸುರಭಿಗಳೂ ಸುರಭಿಯ ಕರುಗಳೂ ನದಿಗಳೂ ಸಮುದ್ರಗಳೂ ಎಲ್ಲವೂ ನೀನೇ ಆಗಿದ್ದೀಯೆ. ಎಲೈ ದೇವಿಯೇ ! ನೀನು ಸರ್ವದೇವಸ್ವರೂಪಣಿ. ಮಂಗಳಕರಳು. ಭಕ್ತರಲ್ಲಿ ಪ್ರೀತಿಯುಳ್ಳವಳು.

೭೬. ಈ ರೀತಿಯಾಗಿ ಶಾಸ್ತ್ರೋಕ್ತವಾಗಿ ಪೂಜೆಮಾಡಿ ಅನಂತರ ಅವಕ್ಕೆ ಗೋಗ್ರಾಸವನ್ನು ಕೊಡಬೇಕು. ಈ ಗೋವುಗಳು ಎಲ್ಲರಿಗೂ ಹಿತಕಾರಿಗಳು. ಪವಿತ್ರವಾದುವು. ಪಾಪನಾಶಕಗಳು.

೭೭–೭೮. ಮೂರು ಲೋಕಕ್ಕೂ ತಾಯಿಯಾದ ಈ ಗೋವುಗಳು ನಾನು ಕೊಟ್ಟ ಗ್ರಾಸವನ್ನು ತೆಗೆದುಕೊಳ್ಳಲಿ. ಗಂ ಗಾದಾಯೈ ನಮಃ ಭೂತ್ಯೈ ನಮಃ ಎಂದು ಪೂಜಿಸಬೇಕು. ಸರ್ವ ಪಾಪನಾಶಕವಾದ ಗೋವಿಗೆ ನಮಸ್ಕಾರವು. ಎಲೈ ಗೋವೇ ! ನೀನು ನನಗೆ ಪ್ರಸನ್ನಳಾಗು. ಆಶೀರ್ವಾದವನ್ನು ಕೊಡು. ನನ್ನ ದುರ್ಗಂಧವನ್ನು ನಾಶಮಾಡಿ ಪಾಪಗಳನ್ನೆಲ್ಲಾ ಧ್ವಂಸಮಾಡು.

೭೯. ಈ ಮಂತ್ರದಿಂದ ಗದೆಯನ್ನು ಧರಿಸಬೇಕು. ಪಂ ನಮಃ ಪದ್ಮನಾಭಾಯ ನಮಃ ಎಂದು ಪದ್ಮವನ್ನು ಧರಿಸಬೇಕು.

ಚಂ ಚಕ್ರರೂಪಿಣೇ ವಿಷ್ಣೋ ಧಾರಣಂ ಚಕ್ರಜಂ ಸ್ಮೃತಂ ।
ಶಂ ಶಂಖರೂಪಿಣೇ ತುಭ್ಯಂ ನಮೋಽಸ್ತು ಸುಖಕಾರಿಣೇ ॥ ೮೦ ॥

ಮಂತ್ರೇಣಾನೇನ ವೈ ದೂತಾ ಧಾರಣಂ ಶಂಖಜಂ ಸ್ಮೃತಂ ।
ಚತುರ್ಣಾಮಾಯುಧಾನಾಂ ತು ಧಾರಣಂ ಮುನಿಭಿಃ ಸ್ಮೃತಂ ॥ ೮೧ ॥

ಚಂದನೇನ ಸುಗಂಧೇನ ಗೋಪಿಕಾಚಂದನೇನ ತು ।
ಧಾರಣಂ ಚ ವಿಶೇಷೇಣ ಬ್ರಾಹ್ಮಣೈರ್ವೇದಪಾರಗೈಃ ॥ ೮೨ ॥

ಚಾಂಡಾಲೋ ಜಾಯತೇ ಶುದ್ಧೋ ಧಾರಣಾಚ್ಚ ನ ಸಂಶಯಃ ।
ಊರ್ಧ್ವ ಪುಂಡ್ರಮೃಜುಂ ಸೌಮ್ಯಂ ಸಚಿಹ್ನಂ ಧಾರಯೇದ್ಯದಿ ॥ ೮೩ ॥

ಸ ಚಾಂಡಾಲೋಽಪಿ ಶುದ್ಧಾತ್ಮಾ ಪೂಜ್ಯ ಏವ ಸದಾ ದ್ವಿಜೈಃ ।
ಚಂಡಾಲಾನಾಂ ಗೃಹೇ ದೂತಾ ತುಲಸೀ ಯತ್ರ ದೃಶ್ಯತೇ ॥ ೮೪ ॥

---

೮೦. ಚಂ ಚಕ್ರರೂಪಿಯಾದ ವಿಷ್ಣುವಿಗೆ ನಮಸ್ಕಾರವು. ಎಂದು ಚಕ್ರವನ್ನು ಧರಿಸಬೇಕು. ಶಂ ಶಂಖರೂಪಿಯಾದ ಸ್ವಾಮಿಗೆ ನಮಸ್ಕಾರವು. ಸುಖಕಾರಿಯಾದ ನಿನಗೆ ನಮಸ್ಕಾರವು ಎಂದು ಹೇಳಬೇಕು.

೮೧. ಎಲೈ ದೂತರಿರಾ ! ಈ ಮಂತ್ರದಿಂದ ಶಂಖವನ್ನು ಧರಿಸಬೇಕು. ಮೇಲೆ ಹೇಳಿದ ರೀತಿಯಾಗಿ ಮಂತ್ರಗಳನ್ನು ಹೇಳಿಕೊಂಡು ನಾಲ್ಕು ಆಯುಧಗಳನ್ನೂ ಧರಿಸಬೇಕು.

೮೨. ಸುಗಂಧಚಂದನವನ್ನೂ ಗೋಪಿಕಾಚಂದನವನ್ನೂ ಬ್ರಾಹ್ಮಣರಾದವರು ಧರಿಸಬೇಕು.

೮೩. ಊರ್ಧ್ವ ಪುಂಡ್ರವನ್ನೂ ಶಂಖ ಚಕ್ರಾದಿ ಚಿಹ್ನೆಗಳನ್ನೂ ಧರಿಸಿದರೆ ಚಾಂಡಾಲನಾದರೂ ಶುದ್ಧನಾಗುತ್ತಾನೆ. ಸಂಶಯವಿಲ್ಲ.

೮೪-೮೬ ಆ ರೀತಿಯಾಗಿ ಊರ್ಧ್ವ ಪುಂಡ್ರವನ್ನಿಟ್ಟುಕೊಳ್ಳುವವನು ಚಂಡಾಲನಾದರೂ ಕೂಡ ದ್ವಿಜರಿಗೆ ಪೂಜ್ಯನಾಗುತ್ತಾನೆ. ಚಂಡಾಲರ ಮನೆಯಲ್ಲಿ

ತತ್ರಸ್ಥಾ ತುಳಸೀ ಗ್ರಾಹ್ಯಾ ಭಕ್ತಿಭಾವೇನ ಚೇತಸಾ ।
ಇತಿ ಶ್ರುತಂ ಧರ್ಮಮುಖಾನ್ಮುದ್ಗಲೋ ದ್ವಿಜಸತ್ತಮಃ || ೮೫ ||

ಕಥಯಿತ್ವಾ ಮಮಾಗ್ರೇ ವೈ ಗತೋ ಯಾದೃಚ್ಛಿಕೋ ಮುನಿಃ || ೮೬ ||

|| ಮಹೇಶ್ವರ ಉವಾಚ ||

ಗೋಪಿಕಾಚಂದನಂ ಯತ್ರ ತಿಷ್ಠತೇ ವೈ ದ್ವಿಜೋತ್ತಮ ।
ತದ್ಗೃಹಂ ತೀರ್ಥರೂಪಂ ಚ ವಿಷ್ಣುನಾ ಭಾಷಿತಂ ಕಿಲ || ೮೭ ||

ಶೋಕಮೋಹೌ ನ ತತ್ರ ಸ್ತೋ ನ ಭವತ್ಯಶುಭಂ ಕ್ವಚಿತ್ ।
ಗೋಪಿಕಾಚಂದನಂ ಯಸ್ಯ ತಿಷ್ಠತೇ ದ್ವಿಜಸದ್ಮನೀ || ೮೮ ||

ಸುಖಿನಃ ಪೂರ್ವಜಾಜಾಸ್ತಸ್ಯ ಸಂತತಿರ್ವರ್ಧತೇ ಸದಾ ।
ಗೋಪಿಕಾಚಂದನಂ ಯಸ್ಯ ವರ್ತತೇಽಹರ್ನಿಶಂ ಗೃಹೇ || ೮೯ ||

ಗೋಪೀಪುಷ್ಕರಜಾ ಮೃತ್ಸ್ನಾ ಪವಿತ್ರಾ ಕಾಯಶೋಧಿನೀ ।
ಉದ್ವರ್ತನಾದ್ವಿನಶ್ಯಂತಿ ವ್ಯಾಧಯೋ ಹ್ಯಾದಯಶ್ಚ ಯೇ || ೯೦ ||

---

ತುಳಸಿಯು ಇದ್ದರೆ ಅದನ್ನು ಯಾರು ಬೇಕಾದರೂ ಭಕ್ತಿಯಿಂದ ಸ್ವೀಕರಿಸ ಬಹುದು. ಈ ರೀತಿಯಾಗಿ ಧರ್ಮರಾಜನು ಹೇಳಿದುದನ್ನು ಆ ಮುದ್ಗಲನು ನನಗೆ ಹೇಳಿ ತನ್ನ ಇಷ್ಟ ಬಂದ ಕಡೆಗೆ ಹೊರಟುಹೋದನು.

೮೭. ಮಹೇಶ್ವರನು ಹೇಳಿದನು– ಗೋಪಿಚಂಪನವು ಯಾರ ಮನೆಯಲ್ಲಿ ದೆಯೋ ಆ ಮನೆಯು ತೀರ್ಥರೂಪವಾದುದು. ಎಂದು ವಿಷ್ಣುವೇ ಹೇಳಿದ್ದಾನೆ.

೮೮–೯೦. ಆ ಗೋಪಿಚಂದನವಿರುವಲ್ಲಿ ದುಃಖ ಅಜ್ಞಾನಗಳಿರುವುದಿಲ್ಲ. ಮತ್ತು ಗೋಪಿಚಂದನವಿರುವ ಮನೆಯುವರು ಸುಖಿಗಳಾಗುವರು. ಮತ್ತು ಅವರ ಪೂರ್ವಿಕರೂ ಸುಖಿಗಳಾಗುವರು. ಅವನ ಸಂತತಿಯು ವೃದ್ಧಿಯಾಗುತ್ತದೆ. ಆದ್ದರಿಂದ ಗೋಪಿಚಂದನವನ್ನು ಯಾವಾಗಲೂ ಮನೆಯಲ್ಲಿಟ್ಟುಕೊಂಡಿರಬೇಕು. ಗೋಪಿಚಂದನವು ಪವಿತ್ರವಾದುದು. ದೇಹ ಶುದ್ಧಿಮಾಡುತ್ತದೆ. ಅದನ್ನು ಮೈಗೆ ಬಳಿದುಕೊಂಡರೆ ರೋಗಗಳೂ ಮನೋವ್ಯಥೆಗಳೂ ಹೋಗುತ್ತವೆ.

**ಅತೋ ದೇಹೇ ಧೃತಂ ಪುಂಭಿರ್ಮುಕ್ತಿದಂ ಸಾರ್ವಕಾಮಿಕಂ।**
**ತಾವದ್ಗರ್ಜಂತೀ ತೀರ್ಥಾನೀ ತಾವತ್ ಕ್ಷೇತ್ರಾಣಿ ಸರ್ವದಾ ॥೯೧॥**

**ಗೋಪಿಕಾಚಂದನಂ ಯಾವಾನ್ನ ದೃಷ್ಟಂ ಚ ಶ್ರುತಂ ದ್ವಿಜ ।**
**ಇದಂ ಧ್ಯೇಯಮಿದಂ ಪೂಜ್ಯಂ ಮಲದೋಷವಿನಾಶನಂ ॥ ೯೨ ॥**

**ಯಸ್ಯ ಸಂಸ್ಪರ್ಶನಾದೇವ ಪೂತೋ ಭವತಿ ಮಾನವಃ ।**
**ಅಂತಕಾಲೇ ತು ಮರ್ತ್ಯಾನಾಂ ಮುಕ್ತಿದಂ ಪಾವನಂ ಪರಂ ॥ ೯೩ ॥**

**ಕಿಂ ವದಾಮಿ ದ್ವಿಜಶ್ರೇಷ್ಠ ಮುಕ್ತಿದಂ ಗೋಪಿಚಂದನಂ ।**
**ವಿಷ್ಣೋಸ್ತು ತುಲಸೀಕಾಷ್ಠಂ ತಥಾ ವೈ ಮೂಲಮೃತ್ತಿಕಾ ॥ ೯೪ ॥**

**ಗೋಪಿಕಾಚಂದನಂ ಚೈವ ತಥಾ ವೈ ಹರಿಚಂದನಂ ।**
**ಚತ್ವಾರ್ಯೇತಾನಿ ಸಮ್ಮೇಲ್ಯ ಅಂಗಮುದ್ವರ್ತಯೇತ್ಸುಧೀಃ ॥ ೯೫ ॥**

---

೯೧. ಆದ್ದರಿಂದ ದೇಹದಲ್ಲಿ ಈ ಗೋಪಿಚಂದನವಿದ್ದರೆ ಮುಕ್ತಿಯನ್ನೂ ಇಷ್ಟಾರ್ಥಗಳನ್ನೂ ಕೊಡುತ್ತದೆ. ಗೋಪಿಚಂದನವು ಕಣ್ಣಿಗೆ ಬೀಳುವವರೆಗೂ ತೀರ್ಥಗಳೂ ಕ್ಷೇತ್ರಗಳೂ ನಾನು ಹೆಚ್ಚು ತಾನು ಹೆಚ್ಚೆಂದೆನ್ನುತ್ತಿರುವುವು.

೯೨–೯೩. ಆದ್ದರಿಂದ ಈ ಗೋಪಿಚಂದನವನ್ನು ಯಾವಾಗಲೂ ಸ್ಮರಿಸಬೇಕು. ಪೂಜಿಸಬೇಕು. ಇದು ಕೊಳೆಯನ್ನು ನಾಶಮಾಡುತ್ತದೆ. ಅದನ್ನು ಮುಟ್ಟಿದರೇನೇ ಮನುಷ್ಯನು ಪವಿತ್ರನಾಗುತ್ತಾನೆ. ಸಾಯುವ ಕಾಲದಲ್ಲಂತೂ ಜನರಿಗೆ ಪವಿತ್ರವಾದುದು. ಮುಕ್ತಿಯನ್ನು ಕೊಡುತ್ತದೆ.

೯೪–೯೫. ಎಲೈ ಬ್ರಾಹ್ಮಣನೇ ! ಗೋಪಿಚಂದನವು ಮುಕ್ತಿಯನ್ನು ಕೊಡುತ್ತದೆಂಬುದನ್ನು ಹೇಳಬೇಕಾದುದಿಲ್ಲ. ತುಳಸಿಯ ಕಡ್ಡಿಯ ಗಂಧ ತುಳಸಿಯ ಬುಡದ ಮಣ್ಣು ಗೋಪಿಚಂದನ ಶ್ರೀಗಂಧ ಈ ನಾಲ್ಕನ್ನು ಸೇರಿಸಿ ದೇವರ ಮೈಗೆ ಬಳಿಯಬೇಕು. ತಾನೂ ಬಳಿದುಕೊಳ್ಳಬೇಕು.

**ತೇನ ತೀರ್ಥಂ ಕೃತಂ ಸರ್ವಂ ಜಂಬೂದ್ವೀಪೇಷು ಸರ್ವದಾ ।**
**ತಿಲಕಂ ಕುರುತೇ ಯಸ್ತು ಗೋಪಿಕಾಚಂದನದ್ರವ್ಯೈಃ　　|| ೯೬ ||**

**ಸರ್ವಪಾಪವಿನಿರ್ಮುಕ್ತೋ ಯಾತಿ ವಿಷ್ಣೋಃ ಪರಂ ಪದಂ ।**
**ಪಿತುಶ್ಶ್ರಾದ್ಧಾದಿಕಂ ತೇನ ಗಯಾಂ ಗತ್ವಾ ತು ವೈ ಕೃತಂ　　|| ೯೭ ||**

**ಯೇನ ವಾ ಪುರುಷೇಣಾಪಿ ವಿಧೃತಂ ಗೋಪಿಚಂದನಂ ।**
**ಮದ್ಯಪೋ ಬ್ರಹ್ಮಹಾ ಚೈವ ಗೋಘ್ನೋ ವಾ ಬಾಲಹಾ ತಥಾ ।**
**ಮುಚ್ಯತೇ ತತ್ ಕ್ಷಣಾದೇವ ಗೋಪೀಚಂದನಧಾರಣಾತ್　　|| ೯೮ ||**

**ಇತಿ ಶ್ರೀ ಮಹಾಪುರಾಣೇ ಪಾದ್ಮೇ ಉತ್ತರಖಂಡೇ ಉಮಾಪತಿ ನಾರದ ಸಂವಾದೇ ಯಮಾರಾಧನ ಗೋಪೀಚಂದನ ಮಾಹಾತ್ಮ್ಯಂ ನಾಮ ಅಷ್ಟಷಷ್ಟಿತಮೋಽಧ್ಯಾಯಸ್ಸಮಾಪ್ತಃ**

---

೯೬–೯೮. ಹಾಗೆ ವೈಗೆ ಆ ನಾಲ್ಕನ್ನು ಬಳಿದುಕೊಂಡರೆ ಅವನು ಜಂಬೂ ದ್ವೀಪದಲ್ಲಿರುವ ಎಲ್ಲಾ ತೀರ್ಥಗಳಲ್ಲಿಯೂ ಸ್ನಾನ ಮಾಡಿದಂತಾಗುತ್ತದೆ. ಗೋಪಿ ಚಂದನದಿಂದ ಯಾವನು ತಿಲಕವನ್ನು ಇಟ್ಟುಕೊಳ್ಳುತ್ತಾನೆಯೋ ಅವನು ತನ್ನ ಪಾಪಗಳೆಲ್ಲವನ್ನೂ ಕಳೆದುಕೊಂಡು ವೈಕುಂಠವನ್ನು ಹೊಂದುತ್ತಾನೆ. ಯಾವನು ಗೋಪಿಚಂದನವನ್ನು ಇಟ್ಟುಕೊಳ್ಳುತ್ತಾನೆಯೋ ಅವನು ಗಯೆಯಲ್ಲಿ ಪಿತೃಶ್ರಾದ್ಧ ವನ್ನು ಮಾಡಿದ ಪುಣ್ಯವನ್ನು ಹೊಂದುತ್ತಾನೆ. ಗೋಪಿಚಂದನವನ್ನು ಇಟ್ಟು ಕೊಂಡರೆ ಹೆಂಡಕುಡಿದವನೂ ಬ್ರಹ್ಮಹತ್ಯೆಯವನೂ ಗೋಹತ್ಯೆಯವನೂ ಬಾಲಹತ್ಯೆಯವನೂ ಇವರು ಒಡನೆಯೇ ತಮ್ಮ ತಮ್ಮ ಪಾಪಗಳನ್ನು ಕಳೆದು ಕೊಳ್ಳುತ್ತಾರೆ.

ಇಂತು ಶ್ರೀ ಪದ್ಮಮಹಾಪುರಾಣದ ಉತ್ತರಖಂಡದ ಉಮಾಪತಿ ನಾರದರ ಸಂವಾದದಲ್ಲಿ ಯಮಾರಾಧನ, ಗೋಪೀಚಂದನ ಮಹಿಮೆ ಎಂಬ ಅರವತ್ತೆಂಟನೆಯ ಅಧ್ಯಾಯವು ಮುಗಿದುದು.



॥ ಶ್ರೀಃ ॥

-x-

# ಅಥ ಶ್ರೀ ಮಹಾಪುರಾಣೇ ಪಾದ್ಮೇ ಉತ್ತರಖಂಡೇ

## ॥ ಊನಸಪ್ತತಿತಮೋಽಧ್ಯಾಯಃ ॥



॥ ಮಹೇಶ್ವರ ಉವಾಚ ॥

ಶೃಣು ನಾರದ ವಕ್ಷ್ಯಾಮಿ ವೈಷ್ಣವಾನಾಂ ಚ ಲಕ್ಷಣಂ ।
ಯಚ್ಛ್ರುತ್ವಾ ಮುಚ್ಯತೇ ಲೋಕೋ ಬ್ರಹ್ಮಹತ್ಯಾದಿಪಾತಕಾತ್ ॥ ೧ ॥

ತೇಷಾಂ ವೈ ಲಕ್ಷಣಂ ಯಾದೃಕ್ ಸ್ವರೂಪಂ ಯಾದೃಶಂ ಭವೇತ್ ।
ತಾದೃಶಂ ಮುನಿಶಾರ್ದೂಲ ಶೃಣು ತ್ವಂ ವಚ್ಮಿ ಸಾಂಪ್ರತಂ ॥ ೨ ॥

ವಿಷ್ಣೋರಯಂ ಯತೋ ಹ್ಯಾಸೀತ್ತಸ್ಮಾದ್ವೈಷ್ಣವ ಉಚ್ಯತೇ ।
ಸರ್ವೇಷಾಂ ಚೈವ ವರ್ಣಾನಾಂ ವೈಷ್ಣವಃ ಶ್ರೇಷ್ಠ ಉಚ್ಯತೇ ॥ ೩ ॥

---

## ಅರವತ್ತೊಂಭತ್ತನೆಯ ಅಧ್ಯಾಯವು



೧. ಮಹೇಶ್ವರನು ಹೇಳಿದನು–ಎಲೈ ನಾರದನೆ! ವೈಷ್ಣವರ ಲಕ್ಷಣಗಳನ್ನು ಹೇಳುತ್ತೇನೆ. ಕೇಳು. ಅದನ್ನು ಕೇಳಿದರೇನೆ ಜನಗಳು ಬ್ರಹ್ಮಹತ್ಯಾದಿ ಪಾಪಗಳನ್ನು ಕಳೆದುಕೊಳ್ಳುತ್ತಾರೆ.

೨. ಆ ವೈಷ್ಣವರ ಲಕ್ಷಣಗಳೇನು ? ಅವರ ಸ್ವರೂಪ ಹೇಗಿರುವುದು ? ಎಂಬುದನ್ನು ಸರಿಯಾಗಿ ಹೇಳುತ್ತೇನೆ. ಕೇಳು.

೩. ಇವನು ವಿಷ್ಣುವಿನ ಸಂಬಂಧದವನಾದುದರಿಂದ ವೈಷ್ಣವನೆಂದು ಹೆಸರನ್ನು ಪಡೆದಿರುತ್ತಾನೆ. ಎಲ್ಲಾ ವರ್ಣಗಳಿಗಿಂತಲೂ ವೈಷ್ಣವನು ಶ್ರೇಷ್ಠನು.

**ಯೇಷಾಂ ಪುಣ್ಯತಮಾಹಾರಾಸ್ತೇಷಾಂ ವಂಶೇ ತು ವೈಷ್ಣವಃ ।**
**ಕ್ಷಮಾ ದಯಾ ತಪಸ್ಸತ್ಯಂ ಯೇಷಾಂ ವೈ ತಿಷ್ಠತಿ ದ್ವಿಜ ॥ ೪ ॥**

**ತೇಷಾಂ ದರ್ಶಮಾತ್ರೇಣ ಪಾಪಂ ನಶ್ಯತಿ ತೂಲವತ್ ।**
**ಹಿಂಸಾಧರ್ಮಾದ್ವಿನಿರ್ಮುಕ್ತೋ ಯಸ್ಯ ವಿಷ್ಣೌ ಸ್ಥಿತಾ ಮತಿಃ ॥ ೫ ॥**

**ಶಂಖಂ ಚಕ್ರಂ ಗದಾಂ ಪದ್ಮಂ ನಿತ್ಯಂ ವೈ ಧಾರಯೇತ್ತು ಯಃ ।**
**ತುಲಸೀಕಾಷ್ಠಜಾಂ ಮಾಲಾಂ ಕಂಠೇ ವೈ ಧಾರಯೇತ್ತು ಯಃ ॥ ೬ ॥**

**ತಿಲಕಾನ್ದ್ವಾದಶಾನೇವ ನಿತ್ಯಂ ವೈ ಧಾರಯೇದ್ಬುಧಃ ।**
**ಧರ್ಮಾಧರ್ಮಂ ತು ಜಾನಾತಿ ಸ ಚ ವೈಷ್ಣವ ಉಚ್ಯತೇ ॥ ೭ ॥**

**ವೇದಶಾಸ್ತ್ರರತೋ ನಿತ್ಯಂ ನಿತ್ಯಂ ವೈ ಯಜ್ಞಯಾಜಕಃ ।**
**ಉತ್ಸವಾಂಶ್ಚ ಚತುರ್ವಿಂಶತ್ಕುರ್ವಂತಿ ಚ ಪುನಃ ಪುನಃ ॥ ೮ ॥**

---

೪. ಯಾರು ಸಾತ್ವಿಕವಾದ ಉತ್ತಮ ಆಹಾರಗಳನ್ನು ತಿನ್ನುತ್ತಾರೆಯೋ ಅವರ ವಂಶದಲ್ಲಿ ವೈಷ್ಣವರು ಹುಟ್ಟುತ್ತಾರೆ. ಕ್ಷಮೆ, ದಯೆ, ತಪಸ್ಸು, ಸತ್ಯ, ಇವು ಆ ವೈಷ್ಣವರಲ್ಲಿ ಇರುತ್ತವೆ.

೫. ಆ ವೈಷ್ಣವರನ್ನು ನೋಡಿದೊಡನೆಯೇ ಪಾಪಗಳು ಬೆಂಕಿಯ ಮುಂದೆ ಹತ್ತಿಯು ನಾಶವಾಗುವಂತೆ ನಾಶವಾಗುತ್ತದೆ. ಆ ವೈಷ್ಣವನು ಹಿಂಸೆ ಅಧರ್ಮಗಳನ್ನು ಬಿಟ್ಟಿರುತ್ತಾನೆ.

೬. ಆ ವೈಷ್ಣವನು ಶಂಖ, ಚಕ್ರ, ಗದೆ, ಪದ್ಮಗಳನ್ನು ಯಾವಾಗಲೂ ಧರಿಸಿರುವನು. ಕತ್ತಿನಲ್ಲಿ ಯಾವಾಗಲೂ ತುಳಸೀಮಾಲೆಯನ್ನು ಹಾಕಿಕೊಂಡಿರುವನು.

೭. ಯಾವಾಗಲೂ ದ್ವಾದಶ (ಹನ್ನೆರಡು) ಪುಂಡ್ರಗಳನ್ನು ಧರಿಸಿರುತ್ತಾನೆ. ಇದು ಧರ್ಮವೆಂದೂ ಇದು ಅಧರ್ಮವೆಂದೂ ಚೆನ್ನಾಗಿ ತಿಳಿದುಕೊಂಡಿರುತ್ತಾನೆ.

೮. ಯಾವಾಗಲೂ ವೇದಗಳಲ್ಲಿಯೂ ಶಾಸ್ತ್ರಗಳಲ್ಲಿಯೂ ಆಸಕ್ತನಾಗಿದ್ದು ಅಧ್ಯಯನ ಮಾಡುತ್ತಿರುವನು. ಯಜ್ಞಗಳನ್ನು ಮಾಡುತ್ತಿರುವನು. ಇಪ್ಪತ್ತನಾಲ್ಕು ಬಗೆಗಳಾದ ಉತ್ಸವಗಳನ್ನೂ ಯಾವಾಗಲೂ ಮತ್ತೆ ಮತ್ತೆ ಮಾಡುತ್ತಿರುವನು.

ತೇಷಾಂ ಕುಲಂ ಧನ್ಯತಮಂ ತೇಷಾಂ ವೈ ಯಶ ಉಚ್ಯತೇ ।
ತೇ ವೈ ಲೋಕೇ ಧನ್ಯತಮಾ ಜಾತಾ ಭಾಗವತಾ ನರಾಃ ॥ ೯ ॥

ಏಕ ಏವ ಕುಲೇ ಯಸ್ಯ ಜಾತೋ ಭಾಗವತೋ ನರಃ ।
ತತ್ಕುಲಂ ತಾರಿತಂ ತೇನ ಭೂಯೋ ಭೂಯಶ್ಚ ಬಾಡವ ॥ ೧೦ ॥

ಅಂಡಜಾ ಉದ್ಭಿಜಾಶ್ಚೈವ ಯೇ ಜರಾಯುಜಯೋನಯಃ ।
ತೇ ತು ಸರ್ವೇಽಪಿ ವಿಜ್ಞೇಯಾಃ ಶಂಖಚಕ್ರಗದಾಧರಾಃ ॥ ೧೧ ॥

ಯೇಷಾಂ ದರ್ಶನಮಾತ್ರೇಣ ಬ್ರಹ್ಮಹಾ ಶುದ್ಧ್ಯತೇ ಸದಾ ।
ಕಿಂ ತು ವಕ್ಷ್ಯಾಮಿ ದೇವರ್ಷೇ ತೇಭ್ಯೋ ಧನ್ಯತಮಾಸ್ತ್ವಪಿ ॥ ೧೨ ॥

ವೈಷ್ಣವಾ ಯೇ ತು ದೃಶ್ಯಂತೇ ಭುವನೇಽಸ್ಮಿನ್ಮಹಾಮುನೇ ।
ತೇ ವೈ ವಿಷ್ಣುಸಮಾಶ್ಚೈವ ಜ್ಞಾತವ್ಯಾಸ್ತತ್ತ್ವಕೋವಿದೈಃ ॥ ೧೩ ॥

---

೯. ಇಂತಹ ಭಗವದ್ಭಕ್ತರು ಯಾರ ಕುಲದಲ್ಲಿ ಹುಟ್ಟಿರುತ್ತಾರೋ ಅವರ ವಂಶವೇ ಧನ್ಯವಾದುದು. ಅವರೇ ಯಶಸ್ವಿಗಳು. ವೈಷ್ಣವರೇ ಲೋಕದಲ್ಲಿ ಅತ್ಯಂತ ಧನ್ಯರು.

೧೦. ಒಂದು ಕುಲದಲ್ಲಿ ಒಬ್ಬ ವೈಷ್ಣವನು ಹುಟ್ಟಿದರೂ ಆ ಕುಲವನ್ನೆಲ್ಲ ವನ್ನೂ ಅವನು ಉದ್ಧಾರಮಾಡುತ್ತಾನೆ.

೧೧. ಆ ವೈಷ್ಣವನ ವಂಶದಲ್ಲಿ ಹುಟ್ಟಿದ ಮೊಟ್ಟೆಯಿಂದ ಹುಟ್ಟುವ ಹಾವು, ಹಲ್ಲಿ, ಪಕ್ಷಿ, ಮುಂತಾದುವೂ ಕಾಳು ಕಡ್ಡಿಗಳಾಗಿ ಹುಟ್ಟುವವರೂ ಮನುಷ್ಯ, ಹಸು, ಮುಂತಾದ ಪ್ರಾಣಿಗಳಾಗಿ ಹುಟ್ಟುವವರೂ ಎಲ್ಲರೂ ಶಂಖ, ಚಕ್ರ, ಗದೆ, ಪದ್ಮಗಳನ್ನು ಧರಿಸಿ ವೈಷ್ಣವರಾಗಿ ಉದ್ಧಾರವಾಗುತ್ತಾರೆ.

೧೨. ಅಂತಹ ಶಂಖ, ಚಕ್ರ, ಗದೆ, ಪದ್ಮಗಳನ್ನು ಧರಿಸಿದವರನ್ನು ನೋಡಿದೊಡನೆಯೇ ಬ್ರಹ್ಮಹತ್ಯೆ ಮಾಡಿದವನೂ ಶುದ್ಧನಾಗುತ್ತಾನೆ. ಎಲೈ ನಾರದನೇ ! ಅವರಿಗಿಂತಲೂ ಉತ್ತಮರಾದವರನ್ನು ಹೇಳುತ್ತೇನೆ. ಕೇಳು.

೧೩. ಎಲೈ ನಾರದನೇ ! ಈ ಲೋಕದಲ್ಲಿ ವೈಷ್ಣವರಾಗಿ ಯಾರು ಇದ್ದಾರೆಯೋ ಅವರೆಲ್ಲರೂ ವಿಷ್ಣುವಿಗೆ ಸಮರೆಂದೇ ಜ್ಞಾನಿಗಳು ತಿಳಿದುಕೊಳ್ಳ ಬೇಕು.

ಕಲೌ ಧನ್ಯತಮಾ ಲೋಕೇ ಶ್ರುತಾ ಮೇ ನಾತ್ರ ಸಂಶಯಃ ।
ವಿಷ್ಣೋಃ ಪೂಜಾ ಕೃತಾ ತೇನ ಸರ್ವೇಷಾಂ ಪೂಜನಂ ಕೃತಂ　|| ೧೪ ||

ಮಹಾದಾನಂ ಕೃತಂ ತೇನ ಪೂಜಿತಾ ಯೇನ ವೈಷ್ಣವಾಃ ।
ಫಲಂ ಪತ್ರಂ ತಥಾ ಶಾಕಮನ್ನಂ ವಾ ವಸ್ತ್ರಮೇವ ಚ　|| ೧೫ ||

ವೈಷ್ಣವೇಭ್ಯಃ ಪ್ರಯಚ್ಛಂತಿ ತೇ ಧನ್ಯಾ ಭುವಿ ಸರ್ವದಾ ।
ಅರ್ಚಿತೋ ವೈ ಹರಿರ್ಯೈಸ್ತು ಸರ್ವೇಷಾಂ ಚೈವ ಪೂಜನಂ　|| ೧೬ ||

ಕೃತಂ ಯೈರರ್ಚಿತೋ ವಿಷ್ಣುಸ್ತೇ ವೈ ಧನ್ಯತಮಾ ಮತಾಃ ।
ತೇಷಾಂ ದರ್ಶನಮಾತ್ರೇಣ ಶುದ್ಧ್ಯಂತೇ ಪಾಪಕಾ ನರಾಃ　|| ೧೭ ||

ಕಿಮನ್ಯದ್ಬಹುನೋಕ್ತೇನ ಭೂಯೋ ಭೂಯಶ್ಚ ಬಾಡವ ।
ಅತೋ ವೈ ದರ್ಶನಂ ತೇಷಾಂ ಸ್ಪರ್ಶನಂ ಸುಖದಾಯಕಂ　|| ೧೮ ||

---

೧೪. ಕಲಿಯುಗದಲ್ಲಿ ಅವರೇ ಧನ್ಯರು. ಎಂದು ನಾನು ಕೇಳಿದ್ದೇನೆ. ಯಾವನು ವಿಷ್ಣುವನ್ನು ಪೂಜಿಸಿರುವನೋ ಅವನು ಎಲ್ಲರನ್ನೂ ಪೂಜಿಸಿದಂತಾಗುತ್ತಾನೆ.

೧೫. ವಿಷ್ಣುವನ್ನು ಪೂಜಿಸಿದರೆ ಅವರು ಮಹಾದಾನಗಳನ್ನು ಮಾಡಿದಂತಾಗುವುದು. ಹಣ್ಣು, ಎಲೆ, ಕಾಯಿಪಲ್ಯ, ಅನ್ನ, ಬಟ್ಟೆಗಳನ್ನು ಯಾರು ಅಂಥಹ ವಿಷ್ಣುಭಕ್ತರಿಗೆ ಕೊಡುತ್ತಾರೆಯೋ ಅವರೇ ಲೋಕದಲ್ಲಿ ಧನ್ಯರು.

೧೬–೧೭. ಯಾರು ಹರಿಯನ್ನು ಪೂಜಿಸುವರೋ ಅವರು ಎಲ್ಲಾ ದೇವರನ್ನೂ ಎಲ್ಲಾ ಜನರನ್ನೂ ಪೂಜಿಸಿದಂತಾಗುವುದು. ಯಾರು ವಿಷ್ಣುವನ್ನು ಪೂಜಿಸುವರೋ ಅವರೇ ಧನ್ಯರು. ಅವರನ್ನು ನೋಡಿದರೇನೇ ಪಾಪಿಗಳು ಶುದ್ಧರಾಗುತ್ತಾರೆ.

೧೮. ಬಾರಿಬಾರಿಗೂ ಬಹಳವಾಗಿ ಹೇಳಿದುದರಿಂದ ಪ್ರಯೋಜನವೇನು? ಆ ವೈಷ್ಣವರನ್ನು ನೋಡುವುದೂ ಅವರನ್ನು ಮುಟ್ಟುವುದೂ ಸುಖವನ್ನು ಕೊಡುತ್ತದೆ.

ಯಥಾ ವಿಷ್ಣುಸ್ತಥಾ ಚಾಯಂ ನಾನ್ತರಂ ವರ್ತತೇ ಕ್ವಚಿತ್ ।
ಇತಿ ಜ್ಞಾತ್ವಾ ತು ಭೋ ವತ್ಸ ಸರ್ವದಾ ಪೂಜಯೇದ್ಬುಧಃ ॥ ೧೯ ॥

ಏಕ ಏವ ತು ಯೈರ್ವಿಪ್ರೋ ವೈಷ್ಣವೋ ಭುವಿ ಭೋಜ್ಯತೇ ।
ಸಹಸ್ರಂ ಭೋಜಿತಂ ತೇನ ದ್ವಿಜಾನಾಂ ನಾತ್ರ ಸಂಶಯಃ ॥ ೨೦ ॥

ಇತಿ ಶ್ರೀ ಮಹಾಪುರಾಣೇ ಪಾದ್ಮೇ ಉತ್ತರಖಂಡೇ ಉಮಾಪತಿ
ನಾರದ ಸಂವಾದೇ ವೈಷ್ಣವ ಮಾಹಾತ್ಮ್ಯಂ ನಾಮ
ಊನಷಷ್ಟಿತಮೋಽಧ್ಯಾಯಸ್ಸಮಾಪ್ತಃ

---

೧೯. ಎಲೈ ನಾರದನೇ ! ವಿಷ್ಣುವು ಹೇಗೆ ವಿಷ್ಣುಭಕ್ತನೋ ಹಾಗೆಯೇ ಇಬ್ಬರಿಗೂ ವ್ಯತ್ಯಾಸವೇ ಇಲ್ಲವು. ಇದನ್ನು ತಿಳಿದುಕೊಂಡು ಯಾವಾಗಲೂ ವೈಷ್ಣವರನ್ನು ಪೂಜಿಸಬೇಕು.

೨೦. ಪ್ರಪಂಚದಲ್ಲಿ ಒಬ್ಬ ವೈಷ್ಣವನಿಗೆ ಭೋಜನಮಾಡಿಸಿದರೂ ಸಾವಿರ ಜನರಿಗೆ ಸಂತರ್ಪಣೆ ಮಾಡಿಸಿದಂತಾಗುತ್ತದೆ. ಇದರಲ್ಲಿ ಸಂಶಯವಿಲ್ಲ.

ಇಂತು ಶ್ರೀ ಪದ್ಮಮಹಾಪುರಾಣದ ಉತ್ತರಖಂಡದ ಉಮಾಪತಿ
ನಾರದರ ಸಂವಾದದಲ್ಲಿ ವೈಷ್ಣವ ಮಹಿಮೆ ಎಂಬ
ಅರವತ್ತೊಂಭತ್ತನೆಯ ಅಧ್ಯಾಯವು ಮುಗಿದುದು.



|| ಶ್ರೀಃ ||

-X-

## ಅಥ ಶ್ರೀ ಮಹಾಪುರಾಣೇ ಪಾದ್ಮೇ ಉತ್ತರಖಂಡೇ

## || ಸಪ್ತತಿತಮೋಽಧ್ಯಾಯಃ ||



|| ನಾರದ ಉವಾಚ ||

**ಉಪವಾಸಾಸಮರ್ಥಾನಾಂ ಸರ್ವದಾ ಸುರಸತ್ತಮ |**
**ಏಕಾ ಯಾ ದ್ವಾದಶೀ ಪುಣ್ಯಾ ತಾಂ ವದಸ್ವ ಮಮಾನಘ || ೧ ||**

|| ಶಿವ ಉವಾಚ ||

**ಮಾಸಿ ಭಾದ್ರಪದೇ ಶುಕ್ಲೇ ದ್ವಾದಶೀ ಶ್ರವಣಾನ್ವಿತಾ |**
**ಸಾ ವೈ ಸರ್ವಪ್ರದಾ ಪುಣ್ಯಾ ಹ್ಯುಪವಾಸೇ ಮಹಾಫಲಂ || ೨ ||**

**ಸಂಗಮೇ ಸರಿತಾಂ ಸ್ನಾತ್ವಾ ದ್ವಾದಶೀಂ ತಾಮುಪೋಷಿತಃ |**
**ಅಯತ್ನಾತ್ಸಮವಾಪ್ನೋತಿ ದ್ವಾದಶದ್ವಾದಶೀಫಲಂ || ೩ ||**

---

## ಎಪ್ಪತ್ತನೆಯ ಅಧ್ಯಾಯವು



೧. ನಾರದನು ಹೇಳಿದನು–ಎಲೈ ದೇವನೇ ! ಉಪವಾಸ ಮಾಡಲು ಶಕ್ತಿಯಿಲ್ಲದವರಿಗೆ ಯಾವುದಾದರೂ ಒಂದು ಪುಣ್ಯಪ್ರದವಾದ ದ್ವಾದಶಿಯನ್ನು ಹೇಳು.

೨. ಶಿವನು ಹೇಳಿದನು–ಭಾದ್ರಪದ ಮಾಸದ ಶುದ್ಧ ದ್ವಾದಶಿಯು ಶ್ರವಣ ನಕ್ಷತ್ರದಿಂದ ಕೂಡಿದ್ದರೆ ಅದು ಪುಣ್ಯಪ್ರದವಾದುದು. ಸಮಸ್ತ ಇಷ್ಟಗಳನ್ನೂ ಕೊಡುತ್ತದೆ. ಅದರಲ್ಲಿ ಉಪವಾಸ ಮಾಡಿದರೆ ಬಹು ಫಲವುಂಟು.

೩. ನದಿಯ ಸಂಗಮದಲ್ಲಿ ಸ್ನಾನ ಮಾಡಿ ಆ ದ್ವಾದಶಿಯದಿನ ಉಪವಾಸ ಮಾಡಿದರೆ ಪ್ರಯತ್ನವಿಲ್ಲದೆ ಹನ್ನೆರಡು ದ್ವಾದಶಿಗಳ ಫಲವನ್ನು ಹೊಂದುತ್ತಾನೆ.

ಬುಧಶ್ರವಣಸಂಯುಕ್ತಾ ಯಾ ಚ ವೈ ದ್ವಾದಶೀ ಭವೇತ್ ।
ಅತೀವ ಮಹತೀ ತಸ್ಯಾಂ ಕೃತಂ ಸರ್ವಮಥಾಕ್ಷಯಂ ॥ ೪ ॥

ದ್ವಾದಶೀ ಶ್ರವಣೋಪೇತಾ ಯದಾ ಭವತಿ ನಾರದ ।
ಸಂಗಮೇ ಸರಿತಾಂ ಸ್ನಾತ್ವಾ ಲಭೇದ್ಗೋದಾನಜಂ ಫಲಂ ॥ ೫ ॥

ಜಲಪೂರ್ಣಂ ತದಾ ಕುಭಂ ಸ್ಥಾಪಯಿತ್ವಾ ವಿಚಕ್ಷಣಃ ।
ತಸ್ಯೋಪರಿ ನ್ಯಸೇತ್ಪಾತ್ರಂ ಸ್ಥಾಪಯಿತ್ವಾ ಜನಾರ್ದನಂ ॥ ೬ ॥

ತತಸ್ತಸ್ಯಾಗ್ರತೋ ದೇಯಂ ನೈವೇದ್ಯಂ ಘೃತಪಾಚಿತಂ ।
ಸೋದಕಾಂಶ್ಚ ನವಾನ್ಕುಂಭಾನ್ದದ್ಯಾಚ್ಛಕ್ತ್ಯಾ ವಿಚಕ್ಷಣಃ ॥ ೭ ॥

ಏವಂ ಸಂಪೂಜ್ಯ ಗೋವಿಂದಂ ಜಾಗರಂ ತತ್ರ ಕಾರಯೇತ್ ।
ಪ್ರಭಾತೇ ವಿಮಲೇ ಸ್ನಾತ್ವಾ ಸಂಪೂಜ್ಯ ಗರುಡಧ್ವಜಂ ॥ ೮ ॥

---

೪. ಬುಧವಾರ ಶ್ರವಣನಕ್ಷತ್ರ ದ್ವಾದಶಿ ಈ ರೀತಿ ಕೂಡಿ ಬಂದರೆ ಅದು ಬಹುವಾದ ಪುಣ್ಯವನ್ನು ಕೊಡತಕ್ಕದ್ದು. ಅದರಲ್ಲಿ ಮಾಡಿದುದು ಅಕ್ಷಯವಾಗುತ್ತದೆ.

೫. ಯಾವ ದ್ವಾದಶಿಯಾದರೂ ಶ್ರವಣ ನಕ್ಷತ್ರದಿಂದ ಕೂಡಿದ್ದರೆ ಆದಿನ ಸಂಗಮದಲ್ಲಿ ಸ್ನಾನಮಾಡಿದರೆ ಗೋದಾನಮಾಡಿದ ಫಲವು ಬರುತ್ತದೆ.

೬. ಆಗ ನೀರಿನಿಂದ ತುಂಬಿದ ಒಂದು ಕಲಶವನ್ನು ಇಡಬೇಕು. ಅದರ ಮೇಲೆ ಒಂದು ಸಣ್ಣ ಪಾತ್ರೆಯನ್ನು ಇಡಬೇಕು. ಅದರಮೇಲೆ ವಿಷ್ಣುವಿನ ಪ್ರತಿಮೆಯನ್ನು ಇಡಬೇಕು.

೭. ದೊಡ್ಡ ಕಲಶದ ಮುಂದೆ ಒಂಬತ್ತು ಕಲಶಗಳನ್ನು ಇಡಬೇಕು. ಅವಕ್ಕೆ ಪೂಜಿಸಿ ತುಪ್ಪದಿಂದ ಮಾಡಿದ ಭಕ್ಷ್ಯಗಳನ್ನು ನಿವೇದನ ಮಾಡಬೇಕು. ಶಕ್ತಿಯಿದ್ದರೆ ಇನ್ನೂ ಹೆಚ್ಚಾಗಿ ಕಲಶಗಳನ್ನಿಟ್ಟುಕೊಳ್ಳಬಹುದು.

೮–೯. ಈ ರೀತಿಯಾಗಿಟ್ಟು ವಿಷ್ಣುವನ್ನು ಶಾಸ್ತ್ರರೀತಿಯಿಂದ ಪೂಜಿಸಿ ಅದರ ಎದುರಿಗೆ ಜಾಗರಣೆ ಮಾಡಬೇಕು. ಬೆಳಗಾಗುತ್ತಲೂ ಸ್ನಾನ ಮಾಡಿ

ಪುಷ್ಪದೀಪಾದಿನೈವೇದ್ಯೈಃ ಫಲೈರ್ವಸ್ತ್ರೈಸ್ಸುಶೋಭನೈಃ ।
ಪುಷ್ಪಾಂಜಲಿಂ ತತೋ ದದ್ಯಾನ್ಮಂತ್ರಮೇತಮುದೀರಯೇತ್ ॥ ೯ ॥

ನಮೋ ನಮಸ್ತೇ ಗೋವಿಂದ ಬುಧಶ್ರವಣಸಂಯುತ ।
ಅಘೌಘಸಂಕ್ಷಯಂ ಕೃತ್ವಾ ಸರ್ವಸೌಖ್ಯಪ್ರದೋ ಭವ ॥ ೧೦ ॥

ಅನ್ನಂ ತು ಬ್ರಾಹ್ಮಣೇ ಪೂತಂ ವೇದವೇದಾಂತಪಾರಗೇ ।
ಪುರಾಣಜ್ಞೇ ವಿಶೇಷೇಣ ವಿಧಿವತ್ಸಂಪ್ರದಾಪಯೇತ್ ॥ ೧೧ ॥

ಅನೇನ ವಿಧಿನಾ ಚೈವ ನದ್ಯಾಸ್ತೀರೇ ನರೋತ್ತಮಃ ।
ಸರ್ವಂ ನಿರ್ವರ್ತಯೇತ್ಸಮ್ಯಗೇಕಚಿತ್ತರತೋಽಪಿ ಸः ॥ ೧೨ ॥

ಅತ್ರಾಪ್ಯುದಾಹರಂತೀಮಮಿತಿಹಾಸಂ ಪುರಾತನಂ ।
ಮಹತ್ಯರಣ್ಯೇ ಯದ್ವೃತ್ತಂ ಭೂಮಿದೇವ ಶೃಣುಷ್ವ ತತ್ ॥ ೧೩ ॥

---

ವಿಷ್ಣುವನ್ನು ಪೂಜಿಸಿ ಹೂವು, ಧೂಪ, ದೀಪ, ನೈವೇದ್ಯ, ಹಣ್ಣು ಮುಂತಾದುವುಗಳನ್ನು ಸಮರ್ಪಿಸಿ ಅನಂತರ ಪುಷ್ಪಾಂಜಲಿಯನ್ನರ್ಪಿಸಬೇಕು. ಆಗ ಈ ಮಂತ್ರವನ್ನು ಹೇಳಬೇಕು.

೧೦. ಬುಧವಾರ ಶ್ರವಣನಕ್ಷತ್ರದಿಂದ ಕೂಡಿರುವ ಎಲೈ ಗೋವಿಂದನೇ ! ನಿನಗೆ ನಮಸ್ಕಾರವು. ನನ್ನ ಪಾಪಗಳನ್ನು ನಾಶಮಾಡಿ ಎಲ್ಲಾ ಸೌಖ್ಯಗಳನ್ನೂ ಕೊಡು.

೧೧. ಈ ರೀತಿಯಾಗಿ ಮಂತ್ರವನ್ನು ಹೇಳಿ ವೇದ ವೇದಾಂತ ಪುರಾಣಗಳನ್ನು ಬಲ್ಲ ಬ್ರಾಹ್ಮಣನಿಗೆ ವಿಧಿವತ್ತಾಗಿ ಅನ್ನವನ್ನು ಕೊಡಬೇಕು.

೧೨. ಈ ರೀತಿಯ ನಿಯಮವನ್ನು ಅನುಸರಿಸಿ ನದಿಯ ತೀರದಲ್ಲಿ ಎಲ್ಲವನ್ನೂ ಮಾಡಬೇಕು.

೧೩. ಈ ವಿಷಯದಲ್ಲಿ ದೊಡ್ಡ ಕಾಡಿನಲ್ಲಿ ನಡೆದ ಒಂದು ಕಥೆಯನ್ನು ಹೇಳುತ್ತೇನೆ. ಕೇಳು.

ತಾಂ ಕಥಾಂ ತು ಪ್ರವಕ್ಷ್ಯಾಮಿ ಶೃಣು ದೇವರ್ಷಿಸತ್ತಮ ।
ಯಾಂ ಶ್ರುತ್ವಾ ಮಾನವೋ ಲೋಕೇ ಮಹಾದುಃಖಾತ್ಪ್ರಮುಚ್ಯತೇ॥ ೧೪ ॥

ದೇಶೋ ದಾಶೇರಕೋ ನಾಮ ತಸ್ಯ ಭಾಗೇ ಚ ಪಶ್ಚಿಮೇ ।
ತತ್ರ ವಿಧ್ವನ್ಮರೂದೇಶಃ ಸರ್ವಸತ್ವಭಯಂಕರಃ ॥ ೧೫ ॥

ಸುತಪ್ತಸಿಕತಾ ಭೂಮಿರ್ಯತ್ರ ದುಷ್ಟಾ ಮಹೋರಗಾಃ ।
ಅಲ್ಪಚ್ಛಾಯದ್ರುಮಾಕೀರ್ಣಾ ಮೃತಪ್ರಾಣಿಸಮಾಕುಲಾ ॥ ೧೬ ॥

ಶಮೀಖದಿರಪಾಲಾಶಕರೀರೈಃ ಪೀಲುಭಿಃ ಸಹ ।
ತತ್ರ ಭೀಮದ್ರುಮಗಣಾಃ ಕಂಟಿಕೈರಾಚಿತಾ ದೃಢೈಃ ॥ ೧೭ ॥

ದಗ್ಧಪ್ರಾಣಿಜನಾಕೀರ್ಣಾ ಯತ್ರ ಭೂರ್ದೃಶ್ಯತೇ ಕ್ವಚಿತ್ ।
ತಥಾಪಿ ಜೀವಾ ಜೀವಂತಿ ಸರ್ವೇ ಕರ್ಮನಿಬಂಧನಾತ್ ॥ ೧೮ ॥

---

೧೪. ಎಲೈ ನಾರದನೇ ! ಆ ಕಥೆಯನ್ನು ಹೇಳುತ್ತೇನೆ. ಕೇಳು. ಅದನ್ನು ಕೇಳಿದರೆ ಮನುಷ್ಯನು ಮಹಾ ದುಃಖಗಳಿಂದ ಪಾರಾಗುತ್ತಾನೆ.

೧೫. ದಾಶೇರಕವೆಂಬ ಒಂದು ದೇಶವಿದೆ. ಅದರ ಪಶ್ಚಿಮ ಭಾಗದಲ್ಲಿ ಒಂದು ಮರುಭೂಮಿಯುಂಟು. ಅದು ಎಲ್ಲಾ ಪ್ರಾಣಿಗಳಿಗೂ ಹೆದರಿಕೆಯನ್ನುಂಟುಮಾಡುತ್ತದೆ.

೧೬. ಆ ಜಾಗದಲ್ಲಿ ಮರಳು ಯಾವಾಗಲೂ ಕಾದಿರುತ್ತದೆ. ಕೆಟ್ಟ ಹಾವುಗಳು ವಾಸವಾಗಿವೆ. ಕೊಂಬೆಗಳಿಲ್ಲದೆ ನೆರಳನ್ನೂ ಕಡಿಮೆಯಾಗಿ ಕೊಡುವ ಮರಗಳು ಅಲ್ಲಲ್ಲಿ ಒಂದೆರಡಿವೆ. ಅಲ್ಲಿನ ಒಂದೆರಡು ಪ್ರಾಣಿಗಳೂ ಸತ್ತಂತೆಯೇ ಇವೆ.

೧೭. ಬನ್ನಿ, ಕಗ್ಗಲಿ. ಮುತ್ತುಗ, ಬಿದಿರು, ಯಗಚಿ ಮುಂತಾದ ಮರಗಳಿಂದಲೂ ಮುಳ್ಳುಗಳುಳ್ಳ ಇನ್ನೂ ಅನೇಕ ದೊಡ್ಡ ಮರಗಳಿಂದಲೂ ಕೂಡಿರುತ್ತದೆ.

೧೮. ಅಲ್ಲಿ ಪ್ರಾಣಿಗಳಾವುವೂ ಇಲ್ಲದೆ ಬಣಪ್ರದೇಶವಾಗಿ ಕಾಣುತ್ತದೆ. ಆದರೆ ಅಲ್ಲಲ್ಲಿ ಒಂದೊಂದು ಪ್ರಾಣಿಗಳು ಇರುವುದು ಕಂಡುಬರುತ್ತದೆ. ಆದರೆ ಆ ಪ್ರಾಣಿಗಳು ಅಲ್ಲಿರುವುದು ಸುಖದಿಂದಲ್ಲ. ಕರ್ಮವಶಕ್ಕೆ ಸಿಕ್ಕಿಕೊಂಡು ಅಲ್ಲಿರುವುವು.

**ನೋದಕಂ ನೋದಕಾಧಾರಾ ವಿದ್ವಂಸ್ತತ್ರ ಬಲಾಹಕಾಃ ।**
**ಪಕ್ಷಾಂತರಗತೈಃ ಕೈಶ್ಚಿಚ್ಚಿಶುಭಿಸ್ತೃಷಿತೈಸ್ಸಮಂ　　　　॥ ೧೯ ॥**

**ಉತ್ಕ್ರಾಂತಜೀವನಾ ವಿಪ್ರಾ ದೃಶ್ಯಂತೇ ಚ ಖಗೋತ್ತಮಾಃ ।**
**ತಸ್ಮಿಂಸ್ತಥಾವಿಧೇ ದೇಶೇ ಕಶ್ಚಿದ್ದೈವವಶಾದ್ವಣಿಕ್　　　　॥ ೨೦ ॥**

**ನಿಜಸಾರ್ಥಪರಿಭ್ರಷ್ಟಃ ಪ್ರವಿಷ್ಟೋ ಮರುಜಾಂಗಲೇ ।**
**ಬಭ್ರಾಮೋದ್ಭ್ರಾಂತಹೃದಯಃ ಕ್ಷುತ್ತೃಡ್ಭ್ಯಾಂ ಶ್ರಮಪೀಡಿತಃ　　॥ ೨೧ ॥**

**ಕ್ವ ಗ್ರಾಮಃ ಕ್ವ ಜಲಂ ಕ್ವಾಹಂ ಯಾಸ್ಯಾಮಿ ನ ಬುಬೋಧ ಹ ।**
**ಅಥ ಪ್ರೇತಾನ್ ದದರ್ಶಾಸೌ ಕ್ಷುತ್ತೃಷಾ ವ್ಯಾಕುಲೇಂದ್ರಿಯಾನ್　　॥ ೨೨ ॥**

**ಉತ್ಕಟಾನ್ಮಲಿನಾನ್ಭೀಮಾನ್ ನಿರ್ಮಾಂಸಾನ್ ರೌದ್ರದರ್ಶನಾನ್ ।**
**ಪ್ರೇತಸ್ಕಂಧಸಮಾರೂಢಮೇಕಂ ವಿಕೃತದರ್ಶನಂ　　　　॥ ೨೩ ॥**

---

೧೯–೨೧. ಅಲ್ಲಿಲ್ಲಿಯೂ ನೀರುವ ಭಾವಿಗಳಾಗಲೀ ಕೆರೆಗಳಾಗಲೀ ನದಿಗಳಾಗಲೀ ಇರಲಿಲ್ಲ ಅಲ್ಲಿರುವ ಕೆಲವು ಬಲಾಹಕ ಪಕ್ಷಿಗಳು ತಮ್ಮ ಒಂದೆರಡು ಮರಿಗಳಿಂದ ಕೂಡಿಕೊಂಡು ಜೀವಿಸಿಕೊಂಡಿವೆ. ಅವು ಯಾವಾಗಲೂ ಬಾಯಾರಿ ಬೆಂಡಾಗಿ ಹೋಗಿ ಇನ್ನೇನು ಪ್ರಾಣಹೋಗುತ್ತದೆಯೋ ಎಂಬಂತಿವೆ. ಒಬ್ಬ ವರ್ತಕನು ತನ್ನ ಗುಂಪಿನಿಂದ ದುರದೃಷ್ಟದಿಂದ ಬೇರೆಯಾಗಿ ದಾರಿ ತಿಳಿಯದೆ ಆ ಮರುಭೂಮಿಗೆ ಬಂದನು. ಇಂತು. ದಾರಿ ತಿಳಿಯದೆ ಹಸಿವು ಬಾಯಾರಿಕೆಗಳಿಂದ ತೊಂದರೆಪಡುತ್ತ ಆ ಮರುಭೂಮಿಯಲ್ಲೆಲ್ಲಾ ಅಲೆದಾಡಿದನು.

೨೨. ಊರೆಲ್ಲಿದೆ? ನೀರೆಲ್ಲಿದೆ ? ನಾನೆಲ್ಲಿದ್ದೇನೆ? ಎಲ್ಲಿ ಹೋಗುತ್ತಿದ್ದೇನೆ? ಎಂಬುದನ್ನು ತಿಳಿಯದೆ ಹೋದನು. ಹೀಗೆ ಸುತ್ತುತ್ತ ಸುತ್ತುತ್ತ ಹಸಿವು ಬಾಯಾರಿಕೆಗಳಿಂದ ತೊಂದರೆಪಡುತ್ತಿರುವ ಕೆಲವು ಪ್ರೇತಗಳನ್ನು ನೋಡಿದನು

೨೩–೨೪. ನಿಯಮವಿಲ್ಲದ ಕೊಳಕಾದ ಮಾಂಸವಿಲ್ಲದೆ ಒಣಗಿಕೊಂಡಿರುವ ಭಯಂಕರವಾದ ಆ ಪ್ರೇತಗಳನ್ನು ನೋಡಿದನು. ಅವುಗಳೊಳಗೆ ಒಂದು ಪ್ರೇತದ ಹೆಗಲಿನ ಮೇಲೆ ಕುಳಿತುಕೊಂಡಿರುವ ಒಂದು ವಿಕಾರವಾದ ಮತ್ತೊಂದು

ದದರ್ಶ ಬಹುಭಿಃ ಪ್ರೇತೈಃಸಮನ್ತಾತ್ಪರಿವಾರಿತಂ ।
ಆಗಚ್ಛಮಾನಮತ್ಯುಗ್ರಂ ಪ್ರೇತಶಬ್ದಪುರಸ್ಸರಂ ॥ ೨೪ ॥

ಪ್ರೇತೋಽಪಿ ದೃಷ್ಟ್ವಾ ತಾಂ ಘೋರಾಮಟವೀಮಾಗತಂ ನರಂ ।
ಪ್ರೇತಸ್ಕಂಧಾನ್ಮಹೀಂ ಗತ್ವಾ ತಸ್ಯಾಂತಿಕಮುಪಾಗಮತ್ ॥
ಪ್ರಣಿಪತ್ಯ ವಣಿಕ್‌ಶ್ರೇಷ್ಠಮಿದಂ ವಚನಮಬ್ರವೀತ್ ॥ ೨೫ ॥

॥ ಪ್ರೇತ ಉವಾಚ ॥

ಅಸ್ಮಿನ್ಘೋರತರೇ ದೇಶೇ ಪ್ರವೇಶೋ ಭವತಃ ಕಥಂ ।
ತಮುವಾಚ ವಣಿಗ್ಧೀಮಾನ್ ಸಾರ್ಥಭ್ರಷ್ಟಸ್ಯ ಮೇ ವನೇ ॥ ೨೬ ॥

ಪ್ರವೇಶೋ ದೈವಯೋಗೇನ ಪೂರ್ವಕರ್ಮಕೃತೇನ ಚ ।
ತೃಷಾ ಮೇ ಬಾಧತೇಽತ್ಯರ್ಥಂ ಕ್ಷುಧಾ ಚೈವ ಭೃಶಂ ತಥಾ ॥ ೨೭ ॥

ಪ್ರಾಣಾಂತಿಕಮನುಪ್ರಾಪ್ತಂ ಶರೀರಂ ಭ್ರಮತೀವ ಮೇ ।
ಅತ್ರೋಪಾಯಂ ನ ಪಶ್ಯಾಮಿ ಜೀವೇಯಂ ಯೇನ ಕೇನಚಿತ್ ॥ ೨೮ ॥

---

ಪ್ರೇತವನ್ನು ನೋಡಿದನು. ಆ ಪ್ರೇತವು ಬಹು ಪ್ರೇತಗಳಿಂದ ಸುತ್ತುವರಿಯಲ್ಪಟ್ಟು ನಾವು ಪ್ರೇತಗಳು ನಾವು ಪ್ರೇತಗಳು ಎಂದು ಗಟ್ಟಿಯಾಗಿ ಕೂಗುತ್ತಾ ಬರುತ್ತಲಿದ್ದವು.

೨೫. ಆ ಹೆಗಲಮೇಲೆ ಕುಳಿತಿದ್ದ ಪ್ರೇತವು ಕಾಡಿಗೆ ಬಂದಿರುವ ಈ ಮನುಷ್ಯನನ್ನು ನೋಡಿ ಕೆಳಕ್ಕಿಳಿದು ಅವನ ಹತ್ತಿರಕ್ಕೆ ಬಂದು ಅವನಿಗೆ ನಮಸ್ಕರಿಸಿ ಇಂತೆಂದಿತು.

೨೬–೨೮. ಪ್ರೇತವು ಹೇಳಿತು–ಎಲೈ ಮನುಷ್ಯನೆ ! ಈ ಘೋರವಾದ ಮರುಭೂಮಿಗೇಕೆ ಬಂದೆ ? ಎನ್ನಲು ಅವನು ಅಯ್ಯ ಗುಂಪಿನಿಂದ ತಪ್ಪಿಸಿಕೊಂಡೆ. ದಾರಿ ತಿಳಿಯದೆ ಈ ವನಕ್ಕೆ ದುರದೃಷ್ಟದಿಂದ ಬಂದೆನು. ಪೂರ್ವದ ಕರ್ಮವನ್ನು ತಪ್ಪಿಸಿಕೊಳ್ಳಲಾರದೆ ಅದರ ಅಧೀನತೆಯಿಂದ ಇಂತು ಬಂದಿರುವೆನು. ನನಗೆ ಹಸಿವು ಬಾಯಾರಿಕೆಗಳು ಬಹುವಾಗಿ ಬಾಧಿಸುತ್ತಿವೆ. ಪ್ರಾಣವೇ ಹೋಗುವುದಕ್ಕೆ ಬಂದಿದೆ. ದೇಹವು ಗಿರ್ರನೆ ಸುತ್ತುತ್ತಿದೆ. ಬದುಕಬಹುದಾದ ಒಂದು ಉಪಾಯವೂ ತಿಳಿಯುವುದಿಲ್ಲವಲ್ಲ. !

|| ಶಿವ ಉವಾಚ ||

ಇತ್ಯೇವ ಮುಕ್ತೋ ಪ್ರೇತಸ್ತಂ ವಣಿಜಂ ವಾಕ್ಯಮಬ್ರವೀತ್ || ೨೯ ||

|| ಪ್ರೇತ ಉವಾಚ ||

ಫುಲ್ಲಾಂ ಶಮೀಂ ಸಮಾಶ್ರಿತ್ಯ ಪ್ರತೀಕ್ಷಸ್ವ ಮುಹೂರ್ತಕಂ ।
ಕೃತಾತಿಥ್ಯೋ ಮಯಾ ಪಶ್ಚಾದ್ಗಮಿಷ್ಯಸಿ ಯಥಾಸುಖಂ || ೩೦ ||

|| ಶಿವ ಉವಾಚ ||

ಏವಮುಕ್ತಸ್ತಥಾ ಚಕ್ರೇ ಸ ವಣಿಕ್ ತೃಷ್ಣಯಾರ್ದಿತಃ ।
ಮಧ್ಯಾಹ್ನಸಮಯೇ ಪ್ರಾಪ್ತೇ ಪ್ರೇತಸ್ತಂ ದೇಶಮಾಗತಃ || ೩೧ ||

ಫುಲ್ಲಾತ್ಸವೃಕ್ಷಾಚ್ಛೀತೋದಾಂ ವಾರಿಧಾರಾಂ ಮನೋರಮಾಂ ।
ದಧ್ಯೋದನಸಮಾಯುಕ್ತಾಂ ವರ್ಧಮಾನೇನ ಸಂಯುತಾಂ || ೩೨ ||

ಅವತೀರ್ಯ ತತಃ ಸ್ವನ್ನಂ ಪ್ರಾದಾದತಿಥಯೇ ತದಾ ।
ಸ ತತ್ರಾಶನಮಾತ್ರೇಣ ಪರಾಂ ತೃಪ್ತಿಸಮಾಗತಃ || ೩೩ ||

---

೨೯. ಶಿವನು ಹೇಳಿದನು–ಈ ವರ್ತಕನು ಹೀಗೆನ್ನಲು ಪ್ರೇತವು ಅವನನ್ನು ಕುರಿತು ಇಂತೆಂದಿತು.

೩೦. ಪ್ರೇತವು ಹೇಳಿತು–ಎಲೈ ವರ್ತಕನೇ ! ಚಿಗುರಿ ಹೂ ಬಿಟ್ಟಿರುವ ಈ ಬನ್ನಿಯ ಮರದ ಕೆಳಗೆ ಒಂದು ಗಳಿಗೆ ಕುಳಿತುಕೋ ನಾನು ಅಥಿತಿಸತ್ಕಾರವನ್ನು ಮಾಡುತ್ತೇನೆ. ಅದನ್ನು ಸ್ವಿಕರಿಸಿ ನಿನ್ನ ಇಷ್ಟಬಂದಂತೆ ಹೋಗಬಹುದು.

೩೧. ಶಿವನು ಹೇಳಿದನು–ಹಸಿವು ಬಾಯಾರಿಕೆಗಳಿಂದ ಪೀಡಿತನಾದ ಆ ವರ್ತಕನು ಆ ಪ್ರೇತವು ಹೇಳಿದಂತೆಯೇ ಆ ಮರದ ಅಡಿಯಲ್ಲಿ ಕುಳಿತನು. ಮಧ್ಯಾಹ್ನದ ಸಮಯಕ್ಕೆ ಸರಿಯಾಗಿ ಆ ಪ್ರೇತವು ಅಲ್ಲಿಗೆ ಬಂದಿತು.

೩೨–೩೩. ಆಗ ಆ ಪ್ರೇತವು ಆ ಬನ್ನಿಯ ಮರದಿಂದಿಳಿದು ತಣ್ಣಗೂ ಸುವಾಸನೆಯಾಗಿಯೂ ಇರುವ ನೀರನ್ನೂ, ಮೊಸರನ್ನವನ್ನೂ ತಂದು ಆ ಅತಿಥಿಗೆ ಕೊಟ್ಟಿತು. ಅವನು ಅವನ್ನು ತಿಂದ ಒಡನೆಯೇ ಸಂಪೂರ್ಣವಾದ ತೃಪ್ತಿಯನ್ನು ಪಡೆದನು.

ವಿತೃಷ್ಣೋ ವಿಜ್ವರಶ್ಚೈವ ಕ್ಷಣೇನ ಸಮಪದ್ಯತ ।
ತತಶ್ಚ ಪ್ರೇತಾ ಸಂಪ್ರಾಪ್ತಾಃ ತೇಭ್ಯೋ ಭಾಗಂ ಕ್ರಮಾದ್ದದೌ ॥ ೩೪ ॥

ದಧ್ಯೋದನಾತ್ಸಪಾನೀಯಾತ್ ಪ್ರೀತಾಸ್ತೃಪ್ತಿಂ ಪರಾಂ ಗತಾಃ ।
ಅತಿಥಿಂ ತರ್ಪಯಿತ್ವಾ ತು ಪ್ರೇತಲೋಕಂ ಚ ಸರ್ವತಃ ॥ ೩೫ ॥

ತತಃ ಸ್ವಯಂ ಸ ಬುಭುಜೇ ಭುಕ್ತಶೇಷಂ ಯಥಾಸುಖಂ ।
ತಸ್ಯ ಭುಕ್ತವತಸ್ತ್ವನ್ನಂ ಪಾನೀಯಂ ಚ ಕ್ಷಯಂ ಯಯೌ ॥
ಪ್ರೇತಾಧಿಪಂ ತತಸ್ತಂ ವೈ ವಣಿಗ್ವಚನಮಬ್ರವೀತ್ ॥ ೩೬ ॥

॥ ವಣಿಗುವಾಚ ॥

ಆಶ್ಚರ್ಯಮೇತತ್ಪರಮಂ ವನೇಸ್ಮಿನ್ಪ್ರತಿಭಾತಿ ಮೇ ।
ಅನ್ನಂ ಪಾನಂ ಚ ಪರಮಂ ಸಂಪ್ರಾಪ್ತಂ ಚ ಕುತಸ್ತವ ॥ ೩೭ ॥

ಸ್ತೋಕೇನೈವ ತಥಾನ್ನೇನ ತ್ವಮೇತಾಂಸ್ತು ಬಹೂನಪಿ ।
ಅತರ್ಪಯಃ ಕಥಂ ತ್ವೇತೇ ನಿರ್ಮಾಂಸಾ ಭಿನ್ನಕುಕ್ಷಯಃ ॥ ೩೮ ॥

---

೩೪. ಅವನ ಹಸಿವು ಬಾಯಾರಿಕೆಗಳು ಕ್ಷಣಕಾಲದಲ್ಲಿ ಹೋದುವು. ಕಷ್ಟದಿಂದ ಪಾರಾದನು. ಅನಂತರ ಪ್ರೇತಗಳು ಬಂದುವು. ಅವಕ್ಕೆಲ್ಲಕ್ಕೂ ಅನಂತರ ಭಾಗವನ್ನು ಕೊಟ್ಟನು.

೩೫. ಅನಂತರ ಆ ಪ್ರೇತಗಳು ಈ ಮೊಸರನ್ನ ಮತ್ತು ನೀರಿನಿಂದ ತೃಪ್ತಿಯನ್ನು ಹೊಂದಿದುವು. ಆ ಮೂಲಪ್ರೇತವು ಅತಿಥಿಯನ್ನೂ ಪ್ರೇತಗಳ ಗುಂಪೆಲ್ಲವನ್ನೂ ತೃಪ್ತಿಪಡಿಸಿತು.

೩೬. ಅವರೆಲ್ಲರೂ ಊಟಮಾಡಿ ಉಳಿದ ಅನ್ನವನ್ನು ಆ ಪ್ರೇತವು ಊಟ ಮಾಡಿತು. ಅದು ಊಟ ಮಾಡಿದೊಡನೆಯೇ ಆ ಅನ್ನವೂ ನೀರೂ ಮುಗಿದು ಹೋದುವು. ಆಗ ಆ ವರ್ತಕನು ಆ ಪ್ರೇತರಾಜನನ್ನು ಕುರಿತು ಇಂತೆಂದನು.

೩೭. ವರ್ತಕನು ಹೇಳಿದನು–ಎಲೈ ಪ್ರೇತವೇ ! ಇಲ್ಲಿ ಇದು ನನಗೆ ಆಶ್ಚರ್ಯವಾಗಿ ಕಾಣುತ್ತದೆ. ಈ ಅನ್ನವೂ ನೀರೂ ಇಲ್ಲಿ ನಿನಗೆ ಹೇಗೆ ಸಿಕ್ಕಿತು ?

೩೮. ಸ್ವಲ್ಪ ಅನ್ನ, ಸ್ವಲ್ಪ ನೀರಿನಿಂದಲೇ ಒಣಕಲು ದೇಹವುಳ್ಳ, ಕಂಗೆಟ್ಟ, ಬಹು ಹಸಿವುಳ್ಳ, ಬಹಳವಾಗಿರುವ ಈ ಪ್ರೇತಗಳನ್ನು ನೀನು ಹೇಗೆ ತೃಪ್ತಿಪಡಿಸಿದೆ ? ಆದರೂ ಅವು ದಪ್ಪವಾಗದಿರಲು ಕಾರಣವೇನು ?

**ಕಥಮಸ್ಯಾಂ ಸುಘೋರಾಯಾಮಟವ್ಯಾಂ ಚ ಕೃತಾಲಯಾಃ ।**
**ತದೇತತ್ಸಂಶಯಂ ಛಿನ್ಧಿ ಪರಂ ಕೌತೂಹಲಂ ಮಮ　　|| ೩೯ ||**

**|| ಶಿವ ಉವಾಚ ||**

**ಏವಮುಕ್ತಸ್ಸವಣಿಜಾ ಪ್ರೇತೋ ವಚನಮಬ್ರವೀತ್　　|| ೪೦ ||**

**|| ಪ್ರೇತ ಉವಾಚ ||**

**ವಾಣಿಜ್ಯಸಕ್ತಸ್ಯ ಪುರಾ ಜನ್ಮಾತೀತಂ ಮಮಾನಘ ।**
**ಸಕಲೇ ನಗರೇ ನಾಸ್ತಿ ಮಮಾನ್ಯೋ ಹಿ ದುರಾತ್ಮಕಃ　　|| ೪೧ ||**

**ಧನಲೋಭಾನ್ನ ಕಸ್ಯಾಪಿ ದತ್ತಾ ಭಿಕ್ಷಾ ಮಯಾ ತದಾ ।**
**ಸಖಾ ಚೈವ ತು ತತ್ರಾಸೀದ್ಬ್ರಾಹ್ಮಣೋ ಗುಣವಾನ್ಮಮ　　|| ೪೨ ||**

**ಶ್ರವಣದ್ವಾದಶೀಯೋಗೇ ಮಾಸಿಭಾದ್ರಪದೇ ತತಃ ।**
**ಸ ಕದಾಚಿನ್ಮಯಾ ಸಾರ್ಥಂ ತಾಪೀಂ ನಾಮ ನದೀಂ ಯಯೌ　　|| ೪೩ ||**

---

೩೯. ಈ ಘೋರವಾದ ಮರಳುಕಾಡಿನಲ್ಲಿ ಮನೆಯನ್ನು ಹೇಗೆ ಏತಕ್ಕೆ ಮಾಡಿಕೊಂಡಿದ್ದೀಯೆ? ಈ ನನ್ನ ಸಂಶಯವನ್ನು ಹಾಳುಮಾಡು. ನನಗೆ ಬಹು ಕುತೂಹಲವಿದೆ.

೪೦. ಶಿವನು ಹೇಳಿದನು—ಆ ವರ್ತಕನು ಇಂತೆನ್ನಲು ಅದಕ್ಕೆ ಪ್ರೇತವು ಇಂತೆಂದು ಉತ್ತರ ಕೊಟ್ಟಿತು.

೪೧. ಪ್ರೇತವು ಹೇಳಿತು-ಎಲೈ ವರ್ತಕನೇ! ನಾನು ಹಿಂದೆ ವರ್ತಕನಾಗಿದ್ದೆನು ಆ ಜನ್ಮವು ಕಳೆದುಹೋಯಿತು. ನಾನಿದ್ದ ಪಟ್ಟಣದಲ್ಲಿ ನನ್ನಂತಹ ಕೆಟ್ಟ ಮನುಷ್ಯನು ಮತ್ತೊಬ್ಬನಿರಲಿಲ್ಲ.

೪೨. ಲೋಭಿತನದಿಂದ ಒಬ್ಬನಿಗೆ ಒಂದು ಹಿಡಿ ಭಿಕ್ಷೆಯನ್ನೂ ಹಾಕಲಿಲ್ಲ. ಆ ಊರಿನಲ್ಲಿ ಒಳ್ಳೆಯ ಗುಣಗಳಿಂದ ಕೂಡಿದ ಬ್ರಾಹ್ಮಣನೊಬ್ಬನು ನನಗೆ ಸ್ನೇಹಿತನಾಗಿದ್ದನು.

೪೩. ಒಂದುಸಾರಿ ಭಾದ್ರಪದ ಮಾಸದಲ್ಲಿ ದ್ವಾದಶಿಯ ದಿವಸ ಶ್ರವಣ ನಕ್ಷತ್ರವು ಬಂದಿತು. ಆದಿನ ಅವನು ನನ್ನನ್ನು ಕರೆದುಕೊಂಡು ತಪತಿ ನದಿಗೆ ಹೋದನು.

ತಸ್ಯಾಶ್ಚ ಸಂಗಮಃ ಪುಣ್ಯೋ ಯತ್ರಾಸೀಚ್ಚಂದ್ರಭಾಗಯಾ ।
ಚಂದ್ರಭಾಗಾ ಚಂದ್ರಸುತಾ ತಾಪೀ ಚೈವಾರ್ಕನಂದಿನೀ ॥ ೪೪ ॥

ತಯೋಶ್ಶೀತೋಷ್ಣಸಲಿಲೇ ಪ್ರವಿವೇಶ ಸಹ ದ್ವಿಜಃ ।
ಶ್ರವಣದ್ವಾದಶೀಯೋಗೇ ನರಾಶ್ಚೈವ ಸುತೋಷಿತಾಃ ॥ ೪೫ ॥

ಚಂದ್ರಭಾಗಾಸುತೋಯೇನ ವಾರಿಧಾನೀಂ ದದೌ ದ್ವಿಜೇ ।
ದಧ್ಯೋಧನಯುತಾಂ ಸಾರ್ಧಂ ಸಂಪೂರ್ಣೈರ್ವರ್ಧಮಾನಕೈಃ ॥ ೪೬ ॥

ಛತ್ರೋಪಾನದ್ಯುಗಂ ವಸ್ತ್ರಂ ಪ್ರತಿಮಾಂ ಚ ತಥಾ ಹರೇಃ ।
ಪ್ರದದೌ ವಿಪ್ರಮುಖ್ಯಾಯ ಹರಸ್ಯಾಗ್ರೇ ಮಹಾಮತೇ ॥ ೪೭ ॥

ವಿತ್ತಸಂರಕ್ಷಣಾರ್ಥಾಯ ತಸ್ಯಾಸ್ತೀರೇ ವ್ರತಂ ಮಯಾ ।
ಸೋಪವಾಸೇನ ದತ್ತೈಕಾ ವಾರಿಧಾನೀ ಮನೋರಮಾ ॥ ೪೮ ॥

---

೪೪. ಆ ತಪತಿಯು ಚಂದ್ರಭಾಗೆಯೊಡನೆ ಸೇರುತ್ತದೆ. ಚಂದ್ರಭಾಗೆಯು ಚಂದ್ರನ ಮಗಳು. ತಪತಿಯು ಸೂರ್ಯನ ಮಗಳು. ಇವುಗಳ ಸಂಗಮವು ಬಹು ಪುಣ್ಯಕರವಾದುದು.

೪೫. ಆ ನದಿಗಳ ಸಂಗಮದಲ್ಲಿ ತಣ್ಣಗೆ ಮತ್ತು ಬಿಸಿಯಾಗಿರುವ ನೀರಿನಲ್ಲಿ ಸ್ನಾನಮಾಡಿದೆವು. ಆ ಶ್ರವಣದ್ವಾದಶಿಯ ಯೋಗದಲ್ಲಿ ನಾನು ಅನೇಕರನ್ನು ತೃಪ್ತಿ ಪಡಿಸಿದೆನು.

೪೬. ಅಲ್ಲಿ ಚಂದ್ರಭಾಗೆಯ ನೀರಿನಿಂದ ತುಂಬಿದ ಒಂದು ತಂಬಿಗೆಯನ್ನೂ ಸಾಸುವೆ ಮೊದಲಾದುವುಗಳನ್ನು ಹಾಕಿ ಒಗ್ಗರಣೆ ಹಾಕಿರುವ ಮೊಸರನ್ನವನ್ನೂ ಬ್ರಾಹ್ಮಣನಿಗೆ ಕೊಟ್ಟೆನು.

೪೭. ಛತ್ರಿ, ಕೆರ, ವಸ್ತ್ರ, ಹರಿಯ ಪ್ರತಿಮೆಗಳನ್ನು ಶಿವನೆದುರಿಗೆ ಯೋಗ್ಯವಾದ ಬ್ರಾಹ್ಮಣನಿಗೆ ದಾನ ಮಾಡಿದೆನು

೪೮. ನನ್ನ ಹಣವು ಹಾಳಾಗದೆ ನಿಲ್ಲುವುದಕ್ಕೋಸ್ಕರ ಆ ನದಿಯ ದಡವಲ್ಲಿ ಉಪವಾಸವಿದ್ದು ಈ ವ್ರತವನ್ನು ಮಾಡಿ ಉದಕುಂಭ, ಮೊಸರನ್ನ ಮುಂತಾದುವನ್ನು ದಾನ ಮಾಡಿದೆನು.

ತತ್ಕೃತ್ವಾಹಂ ಗೃಹಂ ಪ್ರಾಪ್ತಃ ತತಃ ಕಾಲೇನ ಕೇನಚಿತ್ ।
ಪಂಚತ್ವಮಹಮಾಸಾದ್ಯ ನಾಸ್ತಿಕ್ಯಾತ್ಪ್ರೇತತಾಂ ಗತಃ ॥ ೪೯ ॥

ಅಸ್ಯಾಮಟವ್ಯಾಂ ಘೋರಾಯಾಂ ಯಥಾ ಹ್ಯಹಿಕುಲಂ ತಥಾ ।
ಶ್ರವಣದ್ವಾದಶೀಯೋಗೇ ವಾರಿಧಾನ್ಯರ್ಪಿತಾ ಮಯಾ ॥ ೫೦ ॥

ಸೇಯಂ ಮಧ್ಯಾಹ್ನಸಮಯೇ ಲಭ್ಯತೇ ಚ ದಿನೇ ದಿನೇ ।
ಬ್ರಹ್ಮಸ್ವಹಾರಿಣಸ್ಸರ್ವೇ ಪಾಪಾಃ ಪ್ರೇತತ್ವಮಾಗತಾಃ ॥ ೫೧ ॥

ಪರದಾರರತಾಃ ಕೇಚಿತ್ ಸ್ವಾಮಿದ್ರೋಹರತಾಶ್ಚ ಯೇ ।
ಭೂತಪ್ರೇತಜರೂಪೇಣ ತೇ ಜಾತಾ ಹ್ಯತ್ರ ಮಾನವಾಃ ॥ ೫೨ ॥

ದೇಶೇ ಮರುತ್‌ಸ್ಥಳೇ ತ್ವಸ್ಮಿತ್ಮನ್ಮೈತೇ ಮಿತ್ರತಾಂ ಗತಾಃ ।
ಅಕ್ಷಯೋ ಭಗವಾನ್ವಿಷ್ಣುಃ ಪರಮಾತ್ಮಾ ಜನಾರ್ದನಃ ॥ ೫೪ ॥

---

೪೯. ಆ ವ್ರತವನ್ನು ಮಾಡಿ ಮನೆಗೆ ಬಂದೆನು. ಆಮೇಲೆ ಬಹುಕಾಲ ಬದುಕಿದ್ದು ಕೊನೆಗೆ ಮರಣ ಹೊಂದಿದೆನು. ನನ್ನಲ್ಲಿದ್ದ ನಾಸ್ತಿಕತನದಿಂದ ಪ್ರೇತಜನ್ಮವು ಬಂದಿತು.

೫೦-೫೨. ಈ ಕಾಡಿನಲ್ಲಿ ಈ ಹಾವುಗಳ ಗುಂಪಿನಲ್ಲಿ ಬಂದು ಸೇರಿದೆನು. ಶ್ರವಣ ನಕ್ಷತ್ರದ ದ್ವಾದಶಿಯ ದಿನ ನೀರಿನ ತಂಬಿಗೆಯನ್ನು ದಾನ ಮಾಡಿದುದ ರಿಂದ ಆ ನೀರು ಪ್ರತಿದಿನವೂ ಮಧ್ಯಾಹ್ನದ ಸಮಯದಲ್ಲಿ ನನಗೆ ಸಿಕ್ಕುತ್ತಿರುವುದು. ಇವರಲ್ಲಿ ಕೆಲವರು ಬ್ರಾಹ್ಮಣರ ಸ್ವತ್ತನ್ನು ಕದ್ದವರು, ಕೆಲವರು ಪರರ ಹೆಂಡಿರಲ್ಲಿ ರಮಿಸಿದವರು, ಮತ್ತೆ ಕೆಲವರು ಸ್ವಾಮಿಗೆ ದ್ರೋಹ ಮಾಡಿದವರು. ಇವರು ಇಂತಹ ಪಾಪಿಗಳು. ಇವರೆಲ್ಲರೂ ಭೂತ, ಪ್ರೇತ ರೂಪವಾಗಿ ಹುಟ್ಟಿರುವರು.

೫೩-೫೪. ಆ ಪ್ರೇತಗಳೆಲ್ಲವೂ ಕೂಡ ಮರುಭೂಮಿಯಲ್ಲಿ ನನಗೆ ಸ್ನೇಹ ವಾದುವು. ಭಗವಂತನೂ ಪರಮಾತ್ಮನೂ ಆದ ಆ ವಿಷ್ಣುವು ಅಕ್ಷಯ ಸ್ವರೂಪನು.

ದೀಯತೇ ಯತ್ಸಮುದ್ದಿಶ್ಯ ಚಾಕ್ಷಯಂ ತತ್ಪ್ರಕೀರ್ತಿತಂ ।
ಅಕ್ಷಯೇಣಾಪಿ ಚಾನ್ನೇನ ತೃಪ್ತಾ ಏತೇ ಪುನಃ ಪುನಃ ॥ ೫೪ ॥

ಪ್ರೇತತ್ವಭಾವಾದ್ದೌರ್ಬಲ್ಯಂ ನ ವಿಮುಂಚಂತಿ ಕರ್ಹಿಚಿತ್ ।
ಪೂಜಯಿತ್ವಾಹವನ್ನೈಸ್ತ್ವಾಮತಿಥಿಂ ಸಮುಪಸ್ಥಿತಂ ॥ ೫೫ ॥

ಪ್ರೇತಭಾವಾದ್ವಿನಿರ್ಮುಕ್ತೋ ಯಾಸ್ಯಾಮಿ ಪರಮಾಂ ಗತಿಂ ।
ಮಯಾ ವಿಹೀನಾಃ ಕಿಂತ್ವೇತೇ ವನೇಸ್ಮಿನ್ಭೃಶದಾರುಣೇ ॥ ೫೬ ॥

ಪೀಡಾಮನುಭವಿಷ್ಯಂತಿ ದಾರುಣಾಂ ಕರ್ಮಯೋನಿಜಾಂ ।
ಏತೇಷಾಂ ತು ಮಹಾಭಾಗ ಮಮಾನುಗ್ರಹಕಾಮ್ಯಯಾ ॥ ೫೭ ॥

ಪ್ರತ್ಯೇಕಂ ನಾಮ ಗೋತ್ರಾಣಿ ಗೃಹ್ಣೀಷ್ವ ಲಿಖಿತಾನಿ ಚ ।
ಅಸ್ತಿ ಕಕ್ಷಾಗತಾ ಚೈವ ತವ ಸಂಪುಟಿಕಾ ಶುಭಾ ॥ ೫೮ ॥

ಹಿಮವಂತಮಥಾಸಾದ್ಯ ತತ್ರ ತ್ವಂ ಲಪ್ಸ್ಯಸೇ ನಿಧಿಂ ।
ಗಯಾಶೀರ್ಷಂ ತತೋ ಗತ್ವಾ ಶ್ರಾದ್ಧಂ ಕುರು ಮಹಾಮತೇ ॥ ೫೯ ॥

---

ಅವನನ್ನು ಕುರಿತು ನಾವು ದಾನ ಮಾಡುವುದೆಲ್ಲವೂ ಅಕ್ಷಯವಾಗುತ್ತವೆ. ಈ ಅಕ್ಷಯವಾದ ಅನ್ನದಿಂದ ಇವು ಬೇಕಾದಂತೆ ತೃಪ್ತಿಯನ್ನು ಹೊಂದುತ್ತವೆ. ಇವಕ್ಕೆ ಪ್ರೇತಭಾವವಿರುವುದರಿಂದ ಬಲವನ್ನು ಹೊಂದದೇನೇ ಇರುತ್ತವೆ. ನಾನು ಈಗ ಈ ಅನ್ನದಿಂದ ನಿನ್ನನ್ನು ತೃಪ್ತಿಪಡಿಸಿದೆನು. ಈ ಪುಣ್ಯದಿಂದ ನನ್ನ ಈ ಪ್ರೇತ ಭಾವವು ಹೋಗುತ್ತದೆ. ಉತ್ತಮಗತಿಯನ್ನು ಹೊಂದುತ್ತೇನೆ. ನಾನು ಹೊರಟುಹೋಗುತ್ತಲೂ ಈ ಮರಳುಗಾಡಿನಲ್ಲಿ ತಮ್ಮ ಕರ್ಮದ ಕಷ್ಟವನ್ನು ಇವು ಅನುಭವಿಸುತ್ತವೆ. ಎಲೈ ವಣಿಜನೇ! ನನ್ನಲ್ಲಿ ದಯೆಯಿಟ್ಟು ನನ್ನ ಮತ್ತು ಈ ಪ್ರೇತಗಳ ಹೆಸರು, ಕುಲ, ಗೋತ್ರಗಳನ್ನು ಬೇರೆ ಬೇರೆ ಬರೆದುಕೊ. ಕಂಕುಳಲ್ಲಿ ಒಂದು ಉತ್ತಮವಾದ ಸಂಪುಟವಿದ್ದೇ ಇರುವುದು. ಅದರಲ್ಲಿಟ್ಟುಕೊ.

೫೯. ಇಲ್ಲಿಂದ ಹಿಮವತ್ಪರ್ವತಕ್ಕೆ ಹೋಗು. ಅಲ್ಲಿ ನಿನಗೆ ನಿಧಿಯು ಸಿಕ್ಕುತ್ತದೆ. ಅಲ್ಲಿಂದ ಗಯೆಗೆ ಹೋಗು. ಅಲ್ಲಿ ನಮ್ಮೆಲ್ಲರಿಗೂ ಶಾಸ್ತ್ರರೀತಿಯಂತೆ ಶ್ರಾದ್ಧವನ್ನು ಮಾಡು.

|| ಶಿವ ಉವಾಚ ||

ಇತ್ಯಾಜ್ಞಾಪ್ಯ ಸ ವೈ ಪ್ರೇತೋ ವಣಿಜಂ ಚ ಯಥಾಸುಖಂ ।
ವಿಸರ್ಜಯಾಮಾಸ ತದಾ ಸ ವೈ ಪ್ರಾಯಾತ್ಸಮುತು ಕಃ　　|| ೬೦ ||

ಸಮಾಸಾದ್ಯ ಗೃಹಂ ತತ್ರ ಪಶ್ಚಾತ್ಪ್ರಾಯಾದ್ಧಿಮಾಲಯಂ ।
ಪ್ರೇತೋದ್ದಿಷ್ಟಂ ನಿಧಿಂ ತತ್ರ ಗೃಹೀತ್ವಾ ಚ ಸಮಾಗತಃ　　|| ೬೧ ||

ಷಷ್ಠಾಂಶಂ ಪ್ರತಿಗೃಹ್ಯಾಥ ಗಯಾಶೀರ್ಷಂ ತತೋಽಭ್ಯಗಾತ್ ।
ತತ್ರ ಗತ್ವಾ ಗಯಾಯಾಂ ಸಃ ಶ್ರಾದ್ಧಂ ಕೃತ್ವಾ ಮಹಾಮತಿಃ　　|| ೬೨ ||

ಪ್ರೇತಾನಾಂ ತು ಯಥೋದಿಷ್ಟಂ ಶ್ರಾದ್ಧಂ ಸಮ್ಯಗ್ವಿಧಾನತಃ ।
ಪ್ರತ್ಯೇಕಂ ನಾಮ ಗೋತ್ರಾಣಿ ಗೃಹೀತ್ವಾ ಪಿಂಡಮುತ್ಸೃಜತ್　　|| ೬೩ ||

ಯಸ್ಯ ಯಸ್ಯ ತು ವೈ ಶ್ರಾದ್ಧಂ ಸ ಕರೋತಿ ದಿನೇ ವಣಿಕ್ ।
ಸ ಸ ತಸ್ಯ ತದಾ ಸ್ವಪ್ನೇ ದರ್ಶಯತ್ಯಾತ್ಮನಸ್ತನುಂ　　|| ೬೪ ||

---

೬೦. ಶಿವನು ಹೇಳಿದನು–ಈ ರೀತಿಯಾಗಿ ಅಪ್ಪಣೆಮಾಡಿ ಆ ಪ್ರೇತವು ಹೊರಟುಹೋಗೆಂದು ಆ ವರ್ತಕನಿಗೆ ಹೇಳಲು ಅವನು ಅಲ್ಲಿಂದ ಸಂತೋಷದಿಂದ ಮನೆಗೆ ಬಂದನು.

೬೧. ಮನೆಗೆ ಬಂದವನು ಮತ್ತೆ ಮನೆಯಿಂದ ಹಿಮಾಲಯಕ್ಕೆ ಹೋದನು. ಅಲ್ಲಿ ಪ್ರೇತನು ಹೇಳಿದ ಹಣವನ್ನು ತೆಗೆದುಕೊಂಡು ಬಂದನು.

೬೨ ಆ ಹಣದಲ್ಲಿ ಆರನೆಯ ಒಂದಂಶವನ್ನು ತೆಗೆದುಕೊಂಡು ಗಯಾ ಶೀರ್ಷಕ್ಕೆ ಹೋದನು. ಅಲ್ಲಿ ಶಾಸ್ತ್ರದ ರೀತಿಯಿಂದ ಶ್ರಾದ್ಧವನ್ನು ಮಾಡಿದನು.

೬೩. ಪ್ರೇತರಿಗೆ ಹೇಳಿರುವ ವಿಧಾನದಲ್ಲಿ ತಾನು ಬರೆದುಕೊಂಡಿದ್ದಂತೆ ಆಯಾ ಪ್ರೇತಗಳ ಹೆಸರು, ಗೋತ್ರಗಳನ್ನು ಹೇಳಿ ಪಿಂಡವನ್ನು ಕೊಟ್ಟನು.

೬೪. ಅವನು ದಿನದಿನವೂ ಯಾರ ಯಾರ ಶ್ರಾದ್ಧವನ್ನು ಮಾಡುತ್ತಿದ್ದನೋ ಅವನು ಆಯಾದಿನ ಸ್ವಪ್ನದಲ್ಲಿ ತನ್ನ ದೇಹವನ್ನು ತೋರಿಸುತ್ತಿದ್ದನು.

ಬ್ರವೀತಿ ಚ ಮಹಾಭಾಗ ಪ್ರಸಾದಾತ್ತವ ಚಾನಘ ।
ಪ್ರೇತಭಾವೋ ಮಯಾ ತ್ಯಕ್ತಃ ಪ್ರಾಪ್ತೋಽಸ್ಮಿ ಪರಮಾಂ ಗತಿಂ ॥ ೬೫ ॥

ಏವಂ ಕೃತ್ವಾ ವಿಧಾನೇನ ಗಯಾಶೀರ್ಷೇ ಮಹಾಮನಾಃ ।
ಪಶ್ಚಾಜ್ಜಗಾಮ ಸ್ವಗೃಹಂ ವಿಷ್ಣುಂ ಧ್ಯಾಯಸ್ಪುನಃ ಪುನಃ ॥ ೬೬ ॥

ಮಾಸಿ ಭಾದ್ರಪದೇ ಪ್ರಾಪ್ತೇ ಶುಕ್ಲಪಕ್ಷೇ ತಥಾ ಸುಧೀಃ ।
ಶ್ರವಣದ್ವಾದಶೀ ಯೋಗೇ ಸಂಗಮೇ ಸರಿತಾಂ ಪುನಃ ॥ ೬೭ ॥

ಜಗಾಮ ಸ ಮಹಾ ಬುದ್ಧಿಃ ಸರ್ವೋಪಸ್ಕರಸಂಯುತಃ ।
ಸಂಗಮೇ ಸರಿತಾಂ ಸ್ನಾತ್ವಾ ದ್ವಾದಶೀಂ ತಾಮುಪೋಷಿತಃ ॥ ೬೮ ॥

ತತ್ರ ಸ್ನಾತ್ವಾಪಿ ದತ್ವಾ ತು ಪೂಜಯಿತ್ವಾ ಜನಾರ್ದನಂ ।
ಅನಂತರಂ ಬ್ರಾಹ್ಮಣಸ್ಯ ಹ್ಯುಪಹಾರಂ ತದಾ ದದೌ ॥ ೬೯ ॥

ಶಾಸ್ತ್ರೋಕ್ತೇನಾಪಿ ವಿಧಿನಾ ಹ್ಯೇಕಚಿತ್ತರತೋಽಪಿ ಸಃ ।
ನಿರ್ವರ್ತಯಾಮಾಸ ತದಾ ವಣಿಜೋ ಬುದ್ಧಿಮಾನ್ಸ ವೈಃ ॥ ೭೦ ॥

---

೬೫. ಆಗ ಪ್ರೇತಗಳು ಎಲೈ ಪುಣ್ಯಾತ್ಮನೆ! ನಿನ್ನ ಅನುಗ್ರಹದಿಂದ ನಾನು ಪ್ರೇತಭಾವವನ್ನು ಬಿಟ್ಟುಬಿಟ್ಟೆನು. ಉತ್ತಮವಾದ ಗತಿಯನ್ನು ಹೊಂದಿದೆವು ಎಂದು ಹೇಳುತ್ತಿದ್ದರು.

೬೬. ಈ ರೀತಿಯಾಗಿ ಗಯಾಶೀರ್ಷದಲ್ಲಿ ಶ್ರಾದ್ಧ ಮಾಡಿ ಅನಂತರ ವಿಷ್ಣುವನ್ನು ಧ್ಯಾನಿಸುತ್ತ ಮನೆಗೆ ಹೋದನು.

೬೭–೬೮. ಭಾದ್ರಪದ ಮಾಸದಲ್ಲಿ ದ್ವಾದಶಿಯದಿನ ಶ್ರವಣ ನಕ್ಷತ್ರವು ಬರಲು ನದಿಯ ಸಂಗಮಸ್ಥಳಕ್ಕೆ ಹೋದನು. ಅಲ್ಲಿ ಪೂಜಾದ್ರವ್ಯಗಳೆಲ್ಲವನ್ನೂ ತೆಗೆದುಕೊಂಡು ಹೋಗಿ ಸ್ನಾನಮಾಡಿ ಆ ದ್ವಾದಶಿಯಲ್ಲಿ ಉಪವಾಸ ಮಾಡಿದನು.

೬೯. ಅಲ್ಲಿ ಸ್ನಾನ ಮಾಡಿ ಉಪವಾಸ ಮಾಡಿ ವಿಷ್ಣುವನ್ನು ಪೂಜಿಸಿ ಅನಂತರ ಬ್ರಾಹ್ಮಣರಿಗೂ ಉಪಾಯನ ದಾನವನ್ನು ಕೊಟ್ಟನು.

೭೦. ಒಂದೇ ಮನಸ್ಸಿನಿಂದ ಶಾಸ್ತ್ರೋಕ್ತವಾಗಿ ಆ ಸ್ಥಳದಲ್ಲಿ ಪೂಜೆಯನ್ನೆಲ್ಲಾ ನೆರವೇರಿಸಿದನು.

ವರ್ಷೇ ವರ್ಷೇ ತು ಸಂಪ್ರಾಪ್ತೇ ಮಾಸಿ ಭಾದ್ರಪದೇ ತಥಾ ।
ಶ್ರವಣದ್ವಾದಶೀಯೋಗೇ ಸಂಗಮೇ ಸರಿತಾಂ ಪುನಃ ॥ ೭೧ ॥

ಏವಂ ವೈ ಕೃತವಾನ್ಸರ್ವಂ ವಿಷ್ಣುಮುದ್ದಿಶ್ಯ ಸತ್ವರಂ ।
ಕಾಲೇನ ಚಾತಿಮಹತಾ ಪಂಚತ್ವಂ ಸಮುಪಾಗತಃ ॥ ೭೨ ॥

ಅವಾಪ ಪರಮಂ ಸ್ಥಾನಂ ದುರ್ಲಭಂ ಸರ್ವಮಾನವೈಃ ।
ಕ್ರೀಡತೇಽದ್ಯಾಪಿ ವೈಕುಂಠೇ ವಿಷ್ಣುದೂತೈಸ್ಸ ಸೇವಿತಃ ॥ ೭೩ ॥

ಏವಂ ಕುರುಷ್ವ ಭೋ ಬ್ರಹ್ಮನ್ ಶ್ರವಣದ್ವಾದಶೀವ್ರತಂ ।
ಸರ್ವಸೌಭಾಗ್ಯದಂ ಚೈವ ಇಹ ಲೋಕೇ ಪರತ್ರ ಚ ॥ ೭೪ ॥

---

೭೧. ಈ ರೀತಿಯಾಗಿ ಪ್ರತಿವರ್ಷವೂ ಭಾದ್ರಪದ ಮಾಸದಲ್ಲಿ ಶ್ರವಣ ದ್ವಾದಶಿಯು ಬಂದಾಗ ನದಿಯ ಸಂಗಮದಲ್ಲಿ ಸ್ನಾನಮಾಡುತ್ತಿದ್ದನು.

೭೨. ಈ ರೀತಿಯಾಗಿ ವಿಷ್ಣುವನ್ನುದ್ದೇಶಿಸಿ ಎಲ್ಲವನ್ನೂ ಮಾಡಿ ಬಹು ಕಾಲದಮೇಲೆ ಸತ್ತುಹೋದನು.

೭೩. ಅನಂತರ ಯಾವ ಮನುಷ್ಯರಿಗೂ ಸಿಕ್ಕದ ಸ್ಥಾನವನ್ನು ಹೊಂದಿ, ಈಗಲೂ ಕೂಡ ವೈಕುಂಠದಲ್ಲಿ ವಿಷ್ಣುದೂತರಿಂದ ಸೇವಿಸಲ್ಪಡುತ್ತಾ ಕ್ರೀಡಿಸುತ್ತ ಇದ್ದಾನೆ.

೭೪–೭೫. ಎಲೈ ಬ್ರಾಹ್ಮಣನೇ! ಹೀಗೆ ನೀನು ಶ್ರವಣ ದ್ವಾದಶೀ ವ್ರತ ವನ್ನು ಮಾಡು. ಅದು ಎಲ್ಲಾ ಸೌಭಾಗ್ಯಗಳನ್ನೂ ಕೊಡುತ್ತದೆ. ಇಹಲೋಕ ಪರಲೋಕಗಳಲ್ಲಿ ಉತ್ತಮಸ್ಥಾನವನ್ನು ಕೊಡುತ್ತದೆ. ಒಳ್ಳೆಯ ಬುದ್ಧಿಯನ್ನು

**ಸುಬುದ್ಧಿಜನನಂ ಚೈವ ಸರ್ವಪಾಪಹರಂ ಪರಂ |**
**ಶ್ರವಣದ್ವಾದಶೀಯೋಗೇ ಯಃ ಕುರ್ಯಾದ್ವ್ರತಮೀದೃಶಂ ||**
**ವ್ರತಸ್ಯಾಸ್ಯ ಪ್ರಭಾವೇನ ವಿಷ್ಣುಲೋಕಂ ಸ ಗಚ್ಛತಿ || ೭೫ ||**

**ಇತಿ ಶ್ರೀ ಮಹಾಪುರಾಣೇ ಪಾದ್ಮೇ ಉತ್ತರಖಂಡೇ ಉಮಾಪತಿ ನಾರದ ಸಂವಾದೇ ಶ್ರವಣ ದ್ವಾದಶೀ ವ್ರತ ಮಾಹಾತ್ಮ್ಯಂ ನಾಮ ಸಪ್ತತಿತಮೋಽಧ್ಯಾಯಸ್ಸಮಾಪ್ತಃ**

---

ಕೊಡುತ್ತದೆ. ಎಲ್ಲಾ ಪಾಪಗಳನ್ನೂ ನಾಶಮಾಡುತ್ತದೆ. ಶ್ರವಣ ದ್ವಾದಶಿಯ ದಿನ ಯಾವನು ಈ ರೀತಿಯಾಗಿ ವ್ರತವನ್ನು ಮಾಡುತ್ತಾನೆಯೋ ಅವನು ಈ ವ್ರತದ ಮಹಿಮೆಯಿಂದ ವಿಷ್ಣುಲೋಕವನ್ನು ಹೊಂದುತ್ತಾನೆ.

ಇಂತು ಶ್ರೀ ಪದ್ಮಮಹಾಪುರಾಣದ ಉತ್ತರಖಂಡದ ಉಮಾಪತಿ ನಾರದರ ಸಂವಾದದಲ್ಲಿ ಶ್ರವಣ ದ್ವಾದಶೀ ವ್ರತ ಮಹಿಮೆ ಎಂಬ ಎಪ್ಪತ್ತನೆಯ ಅಧ್ಯಾಯವು ಮುಗಿದುದು.



॥ ಶ್ರೀಃ ॥

-X-

# ಅಥ ಶ್ರೀ ಮಹಾಪುರಾಣೇ ಪಾದ್ಮೇ ಉತ್ತರಖಂಡೇ

## ॥ ಏಕಸಪ್ತತಿತಮೋಽಧ್ಯಾಯಃ ॥



॥ ನಾರದ ಉವಾಚ ॥

ದೇವದೇವ ಜಗನ್ನಾಥ ಭುಕ್ತಿಮುಕ್ತಿಪ್ರದಾಯಕ ।
ಕಥಯಸ್ವ ಸುರಶ್ರೇಷ್ಠ ಯೇನ ದುಃಖಂ ನ ಪಶ್ಯತಿ ॥ ೧ ॥

॥ ಮಹೇಶ್ವರ ಉವಾಚ ॥

ಶೃಣು ಬಾಡವ ವಕ್ಷ್ಯಾಮಿ ತ್ರಿರಾತ್ರಂ ಸರಿತಶ್ಶುಭಂ ।
ಯೇನ ಜೀರ್ಣೇನ ನರಕೋ ಮಾನವಾನಾಂ ನ ಜಾಯತೇ ॥ ೨ ॥

ಆಯುರಾರೋಗ್ಯಮತುಲಂ ಸೌಭಾಗ್ಯಂ ಸುಖಸಂಪದಂ ।
ಸಂತಾನಂ ಚಾಕ್ಷಯಂ ಪ್ರಾಪ್ಯ ಸ್ವರ್ಗಲೋಕೇ ಮಹೀಯತೇ ॥ ೩ ॥

---

## ಎಪ್ಪತ್ತೊಂದನೆಯ ಅಧ್ಯಾಯವು



೧. ನಾರದನು ಹೇಳಿದನು–ಭುಕ್ತಿಮುಕ್ತಿಗಳನ್ನು ಕೊಡುವ ಎಲೈ ದೇವ ದೇವನೇ ! ದುಃಖವು ಉಂಟಾಗದಿರುವ ಬಗೆಯನ್ನು ತಿಳಿಸು.

೨. ಮಹೇಶ್ವರನು ಹೇಳಿದನು–ಎಲೈ ನಾರದನೇ ! ನದೀತ್ರಿರಾತ್ರವ್ರತ ವನ್ನು ಹೇಳುತ್ತೇನೆ ಕೇಳು. ಅದನ್ನು ಮಾಡುವುದರಿಂದ ಮನುಷ್ಯರಿಗೆ ನರಕವು ಬರುವುದೇ ಇಲ್ಲ.

೩. ಅದರಿಂದ ಆಯುಸ್ಸು, ಆರೋಗ್ಯ, ಸೌಭಾಗ್ಯ, ಸಂತಾನಗಳನ್ನು ಹೊಂದಿ ಅಕ್ಷಯವಾದ ಸ್ವರ್ಗವನ್ನು ಹೊಂದುತ್ತಾನೆ.

ಆಷಾಢೇ ಮಾಸಿ ಸಂಪ್ರಾಪ್ತೇ ನದೀ ಪೂರೇಣ ಸಂಯುತಾ ।
ಸತತಂ ತೋಯಸಂಸ್ಥಾನೇ ಪುರಾಣೇ ಸಾ ಚ ವಿಶ್ರುತಾ ॥ ೪ ॥

ವರ್ಷತೋ ಘನಸಂಪೂರ್ಣೇ ಕರ್ತವ್ಯಾ ಸಾ ವ್ರತೇನ ವಾ ।
ತೋಯೌಘೈಃ ಪರಿಪೂರ್ಣಾ ಸಾ ಸಂಕೂಲೈಃ ಸ್ಯಾನ್ನದೀ ಯದಾ ॥ ೫ ॥

ವ್ರತಂ ತ್ರಿರಾತ್ರಮುದ್ದಿಶ್ಯ ತದಾ ಕಾರ್ಯಂ ಪ್ರಯತ್ನತಃ ।
ಕೃತಪ್ರದಿಪದಶ್ಚಂದ್ರದರ್ಶನಂ ತು ದಿನತ್ರಯಂ ॥ ೬ ॥

ಯಥಾ ಪ್ರಾಪ್ತಂ ನದೀಪೂತಂ ಸ್ತ್ರೀಭಿಸ್ತೀರೇ ಜಲಸ್ಯ ತು ।
ಅಥವಾ ತಜ್ಜಲಂ ಕುಂಭೇ ಕೃಷ್ಣೇ ಕೃತ್ವಾ ಗೃಹಂ ನಯೇತ್ ॥ ೭ ॥

ಪ್ರಾತಃ ಸ್ನಾನಂ ತಥಾ ನದ್ಯಾಂ ಕೃತ್ವಾ ಹ್ಯಭ್ಯರ್ಚಯೇತ್ಸುಧೀಃ ।
ತ್ರಿರಾತ್ರಸ್ಯೋಪವಾಸಸ್ಯ ಯದಾ ಶಕ್ತೋ ಭವೇತ್ ದ್ವಿಜ ॥ ೮ ॥

---

೪. ಆಷಾಢಮಾಸದಲ್ಲಿ ನದಿಗಳು ಪ್ರವಾಹದಿಂದ ಕೂಡಿರುತ್ತವೆ. ನೀರು ಬಹುವಾಗಿ ಇರುವಾಗ ಆ ವ್ರತವನ್ನು ಮಾಡಬೇಕು.

೫. ಮಳೆ ಹುಯ್ಯುತ್ತಿರುವಾಗ ಮೋಡವು ಬಹಳವಾಗಿರುವಾಗ ಈ ವ್ರತವನ್ನು ಮಾಡಬೇಕು. ನದಿಯು ಪ್ರವಾಹದಿಂದ ಹೆಚ್ಚಿ ಎರಡು ದಡಗಳನ್ನು ಕಟ್ಟಿ ಹರಿಯುತ್ತಿರಬೇಕು.

೬. ಮೂರು ರಾತ್ರಿಗಳವರೆಗೆ ಈ ವ್ರತವನ್ನು ಮಾಡಬೇಕು. ಆಗ ಯಾವಾಗಲೂ ಆ ನದಿಯನ್ನೇ ನೋಡುತ್ತಿರಬೇಕು ಮತ್ತು ಪಾಡ್ಯದ ಚಂದ್ರನನ್ನು ನೋಡಿಕೊಂಡು ಅಂದಿನಿಂದ ಮೂರು ದಿನಗಳವರೆಗೆ ಮಾಡಬೇಕು

೭. ಹೆಂಗಸರು ಒಂದು ಪ್ರಸಿದ್ಧವಾದ ನದಿಯ ಬಳಿಗೆ ಹೋಗಬೇಕು. ಅದಿಲ್ಲದಿದ್ದರೆ ಒಂದು ಕಪ್ಪಾದ ಗಡಿಗೆಯಲ್ಲಿ ತುಂಬಿ ಆ ನೀರನ್ನು ಮನೆಗೆ ತರಬೇಕು.

೮. ವ್ರತಮಾಡತಕ್ಕವನು ಬೆಳಗ್ಗೆ ನದಿಯಲ್ಲಿ ಸ್ನಾನಮಾಡಿ ಪೂಜಿಸಬೇಕು. ಈ ವ್ರತವನ್ನು ಮೂರುದಿವಸ ಪೂರ್ತಿಯಾಗಿ ಉಪವಾಸವಿದ್ದು ಮಾಡಬೇಕು.

ಅಶಕ್ತಶ್ಚೈಕಭುಕ್ತಂ ಚ ಕುರ್ಯಾಚ್ಚೈವಾಪ್ಯುಪೋಷಣಂ ।
ದೀಪಂ ದದ್ಯಾದವಿಚ್ಛಿನ್ನಂ ಪ್ರಾತಸ್ಸಾಯಂ ಚ ಪೂಜನಂ　　॥ ೯ ॥

ಮಹಾನದೀಂ ಸಮುಚ್ಚಾರ್ಯ ನಾಮ್ನಾ ವೈ ವರುಣಂ ತಥಾ ।
ಜಲಮೂಲೇ ತು ಸಂಸ್ಥಾಪ್ಯ ಕೇಶವಂ ಜಲಶಾಯಿನಂ　　॥ ೧೦ ॥

ನಮೋ ದೇವ್ಯೈ ಚ ಗಂಗೇತಿ ಗೌತಮೀತಿ ನದೀತಿ ಚ ।
ಸಿಂಧೋ ಚೈವ ಚ ಕಾವೇರಿ ಸರಸ್ವತಿ ನಮೋಽಸ್ತು ತೇ　　॥ ೧೧ ॥

ತಾಪೀ ಪಯೋಷ್ಣೀ ಪೂರ್ಣೇತಿ ಮಹೇಂದ್ರಸುಖದೇತಿ ಚ ।
ಕಾಶ್ಯಪೀ ಗಂಡಕೀ ಚೈವ ಸಿಂಧುನದ್ಯೈ ನಮೋ ನಮಃ　　॥ ೧೨ ॥

ವರುಣಾಯ ನಮಸ್ತೇಽಸ್ತು ಜಲವಾಸ ಹರಿಪ್ರಿಯ ।
ಯದೋನಾಥ ರಸೇಶಾನ ಕಲ್ಯಾಣಂ ದೇಹಿ ಮೇ ಸದಾ　　॥ ೧೩ ॥

---

೯. ಮೂರುದಿವಸ ಉಪವಾಸವಿರಲು ಸಾಧ್ಯವಿಲ್ಲದಿದ್ದರೆ ಒಪ್ಪತ್ತಾದರೂ ಊಟಮಾಡಬಹುದು. ಮೂರುದಿವಸವೂ ಯಾವಾಗಲೂ ದೀಪವು ಉರಿಯುತ್ತಿರಬೇಕು. ಬೆಳಗ್ಗೆ ಸಾಯಂಕಾಲ ಪೂಜೆಗಳನ್ನು ಮಾಡುತ್ತಿರಬೇಕು.

೧೦. ಸ್ನಾನಮಾಡುವಾಗ ಜಲಶಾಯಿಯಾದ ಕೇಶವದೇವರನ್ನು ನದಿಯ ದಡದಲ್ಲಿಟ್ಟು ಮಹಾನದಿಯ ಹೆಸರುಗಳನ್ನು ಹೇಳಿ ಸ್ನಾನಮಾಡಬೇಕು.

೧೧–೧೨. ದೇವಿಯಾದ ಗಂಗೆಯೇ! ನಿನಗೆ ನಮಸ್ಕಾರವು. ಗೌತಮಿಗೆ ನಮಸ್ಕಾರವು. ಸಮುದ್ರವೇ! ನಿನಗೆ ನಮಸ್ಕಾರವು ಸರಸ್ವತಿಯೇ! ನಿನಗೆ ನಮಸ್ಕಾರವು. ತಪತೀಪಯೋಷ್ಣಿಗಳೇ! ನಿಮಗೆ ನಮಸ್ಕಾರವು. ಗಂಡಕೀ ನದಿಯೇ! ನಿನಗೆ ನಮಸ್ಕಾರವು. ಸಿಂಧೂ ನದಿಯೇ! ನಿನಗೆ ನಮಸ್ಕಾರವು.

೧೩. ಜಲವಾಸಿಯಾದ ಹರಿಪ್ರಿಯನಾದ ಜಲಜಂತುಗಳಿಗೆ ಒಡೆಯನಾದ ರಸಗಳಿಗೆ ಒಡೆಯನಾದ ವರುಣನೇ! ನಿನಗೆ ನಮಸ್ಕಾರವು. ನನಗೆ ಕಲ್ಯಾಣವನ್ನು ಉಂಟುಮಾಡು.

ಗೃಹಾಣಾರ್ಘ್ಯಂ ಮಯಾ ದತ್ತಂ ದೇಹಿ ಮೇ ವಾಂಛಿತಂ ಫಲಂ ।
ಕೂಶ್ಮಾಂಡೈರ್ನಾರಿಕೇಳೈಶ್ಚ ಫಲೈಃ ಕಾಲೋದ್ಭವೈಃ ಶುಭೈಃ ॥ ೧೪ ॥

ನೈವೇದ್ಯಂ ಘೃತಪಕ್ವಂ ತು ಸರಿತಸ್ಸಂಪ್ರಕಲ್ಪಯೇತ್ ।
ನಮಸ್ತೇ ಕೇಶವಾನಂತ ಜಲಶಾಯಿನ್ನಮೋಸ್ತುತೇ ॥ ೧೫ ॥

ಪರಿಪಾಲಯ ಮಾಮೀಶ ಗೋವಿಂದ ವರದೋ ಭವ ।
ಏವಂ ಪೂಜಾ ಪ್ರಕರ್ತವ್ಯಾ ಯಥಾಕಾಲಕ್ರಮೇಣ ತು ॥ ೧೬ ॥

ಪ್ರಾರ್ಥನಾ ಚೋಪಚಾರೈಸ್ತು ತ್ರಿರಾತ್ರನಿಯಮಶ್ಶುಚಿಃ ।
ಪಾರಣೇನ ತು ಸಂಪೂಜ್ಯ ಜಲಪಾತ್ರಂ ಸಮಾಚರೇತ್ ॥ ೧೭ ॥

ಫಲಪುಷ್ಪೈಸ್ತಥಾ ವಿದ್ವನ್ ಸ್ತ್ರೀಭಿರ್ಬಾಲೈರ್ನರೈರಪಿ ।
ಗೀತವಾದಿತ್ರ ಸಹಿತೈರ್ನದೀಕುಂಭಪರಿಪ್ಲುತೈಃ ॥ ೧೮ ॥

---

೧೪. ಎಲೈ ವರುಣನೇ! ನಾನು ಕೊಡುವ ಅರ್ಘ್ಯವನ್ನು ಸ್ವೀಕರಿಸು. ನನಗೆ ಬೇಕಾದ ಇಷ್ಟವನ್ನು ಕೊಡು. ಕುಂಬಳಕಾಯಿ ತೆಂಗಿನಕಾಯಿ ಆ ಕಾಲದಲ್ಲಿ ಹುಟ್ಟತಕ್ಕ ಹಣ್ಣುಗಳು ಕಾಯಿಗಳು ಇವನ್ನು ಗಾರಿಗೆ ಮುಂತಾದುವುಗಳನ್ನೂ ಆ ನದಿಗೆ ನಿವೇದನ ಮಾಡಿ ಪೂಜಿಸಬೇಕು.

೧೫-೧೬. ಕೇಶವನೇ! ನಮಸ್ಕಾರವು ಅನಂತನೇ! ನಮಸ್ಕಾರವು. ಜಲಶಾಯಿಯೇ! ನಮಸ್ಕಾರವು. ಎಲೈ ಸರ್ವಶಕ್ತನೇ! ನನ್ನನ್ನು ಕಾಪಾಡು. ಗೋವಿಂದನೇ! ವರವನ್ನು ಕೊಡು. ಈ ರೀತಿಯಾಗಿ ಕಾಲವನ್ನು ಅನುಸರಿಸಿ ಪೂಜಿಸಬೇಕು.

೧೭- ಈ ಪ್ರಾರ್ಥನೆ ಮುಂತಾದುವನ್ನು ಮಾಡಿಕೊಂಡು ಮೂರು ರಾತ್ರಿಗಳು ನಿಯಮದಿಂದ ಪೂಜಿಸಬೇಕು. ನಾಲ್ಕನೆಯ ದಿನ ಪಾರಣೆ ಮಾಡಬೇಕು. ಆಗ ಆ ಜಲಪಾತ್ರೆಯನ್ನು (ಕಲಶವನ್ನು) ದಾನಮಾಡಬೇಕು.

೧೮. ಹೆಂಗಸರು ಹುಡುಗರು ದೊಡ್ಡವರು ಎಲ್ಲರೂ ಸೇರಿಕೊಂಡು ಹಣ್ಣು ಹೂವುಗಳನ್ನು ಅರ್ಪಿಸಿ ಗಾನ ವಾದ್ಯಗಳನ್ನು ಮಾಡುತ್ತ ನದಿಯಿಂದ ಬಿಂದಿಗೆಯಲ್ಲಿ ನೀರನ್ನು ಹುಯ್ಯುತ್ತ ಪೂಜಿಸಬೇಕು.

**ಜಲೇ ಜಲೇ ಸಮಾಸ್ಥಾಪ್ಯ ಫಲಪುಷ್ಪೈಃ ಪ್ರಪೂಜಯೇತ್ ।**
**ಧಾನ್ಯೈರ್ನಾನಾವಿಧೈಶ್ಚೈವ ಜಲಪ್ರಕ್ಷೇಪಣೈರಪಿ　　॥ ೧೯ ॥**

**ಹಾಸ್ಯೈರ್ಗೀತೈಶ್ಚ ನೃತ್ಯೈಶ್ಚ ಗೃಹಮಾಗತ್ಯ ಯತ್ನತಃ ।**
**ಸಪ್ತಧಾನ್ಯೈಃ ಪೂರಿತಾನಿ ವಂಶಪಾತ್ರಾಣಿ ಪೂಜಯೇತ್　　॥ ೨೦ ॥**

**ಸಪ್ತವಾ ಪಂಚ ವಾ ತ್ರೀಣಿ ಯಥಾಶಕ್ತಿ ಪ್ರಪೂಜಯೇತ್ ।**
**ತ್ರಿರಾತ್ರಂ ಚ ನದೀತೋಯಂ ನ ಪಿಬೇದ್ವ್ರತಮಿಚ್ಛತಾ　　॥ ೨೧ ॥**

**ಪಾರಣೇ ತು ಹವಿಷ್ಯಾನ್ನಂ ಹ್ಯತಂ ವಾ ಅನ್ಯಥಾ ಭವೇತ್ ।**
**ಕೃತೇ ಸ್ನಾನಾರ್ಚನೇ ದಾನೇ ನೋಪಯೋಜ್ಯಂ ನದೀಜಲಂ　　॥ ೨೨ ॥**

**ಶುಚ್ಯನ್ನಾನಿ ಚ ಭೋಜ್ಯಾನಿ ದಾಂಪತ್ಯತ್ರಿತಯಂ ತಥಾ ।**
**ಸಪ್ತೈವ ವಂಶಪಾತ್ರಾಣಿ ಸಪ್ತ ವೈ ಮಣಿಕಾಸ್ತಥಾ　　॥ ೨೩ ॥**

---

೧೯-೨೧.. ಆ ಸುತ್ತಲೂ ಇರುವ ನೀರಿನ ಜಾಗಗಳಿಗೆಲ್ಲಾ ಹೋಗಿ ಅಲ್ಲಿ ಆ ದೇವರನ್ನಿಟ್ಟು ಪೂಜಿಸಬೇಕು. ಮತ್ತು ಕುಣಿತ ಗಾನಗಳನ್ನು ಮಾಡಬೇಕು. ಅನಂತರ ಮನೆಗೆ ಬರಬೇಕು. ಬಿದಿರಿನ ಕುಕ್ಕೆಗಳಲ್ಲಿ ಏಳು ಬಗೆಯ ಧಾನ್ಯಗಳನ್ನು ಹಾಕಿ ಪೂಜಿಸಬೇಕು. ಪ್ರತ್ಯೇಕವಾಗಿ ಏಳು ಪಾತ್ರೆ (ಮೊರ) ಗಳಲ್ಲಿ ತುಂಬಿರಬೇಕು. ಅಥವಾ ಐದರಲ್ಲಾದರೂ ಆಗಬಹುದು. ಅದಿಲ್ಲದಿದ್ದರೆ ಮೂರರಲ್ಲಿ ತುಂಬಬಹುದು. ತುಂಬಲು ಸಾಧ್ಯವಾಗದಿದ್ದರೆ ಕೈಲಾದಷ್ಟನ್ನು ಹಾಕಬಹುದು. ಈ ವ್ರತಕಾಲದಲ್ಲಿ ಮೂರು ದಿನವೂ ನದಿಯ ನೀರನ್ನು ಕುಡಿಯಬಾರದು.

೨೨. ಪಾರಣೆಯ ದಿನ ಹವಿಷ್ಯಾನ್ನವನ್ನು ಊಟಮಾಡಬೇಕು. ಬೇರೆಯಾದರೆ ವ್ರತವು ಕೆಟ್ಟುಹೋಗುತ್ತದೆ. ಈ ವ್ರತವನ್ನು ಮಾಡುತ್ತಿರುವಾಗ ಸ್ನಾನ, ಅರ್ಚನೆ, ದಾನ ಇವುಗಳಾವುದಕ್ಕೂ ನದಿಯ ನೀರನ್ನು ಉಪಯೋಗಿಸಕೂಡದು.

೨೩. ಪಾರಣೆಯಲ್ಲಿ ಶುಚಿಯಾದ ಅನ್ನವನ್ನೇ ಊಟಮಾಡಬೇಕು. ಮೂರು ಜನ ದಂಪತಿಗಳನ್ನೂ ಊಟ ಮಾಡಿಸಬೇಕು. ಏಳು ಮೊರಗಳಲ್ಲಿ ಏಳು ಧಾನ್ಯಗಳನ್ನು ಇಟ್ಟು ಪೂಜಿಸಬೇಕು.

**ಹವಿಷ್ಯಾನ್ನಂ ಚ ಭುಂಜೀತ ಕಟ್ವಮ್ಲಮಧುವರ್ಜಿತಂ ।**
**ಮಾಷಾನ್ನಂ ಚ ಶಿಲಾಪಿಷ್ಟಂ ಯತ್ನೇನ ಪರಿವರ್ಜಯೇತ್ ॥ ೨೪ ॥**

**ಏವಂ ವರ್ಷತ್ರಯಂ ಕುರ್ಯಾದ್ವ್ರತಮೇತದ್ದ್ವಿಜೋತ್ತಮ ।**
**ವರ್ಷತ್ರಯೇ ಸಮಾಪ್ತೇ ವಂ ತಸ್ಯೋದ್ಯಾಪನಮಾಚರೇತ್ ॥ ೨೫ ॥**

**ಕೃಷ್ಣಾಂ ಗಾಂ ಕೃಷ್ಣವಸ್ತ್ರಾಂ ಚ ತಿಲಾನ್ದದ್ಯಾಚ್ಚ ನಾರದ ।**
**ದಂಪತೀ ಪರಿಧಾಪ್ಯೈವಂ ಸುವರ್ಣಂ ಚಾಪಿ ಶಕ್ತಿತಃ ॥ ೨೬ ॥**

**ಹೈಮಂ ಚ ವರುಣಂ ಕುರ್ಯಾನ್ನದೀರೂಪೇಣ ನಾರದ ।**
**ಮಂಡಲಂ ವಾರುಣಂ ಚೈವ ಸರ್ವತೋಭದ್ರಮೇವ ಚ ॥ ೨೭ ॥**

**ಕುಂಭಂ ತತ್ರ ಪ್ರತಿಷ್ಠಾಪ್ಯ ಸೋಪಹಾರಂ ಪ್ರತಿಷ್ಠಿತಂ ।**
**ಸಂಪೂಜ್ಯ ವಿಧಿವದ್ಭಕ್ತ್ಯಾ ತತೋ ವಿಪ್ರಾಯ ದಾಪಯೇತ್ ॥ ೨೮ ॥**

---

೨೪. ಹವಿಷ್ಯಾನ್ನವನ್ನು ಊಟಮಾಡಬೇಕು. ಕಾರ, ಹುಳಿ, ಸಿಹಿಗಳನ್ನು ಉಪಯೋಗಿಸಕೂಡದು. ಕಲ್ಲಿನಿಂದ ಅರೆದ ಅಥವಾ ಬೀಸಿದ ಹಿಟ್ಟನ್ನು ಉಪಯೋಗಿಸಕೂಡದು.

೨೫. ಈ ವ್ರತವನ್ನು ಮೂರು ವರ್ಷಗಳವರೆಗೂ ಮಾಡಬೇಕು. ಮೂರು ವರ್ಷಗಳಾಗುತ್ತಲೂ ಉದ್ಯಾಪನೆಯನ್ನು ಮಾಡಬೇಕು.

೨೬. ಕಪ್ಪುಹಸುವನ್ನೂ ಕಪ್ಪು ಬಟ್ಟೆಯನ್ನೂ ಕಪ್ಪು ಎಳ್ಳನ್ನೂ ದಾನ ಮಾಡಬೇಕು. ದಂಪತಿಗಳಿಗೆ ಅಂಥಹ ಕಪ್ಪು ವಸ್ತ್ರಗಳನ್ನೇ ಹೊದಿಸಿ ಉಡಿಸಿ ಚಿನ್ನದ ಒಡವೆಗಳಿಂದ ಸಂತೋಷಪಡಿಸಬೇಕು.

೨೭-೨೮. ಚಿನ್ನದಲ್ಲಿ ವರುಣ ಪ್ರತಿಮೆಯನ್ನು ಮಾಡಿಸಬೇಕು. ಆ ಪ್ರತಿಮೆಯು ನದಿಯಲ್ಲಿರುವಂತಿರಬೇಕು. ವರುಣ ಮಂಡಲವನ್ನಾಗಲೀ ಸರ್ವತೋ ಭದ್ರಮಂಡಲವನ್ನಾಗಲೀ ಮಾಡಿ ಅದರಲ್ಲಿ ಕಲಶವನ್ನಿಡಬೇಕು. ಅದನ್ನು ನೈವೇದ್ಯಾದಿಗಳಿಂದ ಪೂಜಿಸಿ ಅನಂತರ ಬ್ರಾಹ್ಮಣನಿಗೆ ದಾನ ಮಾಡಬೇಕು.

ಬ್ರಾಹ್ಮಣಾನ್ಭೋಜಯೇದ್ಭಕ್ತ್ಯಾ ಯಥಾವಿತ್ತಾನುಸಾರತಃ ।
ಗುರವೇಽರ್ಚಿತಶೀಲಾಯ ಸರ್ವಶಾಸ್ತ್ರರತಾಯ ಚ ॥ ೨೯ ॥

ಏವಂ ಕೃತೇ ತು ತದ್ವಿದ್ವನ್ ಪರಿಪೂರ್ಣಂ ವ್ರತಂ ಭವೇತ್ ।
ಸೌಭಾಗ್ಯಂ ಸುಖಸಂಪತ್ತಿಃ ಸಂತತಿಶ್ಚಾಕ್ಷಯಾ ಭವೇತ್ ॥ ೩೦ ॥

ನ ದುರ್ಗತಿಮವಾಪ್ನೋತಿ ಚಿರಂ ಸ್ವರ್ಗೇ ಮಹೀಯತೇ ।
ದೇವಪತ್ನೀಭಿರಾಚೀರ್ಣಮೃಷಿಪತ್ನೀಭಿರೇವ ಚ ॥ ೩೧ ॥

ನಾಗಸಿದ್ಧಾಂಗನಾಭಿಶ್ಚ ವ್ರತಮೇತತ್ಪುರಾಕೃತಂ ।
ನದೀತ್ರಿರಾತ್ರಮತುಲಂ ಕಿಮನ್ಯಚ್ಛ್ರೋತುಮಿಚ್ಛಸಿ ॥
ಸೌಭಾಗ್ಯಂ ಸಂತತಿಂ ಚೈವ ನಿಶ್ಚಯಂ ಪ್ರಾಪ್ನುತೇ ಸದಾ ॥ ೩೨ ॥

ಇತಿ ಶ್ರೀ ಮಹಾಪುರಾಣೇ ಪಾದ್ಮೇ ಉತ್ತರಖಂಡೇ ಉಮಾಪತಿ
ನಾರದ ಸಂವಾದೇ ನದೀ ತ್ರಿರಾತ್ರವ್ರತಂ ನಾಮ
ಏಕಸಪ್ತತಿತಮೋಽಧ್ಯಾಯಸ್ಸಮಾಪ್ತಃ

---

೨೯. ತನ್ನ ಯೋಗ್ಯತೆಗನುಗುಣವಾಗಿ ಬ್ರಾಹ್ಮಣರಿಗೆ ಸಂತರ್ಪಣೆ ಮಾಡಿಸಬೇಕು. ಒಳ್ಳೆಯ ಯೋಗ್ಯನಾದ ಶಾಸ್ತ್ರಾಧ್ಯಯನ ಮಾಡಿರುವ ಗುರುವಿಗೆ ಪೂಜೆಮಾಡಿ ಆ ಕುಂಭವನ್ನು ದಾನಮಾಡಬೇಕು.

೩೦-೩೨. ಹೀಗೆ ಮಾಡಿದರೆ ಆ ವ್ರತವು ಸಂಪೂರ್ಣವಾಗುತ್ತದೆ. ಮತ್ತು ಸೌಭಾಗ್ಯ, ಸುಖ, ಸಂತಾನ ಇವು ಅಕ್ಷಯವಾಗುತ್ತವೆ. ನರಕ ಬರುವುದಿಲ್ಲ. ಬಹುಕಾಲ ಸ್ವರ್ಗದಲ್ಲಿ ಸುಖಿಸುತ್ತಾನೆ. ಈ ವ್ರತವನ್ನು ದೇವತೆಗಳ ಹೆಂಡಿರೂ ಋಷಿಗಳ ಹೆಂಡಿರೂ ನಾಗಗಳ ಸ್ತ್ರೀಯರೂ ಸಿದ್ಧಾಂಗನೆಯರೂ ಪೂರ್ವದಲ್ಲಿ ಮಾಡಿದ್ದಾರೆ. ಈ ರೀತಿಯಾಗಿ ಈ ನದೀ ತ್ರಿರಾತ್ರವೆಂಬ ವ್ರತವನ್ನು ಹೇಳಿದ್ದೇನೆ. ಇದನ್ನು ಮಾಡಿದರೆ ಸೌಭಾಗ್ಯ ಸಂತತಿಗಳು ಸತ್ಯವಾಗಿಯೂ ಉಂಟಾಗುತ್ತವೆ. ಮತ್ತೇನನ್ನು ಕೇಳಬೇಕೆಂದಿದ್ದೀಯೆ? ಕೇಳು. ಹೇಳುತ್ತೇನೆ.

ಇಂತು ಶ್ರೀ ಪದ್ಮಮಹಾಪುರಾಣದ ಉತ್ತರಖಂಡದ ಉಮಾಪತಿ
ನಾರದರ ಸಂವಾದದಲ್ಲಿ ನದೀ ತ್ರಿರಾತ್ರ ವ್ರತ ಎಂಬ
ಎಪ್ಪತ್ತೊಂದನೆಯ ಅಧ್ಯಾಯವು ಮುಗಿದುದು.



॥ ಶ್ರೀಃ ॥

-X-

# ಅಥ ಶ್ರೀ ಮಹಾಪುರಾಣೇ ಪಾದ್ಮೇ ಉತ್ತರಖಂಡೇ

## ॥ ದ್ವಿಸಪ್ತತಿತಮೋಽಧ್ಯಾಯಃ ॥



॥ ಋಷಯ ಊಚುಃ ॥

**ಸೂತ ಜೀವ ಚಿರಂ ಸಾಧೋ ತ್ವಯಾತಿಕರುಣಾತ್ಮನಾ ।**
**ಸಂವಾದೋ ಹ್ಯದ್ಭುತಃ ಪ್ರೋಕ್ತೋ ಯಶ್ಚಾಸೀನ್ನಾರದೇಶಯೋಃ ॥ ೧ ॥**

**ಭಗವನ್ನಾಮಮಹಿಮಾ ನಾರದೇನ ಮಹಾತ್ಮನಾ ।**
**ಕೀದೃಕ್ ಶ್ರುತಃ ಸಮಾಖ್ಯಾಹಿ ಶ್ರದ್ಧಯಾ ಶೃಣ್ವತಾಂ ಗುರೋ ॥ ೨ ॥**

॥ ಸೂತ ಉವಾಚ ॥

**ಶೃಣುಧ್ವಂ ಮುನಯಸ್ಸರ್ವೇ ಪುರಾವೃತ್ತಂ ವದಾಮ್ಯಹಂ ।**
**ಯಸ್ಮಿನ್ ಶ್ರುತೇ ದ್ವಿಜಶ್ರೇಷ್ಠಾಃ ಕೃಷ್ಣೇ ಭಕ್ತಿರ್ವಿವರ್ಧತೇ ॥ ೩ ॥**

---

## ಎಪ್ಪತ್ತೆರಡನೆಯ ಅಧ್ಯಾಯವು



೧. ಋಷಿಗಳು ಹೇಳಿದರು–ಎಲೈ ಸಾಧುವಾದ ಕರುಣಾಶಾಲಿಯಾದ ಸೂತನೇ ! ಬಹುಕಾಲ ಬದುಕು. ಈಶ್ವರ ನಾರದರ ಈ ಅದ್ಭುತವಾದ ಮೂರು ಕಥೆಗಳನ್ನು ಹೇಳಿದೆಯಲ್ಲ!

೨. ಎಲೈ ಸೂತನೇ ! ನೀನು ನಾರದನಿಂದ ಭಗವಂತನನಾಮ ಮಹಿಮೆಯನ್ನು ಹೇಗೆ ಕೇಳಿದ್ದೀಯೆ ? ಹಾಗೆಯೇ ಅದನ್ನು ನಮ್ಮಲ್ಲಿ ಶ್ರದ್ಧೆಯಿಂದ ಹೇಳು.

೩. ಸೂತನು ಹೇಳಿದನು–ಎಲೈ ಋಷಿಗಳಿರಾ ! ನೀವೆಲ್ಲರೂ ಕೇಳಿರಿ. ಹಿಂದಿನ ಒಂದು ವಿಷಯವನ್ನು ಹೇಳುತ್ತೇನೆ. ಅದನ್ನು ಕೇಳಿದರೆ ಕೃಷ್ಣನಲ್ಲಿ ಭಕ್ತಿಯು ಹೆಚ್ಚುತ್ತದೆ.

ಏಕದಾ ನಾರದೋ ದ್ರಷ್ಟುಂ ಪಿತರಂ ಸುಸಮಾಹಿತಃ ।
ಜಗಾಮ ಮೇರುಶಿಖರಂ ಸಿದ್ಧಚಾರಣಸೇವಿತಂ || ೪ ||

ತತ್ರ ದೇವಂ ಸಮಾಸೀನಂ ಬ್ರಹ್ಮಾಣಂ ಜಗತಾಂ ಪತಿಂ ।
ನಮಸ್ಕೃತ್ವಾಬ್ರವೀದ್ವಿಪ್ರಾ ನಾರದೋ ಮುನಿಸತ್ತಮಃ || ೫ ||

|| ನಾರದ ಉವಾಚ ||

ನಾಮ್ನೋಽಸ್ಯ ಯಾವತೀಶಕ್ತಿರ್ವದ ವಿಶ್ವೇಶ್ವರ ಪ್ರಭೋ ।
ಕೀದೃಕ್ಚ ನಾಮಮಹಿಮಾ ಅವ್ಯಯಸ್ಯ ಮಹಾತ್ಮನಃ || ೬ ||

ಯೋಽಯಂ ವಿಶ್ವೇಶ್ವರಸ್ಸಾಕ್ಷಾದಯಂ ನಾರಾಯಣೋ ಹರಿಃ ।
ಪರಮಾತ್ಮಾ ಹೃಷೀಕೇಶಃ ಸರ್ವಜೀವೇಷು ಸಮ್ಮತಃ || ೭ ||

ಮಾಯಾವಿಮೋಹಿತಾಸ್ಸರ್ವೇ ಭಗವನ್ತಮಧೋಕ್ಷಜಂ ।
ನೈವ ಜಾನಂತ್ಯಸಾರೇಽಸ್ಮಿನ್ನರಾ ಮೂಢಾಃ ಕಲೌ ಯುಗೇ || ೮ ||

---

೪. ನಾರದನು ತನ್ನ ತಂದೆಯಾದ ಬ್ರಹ್ಮನನ್ನು ನೋಡಲು ಒಂದುಸಾರಿ ಸಿದ್ಧಚಾರಣರಿಂದ ಸೇವಿತವಾದ ಮೇರುವಿನ ಶಿಖರಕ್ಕೆ ಹೋದನು.

೫. ಈ ನಾರದನು ಅಲ್ಲಿ ದೇವತೆಗಳೊಡನೆ ಕುಳಿತಿರುವ ಜಗತ್ಪತಿಯಾದ ಬ್ರಹ್ಮನನ್ನು ನೋಡಿ ನಮಸ್ಕರಿಸಿ ಇಂತೆಂದನು.

೬. ನಾರದನು ಹೇಳಿದನು–ಎಲೈ ಬ್ರಹ್ಮನೇ ! ನಾಮ ಮಹಿಮೆಯು ಯಾವ ರೀತಿಯಾದುದು ? ಆ ಸ್ವಾಮಿಯ ನಾಮ ಮಹಿಮೆಗೆ ಎಷ್ಟು ಶಕ್ತಿಯಿದೆ ಯೆಂಬುದನ್ನು ಹೇಳು.

೭. ಯಾವನು ಪ್ರತ್ಯಕ್ಷನಾದ ವಿಶ್ವೇಶ್ವರನೋ ಅವನೇ ಹರಿಯು. ಆ ಹೃಷೀಕೇಶನೇ ಪರಮಾತ್ಮನು. ಎಲ್ಲಾ ವೇದಕ್ಕೂ ಸಮ್ಮತನಾಗಿರುವನು.

೮. ಈ ಪ್ರಪಂಚದ ಜನರೂ ಎಲ್ಲರೂ ಮಾಯೆಯಿಂದ ಆ ಸ್ವಾಮಿಯನ್ನು ತಿಳಿಯರು.

|| ಬ್ರಹ್ಮೋವಾಚ ||

ಅಸ್ಮಿನ್ಕಲೌ ವಿಶೇಷೇಣ ನಾಮೋಚ್ಚಾರಣಪೂರ್ವಕಂ ।
ಭಕ್ತಿಃ ಕಾರ್ಯಾ ಯಥಾ ವತ್ಸ ತಥಾ ತ್ವಂ ಶ್ರೋತುಮರ್ಹಸಿ || ೯ ||

ದೃಷ್ಟಂ ಪತೇಷಾಂ ಪಾಪಾನಾಮನುಕ್ತಾನಾಂ ವಿಶೋಧನಂ ।
ವಿಷ್ಣೋರ್ಜಿಷ್ಣೋಃ ಪ್ರಯತ್ನೇನ ಸ್ಮರಣಂ ಪಾಪನಾಶನಂ || ೧೦ ||

ಮಿಥ್ಯಾ ಜ್ಞಾತ್ವಾ ತತಸ್ಸರ್ವಂ ಹರೇರ್ನಾಮ ಪಠನ್ ಜಪನ್ ।
ಸರ್ವಪಾಪವಿನಿರ್ಮುಕ್ತೋ ಯಾತಿ ವಿಷ್ಣೋಃ ಪರಂ ಪದಂ || ೧೧ ||

ಯೇ ವದಂತಿ ನರಾ ನಿತ್ಯಂ ಹರಿರಿತ್ಯಕ್ಷರದ್ವಯಂ ।
ತಸ್ಯೋಚ್ಚಾರಣಮಾತ್ರೇಣ ವಿಮುಕ್ತಾಸ್ತೇ ನ ಸಂಶಯಃ || ೧೨ ||

ಪ್ರಾಯಶ್ಚಿತ್ತಾನಿ ಸರ್ವಾಣಿ ತಪಃಕರ್ಮಾತ್ಮಕಾನಿ ವೈ ।
ಯಾನಿ ತೇಷಾಮಶೇಷಾಣಾಂ ಕೃಷ್ಣಾನುಸ್ಮರಣಂ ಪರಂ || ೧೩ ||

---

೯. ಬ್ರಹ್ಮನು ಹೇಳಿದನು-ಎಲೈ ನಾರದನೆ ! ಕಲಿಯುಗದಲ್ಲಿ ಜನರು ಆ ಸ್ವಾಮಿಯ ನಾಮವನ್ನು ಹೇಳುತ್ತ ಆ ಸ್ವಾಮಿಯಲ್ಲಿ ಭಕ್ತಿಯನ್ನು ಮಾಡಬೇಕು. ಅದನ್ನು ಹೇಳುತ್ತೇನೆ. ಕೇಳು.

೧೦. ಪ್ರತಾಪಶಾಲಿಯಾದ ಆ ವಿಷ್ಣುವಿನ ನಾಮಸ್ಮರಣವು ತಿಳಿದ ಮತ್ತು ತಿಳಿಯದ ಪಾಪಗಳನ್ನು ನಾಶಮಾಡುತ್ತದೆ.

೧೧. ಪ್ರಪಂಚವೆಲ್ಲವನ್ನೂ ಕೂಡ ಸುಳ್ಳೆಂದು ತಿಳಿದು ಹರಿಯ ನಾಮವನ್ನು ಸ್ಮರಿಸುತ್ತ ಬಂದರೆ ಪಾಪಗಳೆಲ್ಲವನ್ನು ಕಳೆದುಕೊಂಡು ವೈಕುಂಠವನ್ನು ಹೊಂದುತ್ತಾನೆ.

೧೨. ಯಾವ ಮನುಷ್ಯರು ಹರಿಯೆಂಬ ಎರಡಕ್ಷರವನ್ನು ಹೇಳುತ್ತಾರೆಯೋ ಅದನ್ನು ಉಚ್ಚರಿಸಿದ ಮಾತ್ರದಿಂದಲೇ ಅವರು ಆ ಪಾಪದಿಂದ ಮುಕ್ತರಾಗುತ್ತಾರೆ. ಸಂಶಯವಿಲ್ಲ.

೧೩. ಪ್ರಪಂಚದಲ್ಲಿ ಪ್ರಾಯಶ್ಚಿತ್ತಗಳು ತಪಸ್ಸುಗಳು ಕರ್ಮಗಳು ಇವೆಲ್ಲಕ್ಕಿಂತಲೂ ಶ್ರೀ ಕೃಷ್ಣನ ನಾಮ ಸ್ಮರಣೆಯೇ ಉತ್ತಮವಾದುದು.

ಪ್ರಾತರ್ನಿಶಿ ತಥಾ ಸಾಯಂ ಮಧ್ಯಾಹ್ನಾದಿಷು ಸಂಸ್ಮರನ್ ।
ನಾರಾಯಣಮವಾಪ್ನೋತಿ ಸದ್ಯಃ ಪಾಪಕ್ಷಯೋ ನರಃ ॥ ೧೪ ॥

ವಿಷ್ಣುಸಂಸ್ಮರಣಾದೇವ ಸಮಸ್ತಕ್ಲೇಶಸಂಕ್ಷಯೇ ।
ಮುಕ್ತಿಂ ಪ್ರಯಾತಿ ಸ್ವರ್ಗಾಪ್ತಿಸ್ತಸ್ಯ ವಿಷ್ಣೋಸ್ತು ಕೀರ್ತನಾತ್ ॥ ೧೫ ॥

ವಾಸುದೇವೇ ಮನೋ ಯಸ್ಯ ಜಪಹೋಮಾರ್ಚನಾದಿಷು ।
ತದಕ್ಷಯಂ ವಿಜಾನೀಯಾದ್ಯಾವದಿಂದ್ರಾಶ್ಚತುರ್ದಶ ॥ ೧೬ ॥

ಕ್ವ ನಾಕಪೃಷ್ಠಗಮನಂ ಪುನರಾವೃತ್ತಿಲಕ್ಷಣಂ ।
ಕ್ವ ಜಪೋ ವಾಸುದೇವಸ್ಯ ಮುಕ್ತಿಬೀಜಮನುತ್ತಮಂ ॥ ೧೭ ॥

ತತ್ಸುಖಂ ಪರಮಂ ತೀರ್ಥಂ ಯತ್ರಾವರ್ತಂ ವಿತನ್ವತೀ ।
ನಮೋ ನಾರಾಯಣಾಯೇತಿ ಭಾತಿ ಪ್ರಾಚೀ ಸರಸ್ವತೀ ॥ ೧೮ ॥

---

೧೪. ಬೆಳಗ್ಗೆ, ರಾತ್ರಿ, ಸಾಯಂಕಾಲ, ಮಧ್ಯಾಹ್ನಗಳಲ್ಲಿ ನಾರಾಯಣನನ್ನು ಸ್ಮರಿಸುತ್ತಿದ್ದರೆ ಒಡನೆಯೇ ಪಾಪವು ಹೋಗಿ ವೈಕುಂಠವನ್ನು ಹೊಂದುತ್ತಾನೆ.

೧೫. ವಿಷ್ಣುವೆಂದು ಸ್ಮರಿಸುವುದರಿಂದಲೇ ಸಮಸ್ತ ಕ್ಲೇಶಗಳೂ ಹೋಗುತ್ತವೆ. ಮತ್ತು ಸ್ವರ್ಗ ಮುಕ್ತಿಗಳನ್ನು ಹೊಂದುತ್ತಾರೆ.

೧೬. ಜಪ, ಹೋಮ, ಅರ್ಚನೆಗಳನ್ನು ಮಾಡುತ್ತಿರುವಾಗ ಯಾವನು ವಾಸುದೇವನಲ್ಲಿಯೇ ಮನಸ್ಸಿಟ್ಟು ಇರುವನೋ ಅದು ಅಕ್ಷಯವಾಗಿ ಹದಿನಾಲ್ಕು ಜನ ಇಂದ್ರರಿರುವವರೆಗೂ ವೃದ್ಧಿಯಾಗುತ್ತವೆ.

೧೭. ವಾಸುದೇವನ ನಾಮ ಜಪವು ಬಹು ಚಿಕ್ಕದೂ ಸುಲಭವೂ ಆದುದಾಗಿದ್ದರೂ ಉತ್ತಮವಾದ ಮತ್ತೆ ಹುಟ್ಟದಂತಿರುವ ಮುಕ್ತಿಯನ್ನು ಕೊಡುತ್ತದೆ

೧೮. "ನಮೋ ನಾರಾಯಣ" ಎಂಬ ಸರಸ್ವತಿ ತೀರ್ಥವು ಸುಳಿಗಳನ್ನುಂಟುಮಾಡುತ್ತ ಸುಖವಾದ ಪರಮಾನಂದತೀರ್ಥವಾಗಿ ಪ್ರಕಾಶಿಸುತ್ತದೆ.

ತಸ್ಮಾದಹರ್ನಿಶಂ ವಿಷ್ಣುಸ್ಮರಣಾತ್ಪುರುಷೋತ್ತಮಃ ।
ನ ಯಾತಿ ನರಕಂ ಪುತ್ರ ಸಂಕ್ಷೀಣಾಖಿಲಕಲ್ಮಷಃ ॥ ೧೯ ॥

ಸತ್ಯಂ ಸತ್ಯಂ ಪುನಸ್ಸತ್ಯಂ ಭಾಷಿತಂ ಮಮ ಸುವ್ರತ ।
ನಾಮೋಚ್ಚಾರಣಮಾತ್ರೇಣ ಮಹಾಪಾಪಾತ್ಪ್ರಮುಚ್ಯತೇ ॥ ೨೦ ॥

ರಾಮ ರಾಮೇತಿ ರಾಮೇತಿ ರಾಮೇತಿ ಚ ಪುನರ್ಜಪನ್ ।
ಸ ಚಾಂಡಾಲೋಽಪಿ ಪೂತಾತ್ಮಾ ಜಾಯತೇ ನಾತ್ರ ಸಂಶಯಃ ॥ ೨೧ ॥

ಕುರುಕ್ಷೇತ್ರಂ ತಥಾ ಕಾಶೀ ಗಯಾ ವೈ ದ್ವಾರಕಾ ತಥಾ ।
ಸರ್ವಂ ತೀರ್ಥಂ ಕೃತಂ ತೇನ ನಾಮೋಚ್ಚಾರಣಮಾತ್ರತಃ ॥ ೨೨ ॥

ಕೃಷ್ಣ ಕೃಷ್ಣೇತಿ ಕೃಷ್ಣೇತಿ ಇತಿ ವಾ ಯೋ ಪಠೇ ಜಪನ್ ।
ಇಹಲೋಕಂ ಪರಿತ್ಯಜ್ಯ ಮೋದತೇ ವಿಷ್ಣುಸನ್ನಿಧೌ ॥ ೨೩ ॥

---

೧೯. ಎಲೈ ನಾರದನೆ! ಆದ್ದರಿಂದ ಬುದ್ಧಿವಂತನಾದ ಮನುಷ್ಯನು ಯಾವಾಗಲೂ ವಿಷ್ಣುಸ್ಮರಣೆಯನ್ನು ಮಾಡುವುದರಿಂದ ಪಾಪವನ್ನು ಕಳೆದು ಕೊಂಡು ನರಕವನ್ನು ಹೊಂದುವುದಿಲ್ಲ.

೨೦. ಎಲೈ ನಾರದನೇ! ಇದು ಸತ್ಯವು, ಸತ್ಯವು, ಮೂರುಬಾರಿಗೂ ಸತ್ಯವು. ಈ ನಾಮಗಳನ್ನು ಉಚ್ಚಾರ ಮಾಡುವುದರಿಂದಲೇ ಮಹಾ ಪಾಪಗಳೆಲ್ಲವೂ ಹೋಗುತ್ತವೆ.

೨೧. ರಾಮ, ರಾಮ, ರಾಮ ಎಂದು ಜಪಿಸುತ್ತಿದ್ದರೆ ಚಾಂಡಾಲನೂ ಕೂಡ ಪರಿಶುದ್ಧನಾಗುವುದರಲ್ಲಿ ಸಂಶಯವಿಲ್ಲ.

೨೨. ಈ ರಾಮನಾಮವನ್ನು ಜಪಿಸುತ್ತಿದ್ದರೆ ಆ ಜಾಗವೇ ಕುರುಕ್ಷೇತ್ರ, ಕಾಶಿ, ಗಯೆ, ದ್ವಾರಕೆ ಎಲ್ಲಾ ತೀರ್ಥಗಳೂ ಆಗುತ್ತವೆ.

೨೩. ಕೃಷ್ಣ, ಕೃಷ್ಣ, ಕೃಷ್ಣ ಎಂದು ಯಾವನು ಪಠಿಸುವನೋ ಜಪಿಸುವನೋ ಅವನು ಈ ಲೋಕವನ್ನು ಬಿಟ್ಟನಂತರ ವಿಷ್ಣುವಿನ ಸನ್ನಿಧಿಯಲ್ಲಿ ಸುಖಿಸುತ್ತಾನೆ.

ನೃಸಿಂಹೇತಿ ಮುದಾ ವಿಪ್ರ ವರ್ತತೇ ಯೋ ಜಪನ್ಪಠನ್ ।
ಮಹಾಪಾಪತ್ಪ್ರಮುಚ್ಯೇತ ಕಲೌ ಭಾಗವತೋ ನರಃ ॥ ೧೪ ॥

ಧ್ಯಾಯನ್ಕೃತೇ ಜಪನ್ಯಜ್ಞೈಸ್ತ್ರೇತಾಯಾಂ ದ್ವಾಪರೇಽರ್ಚಯನ್ ।
ಯದಾಪ್ನೋತಿ ತದಾಪ್ನೋತಿ ಕಲೌ ಸಂಕೀರ್ತ್ಯ ಕೇಶವಂ ॥ ೧೫ ॥

ಯೇ ತಜ್ಜ್ಞಾತ್ವಾ ನಿಮಗ್ನಾಶ್ಚ ಜಗದಾತ್ಮನಿ ಕೇಶವೇ ।
ಸರ್ವಪಾಪಪರಿಕ್ಷೀಣಾ ಯಾನ್ತಿ ವಿಷ್ಣೋಃ ಪರಂ ಪದಂ ॥ ೧೬ ॥

ಮತ್ಸ್ಯಃ ಕೂರ್ಮೋ ವರಾಹಶ್ಚ ನೃಸಿಂಹೋ ವಾಮನಸ್ತಥಾ ।
ರಾಮೋ ರಾಮಶ್ಚ ಕೃಷ್ಣಶ್ಚ ಬುದ್ಧಃ ಕಲ್ಕೀ ತತಸ್ಸ್ಮೃತಃ ॥ ೧೭ ॥

ಏತೇ ದಶಾವತಾರಾಶ್ಚ ಪೃಥಿವ್ಯಾಂ ಪರಿಕೀರ್ತಿತಾಃ ।
ಏತೇಷಾಂ ನಾಮಮಾತ್ರೇಣ ಬ್ರಹ್ಮಹಾ ಶುದ್ಧ್ಯತೇ ಸದಾ ॥ ೧೮ ॥

---

೧೪. ನರಸಿಂಹ ನರಸಿಂಹ ಎಂದು ಯಾವನು ಜಪಿಸುತ್ತಾನೆಯೋ ಪಠಿಸುತ್ತಾನೆಯೋ ಅವನು ಮಹಾ ಪಾಪದಿಂದ ಪಾರಾಗುತ್ತಾನೆ.

೧೫. ತ್ರೇತಾಯುಗದಲ್ಲಿ ಜಪಿಸಿಯೂ ಯಜ್ಞಮಾಡಿಯೂ ದ್ವಾಪರದಲ್ಲಿ ಸ್ವಾಮಿಯನ್ನು ಪೂಜಿಸಿಯೂ, ಯಾವ ಫಲವನ್ನು ಹೊಂದುವನೋ ಆ ಫಲವನ್ನು ಕಲಿಯುಗದಲ್ಲಿ ಕೇಶವನ ನಾಮಸ್ಮರಣೆಯಿಂದಲೇ ಹೊಂದುತ್ತಾನೆ.

೧೬. ಯಾರು ಇದನ್ನು ತಿಳಿದು ಜಗತ್ತೇ ಆತ್ಮವಾಗಿ ಉಳ್ಳ ಕೇಶವನಲ್ಲಿ ಭಕ್ತಿಯಿಡುವರೋ ಅವರು ಪಾಪಗಳನ್ನು ಕಳೆದುಕೊಂಡು ವೈಕುಂಠವನ್ನು ಹೊಂದುತ್ತಾರೆ.

೧೭–೧೮. ಮತ್ಸ್ಯ, ಕೂರ್ಮ, ವರಾಹ, ನರಸಿಂಹ, ವಾಮನ, ರಾಮ, ಪರಶುರಾಮ, ಕೃಷ್ಣ, ಬುದ್ಧ, ಕಲ್ಕಿ ಈ ಹತ್ತು ಅವತಾರಗಳು ಪ್ರಪಂಚದಲ್ಲಿ ಪ್ರಸಿದ್ಧಿಗೊಂಡಿವೆ. ಈ ಹೆಸರುಗಳನ್ನು ಹೇಳಿದೊಡನೆಯೇ ಬ್ರಹ್ಮಹತ್ಯೆಯೂ ಕೂಡ ಹೋಗುತ್ತದೆ.

ಪ್ರಾತಃ ಪಠನ್ ಜಪನ್ ಧ್ಯಾಯನ್ ವಿಷ್ಣೋರ್ನಾಮ ಯಥಾ ತಥಾ ।
ಮುಚ್ಯತೇ ನಾತ್ರ ಸಂದೇಹಃ ಸ ವೈ ನಾರಾಯಣೋ ಭವೇತ್ ॥ ೨೯ ॥

॥ ಸೂತ ಉವಾಚ ॥

ಶ್ರುತ್ವಾ ವೈ ನಾರದೋ ಹ್ಯೇತದ್ವಿಸ್ಮಯಂ ಪರಮಂ ಗತಃ ।
ಉವಾಚ ಪಿತರಂ ತತ್ರ ಕಿಮುಕ್ತಂ ದೇವಸತ್ತಮ ॥ ೩೦ ॥

ದೇವಾಸ್ಸಹಸ್ರಶಸ್ಸನ್ತಿ ರುದ್ರಾಸ್ಸನ್ತಿ ಸ್ಸಹಸ್ರಶಃ ।
ಪಿತರಸ್ಸನ್ತಿ ಶತಶೋ ಯಕ್ಷಾಶ್ಚ ಕಿನ್ನರಾಸ್ತಥಾ ॥ ೩೧ ॥

ಭೂತಾಃ ಪ್ರೇತಾಃ ಪಿಶಾಚಾಶ್ಚ ಯೇ ಕೇಚಿದ್ದೇವಯೋನಯಃ ।
ತೇಷಾಂ ನಾಮ್ನಾಂ ಚ ಮಾಹಾತ್ಮ್ಯಂ ಶ್ರುತಂ ದೃಷ್ಟಂ ತಥಾ ನ ಚ ॥ ೩೨ ॥

ಶ್ರೀವಿಷ್ಣೋರ್ನಾಮಮಾಹಾತ್ಮ್ಯಂ ಯಾದೃಶಂ ಚ ಶ್ರುತಂ ಮಯಾ ।
ಯಸ್ಯ ವೈ ನಾಮಮಾತ್ರೇಣ ಮುಚ್ಯತೇ ನಾತ್ರ ಸಂಶಯಃ ॥ ೩೩ ॥

---

೨೯. ಆದ್ದರಿಂದ ಬೆಳಗ್ಗೆ ಆ ವಿಷ್ಣುವಿನ ನಾಮಗಳನ್ನು ಓದುತ್ತ, ಜಪಿಸುತ್ತ ಧ್ಯಾನಮಾಡುತ್ತಲಿರುವವನು ಪಾಪಗಳಿಂದ ಪಾರಾಗುತ್ತಾನೆಂಬುದರಲ್ಲಿ ಸಂದೇಹವಿಲ್ಲ ಅವನೇ ನಾರಾಯಣನೆಂದು ತಿಳಿ.

೩೦. ಸೂತನು ಹೇಳಿದನು–ನಾರದನು ತಂದೆಯಿಂದ ಈ ಮಾತನ್ನು ಕೇಳಿ ಬಹು ಆಶ್ಚರ್ಯಪಟ್ಟು ತಂದೆಯನ್ನು ಕುರಿತು ಏನೆಂದು ಹೇಳಿದನು ಎಂಬುದನ್ನು ಹೇಳುತ್ತೇನೆ.

೩೧–೩೨. ಪ್ರಪಂಚದಲ್ಲಿ ಸಾವಿರಾರು ಜನ ದೇವತೆಗಳೂ, ಸಾವಿರಾರು ಜನ ರುದ್ರರೂ, ಸಾವಿರಾರು ಜನ ಪಿತೃಗಳೂ, ಸಾವಿರಾರು ಜನ ಯಕ್ಷಕಿನ್ನರರುಗಳೂ ಇದ್ದಾರೆ. ಇನ್ನೂ ಭೂತಗಳೂ, ಪ್ರೇತಗಳೂ ಪಿಶಾಚಗಳೂ, ದೇವತೆಗಳ ಜಾತಿಯವರೂ ಅನೇಕರು ಇದ್ದುಕೊಂಡಿರುವರು. ಅವರೊಬ್ಬರ ಮಹಿಮೆಯನ್ನೂ ನೋಡಿಯೂ ಇಲ್ಲ. ಕೇಳಿಯೂ ಇಲ್ಲ.

೩೩. ಈ ವಿಷ್ಣುವಿನ ಮಹಿಮೆಯು ಆ ರೀತಿಯಾಗಿದೆಯೆಂದು ಕೇಳಿದೆನು. ಈ ನಾಮಸ್ಮರಣೆಯನ್ನು ಮಾಡಿದುದರಿಂದಲೇ ನರನು ಪಾಪಗಳಿಂದ ಮುಕ್ತನಾಗುನು ಎಂಬುದರಲ್ಲಿ ಸಂದೇಹವೇ ಇಲ್ಲ.

ಕಿಂ ವೈ ತೀರ್ಥಕೃತೇ ತಾತ ಪೃಥಿವ್ಯಾಮಟನೇ ಕೃತೇ ।
ಯಸ್ಯ ವೈ ನಾಮಮಹಿಮಾ ಶ್ರುತ್ವಾ ಮೋಕ್ಷಮವಾಪ್ನುಯಾತ್ ॥ ೩೪ ॥

ತನ್ಮುಖಂ ತು ಮಹತ್ತೀರ್ಥಂ ತನ್ಮುಖಂ ಕ್ಷೇತ್ರಮೇವ ಚ ।
ಯನ್ಮುಖೇ ರಾಮರಾಮೇತಿ ತನ್ಮುಖಂ ಸಾರ್ವಕಾಮಿಕಂ ॥ ೩೫ ॥

ಕಾನಿ ವೈ ತಸ್ಯ ನಾಮಾನಿ ಕೀರ್ತನೀಯಾನಿ ಸುವ್ರತ ।
ತತ್ಸರ್ವಂ ಚ ವಿಶೇಷೇಣ ಮಮ ಬ್ರೂಹಿ ಪಿತಾಮಹ ॥ ೩೬ ॥

॥ ಬ್ರಹ್ಮೋವಾಚ ॥

ವ್ಯಾಪಕೋಽಯಂ ಸದಾ ವಿಷ್ಣುಃ ಪರಮಾತ್ಮಾ ಸನಾತನಃ ।
ಅನಾದಿನಿಧನಶ್ಶ್ರೀಮಾನ್ ಭೂತಾತ್ಮಾ ಭೂತಭಾವನಃ ॥ ೩೭ ॥

ಯಸ್ಮಾದಹಂ ಹಿ ಸಂಜಾತಃ ಸೋಽಯಂ ವಿಷ್ಣುಸ್ಸದಾವತು ।
ಸೋಽಯಂ ಕಾಲಸ್ಯ ಕಾಲೋ ವೈ ಸೋಽಯಂ ಮಮ ತು ಪೂರ್ವಜಃ॥ ೩೮ ॥

---

೩೪. ತೀರ್ಥಯಾತ್ರೆಗೋಸ್ಕರ ಭೂಮಿಯನ್ನೆಲ್ಲಾ ಅಲೆದರೆ ಏನು ಪ್ರಯೋಜನ ? ಸ್ವಾಮಿಯ ಮಹಿಮೆಯನ್ನು ಇದ್ದ ಜಾಗದಲ್ಲಿಯೇ ಕೇಳಿದರೇನೇ ಮೋಕ್ಷವನ್ನು ಹೊಂದುವನು.

೩೫. ಯಾವನು ರಾಮ, ರಾಮ, ಎನ್ನುತ್ತಿರುವನೋ ಅವನ ಮುಖವೇ ತೀರ್ಥವು. ಅವನ ಮುಖವೇ ಕ್ಷೇತ್ರವು. ಅವನ ಮುಖವೇ ಎಲ್ಲವನ್ನೂ ಕೊಡುವಂಥಾದ್ದು.

೩೬. ಎಲೈ ಬ್ರಹ್ಮನೇ ! ಯಾವಾಗಲೂ ಹೇಳತಕ್ಕ ಆ ಸ್ವಾಮಿಯ ಹೆಸರುಗಳು ಯಾವುವು ? ಎಂಬುದನ್ನು ದಯವಿಟ್ಟು ನನಗೆ ತಿಳಿಸು.

೩೭–೩೮. ಬ್ರಹ್ಮನು ಹೇಳಿದನು :– ಈ ವಿಷ್ಣುವು ಎಲ್ಲಾ ಕಡೆಯಲ್ಲಿಯೂ ಇರುವನು. ಪರಮಾತ್ಮನು, ಮಂಗಳಕರನು, ಆದ್ಯಂತರಹಿತನು, ಶ್ರೀಮಂತನು, ಪ್ರಾಣಿಗಳಲ್ಲಿರತಕ್ಕವನು, ಯಾವ ವಿಷ್ಣುವಿನಿಂದಲೇ ನಾನು ಕೂಡ ಉತ್ಪನ್ನನಾದೆನೋ ಅಂತಹ ವಿಷ್ಣುವು ಯಾವಾಗಲೂ ಇರತಕ್ಕವನು. ಆ ವಿಷ್ಣುವು ಯಮನಿಗೂ ಯಮನು. ನನಗಿಂತಲೂ ಮೊದಲು ಹುಟ್ಟಿದವನು.

ಅಕ್ಷಯಃ ಪುಂಡರೀಕಾಕ್ಷೋ ಮತಿಮಾನವ್ಯಯಃ ಪುಮಾನ್ ।
ಶೇಷಶಾಯೀ ಸದಾ ವಿಷ್ಣುಃ ಸಹಸ್ರಶೀರ್ಷಾ ಮಹಾಪ್ರಭುಃ ॥ ೩೯ ॥

ಸರ್ವಭೂತಮಯಸ್ಸಾಕ್ಷಾತ್ ವಿಶ್ವರೂಪೋ ಜನಾರ್ದನಃ ।
ಕೈಟಭಾರಿರಯಂ ವಿಷ್ಣುರ್ಧಾತಾ ದೇವೋ ಜಗತ್ಪತಿಃ ॥ ೪೦ ॥

ತಸ್ಯಾಹಂ ನಾಮ ಗೋತ್ರಂ ಚ ನ ವೇದ್ಮಿ ಪುರುಷರ್ಷಭ ।
ವೇದವಾದೀ ಹ್ಯಹಂ ತಾತ ನಾಹಂ ಜ್ಞಾತಾ ಕದಾಚನ ॥ ೪೧ ॥

ಅತಸ್ತ್ವಂ ಗಚ್ಛ ದೇವರ್ಷೇ ಯತ್ರಾಸ್ತಿ ಕಿಲ ವಿಶ್ವರಾಟ್ ।
ಸ ಚ ತತ್ವಂ ಮುನಿಶ್ರೇಷ್ಠ ಸರ್ವಂ ತೇ ಕಥಯಿಷ್ಯತಿ ॥ ೪೨ ॥

ಸ ಏವ ಪುರುಷಶ್ಶ್ರೀಮಾನ್ ಕೈಲಾಸಾಧಿಪತಿಸ್ಸದಾ ।
ಸರ್ವೇಷಾಂ ಚೈವ ಭಕ್ತಾನಾಮಯಂ ದೇವಸ್ಸುರಾಧಿಪಃ ॥ ೪೩ ॥

---

೩೯. ಅವನು ನಾಶರಹಿತನು. ಪುಂಡರೀಕದಂತೆ ಕಣ್ಣುಳ್ಳವನು. ಜ್ಞಾನಿಯು ವೃದ್ಧಿ ಹೊಂದುವವನು. ಆದಿಶೇಷನಮೇಲೆ ಮಲಗಿರುವನು. ಸಾವಿರತಲೆಗಳುಳ್ಳವನು. ಪ್ರಭುವು.

೪೦. ಎಲ್ಲಾ ಭೂತಗಳೂ ಅವನಲ್ಲಿಯೇ ಇವೆ. ವಿಶ್ವರೂಪನೇ ಆ ಜನಾರ್ದನನಾಗಿರುವನು. ಈತನು ಕೈಟಭನನ್ನು ಕೊಂದಿರುವನು ಈ ವಿಷ್ಣುವೇ ಬ್ರಹ್ಮನು. ಇವನೇ ದೇವರು, ಜಗತ್ತಿಗೆಲ್ಲಾ ಒಡೆಯನು.

೪೧. ನಾನು ಯಾವಾಗಲೂ ವೇದಗಳನ್ನು ಓದುತ್ತಿದ್ದರೂ, ಆ ಸ್ವಾಮಿಯ ಹೆಸರು, ಗೋತ್ರ, ಕುಲ, ಸ್ವರೂಪಗಳನ್ನು ಸ್ವಲ್ಪವೂ ತಿಳಿಯೆನು

೪೨. ಎಲೈ ನಾರದನೇ ! ಆ ಸ್ವಾಮಿಯಿರುವಲ್ಲಿಗೆ ಹೋಗು. ಆತನೇ ನಿನಗೆಲ್ಲವನ್ನೂ ಹೇಳುತ್ತಾನೆ.

೪೩–೪೪. ಅವನೇ ಪುರುಷನು. ಕೈಲಾಸಕ್ಕೆ ಒಡೆಯನು. ಎಲ್ಲಾ ಭಕ್ತರಿಗೂ ದೇವನು. ದೇವತೆಗಳಿಗೂ ಒಡೆಯನು. ಅವನೇ ಐದು ಮುಖವುಳ್ಳ ಪಾರ್ವತಿ

ಪಂಚವಕ್ತ್ರೋ ಹ್ಯುಮಾಕಾನ್ತಃ ಸರ್ವದುಃಖನಿಬರ್ಹಣಃ ।
ವಿಶ್ವೇಶ್ವರೋ ವಿಶ್ವನಾಥಃ ಸರ್ವದಾ ಭಕ್ತವತ್ಸಲಃ
ತತ್ರ ಗಚ್ಛ ಸುರಶ್ರೇಷ್ಠ ಸರ್ವಂ ತೇ ಕಥಯಿಷ್ಯತಿ || ೪೪ ||

|| ಸೂತ ಉವಾಚ ||

ಪಿತುರ್ವಚನಮಾಕರ್ಣ್ಯ ತತ್ರ ಗನ್ತುಂ ಪ್ರಚಕ್ರಮೇ ।
ವಿಜ್ಞಾತುಂ ನಾಮಮಾಹಾತ್ಮ್ಯಂ ಕೈಲಾಸಭವನಂ ಪ್ರತಿ || ೪೫ ||

ಯತ್ರ ವಿಶ್ವೇಶ್ವರೋ ದೇವೋ ನಿತ್ಯಂ ತಿಷ್ಠತಿ ಭೂತಿದಃ ।
ಗತೋऽಸೌ ನಾರದಸ್ತತ್ರ ದೇವಂ ತಂ ಸುರಪೂಜಿತಂ || ೪೬ ||

ಕೈಲಾಸಶಿಖರಾಸೀನಂ ದೇವದೇವಂ ಜಗದ್ಗುರುಂ ।
ಪಂಚವಕ್ತ್ರಂ ದಶಭುಜಂ ತ್ರಿಣೇತ್ರಂ ಶೂಲಪಾಣಿನಂ || ೪೭ ||

ಕಪಾಲಿನಂ ಸಖಟ್ವಾಂಗಂ ತೀಕ್ಷ್ಣಶೂಲಾಸಿಧಾರಿಣಂ ।
ಪಿನಾಕಧಾರಿಣಂ ಭೀಮಂ ವರದಂ ವೃಷವಾಹನಂ || ೪೮ ||

---

ಪತಿಯಾದ, ದುಃಖನಾಶಕನಾದ, ವಿಶ್ವೇಶ್ವರನಾದ ಶಿವನು. ಅವನ ಬಳಿಗೆ ಹೋಗು. ಅವನು ಸುರರಲ್ಲಿ ಶ್ರೇಷ್ಠನು. ನಿನಗೆ ಎಲ್ಲವನ್ನೂ ಹೇಳುವನು.

೪೫. ಸೂತನು ಹೇಳಿದನು :– ಈ ರೀತಿಯಾಗಿ ನಾರದನು ತಂದೆಯ ಮಾತನ್ನು ಕೇಳಿ ವಿಷ್ಣುವಿನ ನಾಮಮಹಿಮೆಯನ್ನು ತಿಳಿಯಲು ಕೈಲಾಸಕ್ಕೆ ಹೋದನು.

೪೬. ವಿಶ್ವೇಶ್ವರನೂ, ದೇವವಂದ್ಯನೂ, ಐಶ್ವರ್ಯವನ್ನು ಕೊಡುವವನೂ ಆದ ಶಿವನು ಇರತಕ್ಕ ಕೈಲಾಸಕ್ಕೆ ಹೋಗಿ ಆ ಸ್ವಾಮಿಯನ್ನು ನೋಡಿದನು.

೪೭-೪೮. ಕೈಲಾಸಶಿಖರದಲ್ಲಿ ಕುಳಿತಿರುವ, ದೇವದೇವನಾದ, ಜಗದ್ಗುರುವಾದ, ಐದು ಮುಖವುಳ್ಳ, ಹತ್ತು ತೋಳುಗಳುಳ್ಳ ಮೂರು ಕಣ್ಣುಗಳಿರುವ, ಶೂಲಪಾಣಿಯಾದ, ಕಪಾಲವನ್ನು ಹಿಡಿದಿರುವ, ಖಟ್ವಾಂಗವೆಂಬ ಆಯುಧವನ್ನು ಹಿಡಿದಿರುವ, ಶೂಲಕತ್ತಿಗಳನ್ನು ಧರಿಸಿರುವ, ಪಿನಾಕವೆಂಬ ಧನುಸ್ಸುಳ್ಳ, ವರದನಾದ, ಭಯಂಕರನಾದ, ವೃಷಭವಾಹನನಾದ ಆ ಸ್ವಾಮಿಯನ್ನು ನೋಡಿದನು.

ಭಸ್ಮಾಂಗಂ ವ್ಯಾಳಶೋಭಾಢ್ಯಂ ಶಶಾಂಕಕೃತಶೇಖರಂ ।
ನೀಲಜೀಮೂತಸಂಕಾಶಂ ಸೂರ್ಯಕೋಟಿಸಮಪ್ರಭಂ ॥ ೪೯ ॥

ಕ್ರೀಡನ್ತಂ ತತ್ರ ದೇವೇಶಂ ಗಣೈಶ್ಚ ಪರಿವಾರಿತಂ ।
ತಂ ದದರ್ಶ ಸುರಶ್ರೇಷ್ಠಂ ನಾರದ ಋಷಿಸತ್ತಮಃ ॥ ೫೦ ॥

ನಮಶ್ಚಕ್ರೇ ತದಾ ತತ್ರ ಸಾಷ್ಟಾಂಗಂ ದಂಡವತ್ಪುನಃ ।
ತಂ ದೃಷ್ಟ್ವಾ ತು ಮಹಾದೇವೋ ವಿಸ್ಮಯೋತ್ಫುಲ್ಲಲೋಚನಃ ॥ ೫೧ ॥

ವೈಷ್ಣವಾನಾಂ ಪರಶ್ಶ್ರೇಷ್ಠಃ ಪ್ರಾಹ ಬಾಡಬಸತ್ತಮಂ ।
ಕಸ್ಮಾತ್ತ್ವಂ ಚ ಸಮಾಯಾತೋ ವದ ದೇವರ್ಷಿಸತ್ತಮ ॥ ೫೨ ॥

॥ ನಾರದ ಉವಾಚ ॥

ಏಕಸ್ಮಿನ್ನೇವ ಕಾಲೇ ತು ಗತೋಹಂ ಬ್ರಹ್ಮಣೋಂತಿಕಂ ।
ಶ್ರುತಂ ತತ್ರ ಮಯಾ ವಿಷ್ಣೋರ್ಮಾಹಾತ್ಮ್ಯಂ ಪಾಪನಾಶನಂ ॥ ೫೩ ॥

---

೪೯-೫೦. ಭಸ್ಮವನ್ನು ಬಳಿದುಕೊಂಡಿರುವ, ಹಾವನ್ನು ಕಟ್ಟಿಕೊಂಡಿರುವ, ಚಂದ್ರನನ್ನು ತಲೆಯಲ್ಲಿ ಹೊಂದಿರುವ, ನೀಲವಾದ ಮೋಡದಂತೆ ಬಣ್ಣವುಳ್ಳ, ಕೋಟಿ ಸೂರ್ಯರಂತೆ ತೇಜಸ್ಸುಳ್ಳ, ಗಣಗಳೊಡನೆ ಆ ಕೈಲಾಸದಲ್ಲಿ ಕ್ರೀಡಿಸುತ್ತಿರುವ ಆ ಶಿವನನ್ನು ನಾರದನು ನೋಡಿದನು.

೫೧. ಆ ನಾರದನು ಶಿವನನ್ನು ನೋಡಿದೊಡನೆಯೇ ಸಾಷ್ಟಾಂಗವಾಗಿ ನಮಸ್ಕರಿಸಿದನು. ಶಿವನು ಆ ನಾರದನನ್ನು ನೋಡಿ ಆಶ್ಚರ್ಯಗೊಂಡು ಸಂತೋಷಭರಿತನಾದನು.

೫೨. ವೈಷ್ಣವರಲ್ಲಿ ಮುಖ್ಯನಾದ ಆ ಶಿವನು ಆ ನಾರದನನ್ನು ನೋಡಿ ಎಲೈ ದೇವರ್ಷಿಯೇ ! ನೀನೇಕೆ ಇಲ್ಲಿಗೆ ಬಂದೆ ? ಹೇಳು ಎಂದನು.

೫೩. ನಾರದನು ಹೇಳಿದನು– ಎಲೈ ಶಿವನೇ ! ನಾನೊಂದುಬಾರಿ ಬ್ರಹ್ಮನ ಬಳಿಗೆ ಹೋಗಿದ್ದೆನು. ಅಲ್ಲಿ ಪಾಪನಾಶಕವಾದ ವಿಷ್ಣುವಿನ ಮಹಿಮೆಯನ್ನು ಕೇಳಿದೆನು.

ಬ್ರಹ್ಮಣಾ ಕಥಿತಂ ತತ್ರ ಮಮಾಗ್ರೇ ದೇವಸತ್ತಮ ।
ನಾಮ್ನೋಸ್ಯ ಯಾವತೀ ಶಕ್ತಿಃ ಸಾ ಶ್ರುತಾ ಬ್ರಹ್ಮಣೋ ಮುಖಾತ್ ॥ ೫೪ ॥

ತತ್ರ ಪೃಷ್ಟಂ ಮಯಾ ಪೂರ್ವಂ ವಿಷ್ಣೋರ್ನಾಮಸಹಸ್ರಕಂ ।
ತದಾಹಂ ಬ್ರಹ್ಮಣಾ ಚೋಕ್ತೋ ನಾಹಂ ಜಾನಾಮಿ ನಾರದ ॥ ೫೫ ॥

ಜಾನಾತ್ಯಯಂ ಮಹಾರುದ್ರಃ ತತ್ಸರ್ವಂ ಕಥಯಿಷ್ಯತಿ ।
ಮಹಾಶ್ಚರ್ಯಂ ತು ಸಂಪ್ರಾಪ್ಯ ಹ್ಯಾಗತಸ್ತವ ಸನ್ನಿಧೌ ॥ ೫೬ ॥

ಅಸ್ಮಿನ್ಕಲಿಯುಗೇ ಘೋರೇಽಲ್ಪಾಯುಷಶ್ಚೈವ ಮಾನವಾಃ ।
ವಿಧರ್ಮೇಷು ರತಾ ನಿತ್ಯಂ ನಾಮನಿಷ್ಠಾ ನ ವೈ ಪುನಃ ॥ ೫೭ ॥

ಪಾಷಂಡಿನಸ್ತಥಾ ವಿಪ್ರಾ ಧರ್ಮೇಷು ವಿರತಾಸ್ಸದಾ।
ಸಂಧ್ಯಾಹೀನಾ ವ್ರತಭ್ರಷ್ಟಾ ದುಷ್ಟಾ ಮಲಿನರೂಪಿಣಃ ॥ ೫೮ ॥

---

೫೪. ಆಗ ಬ್ರಹ್ಮನು ನನ್ನೆದುರಿಗೆ ವಿಷ್ಣುವಿನ ನಾಮಕ್ಕಿರುವ ಶಕ್ತಿಯನ್ನು ಹೇಳಿದನು. ಅವನ ಮುಖದಿಂದಲೇ ನಾನು ಕೇಳಿದೆನು.

೫೫. ಆ ಬ್ರಹ್ಮನು ಮೊದಲು ವಿಷ್ಣುವಿನ ಸಾವಿರ ನಾಮಗಳನ್ನು ಹೇಳಿ ಅನಂತರ ಎಲೈ ನಾರದನೆ! ಅವೆಲ್ಲವೂ ನನಗೆ ಸಂಪೂರ್ಣವಾಗಿ ತಿಳಿಯದು. ಎಂದನು.

೫೬. " ಆ ಮಹಾರುದ್ರನಿಗೆ ಅವೆಲ್ಲವೂ ತಿಳಿದಿರುವುದು. ಹೇಳುವನು " ಎನ್ನಲು, ನಾನು ಬಹು ಆಶ್ಚರ್ಯಪಟ್ಟು ನಿನ್ನ ಬಳಿಗೆ ಬಂದಿದ್ದೇನೆ.

೫೭. ಈ ಘೋರವಾದ ಕಲಿಯುಗದಲ್ಲಿ ಮನುಷ್ಯರಿಗೆ ಆಯುಸ್ಸೇ ಸ್ವಲ್ಪವು. ಯಾವಾಗಲೂ ಕೆಟ್ಟ ಕೆಲಸಗಳಲ್ಲಿಯೇ ಆಸಕ್ತರಾಗಿರುವವರು. ವಿಷ್ಣುವಿನ ಹೆಸರಿನಲ್ಲಿ ಆಸಕ್ತಿಯೇ ಇರುವುದಿಲ್ಲ.

೫೮. ಬ್ರಾಹ್ಮಣರು ನಾಸ್ತಿಕರಾಗಿರುವರು. ತಮ್ಮ ತಮ್ಮ ಧರ್ಮಗಳನ್ನು ಆಚರಿಸುವುದಿಲ್ಲ. ಸಂಧ್ಯಾವಂದನೆಯನ್ನು ಮಾಡುವುದಿಲ್ಲ. ವ್ರತಗಳನ್ನು ಆಚರಿಸುವುದಿಲ್ಲ. ದುಷ್ಟರೂ ಪಾಪಿಗಳೂ ಆಗಿರುವರು.

ಯಥಾ ವಿಪ್ರಾಸ್ತಥಾ ಕ್ಷತ್ರಾ ವೈಶ್ಯಾಶ್ಚೈವ ಪುನಃ ಪುನಃ ।
ಏವಂ ಶೂದ್ರಾಸ್ತಥಾನ್ಯೇ ಚ ನ ವೈ ಭಾಗವತಾ ನರಾಃ ॥ ೫೯ ॥

ಶೂದ್ರಾ ದ್ವಿಜಾತಿಬಾಹ್ಯಾಶ್ಚ ಕಲೌ ವಿಶ್ವೇಶ್ವರ ಪ್ರಭೋ ।
ಧರ್ಮಾಧರ್ಮೌ ನ ಜಾನಂತಿ ಹಿತಂ ವಾ ಽಹಿತಮೇವ ವಾ ॥ ೬೦ ॥

ಏವಂ ಜ್ಞಾತ್ವಾ ಹ್ಯಹಂ ಸ್ವಾಮಿನ್ನಾಗತಸ್ಸನ್ನಿಧೌ ತವ ।
ಪುನಶ್ಚ ನಾಮಮಾಹಾತ್ಮ್ಯಂ ಶ್ರುತಂ ವೈ ಬ್ರಹ್ಮಣೋ ಮುಖಾತ್ ॥ ೬೧ ॥

ತ್ವಂ ದೇವಸ್ಸರ್ವದೇವಾನಾಂ ತ್ವಂ ನಾಥೋ ಮಮ ಸರ್ವದಾ ।
ತ್ರಿಪುರಾರಿಶ್ಚ ವಿಶ್ವಾತ್ಮಾ ಧಾತಾ ತ್ವಂ ಚ ಪುನಃ ಪುನಃ ॥ ೬೨ ॥

ಕಥಯಸ್ವ ಪ್ರಸಾದೇನ ವಿಷ್ಣೋರ್ನಾಮಸಹಸ್ರಕಂ ।
ಸೌಭಾಗ್ಯಜನನಂ ಪುಂಸಾಂ ಪರಂ ಭಕ್ತಿಕರಂ ಸದಾ ॥ ೬೩ ॥

---

೫೯. ಬ್ರಾಹ್ಮಣರಂತೆಯೇ ಕ್ಷತ್ರಿಯರು. ಅವರಂತೆಯೇ ವೈಶ್ಯರು. ಅವರಂತೆಯೇ ಶೂದ್ರರೂ ಮತ್ತು ಉಳಿದವರೂ ಆಗಿ ಭಗವಂತನಲ್ಲಿ ಭಕ್ತಿ ಎಂಬುದನ್ನೇ ಇಟ್ಟಿಲ್ಲವು.

೬೦. ಬ್ರಾಹ್ಮಣರೂ ಶೂದ್ರರೂ ಉಳಿದ ಜಾತಿಯವರೂ ಈ ಕಲಿಯುಗದಲ್ಲಿ ಧರ್ಮ, ಅಧರ್ಮ, ಹಿತ, ಅಹಿತಗಳು ಇವೊಂದನ್ನೂ ತಿಳಿಯಲಾರರು.

೬೧. ಎಲೈ ವಿಶ್ವೇಶ್ವರನೇ! ಇದೆಲ್ಲವನ್ನೂ ತಿಳಿದು ನಾನು ನಿನ್ನ ಬಳಿಗೆ ಬಂದಿದ್ದೇನೆ. ಅಲ್ಲದೆ ಬ್ರಹ್ಮನ ಬಾಯಿಂದಲೂ ಕೂಡ ಆ ನಾಮ ಮಹಿಮೆಗಳನ್ನು ಕೇಳಿದೆನು.

೬೨–೬೩. ನೀನು ದೇವತೆಗಳಿಗೆಲ್ಲಾ ದೇವತೆಯು. ನನಗೆ ನೀನು ಒಡೆಯನು. ತ್ರಿಪುರವನ್ನು ನಾಶ ಮಾಡಿದವನು. ಬೇಕಾದುದನ್ನು ಕೊಡತಕ್ಕವನು. ಆದ್ದರಿಂದ ಆ ವಿಷ್ಣುವಿನ ನಾಮವನ್ನು ಹೇಳು. ಈ ಸಹಸ್ರನಾಮವು ಜನಗಳಿಗೆ

ಬ್ರಾಹ್ಮಣಾನಾಂ ಬ್ರಹ್ಮದಂ ಚ ಕ್ಷತ್ರಾಣಾಂ ಚ ಜಯಪ್ರದಂ ।
ವೈಶ್ಯಾನಾಂ ಧನದಂ ನಿತ್ಯಂ ಶೂದ್ರಾಣಾಂ ಸುಖದಾಯಕಂ　　|| ೬೪ ||

ತದಹಂ ಶ್ರೋತುಮಿಚ್ಛಾಮಿ ತ್ವತ್ಸಕಾಶಾನ್ಮಹೇಶ್ವರ ।
ತ್ವಂ ಸಮರ್ಥೋಽಸಿ ಭಕ್ತಾನಾಂ ಸರ್ವದಾ ಕೇಶವಂ ಪ್ರತಿ　　|| ೬೫ ||

ಕಥಯಸ್ವ ಪ್ರಸಾದೇನ ಯದ್ಗೋಪ್ಯಂ ತಚ್ಚ ಸುವ್ರತ ।
ಇದಂ ಪವಿತ್ರಂ ಪರಮಂ ಸರ್ವತೀರ್ಥಮಯಂ ಸದಾ ||
ಅತೋ ವೈ ಶ್ರೋತುಮಿಚ್ಛಾಮಿ ವದ ವಿಶ್ವೇಶ್ವರ ಪ್ರಭೋ　　|| ೬೬ ||

|| ಸೂತ ಉವಾಚ ||

ಶ್ರುತ್ವಾ ನಾರದವಾಕ್ಯಾನಿ ವಿಸ್ಮಯೋತ್ಫುಲ್ಲಲೋಚನಃ ।
ರೋಮಾಂಚಿತಸ್ತತೋ ಜಾತೋ ವಿಷ್ಣೋರ್ನಾಮಾನುಸಂಸ್ಮರನ್ || ೬೭ ||

---

ಭಾಗ್ಯವನ್ನು ಕೊಡುತ್ತದೆ. ಭಕ್ತಿಯನ್ನು ಹೆಚ್ಚಿಸುತ್ತದೆ. ಬ್ರಾಹ್ಮಣರಿಗೆ ಬ್ರಹ್ಮ ತೇಜಸ್ಸನ್ನೂ, ಕ್ಷತ್ರಿಯರಿಗೆ ಜಯವನ್ನೂ, ವೈಶ್ಯರಿಗೆ ಧನವನ್ನೂ, ಶೂದ್ರರಿಗೆ ಸುಖ ವನ್ನೂ ಕೊಡುತ್ತದೆ.

೬೫. ಅದನ್ನು ನಿನ್ನಿಂದ ಕೇಳಬೇಕೆಂದಿದ್ದೇನೆ. ನೀನು ಭಕ್ತರಿಗೆ ಆ ಕೇಶವನ ನಾಮಗಳನ್ನು ಹೇಳಲು ಸಮರ್ಥನಾಗಿದ್ದೀಯೆ.

೬೬. ಆ ಗೋಪ್ಯವಾದ ವಿಷಯವನ್ನು ಅನುಗ್ರಹಿಸಿ ಹೇಳು. ಇದು ಪವಿತ್ರವಾದುದು. ಸರ್ವತೀರ್ಥಮಯವಾದುದು. ಆದ್ದರಿಂದ ಅದನ್ನು ಕೇಳ ಬೇಕೆಂದಿದ್ದೇನೆ. ಎಲೈ ವಿಶ್ವೇಶ್ವರನೇ! ಅದನ್ನು ನೀನು ಹೇಳು.

೬೭. ಸೂತನು ಹೇಳಿದನು– ಶಿವನು ನಾರದನ ಮಾತುಗಳನ್ನು ಕೇಳಿ ವಿಷ್ಣುವಿನ ನಾಮಗಳನ್ನು ಜ್ಞಾಪಿಸಿಕೊಂಡು ಸಂತೋಷದಿಂದ ರೋಮಾಂಚವನ್ನು ಹೊಂದಿದನು.

|| ಈಶ್ವರ ಉವಾಚ ||

ಏತದ್ಗೋಪ್ಯಂ ಪರಂ ಬ್ರಹ್ಮ ವಿಷ್ಣೋರ್ನಾಮಸಹಸ್ರಕಂ ।
ಏತಚ್ಛ್ರುತ್ವಾ ನರೋ ವತ್ಸ ನ ಲಭೇದ್ದುರ್ಗತಿಂ ಕ್ವಚಿತ್ ||
ಕದಾಚಿಚ್ಚ ಗತೇ ಕಾಲೇ ಪಾರ್ವತೀ ಮಾಮುವಾಚ ಹ || ೬೮ ||

|| ಪಾರ್ವತ್ಯುವಾಚ ||

ಕೈಲಾಸಾಧಿಪತೇ ಮಹ್ಯಂ ಕಥಯಸ್ವ ಯಥಾ ತಥಾ ।
ತ್ವಂ ಕಿಂ ಜಪಸಿ ದೇವೇಶ ಸರ್ವೈಶ್ವರ್ಯಸಮನ್ವಿತಃ || ೬೯ ||

ಸದಾ ತ್ವಂ ಭಸ್ಮಲಿಪ್ತಾಂಗಃ ಕೃತ್ತಿವಾಸಾಸ್ಸದಾ ಕಥಂ ।
ಜಟಾಧರಃ ಕಥಂ ಜಾತೋ ವದ ವಿಶ್ವೇಶ್ವರ ಪ್ರಭೋ || ೭೦ ||

ತ್ವಂ ದೇವಸ್ಸರ್ವದೇವಾನಾಂ ತ್ವಂ ಗುರುಸ್ಸರ್ವಕರ್ಮಣಾಂ ।
ತ್ವಂ ಪತಿರ್ಮಮ ವಿಶ್ವೇಶ ವಿಶ್ವನಾಥ ಜಗತ್ಪ್ರಭೋ || ೭೧ ||

---

೬೮. ಈಶ್ವರನು ಹೇಳಿದನು–ಎಲೈ ನಾರದನೇ ! ಇದು ಗೋಪ್ಯವಾದುದು. ಈ ಸಹಸ್ರನಾಮವನ್ನು ಕೇಳಿದರೆ ಮನುಷ್ಯನಿಗೆ ನರಕಪ್ರಾಪ್ತಿಯಾಗುವುದಿಲ್ಲ. ಒಂದಾನೊಂದು ಕಾಲದಲ್ಲಿ ಪಾರ್ವತಿಯು ನನ್ನನ್ನು ಇಂತು ಪ್ರಶ್ನಿಸಿದಳು,

೬೯. ಪಾರ್ವತಿಯು ಹೇಳಿದಳು–ಎಲೈ ಕೈಲಾಸಾಧಿಪತಿಯೇ ! ನೀನೇನನ್ನು ಜಪಿಸುತ್ತಿದ್ದೀಯೆ? ಬೇಕಾದಷ್ಟು ಐಶ್ವರ್ಯವಿದೆಯಲ್ಲ! ನಿನಗೆ ಜಪವೇತಕ್ಕೆ ? ಅದೇನೆಂಬುದನ್ನು ನನಗೆ ಸರಿಯಾಗಿ ಹೇಳು.

೭೦. ನೀನು ಯಾವಾಗಲೂ ಬೂದಿಯನ್ನು ಬಳಿದುಕೊಂಡು ಇರುತ್ತೀಯೆ. ಆನೆಯ ಚರ್ಮವನ್ನೇ ಹೊದೆದುಕೊಂಡಿರುತ್ತೀಯೆ. ಜಟೆಯನ್ನು ಧರಿಸಿರುತ್ತೀಯೆ. ಇವುಗಳೇಕೆ ಎಂಬುದನ್ನು ಹೇಳು.

೭೧. ನೀನು ಎಲ್ಲಾ ದೇವತೆಗಳಿಗೂ ದೇವರು. ಎಲ್ಲಾ ಕರ್ಮಗಳಿಗೂ ಗುರುವು. ನನಗೆ ನೀನು ಪತಿಯು. ವಿಶ್ವೇಶ್ವರನಾಗಿದ್ದೀಯೆ ಜಗತ್ತಿಗೆ ಒಡೆಯನಾಗಿದ್ದೀಯೆ. ಆದರೂ ಹೀಗಿರುವುದೇಕೆ? ಇವೆಲ್ಲವನ್ನೂ ಹೇಳು.

|| ಮಹಾದೇವ ಉವಾಚ ||

ಇತಿ ಪೃಷ್ಟಂ ಮಮ ಬ್ರಹ್ಮನ್ ಪಾರ್ವತ್ಯಾ ಚ ಪುನಃ ಪುನಃ |
ತದಾ ಸರ್ವಂ ಮಯಾಖ್ಯಾತಂ ತಸ್ಯಾಶ್ಚಾಗ್ರೇ ವಿಶೇಷತಃ || ೭೨ ||

ಶೃಣು ನಾರದ ವಕ್ಷ್ಯಾಮಿ ಯದುಕ್ತಂ ಪಾರ್ವತೀಂ ಪ್ರತಿ |
ಯೇನ ಪ್ರಸನ್ನೋ ಭಗವಾನ್ಮುಕ್ತಿದಾತಾ ನ ಸಂಶಯಃ || ೭೩ ||

ಮಮಾಯಂ ತು ಪಿತಾ ಸಾಕ್ಷಾತ್ ಬಂಧುಶ್ಚೈವ ತು ಸರ್ವದಾ |
ತಸ್ಯಾಹಂ ಸರ್ವದಾ ಭಕ್ತೋ ಹ್ಯಯಂ ಮಮ ಪತಿಸ್ಸದಾ ||
ತದಹಂ ಸಂಪ್ರವಕ್ಷ್ಯಾಮಿ ಶೃಣುಷ್ವ ಗದತೋ ಮಮ || ೭೪ ||

|| ಸೂತ ಉವಾಚ ||

ಏವಮುಕ್ತ್ವಾ ನಾರದಾಯ ಕಥಯಾಮಾಸ ವೈ ದ್ವಿಜಾಃ |
ಉಮಾಯೈ ಯತ್ಪುರಾ ಪ್ರೋಕ್ತಂ ವಿಷ್ಣೋರ್ನಾಮಸಹಸ್ರಕಂ || ೭೫ ||

---

೭೨. ಮಹಾದೇವನು ಹೇಳಿದನು–ಎಲೈ ನಾರದನೆ ! ಹೀಗೆ ಪಾರ್ವತಿಯು ಮತ್ತೆ ಮತ್ತೆ ನನ್ನನ್ನು ಕೇಳುತ್ತಿರಲು ಆಗ ನಾನು ಅವಳೆದುರಿಗೆ ಎಲ್ಲವನ್ನೂ ಹೇಳಿದೆನು.

೭೩. ಎಲೈ ನಾರದನೇ ! ಪಾರ್ವತಿಗೆ ನಾನು ಹೇಳಿದುದನ್ನು ಹೇಳುತ್ತೇನೆ. ಕೇಳು. ಅದರಿಂದ ಆ ಭಗವಂತನು ಪ್ರಸನ್ನನಾಗಿ ಮುಕ್ತಿಯನ್ನು ಕೊಡುತ್ತಾನೆ. ಸಂಶಯವಿಲ್ಲ.

೭೪. ಇವನು ನನಗೆ ತಂದೆಯು. ಬಂಧುವು. ಆ ಸ್ವಾಮಿಗೆ ನಾನು ಯಾವಾಗಲೂ ಭಕ್ತನು. ಆದ್ದರಿಂದ ಹೇಳುತ್ತೇನೆ. ಕೇಳು.

೭೫. ಸೂತನು ಹೇಳಿದನು–ನಾರದನಿಗೆ ಹೀಗೆಂದು ಹೇಳಿ ತಾನು ಹಿಂದೆ ಪಾರ್ವತಿಗೆ ಹೇಳಿದ ವಿಷ್ಣುಸಹಸ್ರನಾಮವನ್ನು ಹೇಳಲು ಮೊದಲುಮಾಡಿದನು.

ಮಹೇಶಾಚ್ಚೈವ ತತ್ಪ್ರಾಪ್ತಂ ಕೈಲಾಸೇ ನಾರದೇನ ವೈ ।
ಕದಾಚಿದ್ದೈವಯೋಗೇನ ಕೈಲಾಸಾತ್ಸ ಸಮಾಗತಃ ॥ ೭೬ ॥

ನೈಮಿಷಾರಣ್ಯಸಂಜ್ಞೇ ತು ತೀರ್ಥೇ ವೈ ಪರಮಾದ್ಭುತೇ ।
ತತ್ರ ತೇ ಋಷಯಸ್ಸರ್ವೇ ದೃಷ್ಟ್ವಾ ತಮೃಷಿಸತ್ತಮಂ ॥ ೭೭ ॥

ಪೂಜಾಂ ಚಕ್ರುರ್ವಿಶೇಷೇಣ ನಾರದಾಯ ಮಹಾತ್ಮನೇ ।
ಆಗತಂ ನಾರದಂ ಜ್ಞಾತ್ವಾ ವಿಸ್ಮಯೋತ್ಫುಲ್ಲಲೋಚನಾಃ ॥ ೭೮ ॥

ಪುಷ್ಪವೃಷ್ಟಿಂ ಪ್ರಚಕ್ರುಸ್ತೇ ವೈಷ್ಣವೇ ದ್ವಿಜಸತ್ತಮೇ ।
ಪಾದ್ಯಮರ್ಘ್ಯಂ ತತಃ ಕೃತ್ವಾ ಕೃತ್ವಾ ಚಾರಾರ್ತಿಕಂ ತತಃ ॥ ೭೯ ॥

ನಿವೇದ್ಯ ಫಲಮೂಲಾನಿ ದಂಡವತ್ಪತಿತಾ ಭುವಿ ।
ಊಚುಶ್ಚ ಕೃತಕೃತ್ಯಾ ಸ್ಮೋ ವಂಶೇ ಹ್ಯಸ್ಮಿನ್ಮಹಾಮುನೇ ॥ ೮೦ ॥

ಭವತೋ ದರ್ಶನಂ ಜಾತಂ ಪವಿತ್ರಂ ಪಾಪನಾಶನಂ ।
ತ್ವತ್ಪ್ರಸಾದಾಚ್ಚ ದೇವರ್ಷೇ ಪುರಾಣಾನಿ ಶ್ರುತಾನಿ ಚ ॥ ೮೧ ॥

---

೭೬. ಕೈಲಾಸದಲ್ಲಿ ಶಿವನಿಂದ ನಾರದನು ಈ ಸಹಸ್ರನಾಮವನ್ನು ಹೊಂದಿದನು ಹೀಗಿರಲು ಕೈಲಾಸದಿಂದ ಒಂದುಬಾರಿ ನಾರದನು ಇಲ್ಲಿಗೆ ಬಂದನು.

೭೭–೮೧. ಒಂದುಸಾರಿ ಉತ್ತಮವಾದ ನೈಮಿಶಾರಣ್ಯದ ತೀರ್ಥದಲ್ಲಿ ಋಷಿಗಳೆಲ್ಲರೂ ಸೇರಿರುವಾಗ ನಾರದನು ಬರಲು ಅವನಿಗೆ ಎಲ್ಲರೂ ವಿಶೇಷವಾದ ಪೂಜೆಯನ್ನು ಮಾಡಿದರು. ನಾರದನು ಬಂದುದನ್ನು ನೋಡಿ ಸಂತೋಷಪಟ್ಟು ಅವನಮೇಲೆ ಪುಷ್ಪವೃಷ್ಟಿಯನ್ನು ಮಾಡಿದರು. ಅವನಿಗೆ ಪಾದ್ಯ ಅರ್ಘ್ಯಗಳನ್ನು ಕೊಟ್ಟು ಮಂಗಳಾರತಿ ಎತ್ತಿ ಫಲ ಮೂಲಗಳನ್ನು ನಿವೇದನಮಾಡಿ ದಂಡ ನಮಸ್ಕಾರ ಮಾಡಿದರು. ಎಲೈ ನಾರದನೇ! ನಾವು ಕೃತಕೃತ್ಯರಾದೆವು. ನಮ್ಮ ವಂಶವೂ ಪವಿತ್ರವಾಯಿತು. ನಿನ್ನ ದರ್ಶನವು ಉಂಟಾದುದರಿಂದ ಪಾಪವು ನಾಶವಾಗಿ ಪವಿತ್ರರಾದೆವು. ನಿನ್ನ ಅನುಗ್ರಹದಿಂದ ಪುರಾಣಗಳೆಲ್ಲವನ್ನೂ ಕೇಳಿದೆವು.

ಬ್ರಹ್ಮನ್ಕೇನ ಪ್ರಕಾರೇಣ ಸರ್ವಪಾಪಕ್ಷಯೋ ಭವೇತ್ ।
ವಿನಾ ದಾನೇನ ಸಹಸಾ ವಿನಾ ತೀರ್ಥೈರ್ವಿನಾ ಮಖೈಃ ॥ ೮೨ ॥

ವಿನಾ ಯೋಗೈರ್ವಿನಾ ಧ್ಯಾನೈರ್ವಿನಾ ಚೇಂದ್ರಿಯನಿಗ್ರಹೈಃ ।
ವಿನಾ ಶಾಸ್ತ್ರಸಮೂಹೈಶ್ಚ ಕಥಂ ಮುಕ್ತಿರವಾಪ್ಯತೇ ॥ ೮೩ ॥

॥ ನಾರದ ಉವಾಚ ॥

ಕೈಲಾಸಶಿಖರಾಸೀನಂ ದೇವದೇವಂ ಜಗದ್ಗುರುಂ ।
ಪ್ರಣಿಪತ್ಯ ಮಹಾದೇವಂ ಪರ್ಯಪೃಚ್ಛದುಮಾ ಪ್ರಿಯಂ ॥ ೮೪ ॥

॥ ಪಾರ್ವತ್ಯುವಾಚ ॥

ಭಗವಂಸ್ತ್ವಂ ಪರೋ ಜೀವಃ ಸರ್ವಜ್ಞಸ್ಸರ್ವಪೂಜಿತಃ ।
ತ್ವಲ್ಲಿಂಗಮರ್ಚಿತಂ ದೈವೈಃ ಬ್ರಹ್ಮಸೂರ್ಯಾದಿಕೈರಪಿ ॥ ೮೫ ॥

---

೮೨. ಎಲೈ ನಾರದನೇ ! ದಾನಮಾಡದೆ ತೀರ್ಥದಲ್ಲಿ ಮಿಾಯದೆ ಯಾಗಗಳನ್ನು ಮಾಡದೆ ಜಾಗ್ರತೆಯಾಗಿ ಪಾಪವು ಹೇಗೆ ಹೋಗುತ್ತದೆ ? ಎಂಬುದನ್ನು ತಿಳಿಸು.

೮೩. ಯೋಗ, ಧ್ಯಾನ, ಇಂದ್ರಿಯನಿಗ್ರಹ, ಶಾಸ್ತ್ರಾಧ್ಯಯನಗಳೊಂದನ್ನೂ ಮಾಡದಿದ್ದರೂ ಮುಕ್ತಿಯು ಹೇಗೆ ಬರುತ್ತದೆ ? ಎಂಬುದನ್ನು ತಿಳಿಸು.

೮೪. ನಾರದನು ಹೇಳಿದನು–ಕೈಲಾಸದ ಶಿಖರದಲ್ಲಿ ಕುಳಿತಿರುವ ದೇವದೇವನೂ ಜಗದ್ಗುರುವೂ ಆದ ಮಹಾದೇವನನ್ನು ಪಾರ್ವತಿಯು ನಮಸ್ಕರಿಸಿ ಇಂತೆಂದಳು.

೮೫. ಪಾರ್ವತಿಯು ಹೇಳಿದಳು–ಎಲೈ ಭಗವಂತನೇ ! ನೀನು ಉತ್ತಮವಾದ ದೇವರು ಸರ್ವಜ್ಞನು. ಸರ್ವಪೂಜಿತನು. ನಿನ್ನ ಲಿಂಗವನ್ನು ದೇವತೆಗಳೂ ಬ್ರಹ್ಮನೂ ಸೂರ್ಯನೇ ಮೊದಲಾದವರೂ ಪೂಜಿಸುತ್ತಿರುವರು.

ಲಭತೇಽಭಿಮತಾಂ ಸಿದ್ಧಿಂ ತ್ವಾಮಭ್ಯರ್ಚ್ಯ ವರಪ್ರದ ।
ತ್ವಂ ಜನ್ಮಮೃತ್ಯುರಹಿತಃ ಸ್ವಯಂಭೂಸ್ಸರ್ವಶಕ್ತಿಮಾನ್ ॥ ೮೬ ॥

ಸದಾ ಧ್ಯಾಯಸಿ ಕಿಂ ಸ್ವಾಮಿನ್ದಿಗ್ವಾಸಾ ಮದನಾಂತಕಃ ।
ತಪಶ್ಚರಸಿ ಕಸ್ಮಾತ್ತ್ವಂ ಜಟಿಲೋ ಭಸ್ಮಧೂಸರಃ ॥ ೮೭ ॥

ಕಿಂ ವಾ ಜಪಸಿ ದೇವೇಶ ಪರಂ ಕೌತೂಹಲಂ ಹಿ ಮೇ ।
ಅನುಗ್ರಾಹ್ಯಾ ಪ್ರಿಯಾ ತೇಽಸ್ಮಿ ತತ್ತ್ವಂ ಕಥಯ ಸುವ್ರತ ॥ ೮೮ ॥

॥ ಮಹಾದೇವ ಉವಾಚ ॥

ನೇದಂ ಕಸ್ಯಾಪಿ ಕಥಿತಂ ಗೋಪನೀಯಮಿದಂ ಮಮ ।
ಕಿಂ ತು ವಕ್ಷ್ಯಾಮಿ ತೇ ಭದ್ರೇ ತ್ವಂ ಭಕ್ತಾ ಸುಪ್ರಿಯಾಸಿ ಮೇ ॥ ೮೯ ॥

ಪುರಾ ಸತ್ಯಯುಗೇ ದೇವಿ ವಿಶುದ್ಧಮತಯೋಽಖಿಲಾಃ ।
ಜಪನ್ತಿ ವಿಷ್ಣುಮೇವೈಕಂ ಜ್ಞಾತ್ವಾ ಸರ್ವೇಶ್ವರೇಶ್ವರಂ ॥ ೯೦ ॥

---

೮೬. ಅವರೆಲ್ಲರೂ ನಿನ್ನನ್ನೇ ಧ್ಯಾನಿಸಿ ಪೂಜಿಸಿ ಬೇಕಾದ ಸಿದ್ಧಿಯನ್ನು ಹೊಂದುತ್ತಿರುವರು. ನಿನಗೆ ಜನನ ಮರಣಗಳಿಲ್ಲ. ನೀನೇ ಉತ್ಪನ್ನನಾದವನು. ಎಲ್ಲಾ ಶಕ್ತಿಯೂ ನಿನಗಿದೆ.

೮೭–೮೮. ನೀನು ದಿಗಂಬರನಾಗಿದ್ದೀಯೆ. ಮದನನನ್ನೂ ಸಂಹರಿಸಿದ್ದೀಯೆ. ಆದರೂ ಯಾವ ದೇವನನ್ನು ಧ್ಯಾನಮಾಡುತ್ತಿದ್ದೀಯೆ? ಜಡೆಯನ್ನು ಬಿಟ್ಟುಕೊಂಡು ಬೂದಿಯನ್ನು ಬಳಿದುಕೊಂಡು ತಪಸ್ಸನ್ನೇಕೆ ಮಾಡುತ್ತಿದ್ದೀಯೇ? ನೀನು ಮಾಡುತ್ತಿರುವ ಜಪವೇನು? ಕೇಳಬೇಕೆಂದು ಬಹು ಆಶೆಯಾಗುತ್ತದೆ. ನಾನು ನಿನಗೆ ಪ್ರೀತಿಪಾತ್ರಳು. ಅನುಗ್ರಹಕ್ಕೆ ಯೋಗ್ಯಳು. ನಿಜವನ್ನು ಹೇಳು.

೮೯. ಮಹಾದೇವನು ಹೇಳಿದನು–ಇದನ್ನು ಯಾರಿಗೂ ಹೇಳಿಲ್ಲ. ನಾನು ಇದನ್ನು ಪ್ರಯತ್ನದಿಂದ ಗುಟ್ಟಾಗಿಡಬೇಕು. ಆದರೆ ಇದನ್ನು ನಿನಗೆ ಹೇಳುತ್ತೇನೆ. ನೀನು ನನಗೆ ಭಕ್ತಳಾಗಿದ್ದೀಯೆ.

೯೦–೯೨. ಪೂರ್ವದಲ್ಲಿ ಕೃತಯುಗದಲ್ಲಿ ಶುದ್ಧಬುದ್ಧಿಗಳಾದ ಎಲ್ಲರೂ ವಿಷ್ಣುವನ್ನು ಸರ್ವೇಶ್ವರನನ್ನಾಗಿ ತಿಳಿದು ಅವನನ್ನೇ ಜಪಿಸಿ ಇಹಪರಗಳಲ್ಲಿ ಉತ್ತಮಗತಿ

ಪ್ರಯಾನ್ತಿ ಪರಮಾಮೃದ್ಧಿಮೈಹಿಕಾಮುಷ್ಮಿಕೀಂ ಪ್ರಿಯೆ ।
ಯಾಂ ನ ಪ್ರಾಪ್ತಾಸ್ಸುರಾಸ್ಸರ್ವೇ ಋಷಯಃ ಕ್ಲೇಶಸಂಯುತಾಃ ॥ ೯೧ ॥

ತೇ ತಾಂ ಗತಿಂ ಪ್ರಪದ್ಯಂತೇ ಯೇ ನಾಮ ಕೃತನಿಶ್ಚಯಾಃ ।
ಮನ್ಮುಖಾದಪಿ ಸಂಶ್ರುತ್ಯ ದೇವಾ ವಿಷ್ಣುಪರಾಙ್ಮುಖಾಃ ॥ ೯೨ ॥

ವೇದೈಃ ಪುರಾಣೈಸ್ಸಿದ್ಧಾನ್ತೈಃ ಭಿನ್ನೈಃ ವಿಭ್ರಾಂತಚೇತಸಃ ।
ನಿಶ್ಚಯಂ ನಾಧಿಗಚ್ಛಂತಿ ಕಿಂ ತತ್ವಂ ಕಿಂ ಪರಂ ಪದಂ ॥ ೯೩ ॥

ತುಲಾಪುರುಷದಾನಾದ್ಯೈರಶ್ವಮೇಧಾದಿಭಿರ್ಮಖೈಃ ।
ವಾರಾಣಸೀಪ್ರಯಾಗಾದಿತೀರ್ಥಸ್ನಾನಾದಿಭಿಃ ಪ್ರಿಯೇ ॥ ೯೪ ॥

ಗಯಾಶ್ರಾದ್ಧಾದಿಭಿಃ ಪಿತ್ರ್ಯೈಃ ವೇದಪಾಠಾದಿಭಿರ್ಜಪೈಃ ।
ತಪೋಭಿರುಗ್ರೈರ್ನಿಯಮೈರ್ಯಮೈರ್ಭೂತದಯಾದಿಭಿಃ ॥ ೯೫ ॥

ಗುರುಶುಶ್ರೂಷಣೈಸ್ಸತ್ಯೈರ್ಧರ್ಮೈರ್ವರ್ಣಾಶ್ರಮಾನ್ವಿತೈಃ ।
ಜ್ಞಾನಧ್ಯಾನಾದಿಭಿಃ ಸಮ್ಯಕ್ ಚರಿತ್ರೈರ್ಜನ್ಮಕೋಟಿಭಿಃ ॥ ೯೬ ॥

---

ಯನ್ನು ಹೊಂದಿದರು. ಆ ವಿಷ್ಣುವಿನ ನಾಮವನ್ನು ಭಜಿಸಿ ಋಷಿಗಳು ಹೊಂದಿದ ಉತ್ತಮಗತಿಯನ್ನು ಯಾವ ದೇವತೆಯೂ ಹೊಂದಲಿಲ್ಲ. ಆದ್ದರಿಂದ ನಾಮಸ್ಮರಣೆಯಲ್ಲಿ ಅಂತಹ ಮುಕ್ತಿ ಸಿಕ್ಕುತ್ತದೆ. ವಿಷ್ಣುವಿನಲ್ಲಿ ನಂಬಿಕೆಯಿಲ್ಲದ ದೇವತೆಗಳು ನನ್ನಿಂದ ಕೇಳಿದರೂ ವೇದ, ಪುರಾಣ, ಸಿದ್ಧಾನ್ತ (ವೇದಾಂತ) ಇವುಗಳಿಂದ ಮನಸ್ಸು ಸರಿಯಾಗಿ ಸ್ಥಿರವಾಗದೆ ನಿಶ್ಚಯವೇನೆಂಬುವನ್ನೇ ತಿಳಿಯರು. ತತ್ವವೂ ಪರಮಪದವೂ ಏನೆಂಬುದೇ ಅವರಿಗೆ ತಿಳಿಯದಾಗಿದೆ. ಸಿದ್ಧಾಂತಗಳು ಭಿನ್ನವಾಗಿರುವುದೇ ಇದಕ್ಕೆ ಕಾರಣ.

೯೪–೯೭. ಮನುಷ್ಯನು ತನ್ನ ತೂಕದ ಪದಾರ್ಥಗಳನ್ನು ದಾನ ಮಾಡುವುದು, ಅಶ್ವಮೇಧಾದಿ ಯಾಗಗಳನ್ನು ಮಾಡುವುದು, ಕಾಶಿ ಪ್ರಯಾಗ ಮುಂತಾದುವುಗಳಲ್ಲಿ ಸ್ನಾನ ಮಾಡುವುದು, ಗಯಾ ಶ್ರಾದ್ಧ ಮಾಡುವುದು ವೇದ ಓದುವುದು, ಜಪ ಮಾಡುವುದು, ತಪಸ್ಸು ಮಾಡುವುದು, ಕ್ರೂರವಾದ ನಿಯಮಗಳನ್ನು ಆಚರಿಸುವುದು, ಇಂದ್ರಿಯವನ್ನು ನಿಗ್ರಹಿಸುವುದು, ಪ್ರಾಣಿಗಳಲ್ಲಿ ದಯೆಯಿಡುವುದು, ಗುರುಶುಶ್ರೂಷೆ ಮಾಡುವುದು, ಸತ್ಯವನ್ನೇ ಹೇಳುವುದು, ವರ್ಣಾಶ್ರಮಗಳಿಗೆ ಅನುಕೂಲವಾದ ಧರ್ಮಗಳನ್ನು ಅನುಸರಿಸುವುದು, ಜ್ಞಾನ

ನ ಯಾಂತಿ ತತ್ಪರಂ ಶ್ರೇಯೋ ವಿಷ್ಣುಂ ಸರ್ವೇಶ್ವರೇಶ್ವರಂ ।
ಸರ್ವಭಾವೈಸ್ಸಮಾಶ್ರಿತ್ಯ ಪುರಾಣಪುರುಷೋತ್ತಮಂ ॥ ೯೭ ॥

ಅನನ್ಯಗತಯೋ ಮರ್ತ್ಯಾ ಭೋಗಿನೋಽಪಿ ಪರಂತಪೇ ।
ಜ್ಞಾನವೈರಾಗ್ಯರಹಿತಾ ಬ್ರಹ್ಮಚರ್ಯಾದಿವರ್ಜಿತಾಃ ॥ ೯೮ ॥

ಸರ್ವಧರ್ಮೋಜ್ಝಿತಾ ವಿಷ್ಣೋರ್ನಾಮಮಾತ್ರೈಕಜಲ್ಪಿನಃ ।
ಸುಖೇನ ಯಾಂ ಗತಿಂ ಯಾಂತಿ ನ ತಾಂ ಸರ್ವೇಽಪಿ ಧಾರ್ಮಿಕಾಃ ॥ ೯೯ ॥

ಸ್ಮರ್ತವ್ಯಸ್ಸತತಂ ವಿಷ್ಣುಃ ವಿಸ್ಮರ್ತವ್ಯೋ ನ ಜಾತು ಚಿತ್ ।
ಸರ್ವೇ ವಿಧಿನಿಷೇಧಾಸ್ಸ್ಯುರೇತಸ್ಯೈವ ಹಿ ಕಿಂಕರಾಃ ॥ ೧೦೦ ॥

ಕಿಂ ತು ಬ್ರಹ್ಮಾದಯೋ ದೇವಾ ಋಷಯಶ್ಚ ನಿರಂಹಸಃ ।
ನಿರ್ಭಯಂ ವಿಷ್ಣುನಾಮಾನ್ನಾ ವೈ ಯಥೇಷ್ಟಂ ಪದಮಾಗತಾಃ ॥ ೧೦೧ ॥

---

ಧ್ಯಾನಗಳನ್ನು ಆಚರಿಸುವುದು ಇವುಗಳೆಲ್ಲವನ್ನೂ ಒಂದು ಕೋಟಿ ಜನ್ಮಗಳವರೆವಿಗೂ ಆಚರಿಸಿದರೆ ಯಾವ ಪುಣ್ಯ ಬರುವುದೋ, ಆ ಪುಣ್ಯವನ್ನು ವಿಷ್ಣುವನ್ನು ಒಂದೇ ಮನಸ್ಸಿನಿಂದ ಭಜಿಸಿದರೆ ಹೊಂದುತ್ತಾನೆ.

೯೮–೯೯. ಇಹಲೋಕದ ಭೋಗಗಳೆಲ್ಲವನ್ನೂ ಅನುಭವಿಸುತ್ತ ಜ್ಞಾನ ವೈರಾಗ್ಯಗಳನ್ನೂ ಹೊಂದದೆ ಬ್ರಹ್ಮಚರ್ಯಾದಿಗಳನ್ನು ಬಿಟ್ಟು ಕೊನೆಗೆ ಒಂದು ಧರ್ಮವನ್ನು ಆಚರಿಸದಿದ್ದರೂ ಇನ್ನೊಂದು ದೇವರನ್ನು ಮರೆಹೊಗದೆ ವಿಷ್ಣುವಿನ ನಾಮವನ್ನು ಮಾತ್ರ ಸ್ಮರಿಸುತ್ತಿರುವವನು ಯಾವ ಉತ್ಕೃಷ್ಟ ಗತಿಯನ್ನು ಹೊಂದುತ್ತಾನೆಯೋ ಆ ಗತಿಯನ್ನು ಧಾರ್ಮಿಕನಾದವನೂ ಹೊಂದುವುದಿಲ್ಲ.

೧೦೦. ಯಾವಾಗಲೂ ವಿಷ್ಣುವನ್ನೇ ಸ್ಮರಿಸಬೇಕು. ಆ ಸ್ವಾಮಿಯನ್ನು ಮರೆಯಬಾರದು- ವಿಧಿನಿಷೇಧಗಳೆಲ್ಲವೂ ಈ ವಿಷ್ಣುವಿನ ನಾಮಕ್ಕೆ ಆಳುಗಳಾಗಿರುತ್ತವೆ.

೧೦೧. ಬ್ರಹ್ಮನೇ ಮುಂತಾದ ದೇವತೆಗಳೂ ಋಷಿಗಳೂ ಅಹಂಕಾರವನ್ನು ಬಿಟ್ಟು ಭಯವಿಲ್ಲದೆ ವಿಷ್ಣುನಾಮವನ್ನು ಜಪಿಸಿ ತಮಗೆ ಇಷ್ಟಬಂದ ಉತ್ತಮಗತಿಯನ್ನು ಹೊಂದಿರುವರು.

ಅಲಬ್ಧ್ವಾ ಚಾತ್ಮನಃ ಪೂಜಾಂ ಸಮ್ಯಗಾರಾಧಿತೋ ಹರಿಃ ।
ಮಯಾಸ್ಮಾದಪಿ ಚ ಶ್ರೇಷ್ಠಾಃ ವಾಂಛಿತಾಹಂಕೃತಾತ್ಮನಾ ॥ ೧೦೨ ॥

ತತಸ್ತಸ್ಮಾಜ್ಜಗನ್ನಾಥಃ ಪ್ರಸನ್ನೋ ಭಕ್ತವತ್ಸಲಃ ।
ಅಂಶಾಂಶೇನಾತ್ಮನೈವೈತಾನ್ ಪೂಜಯಾಮಾಸ ಕೇಶವಃ ॥ ೧೦೩ ॥

ದೇವಾನ್ಪಿತೄನ್ದ್ವಿಜಾ ಹವ್ಯಕವ್ಯಾದ್ಯೈಃ ಕರುಣಾಮಯಃ ।
ತತಃ ಪ್ರಭೃತಿ ಪೂಜ್ಯಂತೇ ತ್ರೈಲೋಕ್ಯೇ ಸಚರಾಚರೇ ॥ ೧೦೪ ॥

ಬ್ರಹ್ಮಾದಯಸ್ಸುರಾಸ್ಸರ್ವೇ ಪ್ರಸಾದಾಚ್ಛಾರ್ಙ್ಗಧನ್ವನಃ ।
ಮಾಂ ಪ್ರೋವಾಚ ಯಥಾ ಮತ್ತಃ ಪೂಜ್ಯಶ್ರೇಷ್ಠೋ ಭವಿಷ್ಯಸಿ ॥ ೧೦೫ ॥

ತ್ವಾಮಾರಾಧ್ಯ ತಥಾ ಶಂಭೋ ಗ್ರಹೀಷ್ಯಾಮಿ ವರಂ ಸದಾ ।
ದ್ವಾಪರಾದೌ ಯುಗೇ ಭೂತ್ವಾ ಕಲಯಾ ಮಾನುಷಾದಿಷು ॥ ೧೦೬ ॥

---

೧೦೨. ಹರಿಯನ್ನು ಆರಾಧಿಸಿ ನಾಮಸ್ಮರಣೆ ಮಾಡಿದೆನು. ಈಗಲೂ ಇದಕ್ಕಿಂತ ಉನ್ನತಪದವಿಗೋಸ್ಕರ ಧ್ಯಾನಮಾಡುತ್ತ ಬಂದೆನು.

೧೦೩. ಅನಂತರ ಭಕ್ತವತ್ಸಲನಾದ ಆ ಸ್ವಾಮಿಯು ಪ್ರಸನ್ನದಾದನು. ಆ ಕೇಶವನೂ ಕೂಡ ತಾನು ಅವತಾರಗಳನ್ನು ಹೊಂದಿದಾಗ ತನ್ನ ಅಂಶಭೂತಗಳ ಅವತಾರದಿಂದ ಅಂಶಿಯಾದ ಕೇಶವನನ್ನು ಪೂಜಿಸುತ್ತಾನೆ.

೧೦೪-೧೦೬. ಆ ಸ್ವಾಮಿಯು ತನ್ನ ಅಂಶವಾದ ಅವತಾರಗಳಿಂದಲೇ ಹವಿಸ್ಸಿನಿಂದ ದೇವತೆಗಳನ್ನೂ ಕವ್ಯದಿಂದ ಪಿತೃಗಳನ್ನೂ ಪೂಜಿಸಿದನು. ಅದು ಮೊದಲುಗೊಂಡು ಆ ವಿಷ್ಣುವಿನ ಅನುಗ್ರಹದಿಂದ ಬ್ರಹ್ಮಾದಿಗಳೂ ಪೂಜೆಯನ್ನು ಹೊಂದುತ್ತಿರುವರು. ಎಲೈ ಶಂಭುವೇ ! ನಾನು ನಿನ್ನನ್ನು ಪೂಜಿಸಿ ನಿನ್ನಿಂದ ವರವನ್ನು ಹೊಂದುತ್ತೇನೆ. ಆಗ ನೀನು ನನಗಿಂತಲೂ ಶ್ರೇಷ್ಠನಾಗುತ್ತಿಯೆ. ಎಂದು ಹೇಳಿದನು. ನೀನು ದ್ವಾಪರವೇ ಮುಂತಾದ ಯುಗಗಳಲ್ಲಿ ಮನುಷ್ಯರಲ್ಲಿ ಹುಟ್ಟಿ ಒಂದೊಂದು ಶಾಸ್ತ್ರಗಳನ್ನು ಕಲ್ಪನೆಮಾಡಿ ಜನಗಳು ನನ್ನನ್ನು ಧ್ಯಾನ

ಸ್ವಾಗಮೈಃ ಕಲ್ಪತೈಸ್ತ್ವಂ ಚ ಜನಾನ್ಮದ್ವಿಮುಖಾನ್ಕುರು ।
ಮಾಂ ಚ ಗೋಪಯ ಯೇನ ಸ್ಯಾತ್ ಸೃಷ್ಟಿರೇಷೋತ್ತರೋತ್ತರಾ॥ ೧೦೭ ॥

ತತಸ್ತಂ ಪ್ರಣಿಪತ್ಯಾಹಮವೋಚಂ ಪರಮೇಶ್ವರಂ ।
ಬ್ರಹ್ಮಹತ್ಯಾಸಹಸ್ರಸ್ಯ ಪಾಪಂ ಶಾಮ್ಯೇತ್ಕಥಂಚನ ॥ ೧೦೮ ॥

ನ ಪುನಸ್ತದವಿಜ್ಞಾನಂ ಕಲ್ಪಕೋಟಿಶತೈರಪಿ ।
ತಸ್ಮಾನ್ಮಯಾ ಕೃತಾ ಸ್ಪರ್ಧಾ ಪವಿತ್ರಸ್ಸ್ಯಾಂ ಕಥಂ ಹರೇ ॥ ೧೦೯ ॥

ತನ್ಮೇ ಕಥಯ ಗೋವಿಂದ ಪ್ರಾಯಶ್ಚಿತ್ತಂ ಯದೀಚ್ಛಸಿ ।
ತತಃ ಪ್ರಸನ್ನೋ ಭಗವಾನವೋಚತ್ತತ್ತ್ವಮಾತ್ಮನಃ ॥ ೧೧೦ ॥

ಯೇನಾಹಮಧಿಕಸ್ತಸ್ಮಾದಭವಂ ನಗನಂದಿನೀ ।
ತಮೇವ ತಪಸಾ ನಿತ್ಯಂ ಭಜಾಮಿ ಸ್ತೌಮಿ ಚಿನ್ತಯೇ ।
ತೇನಾದ್ವಿತೀಯಮಹಿಮಾ ಜಗತ್ಪೂಜ್ಯೋಽಸ್ಮಿ ಪಾರ್ವತೀ ॥ ೧೧೧ ॥

---

ಮಾಡಿದಂತೆ ಮಾಡು. ಮತ್ತು ನನ್ನ ವಿಷಯವನ್ನೇ ತಿಳಿಸಬೇಡ. ಹಾಗೆ ಮಾಡಿದರೆ ಸೃಷ್ಟಿಯು ವೃದ್ಧಿಯಾಗುತ್ತದೆ.

೧೦೮. ಆಗ ನಾನು ಆತನನ್ನು ನಮಸ್ಕರಿಸಿ ಅನೇಕ ಬ್ರಹ್ಮಹತ್ಯೆಗಳ ಪಾಪಗಳು ಹೇಗೆ ನಾಶವಾಗುವುವು ? ಹೇಳು ಎಂದು ಕೇಳಿದೆನು.

೧೦೯–೧೧೧. ಎಲೈ ಹರಿಯೇ ! ನೀನು ಹೇಳಿದಹಾಗೆ ಮಾಡಿದರೆ ಕೋಟಿ ಕಲ್ಪಗಳಾದರೂ ವಿಷ್ಣುವಿನ ನಾಮಸ್ಮರಣೆಯ ಜ್ಞಾನವೇ ಬರುವುದಿಲ್ಲ. ಆದರೂ ನಾನು ನಿನ್ನೊಡನೆ ಸ್ಪರ್ಧಿಸಬೇಕಾಗುವುದು. ನಾನು ಪವಿತ್ರವಾಗುವ ಬಗೆ ಹೇಗೆ? ಅದಕ್ಕೆ ನೀನು ಪ್ರಾಯಶ್ಚಿತ್ತವನ್ನು ಹೇಳು. ಆಗ ಪ್ರಸನ್ನನಾದ ವಿಷ್ಣುವು ನನಗೆಲ್ಲವನ್ನೂ ಹೇಳಿದನು. ಎಲೈ ಪಾರ್ವತಿಯೆ ! ಅದರಿಂದಲೇ ನಾನು ಅವನಿಗಿಂತಲೂ ಅಧಿಕನಾದುದು. ನಾನು ನಿತ್ಯವೂ ತಪಸ್ಸಿನಿಂದ ವಿಷ್ಣುವನ್ನು ಭಜಿಸುತ್ತೇನೆ. ಸ್ತೋತ್ರ ಮಾಡುತ್ತೇನೆ. ಧ್ಯಾನಿಸುತ್ತೇನೆ. ಆದ್ದರಿಂದ ನನ್ನ ಸಮರು ಮತ್ತಾರೂ ಇಲ್ಲದಂತೆ ಪ್ರಪಂಚದಲ್ಲಿ ಪೂಜ್ಯನಾಗಿದ್ದೇನೆ.

॥ ಪಾರ್ವತ್ಯುವಾಚ ॥

ತನ್ಮೇ ಕಥಯ ದೇವೇಶ ಯಥಾಹಮಪಿ ಶಂಕರ ।
ಸರ್ವೇಶ್ವರೀ ನಿರುಪಮಾ ತವ ಸ್ಯಾಂ ಸದೃಶೀ ಪ್ರಭೋ ॥ ೧೧೨ ॥

॥ ಮಹಾದೇವ ಉವಾಚ ॥

ಸಾಧು ಸಾಧು ತ್ವಯಾ ಪೃಷ್ಟಂ ವಿಷ್ಣೋರ್ಭಗವತಃ ಪ್ರಿಯೇ ।
ನಾಮ್ನಾಂ ಸಹಸ್ರಂ ವಕ್ಷ್ಯಾಮಿ ಮುಖ್ಯಂ ತ್ರೈಲೋಕ್ಯಮುಕ್ತಿದಂ ॥ ೧೧೩ ॥

ಅಸ್ಯ ಶ್ರೀವಿಷ್ಣೋರ್ನಾಮಸಹಸ್ರಸ್ತೋತ್ರಸ್ಯ । ಶ್ರೀಮಹಾದೇವ ಋಷಿಃ ।
ಅನುಷ್ಟುಪ್ ಛಂದಃ । ಪರಮಾತ್ಮಾ ದೇವತಾ । ಹ್ರೀಂ ಬೀಜಂ ।
ಶ್ರೀಂ ಶಕ್ತಿಃ । ಕ್ಲೀಂ ಕೀಲಕಂ । ಚತುರ್ವರ್ಗಧರ್ಮಾರ್ಥ ।
ಕಾಮಮೋಕ್ಷಾರ್ಥೇ ಜಪೇ ವಿನಿಯೋಗಃ । ॥ ೧೧೪ ॥

ಓಂ ವಾಸುದೇವಾಯ ವಿದ್ಮಹೇ ಮಹಾಹಂಸಾಯ ಧೀಮಹಿ ।
ತನ್ನೋ ವಿಷ್ಣುಃ ಪ್ರಚೋದಯಾತ್ ॥ ೧೧೫ ॥

---

೧೧೨. ಪಾರ್ವತಿಯು ಹೇಳಿದಳು–ಎಲೈ ಶಂಕರನೇ ! ನಾನು ಸರ್ವೇಶ್ವರಿಯೂ ಎಲ್ಲರಿಗಿಂತ ಉತ್ತಮಳೂ ನಿನಗೆ ಸಮಾನಳೂ ಆಗಬೇಕಾದರೆ ಏನು ಮಾಡಬೇಕೆಂಬುದನ್ನು ಹೇಳು.

೧೧೩. ಮಹಾದೇವನು ಹೇಳಿದನು-ಎಲೈ ಪ್ರಿಯಳೆ! ವಿಷ್ಣುವಿನ ವಿಷಯವನ್ನು ನೀನು ಚೆನ್ನಾಗಿ ಕೇಳಿದೆ. ಬಹು ಒಳ್ಳೆಯದು. ವಿಷ್ಣುವಿನ ಸಾವಿರನಾಮಗಳನ್ನು ಹೇಳುತ್ತೇನೆ. ಅದು ಮೂರು ಲೋಕದಲ್ಲಿಯೂ ಉತ್ತಮವು. ಎಲ್ಲರಿಗೂ ಮುಕ್ತಿಯನ್ನು ಕೊಡುತ್ತದೆ.

೧೧೪. ಈ ವಿಷ್ಣು ಸಹಸ್ರನಾಮಕ್ಕೆ ಮಹಾದೇವನೇ ಋಷಿಯು. ಅನುಷ್ಟುಪ್ ಎಂಬುದು ಛಂದಸ್ಸು. ಪರಮಾತ್ಮನೇ ದೇವತೆಯು. ಹ್ರೀಂ ಎಂಬುದು ಬೀಜವು. ಶ್ರೀಂ ಎಂಬುದು ಶಕ್ತಿಯು. ಕ್ಲೀಂ ಎಂಬುದು ಕೀಲಕವು. ಧರ್ಮ, ಅರ್ಥ, ಕಾಮ, ಮೋಕ್ಷಗಳಿಗೋಸ್ಕರ ಜಪಮಾಡಬೇಕು.

೧೧೫. ವಾಸುದೇವನನ್ನು ಜ್ಞಾನಕ್ಕೆ ವಿಷಯನನ್ನಾಗಿ ಮಾಡಿಕೊಳ್ಳುತ್ತೇನೆ. ಮಹಾಹಂಸನನ್ನು ಪೂಜಿಸುತ್ತೇನೆ. (ಧ್ಯಾನಿಸುತ್ತೇನೆ.) ಆ ವಿಷ್ಣುವು ನನ್ನನ್ನು ಕಾಪಾಡಲಿ.

ಅಂಗನ್ಯಾಸಕರನ್ಯಾಸವಿಧಿಪೂರ್ವಂ ಯದಾ ಪಠೇತ್ ।
ತತ್ಫಲಂ ಕೋಟಿಗುಣಿತಂ ಭವತ್ಯೇವ ನ ಸಂಶಯಃ ॥ ೧೧೬ ॥

ಶ್ರೀವಾಸುದೇವಃ ಪರಂ ಬ್ರಹ್ಮೇತಿ ಹೃದಯಂ ।
ಮೂಲಪ್ರಕೃತಿರಿತಿ ಶಿರಃ ।
ಮಹಾವರಾಹ ಇತಿ ಶಿಖಾ ।
ಸೂರ್ಯಚಂದ್ರ ಧ್ವಜಇತಿ ಕವಚಂ ।
ಬ್ರಹ್ಮಾದಿಕಾಮ್ಯಲಾಲಿತ್ಯಜಗದಾಶ್ಚರ್ಯಶೈಶವ ಇತಿ ನೇತ್ರಂ ।
ಪಾರ್ಥಾರ್ಥಖಂಡಿತಾಶೇಷ ಇತ್ಯಸ್ತ್ರಂ ।
ನಮೋ ನಾರಾಯಣಾಯ ಇತಿ ನ್ಯಾಸಂ ಸರ್ವತ್ರಕಾರಯೇತ್ ॥ ೧೧೭ ॥

ಓಂ ನಮೋ ನಾರಾಯಣಾಯ ಪುರುಷಾಯ ಮಹಾತ್ಮನೇ ।
ವಿಶುದ್ಧಶುದ್ಧಸತ್ವಾಯ ಮಹಾಹಂಸಾಯ ಧೀಮಹಿ ।
ತನ್ನೋ ದೇವಃ ಪ್ರಚೋದಯಾತ್ ॥ ೧೧೮ ॥

---

೧೧೬. ಅಂಗನ್ಯಾಸ ಕರನ್ಯಾಸಗಳನ್ನು ಮಾಡಿಕೊಂಡು ಜಪಿಸಿದರೆ ಅದರ ಫಲವು ಕೋಟಿಯಷ್ಟು ಬರುತ್ತದೆ. ಸಂಶಯವೇ ಇಲ್ಲ.

೧೧೭. "ಶ್ರೀ ವಾಸುದೇವಃ ಪರಂ ಬ್ರಹ್ಮ" ಎಂದು ಹೃದಯವನ್ನೂ "ಮೂಲಪಕೃತಿಃ" ಎಂದು ತಲೆಯನ್ನೂ, "ಮಹಾವರಾಹಃ" ಎಂದು ಜುಟ್ಟನ್ನೂ, "ಸೂರ್ಯಚಂದ್ರಧ್ವಜಃ" ಎಂದು ಕವಚವನ್ನೂ, "ಬ್ರಹ್ಮದಿಕಾಮ್ಯಲಾಲಿತ್ಯಜಗದಾಶ್ಚರ್ಯಶೈಶವಃ" ಎಂದು ಕಣ್ಣುಗಳನ್ನೂ, "ಪಾರ್ಥಾರ್ಥಖಂಡಿತಾಶೇಷಃ" ಎಂದು ಅಸ್ತ್ರವನ್ನೂ ಮುಟ್ಟಿಕೊಂಡು ಮಾಡಿಕೊಳ್ಳಬೇಕು. ಇವೆಲ್ಲದರ ಬುಡದಲ್ಲಿಯೂ "ಓಂ ನಮೋ ನಾರಾಯಣಾಯ" ಎಂದು ಹೇಳಬೇಕು. ಈ ರೀತಿಯಾಗಿ ನ್ಯಾಸವನ್ನು ಮಾಡಿಕೊಳ್ಳಬೇಕು.

೧೧೮. "ಓಂ" ನಾರಾಯಣನಾದ, ಮಹಾತ್ಮನಾದ, ಪುರುಷನಾದ ಸ್ವಾಮಿಗೆ ನಮಸ್ಕಾರವು. ಬಹು ಶುದ್ಧವಾದ, ಬೆಳ್ಳಗಿರುವ, ಸರ್ವಗುಣ ಸಂಪನ್ನನಾದ ಮಹಾ ಹಂಸನನ್ನು ಧ್ಯಾನಿಸುತ್ತೇನೆ. ಆ ದೇವನು ನನ್ನನ್ನು ಕಾಪಾಡಲಿ.

ಕ್ಲೀಂ ಕೃಷ್ಣಾಯ ವಿದ್ಮಹೇ ಹ್ರೀಂ ರಾಮಾಯ ಧೀಮಹಿ ।
ತನ್ನೋ ದೇವಃ ಪ್ರಚೋದಯಾತ್ || ೧೧೯ ||

ಶಂ ನೃಸಿಂಹಾಯ ವಿದ್ಮಹೇ ಶ್ರೀಕಂಠಾಯ ಧೀಮಹಿ ।
ತನ್ನೋ ವಿಷ್ಣುಃ ಪ್ರಚೋದಯಾತ್ || ೧೨೦ ||

ಓಂ ವಾಸುದೇವಾಯ ವಿದ್ಮಹೇ ।
ದೇವಕೀಸುತಾಯ ಧೀಮಹಿ ।
ತನ್ನಃ ಕೃಷ್ಣಃ ಪ್ರಚೋದಯಾತ್ || ೧೨೧ ||

ಓಂ, ಹ್ರಾಂ, ಹ್ರೀಂ, ಹ್ರೂಂ, ಹ್ರೈಂ, ಹ್ರೌಂ, ಹ್ರಃ, ಕ್ಲೀಂ,
ಕೃಷ್ಣಾಯ ಗೋವಿಂದಾಯ ಗೋಪೀವಲ್ಲಭಾಯ
ನಮಃ ಸ್ವಾಹಾ || ೧೨೨ ||

ಇತಿ ಮಂತ್ರಂ ಸಮುಚ್ಚಾರ್ಯ ಯಜೇದ್ವಾ ವಿಷ್ಣುಮವ್ಯಯಂ ।
ಶ್ರೀನಿವಾಸಂ ಜಗನ್ನಾಥಂ ತತಸ್ತೋತ್ರಂ ಪಠೇತ್ಸುಧೀಃ ||
ಓಂ ವಾಸುದೇವಃ ಪರಂ ಬ್ರಹ್ಮ ಪರಮಾತ್ಮಾ ಪರಾತ್ಪರಃ || ೧೨೩ ||

---

೧೧೯. ಕ್ಲೀಂ ಕೃಷ್ಣನೇ ! ನಿನ್ನನ್ನು ಧ್ಯಾನಿಸುತ್ತೇನೆ. ಹ್ರೀಂ ರಾಮನೆ ! ನಿನ್ನನ್ನು ಧ್ಯಾನಿಸುತ್ತೇನೆ. ಆ ದೇವನು ನನ್ನನ್ನು ಕಾಪಾಡಲಿ.

೧೨೦. ಶಂ ನೃಸಿಂಹನೆ ! ನಿನ್ನನ್ನು ಜ್ಞಾನಕ್ಕೆ ವಿಷಯನನ್ನಾಗಿ ಮಾಡಿಕೊಳ್ಳುತ್ತೇನೆ. ಶ್ರೀಕಂಠನೇ ! ನಿನ್ನನ್ನು ಧ್ಯಾನಿಸುತ್ತೇನೆ. ಆ ವಿಷ್ಣುವು ನನ್ನನ್ನು ಕಾಪಾಡಲಿ.

೧೨೧. ವಾಸುದೇವನನ್ನು ಜ್ಞಾನಾಧೀನನನ್ನಾಗಿ ಮಾಡಿಕೊಳ್ಳುತ್ತೇನೆ. ದೇವಕೀಸುತನನ್ನು ಧ್ಯಾನಿಸುತ್ತೇನೆ. ಆ ಕೃಷ್ಣನು ನನ್ನನ್ನು ಕಾಪಾಡಲಿ.

೧೨೨. ಓಂ, ಹ್ರಾಂ, ಹ್ರೀಂ, ಹ್ರೂಂ, ಹ್ರೈಂ, ಹ್ರೌಂ, ಹ್ರಃ, ಕ್ಲೀಂ ಕೃಷ್ಣನಿಗೆ, ಗೋವಿಂದನಿಗೆ, ಗೋಪೀವಲ್ಲಭನಿಗೆ ನಮಸ್ಕಾರವು ಸ್ವಾಹಾ.

೧೨೩. ಈ ಮಂತ್ರಗಳನ್ನು ಹೇಳಿ ವಿಷ್ಣುವನ್ನು ಪೂಜಿಸಬೇಕು. ಅನಂತರ ಈ ಸ್ತೋತ್ರವನ್ನು ಪಠಿಸಬೇಕು. ವಾಸುದೇವನೇ ಪರಬ್ರಹ್ಮನು. ಅವನೇ ಪರಾತ್ಪರನೂ ಪರಮಾತ್ಮನೂ ಆಗಿರುವನು.

ಪರಂ ಧಾಮ ಪರಂ ಜ್ಯೋತಿಃ ಪರಂ ತತ್ತ್ವಂ ಪರಂ ಪದಂ ।
ಪರಶ್ಶಿವಃ ಪರೋ ಧ್ಯೇಯಃ ಪರಂ ಜ್ಞಾನಂ ಪರಾ ಗತಿಃ ॥ ೧೨೪ ॥

ಪರಮಾರ್ಥಃ ಪರಶ್ಶ್ರೇಷ್ಠಃ ಪರಾನಂದಃ ಪರೋದಯಃ ।
ಪರೋಽವ್ಯಕ್ತಾತ್ಪರಂ ವ್ಯೋಮ ಪರಮರ್ಧಿಃ ಪರೇಶ್ವರಃ ॥ ೧೨೫ ॥

ನಿರಾಮಯೋ ನಿರ್ವಿಕಾರೋ ನಿರ್ವಿಕಲ್ಪೋ ನಿರಾಶ್ರಯಃ ।
ನಿರಂಜನೋ ನಿರಾಲಂಬೋ ನಿರ್ಲೇಪೋ ನಿರವಗ್ರಹಃ ॥ ೧೨೬ ॥

ನಿರ್ಗುಣೋ ನಿಷ್ಕಲೋಽನಂತೋಽಭಯೋಽಚಿಂತ್ಯೋಽಚಲೋಽಂಚಿತಃ ।
ಅತೀಂದ್ರಿಯೋಽಮಿತೋಽಪಾರೋನಿತ್ಯೋಽನೀಹೋಽವ್ಯಯೋಽಕ್ಷಯಃ

ಸರ್ವಜ್ಞಃ ಸರ್ವಗಃ ಸರ್ವಃ ಸರ್ವದಃ ಸರ್ವಭಾವನಃ ।
ಸರ್ವಶಾಸ್ತಾ ಸಾರ್ವಸಾಕ್ಷೀ ಪೂಜ್ಯಸ್ಸರ್ವಸ್ಯ ಸರ್ವದೃಕ್ ॥ ೧೨೮ ॥

---

೧೨೪-೧೨೫. ಅವನೇ ಉತ್ತಮವಾದ ಸ್ಥಾನವು. ಉತ್ತಮ ಜ್ಯೋತಿಯು. ಉತ್ತಮವಾದ ತತ್ತ್ವವು. ಉತ್ತಮವಾದ ಪದವು. ಉತ್ತಮವಾದ ಮಂಗಳವು. ಧ್ಯಾನಮಾಡುವ ಉತ್ತಮ ಪದಾರ್ಥವು. ಉತ್ತಮವಾದ ಜ್ಞಾನವು. ಉತ್ತಮ ಗತಿಯು. ಆ ಸ್ವಾಮಿಯು ಪರಮವಾದ ಪ್ರಯೋಜನವುಳ್ಳವನು ಉತ್ಕೃಷ್ಟನು. ಆನಂದರೂಪನು. ಅಭಿವೃದ್ಧಿಯುಳ್ಳವನು. ಕಾಣಿಸಿಕೊಳ್ಳದವನು. ಆಕಾಶಸ್ವರೂಪನು. ವೃದ್ಧಿಯುಳ್ಳವನು. ಎಲ್ಲರಿಗೂ ಈಶ್ವರನು.

೧೨೬-೧೨೭. ರೋಗವಿಲ್ಲದವನು. ವಿಕಾರವಿಲ್ಲದವನು. ವಿಕಲ್ಪವಿಲ್ಲದವನು. ಆಶ್ರಯವಿಲ್ಲದವನು. ಪ್ರಕಾಶನು. ಆಲಂಬನವಿಲ್ಲದವನು. ಲೇಪವಿಲ್ಲದವನು. ಕೊಂದರೆಯಿಲ್ಲಿದವನು ಗುಣವಿಲ್ಲದವನು. ಕಲೆಯಿಲ್ಲದವನು. ಅನಂತನು. ಅಭಯನು. ಯೋಚಿಸುವುದಕ್ಕೆ ಸಿಕ್ಕದವನು. ಅಲ್ಲಾಡದವನು. ಪೂಜಿತನು. ಇಂದ್ರಿಯಗಳಿಗೆ ಸಿಕ್ಕದವನು. ಅಳೆಯಲು ಅಸಾಧ್ಯನು. ಕೊನೆಯಿಲ್ಲದವನು. ನಿತ್ಯನು. ಆಸೆಯಿಲ್ಲದವನು. ನಾಶರಹಿತನು. ಕಮ್ಮಿಯಾಗದವನು.

೧೨೮-೧೨೯. ಎಲ್ಲವನ್ನೂ ಬಲ್ಲವನು. ಎಲ್ಲೆಡೆಗೂ ಹೋಗುವವನು. ಸರ್ವರೂಪನು. ಎಲ್ಲವನ್ನೂ ಕೊಡುವವನು. ಎಲ್ಲವನ್ನೂ ತನ್ನಲ್ಲಿ ಉಳ್ಳವನು. ಎಲ್ಲರಿಗೂ ನಿಯಾಮಕನು. ಎಲ್ಲಕ್ಕೂ ಸಾಕ್ಷಿಯು. ಎಲ್ಲಕ್ಕೂ ಪೂಜ್ಯನು. ಎಲ್ಲವನ್ನೂ

ಸರ್ವಶಕ್ತಸ್ಸರ್ವಸಾರಃ ಸರ್ವಾತ್ಮಾ ಸರ್ವತೋ ಮುಖಃ ।
ಸರ್ವವಾಸಸ್ಸರ್ವರೂಪಃ ಸರ್ವಾದಿಃ ಸರ್ವದುಃಖಹಾ || ೧೨೯ ||

ಸರ್ವಾರ್ಥಸ್ಸರ್ವತೋ ಭದ್ರಃ ಸರ್ವಕಾರಣಕಾರಣಂ ।
ಸರ್ವಾತಿಶಯಿತಃ ಸರ್ವಾಧ್ಯಕ್ಷಃ ಸರ್ವೇಶ್ವರೇಶ್ವರಃ || ೧೩೦ ||

ಷಡ್ವಿಂಶಕೋ ಮಹಾವಿಷ್ಣುಃ ಮಹಾಗುಹ್ಯೋ ಮಹಾವಿಭುಃ ।
ನಿತ್ಯೋದಿತೋ ನಿತ್ಯಯುಕ್ತೋ ನಿತ್ಯಾನಂತಸ್ಸನಾತನಃ || ೧೩೧ ||

ಮಾಯಾಪತಿರ್ಯೋಗಪತಿಃ ಕೈವಲ್ಯಪತಿರಾತ್ಮಭೂಃ ।
ಜನ್ಮಮೃತ್ಯುಜರಾತೀತಃ ಕಾಲಾತೀತೋ ಭವಾತಿಗಃ || ೧೩೨ ||

ಪೂರ್ಣಸ್ಸತ್ಯಃ ಶುದ್ಧಬುದ್ಧಸ್ವರೂಪೋ ನಿತ್ಯಚಿನ್ಮಯಃ ।
ಯೋಗಪ್ರಿಯೋ ಯೋಗಗಮ್ಯೋ ಭವಬಂಧೈಕಮೋಚಕಃ || ೧೩೩ ||

---

ನೋಡುವವನು. ಎಲ್ಲಾ ಶಕ್ತಿಯನ್ನೂ ಹೊಂದಿರುವವನು. ಎಲ್ಲಕ್ಕೂ ಬಲಕೊಡ ತಕ್ಕವನು. ಎಲ್ಲಕ್ಕೂ ಆತ್ಮನಾಗಿರುವವನು. ಎಲ್ಲರಿಗೂ ಮುಖದಂತೆ ಮುಖ್ಯನಾದವನು. ಎಲ್ಲಕ್ಕೂ ವಾಸಸ್ಥಾನನು. ಸರ್ವರೂಪನು. ಎಲ್ಲಕ್ಕೂ ಆದಿಯು. ಎಲ್ಲ ದುಃಖವನ್ನೂ ನಾಶಮಾಡುವವನು.

೧೩೦–೧೩೧. ಎಲ್ಲಾ ಪ್ರಯೋಜನವೂ ಉಳ್ಳವನು. ಮಂಗಳಸ್ವರೂಪನು. ಕಾರಣಗಳಿಗೆಲ್ಲಾ ಕಾರಣನು. ಎಲ್ಲಕ್ಕೂ ಅತಿಶಯನಾದವನು. ಎಲ್ಲಕ್ಕೂ ಒಡೆಯನು. ಈಶ್ವರನಿಗೂ ಈಶ್ವರನು ಇಪ್ಪತ್ತಾರು ರೂಪುಳ್ಳವನು. ಹೆಚ್ಚಾಗಿ ವ್ಯಾಪಿಸಿರುವವನು. ಗುಟ್ಟಾದವನು, ಒಡೆಯನು. ಯಾವಾಗಲೂ ವೃದ್ಧಿ ಹೊಂದುತ್ತಿರುವವನು. ನಿತ್ಯ ಪದಾರ್ಥಗಳಿಂದ ಕೂಡಿದವನು. ಕೊನೆಯಿಲ್ಲದವನು. ಶಾಶ್ವತನು.

೧೩೨–೧೩೩. ಮಾಯೆಗೆ ಒಡೆಯನು. ಯೋಗಕ್ಕೆ ಸ್ವಾಮಿಯು. ಮೋಕ್ಷಕ್ಕೆ ಒಡೆಯನು. ತಾನಾಗಿಯೇ ಹುಟ್ಟಿದನು. ಹುಟ್ಟಿ ಸಾವುಗಳಿಲ್ಲವನು. ಕಾಲಕ್ಕೆ ಸಿಕ್ಕದವನು. ಸಂಸಾರಕ್ಕೆ ದೂರನು. ಪೂರ್ಣನಾಗಿರತಕ್ಕವನು. ಸತ್ಯರೂಪನು. ಶುದ್ಧ ಸ್ವರೂಪನು. ಜ್ಞಾನ ಸ್ವರೂಪನು. ನಿತ್ಯನು. ಚಿದ್ರೂಪನು. ಯೋಗದಲ್ಲಿ ಪ್ರಿತಿಯುಳ್ಳವನು. ಯೋಗದಿಂದ ಸಿಕ್ಕುವವನು. ಸಂಸಾರವೆಂಬ ಕಟ್ಟನ್ನು ಬಿಡಿಸುವವನು.

ಪುರಾಣಪುರುಷಃ ಪ್ರತ್ಯಕ್ಚೈತನ್ಯಃ ಪುರುಷೋತ್ತಮಃ ।
ವೇದಾಂತವೇದ್ಯೋ ದುರ್ಜ್ಞೇಯಃ ತಾಪತ್ರಯವಿವರ್ಜಿತಃ ॥ ೧೩೪ ॥

ಬ್ರಹ್ಮವಿದ್ಯಾಶ್ರಯೋಽನರ್ಘಃ ಸ್ವಪ್ರಕಾಶಃ ಸ್ವಯಂಪ್ರಭುಃ ।
ಸರ್ವೋಪಾಯ ಉದಾಸೀನಃ ಪ್ರಣವಸ್ಸರ್ವತಸ್ಸಮಃ ॥ ೧೩೫ ॥

ಸರ್ವಾನವದ್ಯೋ ದುಷ್ಪ್ರಾಪ್ಯಸ್ತುರೀಯಸ್ತಮಸಃ ಪರಃ ।
ಕೂಟಸ್ಥಸ್ಸರ್ವಸಂಶ್ಲಿಷ್ಟೋ ವಾಙ್ಮನೋಗೋಚರಾತಿಗಃ ॥ ೧೩೬ ॥

ಸಂಕರ್ಷಣಸ್ಸರ್ವಹರಃ ಕಾಲಸ್ಸರ್ವಭಯಂಕರಃ ।
ಅನುಲ್ಲಂಘ್ಯಶ್ಚಿತ್ರಗತಿಃ ಮಹಾರುದ್ರೋ ದುರಾಸದಃ ॥ ೧೩೭ ॥

ಮೂಲಪ್ರಕೃತಿರಾನಂದಃ ಪ್ರದ್ಯುಮ್ನೋ ವಿಶ್ವಮೋಹನಃ ।
ಮಹಾಮಾಯೋ ವಿಶ್ವಬೀಜಂ ಪರಶಕ್ತಿಃ ಸುಖೈಕಭೂಃ ॥ ೧೩೮ ॥

---

೧೩೪–೧೩೫. ಬಹು ಹಿಂದಿನವನು. ಬೇರೆಯಾಗಿರತಕ್ಕವನು. ಚೈತನ್ಯ ಸ್ವರೂಪನು. ಪುರುಷರಲ್ಲಿ ಶ್ರೇಷ್ಠನು. ವೇದಾಂತದಿಂದ ತಿಳಿಯಲು ಸಾಧ್ಯನು. ಕಷ್ಟದಿಂದ ತಿಳಿಯಲು ಸಾಧ್ಯನು. ತಾಪತ್ರಯವಿಲ್ಲದವನು. ಬ್ರಹ್ಮವಿದ್ಯೆಯನ್ನು ಆಶ್ರಯಿಸಿಕೊಂಡಿರುವವನು. ಉತ್ತಮನು. ಸ್ವಪ್ರಕಾಶವುಳ್ಳವನು. ತಾನಾಗಿಯೇ ಪ್ರಭುವಾಗಿರುವವನು. ಎಲ್ಲಾ ಉಪಾಯಗಳ ಸ್ವರೂಪನು. ಉದಾಸೀನನು. ಪ್ರಣವದ ಸ್ವರೂಪನು. ಎಲ್ಲರಲ್ಲಿಯೂ ಸಮನು.

೧೩೬–೧೩೭. ಎಲ್ಲದಕ್ಕಿಂತಲೂ ಉತ್ತಮನು. ಸಿಕ್ಕುವುದಕ್ಕೆ ಕಷ್ಟನು. ಮೋಕ್ಷಸ್ವರೂಪನು. ಅಜ್ಞಾನಕ್ಕೆ ದೂರನು. ಎಲ್ಲದಕ್ಕೂ ಸಾಕ್ಷಿಯು. ಎಲ್ಲದರಲ್ಲಿಯೂ ಸೇರಿಕೊಂಡಿರುವವನು. ಮಾತು ಮನೆಗಳಿಗೆ ಸಿಕ್ಕದೆ ದೂರನಾಗಿರುವವನು. ಎಲ್ಲವನ್ನೂ ಹತ್ತಿರಕ್ಕೆ ಎಳೆಯುವವನು. ಎಲ್ಲವನ್ನೂ ನಾಶಮಾಡುವವನು. ಕಾಲಸ್ವರೂಪನು. ಎಲ್ಲಕ್ಕೂ ಭಯವನ್ನುಂಟುಮಾಡುವವನು. ಮೀರಲಾಗದವನು. ಚಿತ್ರವಾದ ಗಮನವುಳ್ಳವನು. ಭಯಂಕರನು. ತಡೆಯಲು ಅಸಾಧ್ಯನು.

೧೩೮–೧೩೯. ಎಲ್ಲಕ್ಕೂ ಮೂಲಕಾರಣನು. ಆನಂದಸ್ವರೂಪನು. ಪ್ರದ್ಯುಮ್ನನು. ಪ್ರಪಂಚವನ್ನೇ ಮೋಹಿಸುವವನು. ಮಹಾಮಾಯ ಸ್ವರೂಪನು. ಪ್ರಪಂಚಕ್ಕೆ ಬೀಜರೂಪನು ಉತ್ತಮವಾದ ಶಕ್ತಿಯುಳ್ಳವನು. ಸುಖಕ್ಕೆ ಕಾರಣನು.

**ಸರ್ವಕಾಮ್ಯೋಽನನ್ತಲೀಲಃ ಸರ್ವಭೂತವಶಂಕರಃ ।**
**ಅನಿರುದ್ಧಸ್ಸರ್ವಜೀವೋ ಹೃಷೀಕೇಶೋ ಮನಃಪತಿಃ ॥ ೧೩೯ ॥**

**ನಿರುಪಾಧಿಪ್ರಿಯೋ ಹಂಸೋಽಕ್ಷರಸ್ಸರ್ವನಿಯೋಜಕಃ ।**
**ಬ್ರಹ್ಮಪ್ರಾಣೇಶ್ವರಸ್ಸರ್ವಭೂತಭೃದ್ದೇಹನಾಯಕಃ ॥ ೧೪೦ ॥**

**ಕ್ಷೇತ್ರಜ್ಞಃ ಪ್ರಕೃತಿಸ್ಸ್ವಾಮೀ ಪುರುಷೋ ವಿಶ್ವಸೂತ್ರಧೃಕ್ ।**
**ಅಂತರ್ಯಾಮೀ ತ್ರಿಧಾಮಾನ್ತಸ್ಸಾಕ್ಷೀ ನಿರ್ಗುಣ ಈಶ್ವರಃ ॥ ೧೪೧ ॥**

**ಯೋಗಿಗಮ್ಯಃ ಪದ್ಮನಾಭಃ ಶೇಷಶಾಯೀ ಶ್ರಿಯಃ ಪತಿಃ ।**
**ಶ್ರೀಶಿವೋಪಾಸ್ಯಪಾದಾಬ್ಜೋ ನಿತ್ಯಶ್ರೀಃ ಶ್ರೀನಿಕೇತನಃ ॥ ೧೪೨ ॥**

**ನಿತ್ಯವಕ್ಷಸ್ಥಳಸ್ಥಶ್ರೀಃ ಶ್ರೀನಿಧಿಃ ಶ್ರೀಧರೋ ಹರಿಃ ।**
**ವಶ್ಯಶ್ರೀರ್ನಿಶ್ಚಲಶ್ರೀದೋ ವಿಷ್ಣುಃ ಕ್ಷೀರಾಬ್ಧಿಮಂದಿರಃ ॥ ೧೪೩ ॥**

---

ಎಲ್ಲರಿಂದಲೂ ಅಪೇಕ್ಷಿತನಾದವನು. ಬಹುವಾದ ಲೀಲೆಯುಳ್ಳವನು. ಎಲ್ಲಾ ಭೂತಗಳನ್ನು ವಶದಲ್ಲಿಟ್ಟುಕೊಂಡಿರುವವನು. ತಡೆಯಲಾಗದವನು. ಎಲ್ಲಕ್ಕೂ ಜೀವಸ್ವರೂಪನು. ಇಂದ್ರಿಯಗಳಿಗೆ ಒಡೆಯನು. ಮನಸ್ಸಿಗೆ ಒಡೆಯನು.

೧೪೦–೧೪೧. ಮತ್ತೊಂದರ ಆಶ್ರಯ ಬೇಕಿಲ್ಲದವನು ಹಂಸರೂಪನು. ನಾಶರಹಿತನು. ಎಲ್ಲರಿಗೂ ಅಪ್ಪಣೆ ಮಾಡುವವನು. ಬ್ರಹ್ಮನಿಗೆ ಪ್ರಿಯನು. ಎಲ್ಲಾ ಪ್ರಾಣಿಗಳನ್ನೂ ಧರಿಸಿರುವವನು. ದೇಹಕ್ಕೆ ಒಡೆಯನು. ಆತ್ಮಸ್ವರೂಪನು. ಪ್ರಕೃತಿರೂಪನು. ಸ್ವಾಮಿಯು. ಪುರುಷನು. ಪ್ರಪಂಚದ ಸೂತ್ರವನ್ನೇ ಹಿಡಿದಿರುವವನು. ಎಲ್ಲಾ ಪ್ರಾಣಿಗಳ ಒಳಗೂ ಇರತಕ್ಕವನು. ಸ್ವರ್ಗರೂಪಿಯು. ಒಳಗಿನ ಸಾಕ್ಷಿಯು. ಗುಣವಿಲ್ಲದವನು ಈಶ್ವರನು.

೧೪೨–೧೪೩. ಯೋಗಿಗಳಿಗೆ ತಿಳಿಯಲು ಸಾಧ್ಯನು. ಪದ್ಮದಂತಿರುವ ಹೊಕ್ಕಳುಳ್ಳವನು. ಶೇಷವೆಂಬ ಹಾವಿನಮೇಲೆ ಮಲಗಿರುವವನು. ಲಕ್ಷ್ಮಿಗೆ ಗಂಡನು. ಶಿವನಿಂದ ಪೂಜಿಸಿಕೊಳ್ಳುತ್ತಿರುವ ಪಾದಗಳುಳ್ಳವನು. ಯಾವಾಗಲೂ ಸಂಪತ್ತುಳ್ಳವನು. ಸಂಪತ್ತೇ ಮನೆಯಾಗಿರುವವನು. ಯಾವಾಗಲೂ ಎದೆಯಲ್ಲಿ ಲಕ್ಷ್ಮಿಯನ್ನು ಇಟ್ಟುಕೊಂಡಿರುವವನು. ಲಕ್ಷ್ಮಿಯೇ ನಿಧಿಯಾಗಿರುವವನು. ಲಕ್ಷ್ಮಿಯನ್ನು ಧರಿಸಿರುವವನು. ಹರಿಯು ಲಕ್ಷ್ಮಿಯನ್ನು ವಶದಲ್ಲಿಟ್ಟುಕೊಂಡಿರುವವನು. ಚಲಿಸದವನು. ಸಂಪತ್ತನ್ನು ಕೊಡುವವನು. ವ್ಯಾಪಕನು. ಕ್ಷೀರ ಸಮುದ್ರವೇ ಮನೆಯಾಗಿರುವವನು.

ಕೌಸ್ತುಭೋದ್ಭಾಸಿತೋರಸ್ಕೋ ಮಾಧವೋ ಜಗದಾರ್ತಿಹಾ ।
ಶ್ರೀವತ್ಸವಕ್ಷಾಃ ನಿಸ್ಸೀಮಕಲ್ಯಾಣಗುಣಭಾಜನಂ ॥ ೧೪೪ ॥

ಪೀತಾಂಬರೋ ಜಗನ್ನಾಥೋ ಜಗತ್ತ್ರಾತಾ ಜಗತ್ಪಿತಾ ।
ಜಗದ್ಬಂಧುರ್ಜಗತ್ಸ್ರಷ್ಟಾ ಜಗದ್ಧಾತಾ ಜಗನ್ನಿಧಿಃ ॥ ೧೪೫ ॥

ಜಗದೇಕಸ್ಫುರದ್ವೀರ್ಯೋ ನಾಹಂವಾದೀ ಜಗನ್ಮಯಃ ।
ಸರ್ವಾಶ್ಚರ್ಯಮಯಃ ಸರ್ವಸಿದ್ಧಾರ್ಥಃ ಸರ್ವರಂಜಿತಃ ॥ ೧೪೬ ॥

ಸರ್ವಾಮೋಘೋದ್ಯಮೋ ಬ್ರಹ್ಮರುದ್ರಾದ್ಯುತ್ಕೃಷ್ಟಚೇತನಃ ।
ಶಂಭೋಃ ಪಿತಾಮಹೋ ಬ್ರಹ್ಮಪಿತಾ ಶಕ್ರಾದ್ಯಧೀಶ್ವರಃ ॥ ೧೪೭ ॥

ಸರ್ವದೇವಪ್ರಿಯಃ ಸರ್ವದೇವಮೂರ್ತಿರನುತ್ತಮಃ ।
ಸರ್ವದೇವೈಕಶರಣಂ ಸರ್ವದೇವೈಕದೇವತಾ ॥ ೧೪೮ ॥

---

೧೪೪–೧೪೫. ಕೌಸ್ತುಭ ಮಣಿಯಿಂದ ಪ್ರಕಾಶಿಸುವ ಎದೆಯುಳ್ಳವನು. ಮಂಗಳಕರವಾದ ಗುಣವುಳ್ಳವನು. ಪೀತಾಂಬರವನ್ನು ಧರಿಸಿರುವವನು. ಜಗತ್ತಿಗೆ ನಾಥನು. ಜಗತ್ತನ್ನು ಕಾಪಾಡುವವನು. ಜಗತ್ತಿಗೆ ತಂದೆಯು. ಜಗತ್ತಿಗೆ ಬಂಧುವು. ಜಗತ್ತನ್ನು ಸೃಷ್ಟಿಸುವವನು. ಜಗತ್ತನ್ನು ಧರಿಸಿರುವವನು. ಜಗತ್ತಿಗೆ ನಿಧಿಯು.

೧೪೬–೧೪೭. ಪ್ರಪಂಚದಲ್ಲೆಲ್ಲಾ ಪ್ರಕಾಶಿಸುವ ಪರಾಕ್ರಮವುಳ್ಳವನು ಅಹಂಕಾರವಿಲ್ಲದವನು. ಜಗತ್ತಿನಲ್ಲೆಲ್ಲಾ ಇರುವವನು. ಎಲ್ಲರಿಗೂ ಆಶ್ಚರ್ಯವನ್ನುಂಟುಮಾಡುವವನು. ಎಲ್ಲಾ ಪ್ರಯೋಜನವನ್ನೂ ಹೊಂದಿರುವವನು. ಎಲ್ಲರನ್ನೂ ಸಂತೋಷಪಡಿಸುವವನು. ಕೈಗೊಂಡ ಕೆಲಸವನ್ನು ವ್ಯರ್ಥಮಾಡಿಕೊಳ್ಳದವನು. ಬ್ರಹ್ಮ ರುದ್ರರಿಗಿಂತಲೂ ಶ್ರೇಷ್ಠನು. ಶಂಭುವಿಗೆ ತಾತನು. ಬ್ರಹ್ಮನಿಗೆ ತಂದೆಯು ಇಂದ್ರಾದಿಗಳಿಗೆ ಒಡೆಯನು.

೧೪೮–೧೪೯. ಎಲ್ಲಾ ದೇವತೆಗಳಿಗೂ ಪ್ರೀತಿಪಾತ್ರನು. ಎಲ್ಲಾ ದೇವತೆಗಳನ್ನೂ ಧರಿಸಿರುವವನು ಉತ್ತಮನು. ಎಲ್ಲಾ ದೇವತೆಗಳನ್ನೂ ಕಾಪಾಡುವವನು. ಎಲ್ಲಾ ದೇವತೆಗಳಿಗೂ ದೇವತೆಯು. ಯಜ್ಞವನ್ನು ಅನುಭವಿಸುವವನು.

ಯಜ್ಞಭುಗ್ಯಜ್ಞಫಲದೋ ಯಜ್ಞೇಶೋ ಯಜ್ಞಭಾವನಃ ।
ಯಜ್ಞತ್ರಾತಾ ಯಜ್ಞಪುಮಾನ್ ವನಮಾಲೀ ದ್ವಿಜಪ್ರಿಯಃ ॥ ೧೪೯ ॥

ದ್ವಿಜೈಕಮಾನದೋ ವಿಪ್ರಕುಲದೇವೋ ಽಸುರಾನ್ತಕಃ ।
ಸರ್ವದುಷ್ಟಾನ್ತಕೃತ್ಸರ್ವ ಸಜ್ಜನಾನನ್ಯಪಾಲಕಃ ॥ ೧೫೦ ॥

ಸಪ್ತಲೋಕೈಕಜಠರಃ ಸಪ್ತಲೋಕೈಕಮಂಡನಃ ।
ಸೃಷ್ಟಿಸ್ಥಿತ್ಯಂತಕೃಚ್ಚಕ್ರೀ ಶಾರ್ಙ್ಗಧನ್ವಾ ಗದಾಧರಃ ॥ ೧೫೧ ॥

ಶಂಖಭೃನ್ನಂದಕೀಪದ್ಮಪಾಣಿರ್ಗರುಡವಾಹನಃ ।
ಅನಿರ್ದೇಶ್ಯವಪುಸ್ಸರ್ವಪೂಜ್ಯಸ್ತ್ರೈಲೋಕ್ಯಪಾವನಃ ॥ ೧೫೨ ॥

ಅನನ್ತಕೀರ್ತಿರ್ನಿಸ್ಸೀಮಪೌರುಷಃ ಸರ್ವಮಂಗಳಃ ।
ಸೂರ್ಯಕೋಟಿಪ್ರತೀಕಾಶೋ ಯಮಕೋಟಿದುರಾಸದಃ ॥ ೧೫೩ ॥

---

ಫಲವನ್ನು ಕೊಡುವವನು. ಯಜ್ಞಕ್ಕೆ ಒಡೆಯನು ಯಜ್ಞವನ್ನು ಮಾಡಿಸುವವನು ಯಜ್ಞವನ್ನು ಕಾಪಾಡುವವನು. ಯಜ್ಞಪುರುಷನು. ವನಮಾಲೆಯೆಂಬ ಹಾರವುಳ್ಳವನು. ಬ್ರಾಹ್ಮಣರಲ್ಲಿ ಪ್ರೀತಿಯುಳ್ಳವನು.

೧೫೦–೧೫೧. ಬ್ರಾಹ್ಮಣರಿಗೆ ಗೌರವ ಕೊಡುವವನು. ಬ್ರಾಹ್ಮಣರ ಗುಂಪಿಗೆ ದೇವರು. ರಾಕ್ಷಸರನ್ನೆಲ್ಲಾ ನಾಶಮಾಡುವವನು. ದುಷ್ಟರಿಗೆಲ್ಲಾ ನಾಶಕನು. ಸಜ್ಜನರನ್ನೆಲ್ಲಾ ಮುಖ್ಯವಾಗಿ ಕಾಪಾಡುವವನು. ಏಳು ಲೋಕಗಳೂ ಹೊಟ್ಟೆಯಲ್ಲಿರುವವನು. ಏಳು ಲೋಕಗಳಿಗೂ ಭೂಷಣನು. ಉತ್ಪತ್ತಿ ರಕ್ಷಣೆ ನಾಶಗಳನ್ನು ಮಾಡುವವನು. ಚಕ್ರವುಳ್ಳವನು. ಶಾರ್ಙ್ಗವೆಂಬ ಬಿಲ್ಲನ್ನು ಹಿಡಿದಿರುವವನು. ಗದೆಯನ್ನು ಧರಿಸಿರುವವನು.

೧೫೨–೧೫೩. ಶಂಖವನ್ನು ಧರಿಸಿರುವವನು. ನಂದಕವನ್ನು ಹಿಡಿದಿರುವವನು. ಪದ್ಮವನ್ನು ಹಿಡಿದಿದ್ದಾನೆ. ಗರುಡನೇ ವಾಹನವಾಗಿ ಉಳ್ಳವನು. ಅವನ ದೇಹವು ಈ ರೀತಿಯಾಗಿದೆಯೆಂದು ಹೇಳಲಾಗುವುದಿಲ್ಲ. ಎಲ್ಲರಿಂದಲೂ ಪೂಜೆಗೆ ಯೋಗ್ಯನು. ಮೂರು ಲೋಕವನ್ನೂ ಪವಿತ್ರವನ್ನಾಗಿ ಮಾಡುತ್ತಾನೆ ಬಹುವಾದ ಕೀರ್ತಿಯುಳ್ಳವನು. ಬಹುವಾದ ಶಕ್ತಿಯುಳ್ಳವನು. ಎಲ್ಲಕ್ಕೂ ಮಂಗಳಸ್ವರೂಪನು. ಕೋಟಿ ಸೂರ್ಯರಷ್ಟು ಪ್ರಕಾಶವುಳ್ಳವನು. ಕೋಟಿ ಜನ ಯಮರು ಬಂದರೂ ತಡೆಯಲಾರರು.

ಕಂದರ್ಪಕೋಟಿಲಾವಣ್ಯೋ ದುರ್ಗಾಕೋಟ್ಯರಿಮರ್ದನಃ ।
ಸಮುದ್ರಕೋಟಿಗಂಭೀರಸ್ತೀರ್ಥಕೋಟಿಸಮಾಹ್ವಯಃ ॥ ೧೫೪ ॥

ಬ್ರಹ್ಮಕೋಟಿಜಗತ್ಸ್ರಷ್ಟಾ ವಾಯುಕೋಟಿಮಹಾಬಲಃ ।
ಕೋಟೀನ್ದುಜಗದಾನಂದೀ ಶಂಭುಕೋಟಿಮಹೇಶ್ವರಃ ॥ ೧೫೫ ॥

ಕುಬೇರಕೋಟಿಲಕ್ಷ್ಮೀವಾನ್ ಶಕ್ರಕೋಟಿವಿಲಾಸವಾನ್ ।
ಹಿಮವತ್ಕೋಟಿನಿಷ್ಕಂಪಃ ಕೋಟಿಬ್ರಹ್ಮಾಂಡವಿಗ್ರಹಃ ॥ ೧೫೬ ॥

ಕೋಟ್ಯಶ್ವಮೇಧಪಾಪಘ್ನೋ ಯಜ್ಞಕೋಟಿಸಮಾರ್ಚನಃ ।
ಸುಧಾಕೋಟಿಸ್ವಾಸ್ಥ್ಯಹೇತುಃ ಕಾಮಧುಕ್ಕೋಟಿಕಾಮದಃ ॥ ೧೫೭ ॥

ಆತ್ಮವಿದ್ಯಾಕೋಟಿರೂಪಃ ಶಿಪಿವಿಷ್ಟಃ ಶುಚಿಶ್ರವಾಃ ।
ವಿಶ್ವಂಭರಸ್ತೀರ್ಥಪಾದಃ ಪುಣ್ಯಶ್ರವಣಕೀರ್ತನಃ ॥ ೧೫೮ ॥

---

೧೫೪-೧೫೫. ಕೋಟಿಜನ ಮನ್ಮಥರಷ್ಟು ಲಾವಣ್ಯವುಳ್ಳವನು. ಕೋಟಿ ಜನ ದುರ್ಗೆಯರು ಮಾಡುವಷ್ಟು ಶತ್ರುನಿಗ್ರಹವನ್ನು ಮಾಡುತ್ತಾನೆ. ಕೋಟಿ ಸಮುದ್ರದಷ್ಟು ಗಂಭೀರವಾಗಿದ್ದಾನೆ. ಕೋಟಿ ತೀರ್ಥಕ್ಕೆ ಸಮವಾದ ಮಹಿಮೆ ಯುಳ್ಳವನು. ಕೋಟಿಜನ ಬ್ರಹ್ಮರು ಸೃಷ್ಟಿಮಾಡುವಷ್ಟು ಸೃಷ್ಟಿಮಾಡುತ್ತಾನೆ. ಕೋಟಿಜನ ವಾಯುಗಳಷ್ಟು ಬಲವುಳ್ಳವನು ಕೋಟಿಜನ ಚಂದ್ರರಷ್ಟು ಆನಂದವನ್ನುಂಟುಮಾಡುತ್ತಾನೆ. ಕೋಟಿಜನ ಶಂಭುಗಳಷ್ಟು ಶಕ್ತನಾಗಿರುವನು.

೧೫೬-೧೫೭. ಕೋಟಿ ಕುಬೇರರಷ್ಟು ಐಶ್ವರ್ಯವುಳ್ಳವನು. ಕೋಟಿ ಜನ ಇಂದ್ರರಷ್ಟು ಭೋಗವುಳ್ಳವನು. ಕೋಟಿ ಹಿಮವತ್ಪರ್ವತಗಳಷ್ಟು ಸ್ಥಿರನು. ಕೋಟಿ ಯಜ್ಞಗಳಷ್ಟು ಪೂಜೆಗಳಿಗೆ ಯೋಗ್ಯನು. ಕೋಟಿ ಅಶ್ವಮೇಧಗಳು ಹಾಳುಮಾಡುವಷ್ಟು ಪಾಪವನ್ನು ಹಾಳುಮಾಡುತ್ತಾನೆ. ಕೋಟಿ ಬ್ರಹ್ಮಾಂಡ ಗಳಷ್ಟು ಆಕಾರವುಳ್ಳವನು. ಕೋಟಿ ಅಮೃತಗಳು ಸ್ಥಿರತೆಯನ್ನು ಮಾಡುವಷ್ಟು ಸ್ಥೈರ್ಯವುಳ್ಳವನು. ಕೋಟಿ ಕಾಮಧೇನುಗಳು ಕೊಡುವ ಇಷ್ಟಾರ್ಥವನ್ನು ಕೊಡುತ್ತಾನೆ.

೧೫೮-೧೫೯. ಕೋಟಿ ಬ್ರಹ್ಮವಿದ್ಯೆಗಳ ರೂಪವುಳ್ಳವನು. ಶಿಪಿವಿಷ್ಟನು. ಶುಚಿಯಾದ ಕಿವಿಯುಳ್ಳವನು. ವಿಶ್ವವನ್ನೇ ಧರಿಸಿರುವವನು. ತೀರ್ಥವು ಪಾದದಲ್ಲಿರುವವನು. ಆತನ ಹೆಸರನ್ನು ಹೇಳಿದರೆ ಪುಣ್ಯ ಬರುವಂತಹವನು.

ಆದಿದೇವೋ ಜಗಜ್ಜೈತ್ರೋ ಮುಕುಂದಃ ಕಾಲನೇಮಿಹಾ ।
ವೈಕುಂಠೋಽನನ್ತ ಮಾಹಾತ್ಮ್ಯೋ ಮಹಾಯೋಗೇಶ್ವರೋತ್ತಮಃ ॥

ನಿತ್ಯತೃಪ್ತೋ ಲಸದ್ಭಾವೋ ನಿಶ್ಶಂಕೋ ನರಕಾಂತಕಃ ।
ದೀನಾನಾಥೈಕಶರಣಂ ವಿಶ್ವೈಕವ್ಯಸನಾಪಹಃ ॥ ೧೬೦ ॥

ಜಗತ್ಕೃಪಾಕ್ಷಮೋ ನಿತ್ಯಂ ಕೃಪಾಳುಃ ಸಜ್ಜನಾಶ್ರಯಃ ।
ಯೋಗೇಶ್ವರಸ್ಸದೋ ದೀರ್ಣೋ ವೃದ್ಧಿಕ್ಷಯವಿವರ್ಜಿತಃ ॥ ೧೬೧ ॥

ಅಧೋಕ್ಷಜೋ ವಿಶ್ವರೇತಾಃ ಪ್ರಜಾಪತಿಶತಾಧಿಪಃ ।
ಶಕ್ರಬ್ರಹ್ಮಾರ್ಚಿತಪದಃ ಶಂಭುಬ್ರಹ್ಮೋರ್ಧ್ವಧಾಮಗಃ ॥ ೧೬೨ ॥

ಸೂರ್ಯಸೋಮೇಕ್ಷಣೋ ವಿಶ್ವಭೋಕ್ತಾ ಸರ್ವಸ್ಯ ಪಾರಗಃ ।
ಜಗತ್ಸೇತುರ್ಧರ್ಮಸೇತುಧರೋ ವಿಶ್ವಧುರಂಧರಃ ॥ ೧೬೩ ॥

---

ಆದಿದೇವನು. ಜಗತ್ತನ್ನೇ ಜಯಿಸುವವನು. ಮುಕುಂದನು. ಕಾಲನೇಮಿಯನ್ನು ಕೊಂದಿರುವವನು. ವೈಕುಂಠನು. ಬಹುವಾದ ಮಹಿಮೆಯುಳ್ಳವನು. ದೊಡ್ಡ ದೊಡ್ಡ ಯೋಗೀಶ್ವರರಿಗೆಲ್ಲಾ ಪ್ರೀತಿಪಾತ್ರನು.

೧೬೦–೧೬೧. ಯಾವಾಗಲೂ ತೃಪ್ತನಾಗಿರುವವನು. ಅಭಿಪ್ರಾಯವನ್ನು ಹೊಸ ಹೊಸದಾಗಿ ಹೊರಡಿಸುತ್ತಿರುವವನು. ಸಂದೇಹವಿಲ್ಲದವನು. ನರಕಾಸುರನನ್ನು ಕೊಂದವನು. ದೀನರಿಗೂ ಅನಾಥರಿಗೂ ಶರಣನು. ಪ್ರಪಂಚದ ದುಃಖವನ್ನು ಹಾಳುಮಾಡುವವನು. ಜಗತ್ತಿಗೆ ಕೃಪೆಮಾಡುವುದರಲ್ಲಿ ಶಕ್ತಿಯುಳ್ಳವನು. ಕೃಪಾವಂತನು. ಸಜ್ಜನರಿಗೆ ಆಶ್ರಯನು. ಯಾಗಕ್ಕೆ ಒಡೆಯನು. ಯಾವಾಗಲೂ ಹೆಚ್ಚುತ್ತಿರುವವನು. ಹೆಚ್ಚು ಕಡಿಮೆಯನ್ನು ಹೊಂದದವನು.

೧೬೨–೧೬೩. ಇಂದ್ರಿಯಗಳನ್ನು ಅಧೀನದಲ್ಲಿಟ್ಟುಕೊಂಡಿರುವವನು. ಪ್ರಪಂಚವೇ ರೇತಸ್ಸಾಗಿರುವವನು. ನೂರುಜನ ಪ್ರಜಾಪತಿಗಳಿಗೂ ಒಡೆಯನು. ಇಂದ್ರ ಬ್ರಹ್ಮರಿಂದ ಪೂಜಿತವಾದ ಕಾಲುಳ್ಳವನು. ಶಂಭು ಬ್ರಹ್ಮರುಗಳಿಗಿಂತ ಮೇಲಿನ ಜಾಗವನ್ನು ಹೊಂದಿರುವವನು. ಸೂರ್ಯ ಚಂದ್ರರೇ ಕಣ್ಣಾಗಿರುವವನು. ಪ್ರಪಂಚವನ್ನೇ ಅನುಭವಿಸುತ್ತಿರುವವನು. ಎಲ್ಲರನ್ನೂ ಕೊನೆಗಾಣಿಸುವವನು. ಜಗತ್ತಿಗೆ ಸೇತುರೂಪನು. ಧರ್ಮವೆಂಬ ಸೇತುವೆಯನ್ನು ಧರಿಸಿರುವವನು. ಪ್ರಪಂಚದ ಭಾರವನ್ನು ಹೊತ್ತಿರುವುದರಲ್ಲಿ ಶಕ್ತನು.

ನಿರ್ಮಮೋಽಖಿಲಲೋಕೇಶೋ ನಿಸ್ಸಂಗೋಽದ್ಭುತಭೋಗವಾನ್ ।
ವಶ್ಯಮಾಯೋ ವಶ್ಯವಿಶ್ವೋ ವಿಷ್ವಕ್ಸೇನಸ್ಸುರೋತ್ತಮಃ ॥ ೧೬೪ ॥

ಸರ್ವಶ್ರೇಯಃಪತಿರ್ದಿವ್ಯೋಽನರ್ಘ್ಯಭೂಷಣಭೂಷಿತಃ ।
ಸರ್ವಲಕ್ಷಣಲಕ್ಷಣ್ಯಃ ಸರ್ವದೈತ್ಯೇಂದ್ರದರ್ಪಹಾ ॥ ೧೬೫ ॥

ಸಮಸ್ತದೇವಸರ್ವಸ್ವಂ ಸರ್ವದೈವತನಾಯಕಃ ।
ಸಮಸ್ತದೇವಕವಚಂ ಸರ್ವದೇವಶಿರೋಮಣಿಃ ॥ ೧೬೬ ॥

ಸಮಸ್ತದೇವತಾದುರ್ಗಃ ಪ್ರಪನ್ನಾಶನಿಪಂಜರಃ ।
ಸಮಸ್ತಭಯಹೃನ್ನಾಮಾ ಭಗವಾನ್ವಿಷ್ಟರಶ್ರವಾಃ ॥ ೧೬೭ ॥

ವಿಭುಸ್ಸರ್ವಹಿತೋದರ್ಕೋ ಹತಾರಿಸ್ಸ್ವರ್ಗತಿಪ್ರದಃ ।
ಸರ್ವದೈವತಜೀವೇಶೋ ಬ್ರಾಹ್ಮಣಾದಿನಿಯೋಜಕಃ ॥ ೧೬೮ ॥

---

೧೬೪–೧೬೫. ಮಮಕಾರವಿಲ್ಲದವನು. ಎಲ್ಲಾ ಲೋಕಕ್ಕೂ ಒಡೆಯನು. ಒಬ್ಬರ ಸಹವಾಸದಲ್ಲೂ ಇಲ್ಲದವನು. ಉತ್ತಮವಾದ ಭೋಗಗಳುಳ್ಳವನು. ಮಾಯೆಯನ್ನು ಅಧೀನದಲ್ಲಿಟ್ಟುಕೊಂಡಿರುವವನು. ವಿಷ್ವಕ್ಸೇನನು. ಶೂರರಲ್ಲಿ ಉತ್ತಮನು. ಶ್ರೇಯಸ್ಸುಗಳಿಗೆಲ್ಲಾ ಒಡೆಯನು. ದಿವ್ಯನಾಗಿರುವವನು. ಎಲ್ಲಾ ಲಕ್ಷಣಗಳಿಂದಲೂ ಕೂಡಿರುವವನು. ಎಲ್ಲ ದೈತ್ಯರ ದರ್ಪಗಳನ್ನೂ ನಾಶಮಾಡಿರುವವನು.

೧೬೬–೧೬೭. ದೇವತೆಗಳಿಗೆ ಎಲ್ಲರಿಗಿಂತಲೂ ಇವನೇ ಮುಖ್ಯನು. ದೇವತೆಗಳಿಗೆಲ್ಲಾ ಒಡೆಯನು. ದೇವತೆಗಳಿಗೆ ರಕ್ಷಕನು. ದೇವತೆಗಳೊಳಗೆ ಶ್ರೇಷ್ಠನು. ದೇವತೆಗಳಿಗೆಲ್ಲಾ ದುರ್ಗದಂತೆ ಕಾಪಾಡುವವನು ಮರೆಹೊಕ್ಕವರಿಗೆ ವಜ್ರಪಂಜರನು. ಇವನ ನಾಮವನ್ನು ಉಚ್ಚರಿಸಿದರೆ ಭಯವೆಲ್ಲವೂ ಹೋಗುತ್ತದೆ. ಪೂಜ್ಯನು. ಪವಿತ್ರದಂತೆ ಕಿವಿಯುಳ್ಳವನು.

೧೬೮–೧೬೯. ಎಲ್ಲಾ ಕಡೆಯಲ್ಲಿಯೂ ಇರುವವನು. ಎಲ್ಲರಿಗೂ ಹಿತವಾಗುವಂತೆ ಮುಂದಿನ ಫಲವನ್ನು ಕೊಡುವವನು. ಶತ್ರುನಾಶಕನು. ಸ್ವರ್ಗವನ್ನು ಕೊಡತಕ್ಕವನು. ಎಲ್ಲಾ ದೇವತೆಗಳಿಗೂ ಜೀವಕ್ಕೆ ಒಡೆಯನು. ಬ್ರಾಹ್ಮಣಾದಿ ಜಾತಿಗಳನ್ನು ನಿಯಮಿಸತಕ್ಕವನು. ಪರಾರ್ಧ ಸಂಖ್ಯೆಯ ಬ್ರಹ್ಮ

ಬ್ರಹ್ಮಶಂಭುಪರಾರ್ಧಾಯು ಬ್ರಹ್ಮಜ್ಯೇಷ್ಠಃ ಶಿಶುಸ್ಸ್ವರಾಟ್ ।
ರಾಪಿಡ್ಭಕ್ತಪರಾಧೀನಃ ಸ್ತುತ್ಯಃ ಸ್ತೋತ್ರಾರ್ಥಸಾಧಕಃ ॥ ೧೬೯ ॥

ಪರಾರ್ಥಕರ್ತಾ ಕೃತ್ಯಜ್ಞಃ ಸ್ವಾರ್ಥಕೃತ್ಯಸದೋಜ್ಝಿತಃ ।
ಸದಾನಂದಃ ಸದಾಭದ್ರಃ ಸದಾ ಶಾನ್ತಃ ಸದಾಶಿವಃ ॥ ೧೭೦ ॥

ಸದಾಪ್ರಿಯಸ್ಸದಾತುಷ್ಟಃ ಸದಾಪುಷ್ಟಸ್ಸದಾರ್ಚಿತಃ ।
ಸದಾಪೂತಃ ಪಾವನಾಗ್ರ್ಯೋ ವೇದಗುಹ್ಯೋ ವೃಷಾಕಪಿಃ ॥ ೧೭೧ ॥

ಸಹಸ್ರನಾಮಾ ತ್ರಿಯುಗಶ್ಚತುರ್ಮೂರ್ತಿಶ್ಚತುರ್ಭುಜಃ ।
ಭೂತಭವ್ಯಭವನ್ನಾಥೋ ಮಹಾಪುರುಷಪೂರ್ವಜಃ ॥ ೧೭೨ ॥

---

ಶಂಭುಗಳ ಆಯುಸ್ಸಿನಷ್ಟು ಆಯುಸ್ಸುಳ್ಳವನು. (ಪರಾರ್ಧವೆಂಬುದೇ ಎಣಿಕೆಗಳಲ್ಲಿ ಕೊನೆಯದು.) ಬ್ರಹ್ಮನಿಗೆ ದೊಡ್ಡವನು ಬಾಲನಾಗಿ ಪ್ರಕಾಶಿಸುವವನು. ವಿರಾಟ್‌ಸ್ವರೂಪವುಳ್ಳವನು. ಭಕ್ತರಿಗೆ ಅಧೀನನು. ಸ್ತೋತ್ರಕ್ಕೆ ಯೋಗ್ಯನು ಸ್ತೋತ್ರದಲ್ಲಿರುವ ಅರ್ಥದಂತೆಯೇ ನಡೆಸಿಕೊಡತಕ್ಕವನು.

೧೭೦–೧೭೧. ಯಾವಾಗಲೂ ಪರೋಪಕಾರಿಯು. ಕೆಲಸವನ್ನು ಬಲ್ಲವನು. ಸ್ವಾರ್ಥವಾದ ಕೆಲಸವನ್ನು ಮಾಡಿಕೊಳ್ಳದೆ ಇರತಕ್ಕವನು. ಯಾವಾಗಲೂ ಆನಂದರೂಪನು. ಮಂಗಳಸ್ವರೂಪನು. ಯಾವಾಗಲೂ ಶಾಂತನು ಯಾವಾಗಲೂ ಮಂಗಳನು. ಯಾವಾಗಲೂ ಪ್ರಿಯನು. ಯಾವಾಗಲೂ ಸಂತೋಷವುಳ್ಳವನು. ಯಾವಾಗಲೂ ಕೆಚ್ಚಿರುವವನು. ಯಾವಾಗಲೂ ಪೂಜಿತನು ಯಾವಾಗಲೂ ಪರಿಶುದ್ಧನು. ಪರಿಶುದ್ಧರಲ್ಲಿ ಮೊದಲನೆಯವನು. ವೇದದಿಂದ ತಿಳಿಯಲಸಾಧ್ಯನು. ಹರಿಹರ ಸ್ವರೂಪನು.

೧೭೨. ಸಾವಿರ ಹೆಸರುಗಳುಳ್ಳವನು. ಮೂರು ಯುಗಗಳ ರೂಪನಾದವನು. ನಾಲ್ಕು ಆಕಾರವುಳ್ಳವನು. ನಾಲ್ಕು ಭುಜವುಳ್ಳವನು. ವರ್ತಮಾನ ಭೂತ ಭವಿಷ್ಯತ್ತುಗಳಿಗೆ ಒಡೆಯನು. ಹಿಂದೆ ಹುಟ್ಟಿದ ಮಹಾಪುರುಷನು.

ನಾರಾಯಣೋ ಮಂಜುಕೇಶಃ ಸರ್ವಯೋಗವಿನಿಸ್ಸೃತಃ ।
ವೇದಸಾರೋ ಯಜ್ಞಸಾರಃ ಸಾಮಸಾರಸ್ತಪೋನಿಧಿಃ ॥ ೧೭೩ ॥

ಸಾಧ್ಯಶ್ರೇಷ್ಠಃಪುರಾಣರ್ಷಿರ್ನಿಷ್ಠಾ ಶಾನ್ತಿಃ ಪರಾಯಣಃ ।
ಶಿವಸ್ತ್ರಿಶೂಲವಿಧ್ವಂಸೀ ಶ್ರೀಕಂಠೈಕವರಪ್ರದಃ ॥ ೧೭೪ ॥

ನರಃ ಕೃಷ್ಣೋ ಹರಿರ್ಧರ್ಮನಂದನೋ ಧರ್ಮಜೀವನಃ ।
ಆದಿಕರ್ತಾ ಸರ್ವಸತ್ಯಃ ಸರ್ವಸ್ತ್ರೀರತ್ನದರ್ಪಹಾ ॥ ೧೭೫ ॥

ತ್ರಿಕಾಲಜಿತಕಂದರ್ಪ ಉರ್ವಶೀಸೃಜ್ಮುನೀಶ್ವರಃ ।
ಆದ್ಯಃ ಕವಿರ್ಹಯಗ್ರೀವಃ ಸರ್ವವಾಗೀಶ್ವರೇಶ್ವರಃ ॥ ೧೭೬ ॥

ಸರ್ವದೇವಮಯೋ ಬ್ರಹ್ಮಗುರುರ್ವಾಗೀಶ್ವರೀಪತಿಃ ।
ಅನಂತವಿದ್ಯಾಪ್ರಭವೋ ಮೂಲಾವಿದ್ಯಾವಿನಾಶಕಃ ॥ ೧೭೭ ॥

---

೧೭೩–೧೭೪ ನಾರಾಯಣನು ಮನೋಹರವಾದ ಕೂದಲುಳ್ಳವನು. ಸರ್ವಯೋಗಗಳಿಂದಲೂ ಹೊರಹೊಮ್ಮಿದವನು. ವೇದದ ಸಾರಭೂತನು ಯಜ್ಞದ ಸಾರಭೂತನು. ಸಾಮವೇದದ ಸಾರಭೂತನು. ತಪಸ್ಸಿಗೆ ನಿಧಿಯು. ಸಾಧ್ಯರಲ್ಲಿ ಉತ್ತಮನು. ಹಳಬನಾದ ಋಷಿಯು. ನಿಯಮವುಳ್ಳವನು. ಶಾಸ್ತ್ರರೂಪನು. ಕೊನೆಯ ಮನುಷ್ಯನು. ಮಂಗಳರೂಪನು. ತ್ರಿಶೂಲದಿಂದ ಕೊಲ್ಲತಕ್ಕವನು. ಶ್ರೀಕಂಠನಿಗೆ ವರವನ್ನು ಕೊಟ್ಟವನು.

೧೭೫–೧೭೬. ನರನು. ಕೃಷ್ಣನು. ಹರಿಯು. ಧರ್ಮದಲ್ಲಿ ಪ್ರೀತಿಯುಳ್ಳವನು. ಧರ್ಮವೇ ಜೀವನಾಗಿ ಉಳ್ಳವನು ಮೊದಲಿನ ಕರ್ತೃವು. ಸತ್ಯರೂಪನು. ಎಲ್ಲಾ ಹೆಂಗಸರ ದರ್ಪವನ್ನೂ ಹಾಳುಮಾಡುವವನು. ಮೂರು ಕಾಲದಲ್ಲಿಯೂ ಸೌಂದರ್ಯವುಳ್ಳವನು. ಊರ್ವಶಿಯನ್ನು ಸೃಷ್ಟಿಸಿದವನು. ಮುನೀಶ್ವರನು. ಮೊದಲನೆಯ ಕವಿಯು. ಹಯಗ್ರೀವನು. ವಿದ್ವಾಂಸರಿಗೆಲ್ಲಾ ವಿದ್ವಾಂಸನು.

೧೭೭-೧೭೮. ಎಲ್ಲಾ ದೇವತೆಗಳ ಸ್ವರೂಪನು. ಬ್ರಹ್ಮನಿಗೆ ಗುರುವು. ವಾಗೀಶ್ವರಿಯಾದ ಸರಸ್ವತಿಗೆ ಯಜಮಾನನು ಅನೇಕ ವಿದ್ಯೆಗಳ ಉತ್ಪತ್ತಿಸ್ಥಾನನು ಮೂಲ ಅವಿದ್ಯೆಯನ್ನು ನಾಶಮಾಡಿದವನು. ಸರ್ವಜ್ಞತ್ವವನ್ನು ಕೊಡತಕ್ಕವನು.

**ಸರ್ವಜ್ಞದೋ ನಮಜ್ಜಾಡ್ಯನಾಶಕೋ ಮಧುಸೂದನಃ ।**
**ಅನೇಕಮಂತ್ರಕೋಟೀಶಃ ಶಬ್ದಬ್ರಹ್ಮೈಕಪಾರಗಃ ॥ ೧೭೮ ॥**

**ಆದಿವಿದ್ವಾನ್ವೇದಕರ್ತಾ ವೇದಾತ್ಮಾ ಶ್ರುತಿಸಾಗರಃ ।**
**ಬ್ರಹ್ಮಾರ್ಥವೇದಾಹರಣಃ ಸರ್ವವಿಜ್ಞಾನಜನ್ಮಭೂಃ ॥ ೧೭೯ ॥**

**ವಿದ್ಯಾರಾಜೋ ಜ್ಞಾನಮೂರ್ತಿರ್ಜ್ಞಾನಸಿಂಧುರಖಂಡಧೀಃ ।**
**ಮತ್ಸ್ಯದೇವೋ ಮಹಾಶೃಂಗೋ ಜಗದ್ಬೀಜವಹಿತ್ರಧೃಕ್ ॥ ೧೮೦ ॥**

**ಲೀಲಾವ್ಯಾಪ್ತಾಖಿಲಾಂಭೋಧಿಃ ಋಗ್ವೇದಾದಿಪ್ರವರ್ತಕಃ ।**
**ಆದಿಕೂರ್ಮೋಽಖಿಲಾಧಾರಸ್ತೃಣೀಕೃತಜಗದ್ಭರಃ ॥ ೧೮೧ ॥**

**ಅಮರೀಕೃತದೇವೌಘಃ ಪೀಯೂಷೋತ್ಪತ್ತಿಕಾರಣಃ ।**
**ಆತ್ಮಾಧಾರೋ ಧರಾಧಾರೋ ಯಜ್ಞಾಂಗೋ ಧರಣೀಧರಃ ॥ ೧೮೨ ॥**

---

ತಕ್ಕವನು. ನಮಸ್ಕರಿಸಿದವರ ಜಾಡ್ಯಗಳನ್ನು ನಾಶಮಾಡುವವನು. ಮಧುವನ್ನು ಕೊಂದವನು. ಕೋಟ್ಯಂತರ ಮಂತ್ರಗಳಿಗೆ ಒಡೆಯನು ಶಬ್ದಬ್ರಹ್ಮದ ಕೊನೆಯನ್ನು ತಿಳಿದವನು.

೧೭೯–೧೮೦ ಮೊದಲನೆಯ ವಿದ್ವಾಂಸನು. ವೇದವನ್ನು ಸೃಷ್ಟಿಸಿದವನು. ವೇದವೇ ದೇಹವಾಗಿ ಉಳ್ಳವನು. ವೇದವೆಂಬ ಸಮುದ್ರವುಳ್ಳವನು. ಬ್ರಹ್ಮನು. ಅರ್ಥವುಳ್ಳ ವೇದಗಳನ್ನು ತಂದವನು. ವಿಜ್ಞಾನಗಳಿಗೆಲ್ಲಾ ಉತ್ಪತ್ತಿಸ್ಥಾನನು. ವಿದ್ಯೆಗಳಿಗೆ ರಾಜನು. ಜ್ಞಾನಮೂರ್ತಿಯು. ಜ್ಞಾನಸಮುದ್ರನು. ಪೂರ್ಣಜ್ಞಾನವುಳ್ಳವನು. ಮತ್ಸ್ಯರೂಪವುಳ್ಳ ಸ್ವಾಮಿಯು. ದೊಡ್ಡ ಕೊಂಬುಳ್ಳವನು. ಜಗತ್ತಿಗೆ ಬೀಜರೂಪವಾದ ದೋಣಿಯ ಭಾರವನ್ನು ಹೊಂದಿರುವವನು.

೧೮೧–೧೮೨. ಲೀಲೆಯಿಂದಲೇ ಎಲ್ಲಾ ಸಮುದ್ರಗಳನ್ನೂ ಆವರಿಸಿಕೊಂಡಿರುವವನು. ಋಗ್ವೇದವೇ ಮುಂತಾದ ವೇದಗಳನ್ನು ಕಂಡುಹಿಡಿದವನು. ಪ್ರಪಂಚಕ್ಕೇ ಮೊದಲನೆಯ ಆಮೆಯು. ಆತ್ಮನಿಗೆ ಆಧಾರವಾಗಿರುವವನು. ಎಲ್ಲಕ್ಕೂ ಆಧಾರನು. ಜಗದ್ಭಾರವನ್ನು ಲಕ್ಷಿಸದಿರುವವನು. ದೇವತೆಗಳನ್ನು ಸಾಯದಂತೆ ಮಾಡಿರುವವನು. ಅಮೃತವನ್ನು ಹುಟ್ಟಿಸಿದವನು. ಯಜ್ಞದ ಅಂಗಗಳುಳ್ಳವನು. ಭೂಮಿಯನ್ನು ಹೊತ್ತಿರುವವನು.

ಹಿರಣ್ಯಾಕ್ಷಹರಃ ಪೃಥ್ವೀಪತಿಃ ಶ್ರಾದ್ಧಾದಿಕಲ್ಪಕಃ ।
ಸಮಸ್ತಪಿತೃಭೀತಿಘ್ನಃ ಸಮಸ್ತಪಿತೃಜೀವನಂ ॥ ೧೮೩ ॥

ಹವ್ಯಕವ್ಯೈಕಭುಗ್ಹವ್ಯಕವ್ಯೈಕಫಲದಾಯಕಃ ।
ರೋಮಾನ್ತರ್ಲೀನಜಲಧಿಃ ಕ್ಷೋಭಿತಾಶೇಷಸಾಗರಃ ॥ ೧೮೪ ॥

ಮಹಾವರಾಹೋ ಯಜ್ಞಘ್ನಧ್ವಂಸಕೋ ಯಾಜ್ಞಿಕಾಶ್ರಯಃ ।
ಶ್ರೀನೃಸಿಂಹೋ ದಿವ್ಯಸಾಹಃ ಸರ್ವಾನಿಷ್ಟಾರ್ಥದುಃಖಹಾ ॥ ೧೮೫ ॥

ಏಕವೀರೋಽದ್ಭುತಬಲೋ ಯಂತ್ರಮಂತ್ರೈಕಭಂಜನಃ ।
ಬ್ರಹ್ಮಾದಿದುಸ್ಸಹಜ್ಯೋತಿರ್ಯುಗಾನ್ತಾಗ್ನ್ಯತಿಭೀಷಣಃ ॥ ೧೮೬ ॥

ಕೋಟಿವಜ್ರಾಧಿಕನಖೋ ಜಗದ್ದುಷ್ಪ್ರೇಕ್ಷ್ಯಮೂರ್ತಿಧೃತ್ ।
ಮಾತೃಚಕ್ರಪ್ರಮಥನೋ ಮಹಾಮಾತೃಗಣೇಶ್ವರಃ ॥ ೧೮೭ ॥

---

೧೮೩-೧೮೪, ಹಿರಣ್ಯಾಕ್ಷನನ್ನು ಕೊಂದವನು. ಭೂಮಿಗೆ ಗಂಡನು. ಶ್ರಾದ್ಧಾದಿಗಳನ್ನು ಕಲ್ಪಿಸಿದವನು. ಪಿತೃಗಳ ಭಯವನ್ನು ನಾಶಮಾಡಿದವನು. ಪಿತೃಗಳಿಗೆ ಜೀವನನು. ಹವ್ಯಕವ್ಯಗಳನ್ನು ತಿನ್ನುವವನು. ಹವ್ಯಕವ್ಯಗಳ ಫಲವನ್ನು ಕೊಡತಕ್ಕವನು. ರೋಮಗಳೊಳಗೆ ಅಡಗಿರುವ ಸಮುದ್ರವುಳ್ಳವನು. ಸಮುದ್ರವೆಲ್ಲವನ್ನೂ ಕ್ಷೋಭಿಸುವಂತೆ ಮಾಡುವವನು.

೧೮೫–೧೮೬. ಮಹಾ ವರಾಹನು. ಯಜ್ಞನಾಶಕರನ್ನು ಕೊಲ್ಲುವವನು. ಯಜ್ಞ ಮಾಡುವವರಿಗೆ ಆಶ್ರಯನು. ನರಸಿಂಹನು. ದಿವ್ಯ ಸಾಹಸನು. ಎಲ್ಲಾ ಅನಿಷ್ಟಗಳನ್ನೂ ದುಃಖಗಳನ್ನೂ ನಾಶಮಾಡುವವನು. ಬಹು ವೀರನು. ಅದ್ಭುತವಾದ ಶಕ್ತಿಯುಳ್ಳವನು. ಯಂತ್ರಗಳನ್ನೂ ಮಂತ್ರಗಳನ್ನೂ ನಾಶಮಾಡುವವನು ಬ್ರಹ್ಮಾದಿಗಳಿಗೆ ನೋಡಲು ಅಸಾಧ್ಯವಾದ ಕಾಂತಿಯುಳ್ಳವನು. ಪ್ರಳಯಕಾಲದ ಅಗ್ನಿರೂಪನು. ಬಹು ಭಯಂಕರನು.

೧೮೭–೧೮೮. ಕೋಟಿ ವಜ್ರಾಯುಧಗಳಿಗಿಂತಲೂ ಗಟ್ಟಿಯಾದ ಉಗುರುಳ್ಳವನು. ಜಗತ್ತೇ ನೋಡಲಾಗದಂತಹ ಆಕಾರವನ್ನು ಹೊಂದಿರುವವನು. ಮಾತೃಚಕ್ರವನ್ನು ಮಥಿಸುವವನು. ಮಾತೃಗಳಿಗೂ ಗಣಗಳಿಗೂ ಈಶ್ವರನು.

ಅಚಿಂತ್ಯಾಮೋಘವೀರ್ಯಾಢ್ಯಃ ಸಮಸ್ತಾಸುರಘಸ್ಮರಃ ।
ಹಿರಣ್ಯಕಶಿಪುಚ್ಛೇದೀ ಕಾಲಸ್ಸಂಕರ್ಷಣೀಪತಿಃ ॥ ೧೮೮ ॥

ಕೃತಾಂತವಾಹನಸ್ಸದ್ಯಃ ಸಮಸ್ತಭಯನಾಶನಃ ।
ಸರ್ವವಿಘ್ನಾಂತಕಃ ಸರ್ವಸಿದ್ಧಿದಃ ಸರ್ವಪೂರಕಃ ॥ ೧೮೯ ॥

ಸಮಸ್ತಪಾತಕಧ್ವಂಸೀ ಸಿದ್ಧಮಂತ್ರಾಧಿಕಾಹ್ವಯಃ ।
ಭೈರವೇಶೋ ಹರಾರ್ತಿಘ್ನಃ ಕಾಲಕೋಟಿದುರಾಸದಃ ॥ ೧೯೦ ॥

ದೈತ್ಯಗರ್ಭಸ್ರಾವಿನಾಮಾ ಸ್ಫುಟದ್ಬ್ರಹ್ಮಾಂಡಗರ್ಜಿತಃ ।
ಸ್ಮೃತಮಾತ್ರಾಖಿಲತ್ರಾತಾಽದ್ಭುತರೂಪೋ ಮಹಾಹರಿಃ ॥ ೧೯೧ ॥

ಬ್ರಹ್ಮಚರ್ಯಶಿರಃಪಿಂಡೀ ದಿಕ್ಪಾಲೋರ್ಧಾಂಗಭೂಷಣಃ ।
ದ್ವಾದಶಾರ್ಕಶಿರೋದಾಮಾ ರುದ್ರಶೀರ್ಷೈಕನೂಪುರಃ ॥ ೧೯೨ ॥

---

ಊಹಿಸುವುದಕ್ಕಾಗದಷ್ಟು ಪರಾಕ್ರಮವುಳ್ಳವನು. ಎಲ್ಲಾ ಅಸುರರನ್ನೂ ನಾಶ ಮಾಡುವವನು. ಹಿರಣ್ಯಕಶಿಪುವನ್ನು ನಾಶಮಾಡುವವನು. ಕಾಲಸ್ವರೂಪನು. ಸಂಕರ್ಷಣಿಗೆ ಪತಿಯು.

೧೮೯-೧೯೦. ಯಮನಿಗೆ ಅಪ್ಪಣೆ ಮಾಡತಕ್ಕವನು. ಒಡನೆಯೇ ಭಯಗಳನ್ನು ನಾಶಮಾಡುವವನು. ವಿಘ್ನಗಳನ್ನೆಲ್ಲಾ ನಾಶಮಾಡುವವನು. ಸಿದ್ಧಿಗಳನ್ನು ಕೊಡತಕ್ಕವನು. ಮನೋರಥವೆಲ್ಲವನ್ನೂ ಪೂರೈಸುವವನು. ಪಾಪಗಳನ್ನೆಲ್ಲಾ ಹಾಳುಮಾಡುವವನು. ಸಿದ್ಧಿಮಂತ್ರಗಳಲ್ಲಿ ಬಹು·ಹೆಚ್ಚಿನ ಸಿದ್ಧಿಯನ್ನು ಕೊಡತಕ್ಕವನು. ಭೈರವನಿಗೆ ಒಡೆಯನು. ಹರನ ತೊಂದರೆಯನ್ನು ತಪ್ಪಿಸಿದವನು. ಕೋಟಿ ಜನ ಯಮರಿಗೂ ತಡೆಯಲು ಅಸಾಧ್ಯನು.

೧೯೧-೧೯೨. ಈತನ ಹೆಸರನ್ನು ಹೇಳಿದರೇನೇ ದೈತ್ಯರ ಹೆಂಡಿರ ಗರ್ಭಸ್ರಾವವಾಗುತ್ತದೆ. ಬ್ರಹ್ಮಾಂಡವು ಒಡೆದು ಹೋಗುವಂತೆ ಗರ್ಜಿಸುವವನು ಸ್ಮರಣೆ ಮಾಡಿದರೇನೆ ಎಲ್ಲರನ್ನೂ ಕಾಪಾಡುತ್ತಾನೆ. ಅದ್ಭುತವಾದ ರೂಪವುಳ್ಳವನು. ಮಹತ್ತಾದ ಪಾಪಗಳನ್ನು ನಾಶಮಾಡುವವನು. ಬ್ರಹ್ಮಚರ್ಯದಿಂದಲೇ ತಲೆಪಟ್ಟುಗಟ್ಟಿರುವವನು. ದಿಕ್ಪಾಲರೇ ಅರ್ಧ ಅವಯವದಲ್ಲಿ ಭೂಷಣವಾಗಿರುವವನು. ಹನ್ನೆರಡು ಜನ ಆದಿತ್ಯರಿಗೆ ತಲೆಯಮೇಲೆ ಸೂತ್ರದಂತಿರುವವನು. ರುದ್ರನ ಶಿರಸ್ಸೇ ಕಾಲುಬಳೆಯಂತಿರುವವನು. (ಯಾವಾಗಲೂ ರುದ್ರನು ನಮಸ್ಕರಿಸುತ್ತಿರುವನು.)

ಯೋಗಿನೀಗ್ರಸ್ತಗಿರಿಜಾತ್ರಾತಾ ಭೈರವತರ್ಜಕಃ ।
ವೀರಚಕ್ರೇಶ್ವರೋತ್ಯುಗ್ರೋ ಯಮಾರಿಃ ಕಾಲಸಂವರಃ || ೧೯೩ ||

ಕ್ರೋಧೇಶ್ವರೋ ರುದ್ರಚಂಡೀಪರಿವಾರಾದಿದುಷ್ಟಭುಕ್ ।
ಸರ್ವಾಕ್ಷೋಭ್ಯೋ ಮೃತ್ಯುಮೃತ್ಯುಃ ಕಾಲಮೃತ್ಯುನಿವರ್ತಕಃ || ೧೯೪ ||

ಅಸಾಧ್ಯಸ್ಸರ್ವರೋಗಘ್ನಃ ಸರ್ವದುರ್ಗ್ರಹಸೌಮ್ಯಕೃತ್ ।
ಗಣೇಶಕೋಟಿದರ್ಪಘ್ನೋ ದುಸ್ಸಹಾಶೇಷಗೋತ್ರಹಾ || ೧೯೫ ||

ದೇವದಾನವದುರ್ದರ್ಶೋ ಜಗದ್ಭಯದಭೀಷಕಃ ।
ಸಮಸ್ತದುರ್ಗತಿತ್ರಾತಾ ಜಗದ್ಭಕ್ಷಕಭಕ್ಷಕಃ || ೧೯೬ ||

ಉಗ್ರೇಶೋಂಬರಮಾರ್ಜಾರಃ ಕಾಲಮೂಷಕಭಕ್ಷಕಃ ।
ಅನಂತಾಯುಧದೋರ್ದಂಡೀ ನೃಸಿಂಹೋ ವೀರಭದ್ರಜಿತ್ || ೧೯೭ ||

---

೧೯೩-೧೯೪. ಯೋಗಿನಿಯರಿಂದ ತೊಂದರೆಪಡಿಸಲ್ಪಟ್ಟ ಗಿರಿಜೆಯನ್ನು ಕಾಪಾಡಿದವನು. ಭೈರವನಿಗೂ ಹೆದರಿಕೆಯನ್ನುಂಟುಮಾಡುವವನು. ವೀರರ ಗುಂಪಿಗೆ ಒಡೆಯನು. ಉಗ್ರನು. ಯಮನಿಗೂ ಶತ್ರುವು. ಕಾಲವನ್ನು ನಿಯಮಿಸುವವನು ಕೋಪಕ್ಕೆ ಒಡೆಯನು. ರುದ್ರ ಚಂಡಿ ಇವರ ದುಷ್ಟ ಪರಿವಾರಗಳನ್ನು ನಾಶಮಾಡುವವನು. ಯಾರಿಂದಲೂ ತೊಂದರೆಪಡಿಸಲು ಸಾಧ್ಯನು. ನಾಶಮಾಡುವವನು. ಮೃತ್ಯುವಿಗೂ ಮೃತ್ಯುವು ಕಾಲಮೃತ್ಯುವನ್ನು ನಾಶಮಾಡುವವನು.

೧೯೫-೧೯೬. ಅಸಾಧ್ಯವಾದ ರೋಗಗಳನ್ನೆಲ್ಲಾ ನಾಶಮಾಡುವವನು. ಕ್ರೂರಗ್ರಹಗಳನ್ನೆಲ್ಲಾ ಸೌಮ್ಯವಾಗಿ ಮಾಡುತ್ತಾನೆ. ಕೋಟಿ ಗಣೇಶರ ದರ್ಪವನ್ನಾದರೂ ನಾಶಮಾಡತಕ್ಕವನು. ಕೆಟ್ಟವರೆಂಬುವರ ಗೋತ್ರವನ್ನೆಲ್ಲಾ ನಾಶಮಾಡುವವನು. ದೇವತೆಗಳಿಗೂ ದಾನವರಿಗೂ ಕೂಡ ದರ್ಶನಕೊಡುವುದು ಅಪರೂಪ. ಪ್ರಪಂಚಕ್ಕೆ ಭಯವನ್ನುಂಟುಮಾಡುವವರನ್ನು ಭಯಪಡಿಸುವವನು. ಸಮಸ್ತ ನರಕಗಳಿಂದ ಕಾಪಾಡತಕ್ಕವನು. ಜಗತ್ತನ್ನು ತಿನ್ನುವವರನ್ನೂ ತಿನ್ನುತ್ತಾನೆ.

೧೯೭-೧೯೮. ಉಗ್ರನಿಗೂ ಈಶ್ವರನು. ಅಂತರಿಕ್ಷವನ್ನು ಶುದ್ಧಮಾಡುವವನು. ಕಾಲವೆಂಬ ಇಲಿಯನ್ನು ನಾಶಮಾಡುವವನು. ಅನೇಕವಾದ ಆಯುಧಗಳನ್ನು ಕೈಯಲ್ಲಿ ಹಿಡಿದಿರುವವನು. ನೃಸಿಂಹನು. ವೀರಭದ್ರನನ್ನು

ಯೋಗಿನೀಚಕ್ರಗುಹ್ಯೇಶಃ ಶಕ್ರಾರಿಪಶುಮಾಂಸಭುಕ್ ।
ರುದ್ರೋ ನಾರಾಯಣೋ ಮೇಷರೂಪಶಂಕರವಾಹನಃ ॥ ೧೯೮ ॥

ಮೇಷರೂಪಶಿವತ್ರಾತಾ ದುಷ್ಟಶಕ್ತಿಸಹಸ್ರಭುಕ್ ।
ತುಳಸೀವಲ್ಲಭೋ ವೀರೋ ವಾಮಾಚಾರಾಖಿಲೇಷ್ಟದಃ ॥ ೧೯೯ ॥

ಮಹಾಶಿವಶ್ಶಿವಾರೂಢೋ ಭೈರವೈಕಕಪಾಲಧೃಕ್ ।
ಝಿಲ್ಲೀ ಚಕ್ರೇಶ್ವರಃ ಶಕ್ರದಿವ್ಯಮೋಹನರೂಪದಃ ॥ ೨೦೦ ॥

ಗೌರೀ ಸೌಭಾಗ್ಯದೋ ಮಾಯನಿಧಿರ್ಮಾಯಾಭಯಾಪಹಃ ।
ಬ್ರಹ್ಮತೇಜೋಮಯೋ ಬ್ರಹ್ಮಶ್ರೀಮಯಶ್ಚ ತ್ರಯೀಮಯಃ ॥ ೨೦೧ ॥

ಸುಬ್ರಹ್ಮಣ್ಯೋ ಬಲಿಧ್ವಂಸೀ ವಾಮನೋಽದಿತಿದುಃಖಹಾ ।
ಉಪೇಂದ್ರೋ ನೃಪತಿರ್ವಿಷ್ಣುಃ ಕಶ್ಯಪಾನ್ವಯಮಂಡನಃ ॥ ೨೦೨ ॥

---

ಜಯಿಸಿರುವವನು. ಯೋಗಿನಿಯರ ಚಕ್ರಕ್ಕೆ ಯಕ್ಷನು. ಇಂದ್ರನಿಗೆ ಶತ್ರುಗಳೆಂಬ ಪಶುವಿನ ಮಾಂಸವನ್ನು ತಿನ್ನುವವನು. ರುದ್ರರೂಪನು. ನಾರಾಯಣನು. ಆಡಿನ ರೂಪನ್ನು ಹೊಂದಿರುವವನು. ಶಂಕರನಿಗೆ ವಾಹನನಾದವನು.

೧೯೯–೨೦೦. ಆಡಿನ ರೂಪದಿಂದಿರುವ ಶಿವನನ್ನು ಕಾಪಾಡಿದವನು. ಅನೇಕ ವಿಧವಾದ ಕೆಟ್ಟ ಶತ್ರುಗಳನ್ನು ನುಂಗುವವನು. ತುಲಸಿಗೆ ವಲ್ಲಭನು. ವೀರನು. ವಾಮಾಚಾರದಿಂದ ಇಷ್ಟಾರ್ಥವನ್ನು ಕೊಡುವವನು. ಮಹಾಶಿವನು ಮಂಗಳಮೂರ್ತಿಯು. ಭೈರವನ ಒಂದು ಕಪಾಲವನ್ನು ಹಿಡಿದಿರುವವನು. ಝಿಲ್ಲಿ ಎಂಬ ಚಕ್ರಕ್ಕೆ ಒಡೆಯನು. ಇಂದ್ರನಿಗೂ ಮೋಹವನ್ನುಂಟುಮಾಡುವ ರೂಪವನ್ನು ಕೊಟ್ಟಿರುವವನು.

೨೦೧–೨೦೨. ಗೌರಿಗೆ ಸೌಭಾಗ್ಯವನ್ನು ಕೊಟ್ಟವನು. ಮಾಯೆಗೆ ನಿಧಿಯು. ಮಾಯೆಯ ಭಯವನ್ನು ನಾಶಮಾಡುವವನು. ಬ್ರಹ್ಮತೇಜಸ್ಸುಳ್ಳವನು ಬ್ರಹ್ಮನ ಸಂಪತ್ತುಳ್ಳವನು. ವೇದಸ್ವರೂಪನು. ಸುಬ್ರಹ್ಮಣ್ಯನು. ಬಲಿಯನ್ನು ನಾಶಮಾಡಿದವನು. ವಾಮನನು. ಅದಿತಿಯ ದುಃಖವನ್ನು ನಾಶಮಾಡಿದವನು. ಇಂದ್ರನ ತಮ್ಮನು. ರಾಜನು. ವಿಷ್ಣುವು. ಕಶ್ಯಪನ ವಂಶಕ್ಕೆ ಅಲಂಕಾರಪ್ರಾಯನು.

ಬಲಿಸ್ವಾರಾಜ್ಯದಃ ಸರ್ವದೇವವಿಪ್ರಾನ್ನದೋಽಚ್ಯುತಃ ।
ಉರುಕ್ರಮಸ್ತೀರ್ಥಪಾದಸ್ತ್ರಿಪದಸ್ಥಃತ್ರಿವಿಕ್ರಮಃ ॥ ೨೦೩ ॥

ವ್ಯೋಮಪಾದಃ ಸ್ವಪಾದಾಂಭಃಪವಿತ್ರಿತಜಗತ್ರಯಃ ।
ಬ್ರಹ್ಮೇಶಾದ್ಯಭಿವಂದ್ಯಾಂಘ್ರಿರ್ದ್ರುತಧರ್ಮಾಽಹಿ ಧಾವನಃ ॥ ೨೦೪ ॥

ಅಚಿಂತ್ಯಾದ್ಭುತವಿಸ್ತಾರೋ ವಿಶ್ವವೃಕ್ಷೋ ಮಹಾಬಲಃ ।
ರಾಹುಮೂರ್ಧಾ ಪರಾಂಗಚ್ಛಿದ್ಭೃಗುಪತ್ನಿ ಶಿರೋಹರಃ ॥ ೨೦೫ ॥

ಪಾಪಾತ್ರಸ್ತಸ್ಸದಾಪುಣ್ಯೋ ದೈತ್ಯಾಶಾನಿತ್ಯಖಂಡಕಃ ।
ಪೂರಿತಾಖಿಲದೇವಾಶೋ ವಿಶ್ವಾರ್ಥೈಕಾವತಾರಕೃತ್ ॥ ೨೦೬ ॥

ಸ್ವಮಾಯಾನಿತ್ಯಗುಪ್ತಾತ್ಮಾ ಭಕ್ತಚಿಂತಾಮಣಿಸ್ಸದಾ ।
ವರದಃ ಕಾರ್ತವೀರ್ಯಾದಿರಾಜರಾಜ್ಯಪ್ರದೋಽನಘಃ ॥ ೨೦೭ ॥

---

೨೦೩. ಬಲಿಗೆ ರಾಜ್ಯವನ್ನು ಕೊಟ್ಟವನು. ದೇವತೆಗಳಿಗೂ ವಿಪ್ರರಿಗೂ ಅನ್ನವನ್ನು ಕೊಟ್ಟವನು. ಅಚ್ಯುತನು. ದೊಡ್ಡ ಕಾಲುಳ್ಳವನು. ತೀರ್ಥವೇ ಪಾದದಲ್ಲಿ ಉಳ್ಳವನು. ಮೂರು ಕಾಲುಳ್ಳವನು. ಮೂರು ಬಗೆಯಲ್ಲಿ ಪರಾಕ್ರಮ ಮಾಡಿರುವವನು.

೨೦೪. ಆಕಾಶವೇ ಕಾಲಾಗಿ ಉಳ್ಳವನು. ತನ್ನ ಕಾಲಲ್ಲಿ ಹುಟ್ಟಿದ ನೀರಿನಿಂದ ಮೂರು ಲೋಕವನ್ನು ಪವಿತ್ರವನ್ನಾಗಿ ಮಾಡುವವನು. ಬ್ರಹ್ಮ ಈಶ್ವರ ಮುಂತಾದವರಿಂದ ನಮಸ್ಕರಿಸಲ್ಪಡುವ ಪಾದಗಳುಳ್ಳವನು. ಧರ್ಮದಲ್ಲಿ ಬಹು ಜಾಗ್ರತೆಯುಳ್ಳವನು. ಸರ್ಪದಮೇಲೆ ಹೋಗುವವನು.

೨೦೫–೨೦೬. ಯೋಚಿಸುವುದಕ್ಕೂ ಆಗದಷ್ಟು ವಿಸ್ತಾರವುಳ್ಳವನು. ಪ್ರಪಂಚಕ್ಕೆ ಮರದಂತೆ ಆಶ್ರಯನು. ಬಹು ಬಲಿಷ್ಠನು. ರಾಹುವಿನ ತಲೆಯನ್ನು ಕತ್ತರಿಸಿದವನು. ಭೃಗುವಿನ ಹೆಂಡತಿಯ ತಲೆಯನ್ನು ಕತ್ತರಿಸಿದವನು. ಪಾಪಕ್ಕೆ ಹೆದರುವವನು. ಯಾವಾಗಲೂ ಪುಣ್ಯವನ್ನೇ ಮಾಡುವವನು. ದೈತ್ಯರ ಆಶೆಯನ್ನು ಯಾವಾಗಲೂ ನಾಶಮಾಡುವವನು. ದೇವತೆಗಳ ಆಶೆಯನ್ನು ಪೂರ್ತಿಗೊಳಿಸುವವನು. ಪ್ರಪಂಚದ ಪ್ರಯೋಜನಕ್ಕಾಗಿಯೇ ಅವತರಿಸಿರುವವನು.

೨೦೭–೨೦೮. ತನ್ನ ಮಾಯೆಯಿಂದಲೇ ತನ್ನನ್ನು ಯಾವಾಗಲೂ ಕಾಪಾಡಿಕೊಂಡಿರುವವನು ಭಕ್ತರಿಗೆ ಚಿಂತಾಮಣಿಯಂತೆ ಕೇಳಿದ್ದನ್ನು ಕೊಡುವವನು. ಕಾರ್ತವೀರ್ಯನೇ ಮುಂತಾದವರಿಗೆ ಚಕ್ರವರ್ತಿತನವನ್ನು ಕೊಟ್ಟವನು.

ವಿಶ್ವಶ್ಲಾಘ್ಯೋಽಮಿತಾಚಾರೋ ದತ್ತಾತ್ರೇಯೋ ಮುನೀಶ್ವರಃ ।
ಪರಾಶಕ್ತಿಸದಾಶ್ಲಿಷ್ಟೋ ಯೋಗಾನಂದನದೋನ್ಮದಃ　　|| ೨೦೮ ||

ಸಮಸ್ತೇಂದ್ರಾರಿತೇಜೋಹೃತ್ಪರಮಾಮೃತಪದ್ಮಪಃ ।
ಅನಸೂಯಾಗರ್ಭರತ್ನಂ ಭೋಗಮೋಕ್ಷಸುಖಪ್ರದಃ　　|| ೨೦೯ ||

ಜಮದಗ್ನಿಕುಲಾದಿತ್ಯೋ ರೇಣುಕಾದ್ಭುತಶಕ್ತಿಧೃಕ್ ।
ಮಾತೃಹತ್ಯಾದಿನಿರ್ಲೇಪಃ ಸ್ಕಂದಜಿದ್ವಿಪ್ರರಾಜ್ಯದಃ　　|| ೨೧೦ ||

ಸರ್ವಕ್ಷತ್ರಾಂತಕೃದ್ವೀರದರ್ಪಹಾ ಕಾರ್ತವೀರ್ಯಜಿತ್ ।
ಸಪ್ತದ್ವೀಪವತೀದಾತಾ ಶಿವಾರ್ಚಕಯಶಃಪ್ರದಃ　　|| ೨೧೧ ||

ಭೀಮಃ ಪರಶುರಾಮಶ್ಚ ಶಿವಾಚಾರ್ಯೈಕವಿಶ್ವಭೂಃ ।
ಶಿವಾಖಿಲಜ್ಞಾನಕೋಶೋ ಭೀಷ್ಮಾಚಾರ್ಯೋಽಗ್ನಿದೈವತಃ　　|| ೨೧೨ ||

---

ಉತ್ತಮನು. ಪ್ರಪಂಚಕ್ಕೇನೇ ಶ್ಲಾಘ್ಯನು. ಹೆಚ್ಚು ಆಚಾರವುಳ್ಳವನು. ದತ್ತಾತ್ರೇಯನು. ಮುನಿಗಳಿಗೆ ಒಡೆಯನು. ಪರಾಶಕ್ತಿಯಾವ ರಮೆಯುಂವ ಯಾವಾಗಲೂ ಕೂಡಿರುವವನು. ಯೋಗದ ಆನಂದದಿಂದ ಯಾವಾಗಲೂ ಮದಿಸಿರುವವನು.

೨೦೯-೨೧೦. ಇಂದ್ರ ಶತ್ರುಗಳ ಬಲವನ್ನೆಲ್ಲಾ ಹಾಳುಮಾಡಿರುವವನು. ಉತ್ಕೃಷ್ಟವಾದ ಪದ್ಮದಲ್ಲಿರುವ ಅಮೃತವನ್ನು ಕುಡಿಯುವವನು ಅನಸೂಯೆಯ ಗರ್ಭಕ್ಕೆ ರತ್ನಪ್ರಾಯನು. ಭೋಗ ಮೋಕ್ಷ ಸುಖಗಳನ್ನು ಕೊಡತಕ್ಕವನು. ಜಮದಗ್ನಿಯ ವಂಶಕ್ಕೆ ಸೂರ್ಯನು. ರೇಣುಕೆಗೆ ಅದ್ಭುತ ಶಕ್ತಿಯನ್ನು ಕೊಟ್ಟವನು. ತಾಯಿಯನ್ನು ಕೊಂದರೂ ಆ ಪಾಪವನ್ನು ಹೊಂದದವನು ಕುಮಾರಸ್ವಾಮಿಯನ್ನು ಗೆದ್ದವನು. ಬ್ರಾಹ್ಮಣರಿಗೆ ರಾಜ್ಯವನ್ನು ಕೊಟ್ಟವನು.

೨೧೧-೨೧೨. ಕ್ಷತ್ರಿಯರನ್ನೆಲ್ಲಾ ಕೊಂದ ವೀರನು. ವೀರರ ಹೆಮ್ಮೆಯನ್ನು ನಾಶಮಾಡಿದವನು. ಕಾರ್ತವೀರ್ಯನನ್ನು ಜಯಿಸಿದವನು ಏಳು ದ್ವೀಪವುಳ್ಳ ಭೂಮಿಯನ್ನು ದಾನಮಾಡಿದವನು. ಶಿವನ ಅರ್ಚನೆಯ ಫಲವನ್ನು ಕೊಡುವವನು. ಭಯಂಕರನು. ಪರಶುರಾಮನು. ಶಿವನಿಗೂ ಆಚಾರ್ಯನು. ಪ್ರಪಂಚದಲ್ಲಿ ಗಣ್ಯನು. ಎಲ್ಲಾ ಜ್ಞಾನಗಳಿಗೂ ಇವನೇ ಸ್ಥಾನನು. ಭೀಷ್ಮನಿಗೆ ಗುರುವು. ಅಗ್ನಿಯೇ ದೇವರಾಗಿರುವವನು.

ದ್ರೋಣಾಚಾರ್ಯಗುರುರ್ವಿಶ್ವಜೈತ್ರಧನ್ವಾ ಕೃತಾಂತಜಿತ್ ।
ಅದ್ವಿತೀಯತಪೋಮೂರ್ತಿಃ ಬ್ರಹ್ಮಚರ್ಯೈಕದಕ್ಷಿಣಃ ॥ ೨೧೩ ॥

ಮನುಶ್ರೇಷ್ಠಸ್ಸತಾಂಸೇತುರ್ಮಹೀಯಾನ್ವೃಷಭೋ ವಿರಾಟ್ ।
ಆತಿರಾಜಃ ಕ್ಷಿತಿಪಿತಾ ಸರ್ವರತ್ನೈಕದೋಹಕೃತ್ ॥ ೨೧೪ ॥

ಪೃಥುರ್ಜನ್ಮಾದ್ಯೇಕದಕ್ಷೋ ಗೀಶ್ರೀಕೀರ್ತಿಸ್ವಯಂವೃತಃ ।
ಜಗದ್ವೃತ್ತಿಪದಶ್ಚಕ್ರವರ್ತಿಶ್ರೇಷ್ಠೋ ಽದ್ವಯಾಸ್ತ್ರಧೃಕ್ ॥ ೨೧೫ ॥

ಸನಕಾದಿಮುನಿಪ್ರಾಪ್ಯಭಗವದ್ಭಕ್ತಿವರ್ಧನಃ ।
ವರ್ಣಾಶ್ರಮಾದಿಧರ್ಮಾಣಾಂ ಕರ್ತಾ ವಕ್ತಾ ಪ್ರವರ್ತಕಃ ॥ ೨೧೬ ॥

ಸೂರ್ಯವಂಶಧ್ವಜೋ ರಾಮೋ ರಾಘವಸ್ಸದ್ಗುಣಾರ್ಣವಃ ।
ಕಾಕುತ್ಸ್ಥೋ ವೀರರಾಜಾರ್ಯೋ ರಾಜಧರ್ಮಧುರಂಧರಃ ॥ ೨೧೭ ॥

---

೨೧೩–೨೧೪. ದ್ರೋಣಾಚಾರ್ಯರಿಗೆ ಗುರುವು. ಪ್ರಪಂಚವನ್ನೇ ಜಯಿಸುವ ಧನುಸ್ಸುಳ್ಳವನು. ಯಮನನ್ನು ಜಯಿಸಿದವನು. ಉತ್ತಮವಾದ ತಪಸ್ಸಿನ ಮೂರ್ತಿಯು. ಬ್ರಹ್ಮಚರ್ಯವನ್ನು ಕಾಪಾಡಿಕೊಳ್ಳುವುದರಲ್ಲಿ ಸಮರ್ಥನಾದವನು. ಮನುಷ್ಯರಲ್ಲಿ ಶ್ರೇಷ್ಠನಾದವನು. ಸತ್ಪುರುಷರಿಗೆ ನೆಲೆ. ಉತ್ತಮರಲ್ಲಿ ಉತ್ತಮನು. ವಿರಾಟ್‌ಸ್ವರೂಪ ಉಳ್ಳವನು. ಮೊದಲನೆಯ ರಾಜನು. ಭೂಮಿಗೆ ತಂದೆ. ಸರ್ವ ರತ್ನಗಳಿಗೂ ರತ್ನನು.

೨೧೫-೨೧೬. ವಿಶಾಲಹೃದಯವುಳ್ಳವನು. ಜನ್ಮವನ್ನು ಎತ್ತಿದವರಲ್ಲಿ ಮೊದಲನೆಯ ಶೂರನು. ವಿದ್ಯೆ ಕೀರ್ತಿ ಸಂಪತ್ತುಗಳಿಂದ ಕೂಡಿದವನು. ಪ್ರಪಂಚಕ್ಕೆ ಜೀವನವನ್ನು ಕೊಡುವವನು. ಚಕ್ರವರ್ತಿಗಳಲ್ಲಿ ಮೊದಲನೆಯವನು. ಧನುರಾಳಿಗಳಲ್ಲಿ ತನಗೆ ಸಮರಿಲ್ಲದವನು. ಸನಕ ಸನಂದನಾದಿ ಮುನಿಗಳಿಗೆ ಇರುವಷ್ಟು ಭಗವದ್ಭಕ್ತಿಯನ್ನು ಕೊಡತಕ್ಕವನು. ವರ್ಣ ಆಶ್ರಮ ಧರ್ಮಗಳನ್ನು. ಮಾಡತಕ್ಕವನು. ವಾಚಾಳಿಯು. ಪ್ರಪಂಚವನ್ನು ನಡೆಸತಕ್ಕವನು.

೨೧೭-೨೧೮. ಸೂರ್ಯವಂಶಕ್ಕೆ ಧ್ವಜದಂತಿರುವವನು. ರಾಮಾವತಾರನು. ರಘುವಂಶದಲ್ಲಿ ಹುಟ್ಟಿದವನು. ಒಳ್ಳೆಯ ಗುಣಗಳಿಗೆ ಸಮುದ್ರನು. ಕಕುತ್ಸ್ಥನ ವಂಶದಲ್ಲಿ ಹುಟ್ಟಿದವನು. ವೀರನಾದ ರಾಜನು ಪೂಜ್ಯನು ರಾಜಧರ್ಮದಲ್ಲಿ ಮುಂದಾಳು. ಶಾಶ್ವತವಾದ ಕುಂದಕ ಬಾರದ ಗುಣಗಳನ್ನೇ ಹೊಂದಿರುವವನು.

ನಿತ್ಯಸ್ವಸ್ಥಾಶ್ರಯಃ ಸರ್ವಭದ್ರಗ್ರಾಹೀ ಶುಭೈಕದೃಕ್ ।
ನರರತ್ನಂ ರತ್ನಗರ್ಭೋ ಧರ್ಮಾಧ್ಯಕ್ಷೋ ಮಹಾನಿಧಿಃ || ೨೧೮ ||

ಸರ್ವಶ್ರೇಷ್ಠಾಶ್ರಯಃ ಸರ್ವಶಸ್ತ್ರಾಸ್ತ್ರಗ್ರಾಮವೀರ್ಯವಾನ್ ।
ಜಗದೀಶೋ ದಾಶರಥಿಃ ಸರ್ವರತ್ನಾಶ್ರಯೋ ನೃಪಃ || ೨೧೯ ||

ಸಮಸ್ತಧರ್ಮಸೂಃ ಸರ್ವಧರ್ಮದ್ರಷ್ಟಾಖಿಲಾರ್ತಿಹಾ ।
ಅತೀಂದ್ರೋ ಜ್ಞಾನವಿಜ್ಞಾನಪಾರದ್ರಷ್ಟಾ ಕ್ಷಮಾಂಬುಧಿಃ || ೨೨೦ ||

ಸರ್ವಪ್ರಕೃಷ್ಟಃ ಶಿಷ್ಟೇಷ್ಟೋ ಹರ್ಷಶೋಕಾದ್ಯನಾಕುಲಃ ।
ಪಿತ್ರಾಜ್ಞಾತ್ಯಕ್ತಸಾಮ್ರಾಜ್ಯಃ ಸಪತ್ನೋದಯನಿರ್ಭಯಃ || ೨೨೧ ||

ಗುಹಾದೇಶಾರ್ಪಿತೈಶ್ವರ್ಯಃ ಶಿವಸ್ಪರ್ಧಾಜಟಾಧರಃ
ಚಿತ್ರಕೂಟಾಪ್ತರತ್ನಾದ್ರಿರ್ಜಗದೀಶೋ ವನೇಚರಃ || ೨೨೨ ||

---

ಮಂಗಳಕರವಾದುವನ್ನು ಗ್ರಹಿಸುವವನು. ಶುಭದಲ್ಲಿಯೇ ದೃಷ್ಟಿಯುಳ್ಳವನು ಮನುಷ್ಯರಲ್ಲಿ ರತ್ನಪ್ರಾಯನು. ಉತ್ತಮವಾದ ವಿಷಯಗಳನ್ನೇ ಅಂತರಂಗದಲ್ಲಿ ಉಳ್ಳವನು. ಧರ್ಮಕ್ಕೆಲ್ಲಾ ಒಡೆಯನು. ದೊಡ್ಡ ನಿಧಿಯಾದವನು.

೨೧೯. ಶ್ರೇಷ್ಠರೆಂಬುವರಿಗೆಲ್ಲಾ ಆಶ್ರಯವನ್ನು ಕೊಡತಕ್ಕವನು. ಎಲ್ಲಾ ಬಗೆಯಾದ ಶಸ್ತ್ರಗಳನ್ನೂ ಅಸ್ತ್ರಗಳನ್ನೂ ಬಲ್ಲವನು. ಪರಾಕ್ರಮಿಯು. ಜಗತ್ತಿಗೆ ಒಡೆಯನು. ದಶರಥನ ಮಗನು. ಎಲ್ಲಾ ರತ್ನಗಳಿಗೂ ಆಶ್ರಯನು. ರಾಜನು.

೨೨೦–೨೨೧. ಎಲ್ಲಾ ಧರ್ಮಗಳಿಗೂ ಉತ್ಪತ್ತಿಸ್ಥಾನನು. ಎಲ್ಲಾ ಧರ್ಮಗಳನ್ನೂ ನೋಡುವವನು. ದುಃಖವನ್ನೆಲ್ಲಾ ನಾಶಮಾಡುವವನು. ಇಂದ್ರನಿಗೆ ಮಿಗಿಲಾದವನು. ಪರಮಾರ್ಥವನ್ನು ಬಲ್ಲವನು. ಶಿಲ್ಪಜ್ಞಾನಗಳ ಕೊನೆಯನ್ನು ಬಲ್ಲವನು. ಕ್ಷಮಾ ಸಮುದ್ರನು. ಎಲ್ಲರಿಗಿಂತಲೂ ಶ್ರೇಷ್ಠನು. ಶಿಷ್ಟರಾದವರಲ್ಲಿ ಪ್ರೀತಿಯುಳ್ಳವನು. ಹರ್ಷ ಶೋಕಗಳಿಗೆ ಸಿಲುಕದವನು ತಂದೆಯ ಮಾತಿನಂತೆ ರಾಜ್ಯವೆಲ್ಲವನ್ನೂ ಬಿಟ್ಟವನು. ಶತ್ರುಗಳ ವಿಷಯದಲ್ಲಿ ಹೆದರಿಕೆಯಿಲ್ಲದವನು.

೨೨೨-೨೨೩. ಗುಹನಿಗೆ ಸಕಲೈಶ್ವರ್ಯವನ್ನೂ ಕೊಟ್ಟವನು. ಶಿವನ ಮೇಲಿನ ಸ್ಪರ್ಧೆಯಿಂದಲೋ ಎಂಬಂತೆ ಜಟೆಯನ್ನು ಬೆಳೆಯಿಸಿದವನು. ಚಿತ್ರಕೂಟದಲ್ಲಿ ರತ್ನಗಳನ್ನು ಹೊಂದಿರುವವನು. ಜಗತ್ತಿಗೆ ಈಶನು ವನದಲ್ಲಿಯೇ

ಯುಥೇಷ್ವಾಮೋಘಸರ್ವಾಸ್ತ್ರೋ ದೇವೇಂದ್ರತನಯಾಕ್ಷಿಹಾ ।
ಬ್ರಹ್ಮೇಂದ್ರಾದಿನತೈಷೀಕೋ ಮಾರೀಚಘ್ನೋವಿರಾಧಹಾ ॥ ೨೨೩ ॥

ಬ್ರಹ್ಮಶಾಪಹತಾಶೇಷದಂಡಕಾರಣ್ಯಪಾವನಃ ।
ಚತುರ್ದಶಸಹಸ್ರೋಗ್ರರಕ್ಷೋಘ್ನೈಕಶರೈಕಧೃಕ್ ॥ ೨೨೪ ॥

ಖರಾರಿಸ್ತ್ರಿಸಿರೋಹನ್ತಾ ದೂಷಣಘ್ನೋ ಜನಾರ್ದನಃ ।
ಜಟಾಯುಷೋಗ್ನಿಗತಿದೋಽಗಸ್ತ್ಯಸರ್ವಸ್ವಪಾತ್ರರಾಟ್ ॥ ೨೨೫ ॥

ಲೀಲಾಧನುಷ್ಕೋಟ್ಯಪಾಸ್ತದುಂದುಭ್ಯಸ್ಥಿಮಹಾಚಲಃ ।
ಸಪ್ತತಾಳವ್ಯಧಾಕೃಷ್ಟಧ್ವಸ್ತಪಾತಾಳದಾನವಃ ॥ ೨೨೬ ॥

ಸುಗ್ರೀವರಾಜ್ಯದೋಽಹೀನಮನಸ್ಯೈವಾಭಯಪ್ರದಃ ।
ಹನುಮದ್ರುದ್ರಮುಖ್ಯೇಶಃ ಸಮಸ್ತಕಪಿದೇಹಭೃತ್ ॥ ೨೨೭ ॥

---

ಸಂಚರಿಸುವವನು. ಉತ್ತಮವಾದ ಅನೇಕ ಅಸ್ತ್ರಗಳನ್ನೂ ಹೊಂದಿರುವವನು ದೇವೇಂದ್ರನ ಮಗನಾದ ಕಾಕಾಸುರನ ಕಣ್ಣನ್ನು ನಾಶಮಾಡಿದವನು ಬ್ರಹ್ಮ ಇಂದ್ರಾದಿಗಳೂ ನಮಸ್ಕರಿಸುವಂತೆ ಮಾಡಿದ ಇಷೀಕವೆಂಬ ಅಸ್ತ್ರವುಳ್ಳವನು ಮಾರೀಚನನ್ನು ಕೊಂದವನು. ವಿರಾಧ ನಾಶಕನು.

೨೨೪—೨೨೫. ಬ್ರಾಹ್ಮಣನಾದ ಶುಕ್ರನ ಶಾಪದಿಂದ ನಾಶವಾಗಿದ್ದ ದಂಡಕಾರಣ್ಯವನ್ನು ಪುನರುಜ್ಜೀವನಗೊಳಿಸಿದವನು. ಹದಿನಾಲ್ಕು ಸಾವಿರ ಕ್ರೂರರಾದ ರಾಕ್ಷಸರನ್ನೂ ಬಾಣದಿಂದ ಕೊಂದವನು. ಖರನಿಗೆ ನಾಶಕನು. ತ್ರಿಶಿರನನ್ನು ಕೊಂದವನು. ದೂಷಣನಿಗೆ ಮೃತ್ಯುವು. ಜನಗಳಿಗೆ ಪೀಡಕನು. ಜಟಾಯುವಿಗೆ ಅಂತ್ಯ ಕ್ರಿಯೆಯನ್ನು ಮಾಡಿದವನು. ಅಗಸ್ತ್ಯನ ಸರ್ವಸ್ವವನ್ನು ಹೊಂದುವಷ್ಟು ಪ್ರೀತಿಪಾತ್ರನಾದ ರಾಜನು.

೨೨೬—೨೨೭. ಲೀಲೆಯಿಂದಲೇ ಬಾಣದ ತುದಿಯಿಂದ ದುಂದುಭಿ ಎಂಬ ರಾಕ್ಷಸನ ಪರ್ವತದಂತಿದ್ದ ಮೂಳೆಗಳನ್ನು ಎಸೆದವನು. ಸಪ್ತತಾಳ ವೃಕ್ಷಗಳನ್ನು ಭೇದಿಸಿ ಅದರಿಂದ ಪಾತಾಳದಲ್ಲಿದ್ದ ದಾನವನನ್ನು ಕೊಂದವನು. ಸುಗ್ರೀವನಿಗೆ ರಾಜ್ಯವನ್ನು ಕೊಟ್ಟವನು. ಉದಾರಮನಸ್ಸಿನಿಂದ ಅಭಯದಾನ ಮಾಡುವವನು. ಹನುಮಂತ ರುದ್ರರುಗಳಿಗೆ ಒಡೆಯನು. ಸಮಸ್ತ ಕಪಿಗಳಿಂದಲೂ ಕೂಡಿದವನು. ಮತ್ತು ಅವನ್ನು ಪೋಷಿಸುವವನು.

ಸನಾಗದೈತ್ಯಬಾಣೈಕವ್ಯಾಕುಲೀಕೃತಸಾಗರಃ ।
ಸಮ್ಲೇಚ್ಛಕೋಟಿಬಾಣೈಕಶುಷ್ಕನಿರ್ದಗ್ಧಸಾಗರಃ ॥ ೨೨೮ ॥

ಸಮುದ್ರಾದ್ಭುತಪೂರ್ವೈಕಬದ್ಧಸೇತುರ್ಯಶೋನಿಧಿಃ ।
ಅಸಾಧ್ಯಸಾಧಕೋ ಲಂಕಾಸಮೂಲೋತ್ಸಾದದಕ್ಷಿಣಃ ॥ ೨೨೯ ॥

ವರದೃಪ್ತಜಗಚ್ಛಲ್ಯಪೌಲಸ್ತ್ಯಕುಲಕೃಂತನಃ ।
ರಾವಣಿಘ್ನಃ ಪ್ರಹಸ್ತಚ್ಛಿತ್ ಕುಂಭಕರ್ಣಭಿದುಗ್ರಹಾ ॥ ೨೩೦ ॥

ರಾವಣೈಕಶಿರಚ್ಛೇತ್ತಾ ನಿಶ್ಶಂಕೇಂದ್ರೈಕರಾಜ್ಯದಃ ।
ಸ್ವರ್ಗಾಸ್ವರ್ಗತ್ವವಿಚ್ಛೇದೀ ದೇವೇಂದ್ರಾರಾತಿನಿರ್ಹರಃ ॥ ೨೩೧ ॥

ರಕ್ಷೋದೇವತ್ವಹೃದ್ಧರ್ಮಾಧರ್ಮತ್ವಘ್ನಃ ಪುರುಷ್ಟುತಃ ।
ನತಿಮಾತ್ರದಶಾಸ್ಯಾರಿದತ್ತರಾಜ್ಯವಿಭೀಷಣಃ ॥ ೨೩೨ ॥

---

೨೨೮–೨೨೯. ಸರ್ಪಗಳಿಂದಲೂ ದೈತ್ಯರಿಂದಲೂ ಕೂಡಿರುವ ಸಮುದ್ರನನ್ನು ಒಂದೇ ಬಾಣದಿಂದ ಶರಣಾಗತನಾಗುವಂತೆ ಮಾಡಿದವನು. ಕೋಟ್ಯಂತರ ಮ್ಲೇಚ್ಛರುಳ್ಳ ಸಮುದ್ರವನ್ನು ಒಂದೇ ಬಾಣದಿಂದ ಶೋಷಿಸುವಂತೆಮಾಡಿದವನು. ಸಮುದ್ರದಲ್ಲಿ ಸೇತುವೆ ಕಟ್ಟಿದವನು. ಯಶಸ್ವಿಯು. ಅಸಾಧ್ಯವಾದುದನ್ನು ಸಾಧಿಸತಕ್ಕವನು. ಲಂಕೆಯನ್ನು ಬುಡಮಟ್ಟ ನಾಶಮಾಡುವುದರಲ್ಲಿ ಸಮರ್ಥನು.

೨೩೦–೨೩೧. ವರದಿಂದ ಕೊಬ್ಬಿ ಜಗತ್ತಿಗೆ ಕಂಟಕಪ್ರಾಯನಾಗಿದ್ದು ರಾವಣನ ವಂಶವನ್ನೇ ನಾಶಮಾಡಿದವನು. ರಾವಣನ ಮಗನನ್ನು ಕೊಂದವನು. ಪ್ರಹಸ್ತನನ್ನು ಭೇದಿಸಿದವನು. ಕುಂಭಕರ್ಣನನ್ನು ನಾಶಮಾಡಿದವನು. ಕ್ರೂರನಾಶಕನು. ರಾವಣನ ತಲೆಯನ್ನೆಲ್ಲಾ ಕತ್ತರಿಸಿದವನು. ಇಂದ್ರನಿಗೆ ಶತ್ರುರಹಿತವಾದ ರಾಜ್ಯವನ್ನು ಕೊಟ್ಟವನು. ತನ್ನ ನಾಮವನ್ನು ಸ್ಮರಿಸಿದವರಿಗೆ ಸ್ವರ್ಗ ನರಕಗಳನ್ನೇ ನಾಶಮಾಡಿದವನು. (ಮೋಕ್ಷದಾಯಕನು) ದೇವೇಂದ್ರನ ಶತ್ರುಗಳನ್ನೆಲ್ಲಾ ಕೊಂದವನು.

೨೩೨-೨೩೩. ರಾಕ್ಷಸರೂ ದೇವತೆಗಳೂ ನಾಶಮಾಡಿದ ಧರ್ಮವನ್ನು ಸ್ಥಾಪಿಸಿದವನು. ಅಧರ್ಮವನ್ನು ನಾಶಮಾಡಿದವನು. ಎಲ್ಲರೆದುರಿಗೂ ಹೊಗಳಿಸಿಕೊಳ್ಳುವ ಕೀರ್ತಿಯುಳ್ಳವನು. ರಾವಣನ ಶತ್ರುವಾದ ವಿಭೀಷಣನು ನಮಸ್ಕರಿಸಿದ ಮಾತ್ರದಿಂದಲೇ ರಾಜ್ಯವನ್ನೇ ಕೊಟ್ಟವನು. ಸತ್ತುಹೋಗಿದ್ದ ತನ್ನ

ಸುಧಾವೃಷ್ಟಿಮೃತಾಶೇಷಸ್ವಸೈನ್ಯೋಜ್ಜೀವನೈಕಕೃತ್ ।
ದೇವಬ್ರಾಹ್ಮಣನಾಮೈಕಧಾತಾ ಸರ್ವಾಮರಾರ್ಚಿತಃ ॥ ೨೩೩ ॥

ಬ್ರಹ್ಮಸೂರ್ಯೇಂದ್ರರುದ್ರಾದಿವಂಧ್ಯಾಯಿತಶತಾಪ್ರಿಯಃ ।
ಅಯೋಧ್ಯಾಖಿಲರಾಜಾಗ್ರ್ಯಃ ಸರ್ವಭೂತಮನೋಹರಃ ॥ ೨೩೪ ॥

ಸ್ವಾಮ್ಯತುಲ್ಯಕೃಪಾದಂಡೋ ಹೀನೋತ್ಕೃಷ್ಟೈಕಸತ್ಪ್ರಿಯಃ ।
ಶ್ವಪಕ್ಷ್ಯಾದಿನ್ಯಾಯದರ್ಶೀ ಹೀನಾರ್ಥಾಧಿಕಸಾಧಕಃ ॥ ೨೩೫ ॥

ವಧವ್ಯಾಜಾನುಚಿತಕೃತ್ತಾರಕೋಽಖಿಲತುಲ್ಯಕೃತ್ ।
ಪಾವಿತ್ರ್ಯಾಧಿಕಮುಕ್ತಾತ್ಮಾ ಪ್ರಿಯಾತ್ಯಕ್ತಃ ಸ್ಮರಾರಿಜಿತ್ ॥ ೨೩೬ ॥

ಸಾಕ್ಷಾತ್ಕುಶಲವಚ್ಛದ್ಮದ್ರಾವಿತೋ ಹ್ಯಪರಾಜಿತಃ ।
ಕೋಶಲೇಂದ್ರೋ ವೀರಬಾಹುಃ ಸತ್ಯಾರ್ಥತ್ಯಕ್ತಸೋದರಃ ॥ ೨೩೭ ॥

---

ಸೈನ್ಯದವರನ್ನು ಅಮೃತಸೇಕದಿಂದ ಬದುಕಿಸಿದವನು. ದೇವಬ್ರಾಹ್ಮಣರು ಹೆಸರು ಹೇಳಿಕೊಂಡು ಉಳಿಯುವುಂತೆ ಮಾಡಿದವನು. ದೇವತೆಗಳಿಂದ ಪೂಜಿನಾದವನು.

೨೩೪-೨೩೫. ಬ್ರಹ್ಮ ಸೂರ್ಯ ಇಂದ್ರ ರುದ್ರ ಇವರುಗಳ ಅನೇಕ ಕಷ್ಟಗಳನ್ನು ನಾಶಮಾಡಿದವನು. ಅಯೋಧ್ಯೆಯಲ್ಲಿದ್ದ ಮುಖ್ಯ ಚರ್ಕವರ್ತಿಯು. ಎಲ್ಲಾ ಪ್ರಾಣಿಗಳಿಗೂ ಮನೋಹರನು. ತನ್ನ ಯಜಮಾನತೆಗೂ ತಪ್ಪಿಗೂ ಅನುಗ್ರಹಕ್ಕೂ ಸರಿಯಾದ ಶಿಕ್ಷೆ ಮತ್ತು ಕೃಪೆಗಳನ್ನು ತೋರಿಸತಕ್ಕವನು. ಬಡವರಿಗೂ ಬಲ್ಲಿದರಿಗೂ ಪ್ರಿತಿಪಾತ್ರನಾದವನು. ನಾಯಿ ಪಕ್ಷಿಗಳಿಗೂ ಕೂಡ ಪಕ್ಷಪಾತವಿಲ್ಲದೆ ನ್ಯಾಯವನ್ನು ತೋರಿಸತಕ್ಕವನು ಸ್ವಲ್ಪದರಿಂದಲೇ ಹೆಚ್ಚು ಪ್ರಯೋಜನವನ್ನುಂಟುಮಾಡತಕ್ಕವನು

೨೩೬. ಪಾಪಿಗಳಾದವರಿಗೆ ಕೊಲ್ಲುವ ನೆವದಿಂದ ಪಾಪವನ್ನು ನಾಶಮಾಡ ಸಂಸಾರದಿಂದ ಮುಕ್ತಿಯನ್ನು ಕೊಡತಕ್ಕವನು. ಎಲ್ಲರಲ್ಲಿಯೂ ಸಮನು. ಹೆಚ್ಚು ಪವಿತ್ರತೆಯಿಂದ ಮುಕ್ತನಾದವನು. ಪ್ರಿಯಳನ್ನು ಬಿಟ್ಟವನು. ಶಿವನನ್ನು ಗೆದ್ದವನು.

೨೩೭-೨೩೮. ಕುಶಲವರು ಎಂಬ ತನ್ನ ರೂಪವನ್ನೇ ನೆವಮಾಡಿಕೊಂಡು ಸೋತವನು. ಸೋಲದವನು. ಕೋಸಲಕ್ಕೆ ಒಡೆಯನು. ವೀರ್ಯವುಳ್ಳ ತೋಳುಳ್ಳವನು. ಸತ್ಯಕ್ಕೋಸ್ಕರ ಲಕ್ಷ್ಮಣನನ್ನು ಬಿಟ್ಟವನು. ಬಾಣವನ್ನು ಹೂಡುವುದರಿಂದ

ಶರಸಂಧಾನನಿರ್ಧೂತಧರಣೀಮಂಡಲೋ ಜಯಃ ।
ಬ್ರಹ್ಮಾದಿಕಾಮಸಾನ್ನಿಧ್ಯಸನಾಥೀಕೃತದೈವತಃ ॥ ೨೩೮ ॥

ಬ್ರಹ್ಮಲೋಕಾಪ್ತಚಾಂಡಾಲಾದ್ಯಶೇಷಪ್ರಾಣಿಸಾರ್ಥಕಃ ।
ಸ್ವನೀತಗರ್ಧಭಶ್ವಾದಿಶ್ಚಿರಾಯೋಧ್ಯಾವನೈಕಕೃತ್ ॥ ೨೩೯ ॥

ರಾಮೋ ದ್ವಿತೀಯಸೌಮಿತ್ರಿರ್ಲಕ್ಷ್ಮಣಃ ಪ್ರಹಸೇಂದ್ರಜಿತ್ ।
ವಿಷ್ಣುಭಕ್ತಃ ಸರಾಮಾಂಘ್ರಿಪಾದುಕಾರಾಜ್ಯನಿರ್ವೃತಿಃ ॥ ೨೪೦ ॥

ಭರತೋಽಸಹ್ಯಗಂಧರ್ವಕೋಟಿಘ್ನೋ ಲವಣಾಂತಕಃ ।
ಶತ್ರುಘ್ನೋ ವೈದ್ಯರಾಡಾಯುರ್ವೇದಗರ್ಭೌಷಧೀಪತಿಃ ॥ ೨೪೧ ॥

ನಿತ್ಯಾಮೃತಕರೋ ಧನ್ವಂತರಿರ್ಯಜ್ಞೋ ಜಗದ್ಧರಃ ।
ಸೂರ್ಯಾರಿಘ್ನಃ ಸುರಾಜೀವೋ ದಕ್ಷಿಣೇಶೋ ದ್ವಿಜಪ್ರಿಯಃ ॥ ೨೪೨ ॥

---

ತಿರಸ್ಕರಿಸುವಂತಹ ಪ್ರಪಂಚವುಳ್ಳವನು. ಜಯಶಾಲಿಯು. ಬ್ರಹ್ಮನೇ ಮುಂತಾದ ದೇವತೆಗಳಿಗೆ ಇಷ್ಟಾರ್ಥವನ್ನು ಸಲ್ಲಿಸಿ ಕಾಪಾಡಿದುದರಿಂದ ರಕ್ಷಕನಾದವನು.

೨೩೯-೨೪೦. ಚಂಡಾಲನೇ ಮುಂತಾದ ಪ್ರಾಣಿಗಳನ್ನು ಕೂಡ ಬ್ರಹ್ಮಲೋಕವನ್ನು ಹೊಂದಿಸಿದವನು. ಕತ್ತೆ ನಾಯಿಗಳನ್ನು ಸ್ವರ್ಗಕ್ಕೆ ಹೊಂದಿಸಿದವನು. ಬಹುಕಾಲ ಕಾಡಿನಲ್ಲಿಯೇ ಇದ್ದು ಅಯೋಧ್ಯೆಯನ್ನು ವ್ಯರ್ಥವನ್ನಾಗಿ ಮಾಡಿದವನು. ರಾಮನು. (ಮನೋಹರನು) ಲಕ್ಷ್ಮಣನನ್ನೇ ಜೊತೆಯಲ್ಲಿ ಉಳ್ಳವನು. ಲಕ್ಷ್ಮಣರೂಪನಾದವನು. ಇಂದ್ರಜಿತನನ್ನು ಕೊಂದವನು. ವಿಷ್ಣುವಿನಲ್ಲಿ ಭಕ್ತಿ ಉಳ್ಳವನು. ರಾಮನ ಕಾಲಿನ ಕೆರದಿಂದಲೇ ರಾಜ್ಯಭಾರವನ್ನು ಮಾಡಿದವನು.

೨೪೧. ಭರತರೂಪನು. ಶೂರರಾದ ಕೋಟಿ ಜನ ಗಂಧರ್ವರನ್ನು ಹೊಡೆದವನು. ಲವಣಾಸುರನನ್ನು ಕೊಂದವನು. ಶತ್ರುಘ್ನರೂಪನು. ವೈದ್ಯರಾಜನು. ಆಯುರ್ವೇದದಲ್ಲಿರುವ ಔಷಧಿಗಳಿಗೆ ಒಡೆಯನು.

೨೪೨-೨೪೩. ಯಾವಾಗಲೂ ಅಮೃತಹಸ್ತವುಳ್ಳವನು. ಧನ್ವಂತರಿಯರೂಪನು. ಯಜ್ಞರೂಪನು. ಜಗತ್ತನ್ನೇ ಧರಿಸಿರುವವನು. ಸೂರ್ಯನಿಗೆ ಶತ್ರುವಾದ ರಾಹುವನ್ನು ಕೊಂದವನು. ದೇವತೆಗಳಿಗೆ ಜೀವನಪ್ರಾಯನು. ದಕ್ಷಿಣಕ್ಕೆ ಒಡೆಯನು. ಯಮರೂಪನು. ಬ್ರಾಹ್ಮಣರಿಗೆ ಪ್ರಿಯನು. ತಲೆಯನ್ನು

ಛಿನ್ನಮೂರ್ಧಾಪದೇಶಾರ್ಕಃಶೇಷಾಂಗಸ್ಥಾಪಿತಾಮರಃ ।
ವಿಶ್ವಾರ್ಥಾಶೇಷಕೃದ್ರಾಹುಶಿರಶ್ಛೇತ್ತಾಕ್ಷತಾಕೃತಿಃ ॥ ೨೪೩ ॥

ವಾಜಪೇಯಾದಿನಾಮಾಗ್ನಿರ್ವೇದಧರ್ಮಪರಾಯಣಃ ।
ಶ್ವೇತದ್ವೀಪಪತಿಃ ಸಾಂಖ್ಯಪ್ರಣೇತಾ ಸರ್ವಸಿದ್ಧಿರಾಟ್ ॥ ೨೪೪ ॥

ವಿಶ್ವಪ್ರಕಾಶಿತಜ್ಞಾನಯೋಗಮೋಹತಮಿಸ್ರಹಾ ।
ದೇವಹೂತ್ಯಾತ್ಮಜಃ ಸಿದ್ಧಃ ಕಪಿಲಃ ಕರ್ದಮಾತ್ಮಜಃ ॥ ೨೪೫ ॥

ಯೋಗಸ್ವಾಮೀ ಧ್ಯಾನಭಂಗಸಗರಾತ್ಮಜಭಸ್ಮಕೃತ್ ।
ಧರ್ಮೋ ವೃಷೇಂದ್ರಃ ಸುರಭೀಪತಿಃ ಶುದ್ಧಾತ್ಮಭಾವಿತಃ ॥ ೨೪೬ ॥

ಶಂಭುಸ್ತ್ರಿಪುರದಾಹೈಕಸ್ಥೈರ್ಯವಿಶ್ವರಥೋದ್ವಹಃ ।
ಭಕ್ತಶಂಭುಜಿತೋ ದೈತ್ಯಾಮೃತವಾಪೀ ಸಮುಸ್ತಪಃ ॥ ೨೪೭ ॥

---

ಕತ್ತರಿಸಿದುದರಿಂದ ರಾಹುವಿನಿಂದ ಸೂರ್ಯನನ್ನು ಬಿಡಿಸಿದವನು. ಶೇಷನ ದೇಹದ ಮೇಲೆ ದೇವತೆಗಳೆಲ್ಲರನ್ನೂ ಇಟ್ಟಿರುವವನು. ಪ್ರಪಂಚಕ್ಕೆ ಬೇಕವದ ಉಪಕಾರ ವನ್ನೆಲ್ಲಾ ಮಾಡಿದವನು. ರಾಹುವಿನ ಶಿರಸ್ಸನ್ನು ಕತ್ತರಿಸಿದವನು. ನಾಶವಾಗದ ಆಕಾರವುಳ್ಳವನು.

೨೪೪–೨೪೫. ವಾಜಪೇಯದ ಹೆಸರುಳ್ಳವನು. ಅಗ್ನಿ ವೇದ ಧರ್ಮಗಳಲ್ಲಿ ಆಸಕ್ತನು. ಶ್ವೇತದ್ವೀಪಕ್ಕೆ ಒಡೆಯನು. ಸಾಂಖ್ಯವನ್ನು ಮಾಡಿದವನು. ಸರ್ವಸಿದ್ಧಿಗಳಿಗೂ ರಾಜನು. ಪ್ರಪಂಚದಲ್ಲಿಯೇ ಪ್ರಸಿದ್ಧಿಪಡಿಸಲ್ಪಟ್ಟ ಯೋಗ ಜ್ಞಾನವುಳ್ಳವನು. ಮೋಹವೆಂಬ ಕತ್ತಲೆಯನ್ನು ನಾಶಮಾಡಿದವನು. ದೇವ ಹೂತಿಯ ಮಗನು. ಸಿದ್ಧರೂಪನು. ಕಪಿಲಾವತಾರಿಯು. ಕರ್ದಮನ ಮಗನು.

೨೪೬. ಯೋಗಕ್ಕೆ ಒಡೆಯನು. ಧ್ಯಾನಭಂಗವನ್ನು ಮಾಡಿದ ಸಗರನ ಮಕ್ಕಳನ್ನು ಬೂದಿಯನ್ನಾಗಿ ಮಾಡಿದವನು. ಧರ್ಮರೂಪನು. ಧರ್ಮಕ್ಕೆ ಒಡೆಯನು. ಸುರಭಿಗೆ ಪತಿಯು. ಶುದ್ಧವಾದ ಆತ್ಮವುಳ್ಳವನು

೨೪೭–೨೪೮. ಶಂಭುರೂಪನು. ಸ್ಥಿರವಾಗಿರುವ ಭೂಮಿಯನ್ನು ರಥವಾಗಿ ನಡೆಸಿದವನು. ತ್ರಿಪುರರನ್ನು ಕೊಲ್ಲುವವನು. ಭಕ್ತನಾದ ಶಂಭುವಿನಿಂದ ಜಿತನಾದವನು. ದೈತ್ಯರಿಗೆ ಅಮೃತ ಸರೋವರದಂತಿರುವವನು. ತಪಸ್ವಿಯು.

**ಮಹಾಪ್ರಳಯವಿಶ್ವೈಕನಿಲಯೋಽಖಿಲನಾಗರಾಟ್ ।**
**ಶೇಷದೇವಸ್ಸಹಸ್ರಾಕ್ಷಃ ಸಹಸ್ರಾಸ್ಯಶಿರೋಭುಜಃ ॥ ೨೪೮ ॥**

**ಫಣಾಮಣಿಕಣಾಕಾರಯೋಜಿತಾಚ್ಛಾಂಬುದಕ್ಷಿತಿಃ ।**
**ಕಾಲಾಗ್ನಿರುದ್ರಜನಕೋ ಮುಸಲಾಸ್ತ್ರೋ ಹಲಾಯುಧಃ ॥ ೨೪೯ ॥**

**ನೀಲಾಂಬರೋ ವಾರುಣೀಶೋ ಮನೋವಾಕ್ಕಾಯದೋಷಹಾ ।**
**ಅಸಂತೋಷದೃಷ್ಟಿಮಾತ್ರ ಪಾತಿತೈಕದಶಾನನಃ ॥ ೨೫೦ ॥**

**ಬಲಸಂಯಮನೋ ಘೋರೋ ರೌಹಿಣೇಯಃ ಪ್ರಲಂಬಹಾ ।**
**ಮುಷ್ಟಿಕಘ್ನೋ ದ್ವಿವಿದಹಾ ಕಾಳಿಂದೀಕರ್ಷಣೋ ಬಲಃ ॥ ೨೫೧ ॥**

**ರೇವತೀರಮಣಃ ಪೂರ್ವಭಕ್ತಿಖೇದಾಚ್ಯುತಾಗ್ರಜಃ ।**
**ದೇವಕೀವಸುದೇವಾಹ್ವಕಶ್ಯಪಾದಿತಿನಂದನಃ ॥ ೨೫೨ ॥**

---

ಮಹಾಪ್ರಳಯಕ್ಕೆ ಕಾರಣನು. ಪ್ರಪಂಚವೇ ಮನೆಯಾಗಿ ಉಳ್ಳವನು. ಎಲ್ಲಾ ಸರ್ಪಗಳಿಗೂ ಒಡೆಯನು. ಶೇಷಸ್ವರೂಪನು. ಸಾವಿರ ಕಣ್ಣುಳ್ಳವನು. ಸಾವಿರ ಮುಖವುಳ್ಳವನು. ಸಾವಿರ ತೋಳುಗಳುಳ್ಳವನು.

೨೪೯–೨೫೦. ಹೆಡೆಯಲ್ಲಿರುವ ರತ್ನಗಳಿಂದ ಮೋಡದ ಆಕಾರದಂತೆ ಆಗಿರುವವನು. ಕಾಲಾಗ್ನಿಗೂ ಕಾಲರುದ್ರನಿಗೂ ಜನಕನು. ಮುಸಲಾಯುಧವನ್ನು ಹಿಡಿದಿರುವವನು. ನೇಗಿಲೇ ಆಯುಧವಾಗಿರುವವನು. ನೀಲಿಯ ಬಟ್ಟೆಯನ್ನು ಉಟ್ಟಿರುವವನು. ವಾರುಣಿ ಸುರೆಯನ್ನು ಪಾನಮಾಡುವವನು. ಮನಸ್ಸು ವಾಕ್ಕು ಕಾಯಗಳಲ್ಲಿರುವ ದೋಷಗಳನ್ನು ಹಾಳುಮಾಡುವವನು. ಸಂತೋಷವಿಲ್ಲದ ದೃಷ್ಟಿಯಿಂದ ನೋಡುವುದರಿಂದಲೇ ರಾವಣನನ್ನು ನಾಶಮಾಡಿದವನು.

೨೫೧–೨೫೨. ಬಲನೆಂಬ ರಾಕ್ಷಸನನ್ನು ಕೊಂದವನು. ಘೋರರೂಪನು. ರೋಹಿಣಿಯ ಮಗನು. ಪ್ರಲಂಬನೆಂಬ ರಾಕ್ಷಸನನ್ನು ಕೊಂದವನು. ಮುಷ್ಟಿಕಾಸುರನನ್ನು ಕೊಂದವನು ದ್ವಿವಿದನೆಂಬವನನ್ನು ಕೊಂದವನು. ಕಾಳಿಂದೀ ನದಿಯನ್ನು ತಿರಿಗಿಸಿದವನು ಬಲನೆಂಬ ಹೆಸರುಳ್ಳವನು. ರೇವತಿಗೆ ಗಂಡನು. ಪೂರ್ವದ ಭಕ್ತಿಯುಳ್ಳವನು. ಅಚ್ಯುತನಿಗೆ ಅಣ್ಣನು. ದೇವಕೀ ವಸುದೇವರೆಂಬ ಹೆಸರನ್ನು ಹೊಂದಿರುವ ಕಶ್ಯಪ ಅದಿತಿಯರ ಮಗನು.

ವಾರ್ಷ್ಣೇಯಃ ಸಾತ್ವತಾಂ ಶ್ರೇಷ್ಠಃ ಶೌರಿರ್ಯದುಕುಲೇಶ್ವರಃ ।
ನರಾಕೃತಿಃ ಪರಂ ಬ್ರಹ್ಮ ಸವ್ಯಸಾಚಿವರಪ್ರದಃ ॥ ೨೫೩ ॥

ಬ್ರಹ್ಮಾದಿಕಾಮ್ಯಲಾಲಿತ್ಯ ಜಗದಾಶ್ಚರ್ಯಶೈಶವಃ ।
ಪೂತನಾಘ್ನಃ ಶಕಟಭಿದ್ಯಮಳಾರ್ಜುನಭಂಜನಃ ॥ ೨೫೪ ॥

ವಾತಾಸುರಾರಿಃ ಕೇಶಿಘ್ನೋ ಧೇನುಕಾರಿರ್ಗವೀಶ್ವರಃ ।
ದಾಮೋದರೋ ಗೋಪದೇವೋ ಯಶೋದಾನಂದದಾಯಕಃ ॥ ೨೫೫ ॥

ಕಾಲೀಯಮರ್ದನಸ್ಸರ್ವಗೋಪಗೋಪೀಜನಪ್ರಿಯಃ ।
ಲೀಲಾಗೋವರ್ಧನಧರೋ ಗೋವಿಂದೋ ಗೋಕುಲೋತ್ಸವಃ ॥ ೨೫೬ ॥

ಅರಿಷ್ಟಮಥನಃ ಕಾಮೋನ್ಮತ್ತಗೋಪೀವಿಮುಕ್ತಿದಃ
ಸದ್ಯಃ ಕುವಲಯಾಪೀಡಘಾತೀ ಚಾಣೂರಮರ್ದನಃ । ॥ ೨೫೭ ॥

---

೨೫೩–೨೫೪. ವೃಷ್ಣಿಕುಲದಲ್ಲಿ ಹುಟ್ಟಿದವನು. ಸಾತ್ವತರಲ್ಲಿ ಉತ್ತಮನು. ಶೂರನ ಮಗನು. ಯದುಕುಲಕ್ಕೆ ಒಡೆಯನು. ನರನ ಆಕಾರನು. ಪರಬ್ರಹ್ಮ ರೂಪನು. ಅರ್ಜುನನಿಗೆ ವರವನ್ನು ಕೊಟ್ಟವನು. ಬ್ರಹ್ಮಾದಿಗಳಿಗೂ ಪ್ರೀತಿ ಪಾತ್ರವಾದ ಜಗತ್ತಿಗೆ ಆಶ್ಚರ್ಯಕರವಾದ ಬಾಲ್ಯವನ್ನು ಹೊಂದಿದ್ದವನು. ಪೂತನಿಯನ್ನು ಕೊಂದವನು. ಶಕಟನನ್ನು ಕೊಂದವನು. ಯಮಳಾರ್ಜುನ (ಜೋಡಿಮತ್ತಿಮರಗಳನ್ನು) ನಾಶಮಾಡಿದವನು.

೨೫೫–೨೫೬. ವಾತಾಸುರನನ್ನು ಕೊಂದವನು. ಕೇಶಿ ಎಂಬ ರಾಕ್ಷಸನನ್ನು ಕೊಂದವನು ಧೇನುಕ ಹಂತನು. ಗೋವುಗಳಿಗೆ ಒಡೆಯನು. ದಾಮೋದರನು. ಗೋಪರಿಗೆ ದೇವನು. ಯಶೋದೆಗೆ ಆನಂದವನ್ನುಂಟು ಮಾಡುವವನು. ಕಾಲಿಯನೆಂಬ ಸರ್ಪನ ಗರ್ವವನ್ನು ಮುರಿದವನು. ಗೋಪರು ಗೋಪಿಯರಿಗೆಲ್ಲಾ ಆಶ್ರಯನು. ಗೋಕುಲಕ್ಕೆ ಸಂತೋಷವನ್ನುಂಟುಮಾಡುವವನು.

೨೫೭-೨೫೮. ಅರಿಷ್ಟನೆಂಬುವನನ್ನು ಕೊಂದವನು. ಕಾಮದಿಂದ ಮದಿಸಿರುವ ಗೋಪಿಯರಿಗೆ ಮುಕ್ತಿಯನ್ನು ಕೊಟ್ಟವನು. ಕುವಲಯವೆಂಬ ಆನೆಯನ್ನು ಕೊಂದವನು ಚಾಣೂರನನ್ನು ನಾಶಮಾಡಿದವನು. ಕಂಸಾರಿಯು.

ಕಂಸಾರಿರುಗ್ರಸೇನಾದಿರಾಜ್ಯವ್ಯಾಪಾರಿತಾಮರಃ ।
ಸುಧರ್ಮಾಂಕಿತಭೂಲೋಕೋ ಜರಾಸಂಧಬಲಾಂತಕಃ ॥ ೨೫೮ ॥

ತ್ಯಕ್ತಭಗ್ನಜರಾಸಂಧೋ ಭೀಮಸೇನಯಶಃಪ್ರದಃ ।
ಸಾಂದೀಪಿನೀಮೃತಾಪತ್ಯದಾತಾಕಾಲಾಂತಕಾದಿಜಿತ್ ॥ ೨೫೯ ॥

ಸಮಸ್ತನಾರಕತ್ರಾತಾ ಸರ್ವಭೂಪತಿಕೋಟಿಜಿತ್ ।
ರುಕ್ಮಿಣೀರಮಣೋ ರುಕ್ಮಿಶಾಸನೋ ನರಕಾಂತಕಃ ॥ ೨೬೦ ॥

ಸಮಸ್ತಸುಂದರೀಕಾನ್ತೋ ಮುರಾರಿರ್ಗರುಡಧ್ವಜಃ ।
ಏಕಾಕಿಜಿತರುದ್ರಾರ್ಕಮರುದಾದ್ಯಖಿಲೇಶ್ವರಃ ॥ ೨೬೧ ॥

ದೇವೇಂದ್ರದರ್ಪಹಾ ಕಲ್ಪದ್ರುಮಾಲಂಕೃತಭೂತಲಃ ।
ಬಾಣಬಾಹುಸಹಸ್ರಚ್ಛಿನ್ನಂದ್ಯಾದಿಗಣಕೋಟಿಜಿತ್ ॥ ೨೬೨ ॥

---

ಉಗ್ರಸೇನನಿಂದ ರಾಜ್ಯಭಾರ ಮಾಡಿಸಿದವನು. ದೇವತಾಸ್ವರೂಪನು. ಸುಧರ್ಮ ವೆಂಬ ದೇವಸಭೆಯೇ ಭೂಲೋಕದಲ್ಲಿ ಇರುವಂತೆ ಮಾಡಿದವನು. ಜರಾಸಂಧನ ಬಲವನ್ನು ನಾಶಮಾಡಿದವನು.

೨೫೯–೨೬೦. ಜರಾಸಂಧನನ್ನು ಸೋಲಿಸಿ ಬಿಟ್ಟುಬಿಟ್ಟವನು. ಭೀಮ ಸೇನನಿಗೆ ಯಶಸ್ಸನ್ನು ಕೊಟ್ಟವನು. ಸಾಂದೀಪಿನಿಗೆ ಸತ್ತಮಗನನ್ನು ತಂದು ಕೊಟ್ಟವನು. ಕಾಲಾಂತಕನೇ ಮುಂತಾದವರನ್ನು ಜಯಿಸಿದವನು. ಎಲ್ಲಾ ನರಕದಿಂದಲೂ ಕಾಪಾಡುವವನು. ಅನೇಕ ಕೋಟಿ ರಾಜರನ್ನು ಗೆದ್ದವನು. ರುಕ್ಮಿಣಿಗೆ ಗಂಡನು. ರುಕ್ಮಿಯೆಂಬುವನನ್ನು ಕೊಂದವನು. ನರಕನಿಗೆ ಮೃತ್ಯು ವನ್ನು ಕೊಟ್ಟವನು.

೨೬೧–೨೬೨. ಸುಂದರಿಯರಿಗೆಲ್ಲಾ ಕಾಮಿಸಲು ಚೆನ್ನಾಗಿರತಕ್ಕವನು. ಮುರನನ್ನು ಕೊಂದವನು. ಗರುಡನೇ ಧ್ವಜದಲ್ಲಿ ಉಳ್ಳವನು ರುದ್ರ ಸೂರ್ಯ ಮುಂತಾದ ದೇವತೆಗಳನ್ನು ಒಬ್ಬಂಟಿಗನಾಗಿಯೇ ಗೆದ್ದವನು. ದೇವೇಂದ್ರನ ದರ್ಪವನ್ನು ನಾಶಮಾಡಿದವನು. ಬಾಣನ ಸಾವಿರ ತೋಳುಗಳನ್ನು ನಾಶಮಾಡಿ ದವನು. ನಂದಿಯೇ ಮುಂತಾದ ಅನೇಕ ಕೋಟಿ ಗಣಗಳನ್ನು ಗೆದ್ದವನು.

ಲೀಲಾಜಿತಮಹಾದೇವೋ ಮಹಾದೇವೈಕಪೂಜಿತಃ ।
ಇಂದ್ರಾರ್ಥಾರ್ಜುನನಿರ್ಭಂಗಜಯದಃ ಪಾಂಡವೈಕಧೃಕ್ ॥ ೨೬೩ ॥

ಕಾಶಿರಾಜಶಿರಚ್ಛೇತ್ತಾ ರುದ್ರಶಕ್ತ್ಯೈಕಮರ್ದನಃ ।
ವಿಶ್ವೇಶ್ವರಪ್ರಸಾದಾಢ್ಯಃ ಕಾಶಿರಾಜಸುತಾರ್ದನಃ ॥ ೨೬೪ ॥

ಶಂಭುಪ್ರತಿಜ್ಞಾವಿಧ್ವಂಸೀ ಕಾಶೀನಿರ್ದಗ್ಧನಾಯಕಃ ।
ಕಾಶೀಶಗಣಕೋಟಿಘ್ನೋ ಲೋಕಶಿಕ್ಷಾದ್ವಿಜಾರ್ಚಕಃ ॥ ೨೬೫ ॥

ಶಿವತೀವ್ರತಪೋವಶ್ಯಃ ಪುರಾ ಶಿವವರಪ್ರದಃ ।
ಶಂಕರೈಕಪ್ರತಿಷ್ಠಾಧೃಕ್ ಸ್ವಾಂಶಶಂಕರಪೂಜಕಃ ॥ ೨೬೬ ॥

ಶಿವಕನ್ಯಾವ್ರತಪತಿಃ ಕೃಷ್ಣಾರೂಪಶಿವಾರಿಹಾ ।
ಮಹಾಲಕ್ಷ್ಮೀವಪುರ್ಗೌರೀತ್ರಾತಾ ವೈದಳವೃತ್ರಹಾ ॥ ೨೬೭ ॥

---

೨೬೩-೨೬೪. ಲೀಲೆಯಿಂದಲೇ ಮಹಾದೇವನನ್ನು ಜಯಿಸಿದವನು. ಮಹಾದೇವನಿಂದ ಪೂಜಿತನು. ಇಂದ್ರನ ಮಾತಿಗೋಸರ ಅರ್ಜುನನ ಶತ್ರುಗಳನ್ನು ಕೊಂದು ಅವನಿಗೆ ಜಯವನ್ನು ಕೊಟ್ಟನು. ಪಾಂಡವರಿಗೆಲ್ಲಾ ಆಶ್ರಯನು ಕಾಶಿರಾಜನ ತಲೆಯನ್ನು ಕಡಿದವನು. ರುದ್ರನ ಶಕ್ತಿಯನ್ನು ನಾಶಮಾಡಿದವನು. ವಿಶ್ವೇಶ್ವರನಿಗೆ ಅನುಗ್ರಹಮಾಡಿದವನು. ಕಾಶಿರಾಜನ ಮಕ್ಕಳನ್ನು ನಾಶಮಾಡಿದವನು.

೨೬೫-೨೬೬. ಶಂಭುವಿನ ಪ್ರತಿಜ್ಞೆಯನ್ನು ನಾಶಮಾಡಿದವನು. ಕಾಶಿ ನಾಯಕನನ್ನು ಕೊಂದವನು. ಕಾಶಿರಾಜನ ಕೋಟಿಗಣಗಳನ್ನು ನಾಶಮಾಡಿದವನು. ಜನರಿಗೆ ಬೋಧಿಸುವುಕೋಸ್ಕರ ಬ್ರಾಹ್ಮಣರನ್ನು ಪೂಜಿಸುವವನು. ಶಿವನ ಉಗ್ರವಾದ ತಪಸ್ಸಿಗೆ ವಶವಾದವನು. ಶಿವನಿಗೆ ಹಿಂದೆ ವರ ಕೊಟ್ಟವನು. ಶಂಕರನನ್ನು ಪ್ರತಿಷ್ಠೆ ಮಾಡಿದವನು. ತನ್ನ ಅಂಶಭೂತನಾದ ಶಂಕರನನ್ನು ಪೂಜಿಸಿದವನು.

೨೬೭-೨೬೮. ಶಿವನ ಮಗಳಿಗೆ ಮುಖ್ಯ ಒಡೆಯನು. ದ್ರೌಪತಿಯ ಅಮಂಗಳವನ್ನು ನಾಶಮಾಡಿದವನು. ಮಹಾಲಕ್ಷ್ಮಿಯನ್ನೇ ದೇಹದಲ್ಲಿ ಉಳ್ಳವನು. ಗೌರಿಯನ್ನು ಕಾಪಾಡಿದವನು. ಕ್ರೂರ ವೃತ್ರನನ್ನು

ಸ್ವಧಾಮಮುಚುಕುಂದೈಕನಿಷ್ಟಾಲಯುವನೇಷ್ಟಕೃತ್ ।
ಯಮುನಾಪತಿಶಾನೀತಪರಿಲೀನದ್ವಿಜಾತ್ಮಜಃ ॥ ೨೬೮ ॥

ಶ್ರೀದಾಮರಕ್ತಭಕ್ತಾರ್ಥಭೂಮ್ಯಾನೀತೈಂದ್ರವೈಭವಃ ।
ದುರ್ವೃತ್ತಶಿಶುಪಾಲೈಕಮುಕ್ತಿದೋ ದ್ವಾರಕೇಶ್ವರಃ ॥ ೨೬೯ ॥

ಆಚಾಂಡಾಲಾದಿಕಾಪ್ರಾಪ್ಯದ್ವಾರಕಾನಿಧಿಕೋಟಿಕೃತ್ ।
ಅಕ್ರೂರೋದ್ಧವಮುಖ್ಯೈಕಭಕ್ತಃ ಸ್ವಚ್ಛಂದಮುಕ್ತಿದಃ ॥ ೨೭೦ ॥

ಸಬಾಲಸ್ತ್ರೀಜಲಕ್ರೀಡಾಮೃತವಾಪೀಕೃತಾರ್ಣವಃ ।
ಬ್ರಹ್ಮಾಸ್ತ್ರದಗ್ಧಗರ್ಭಸ್ಥಪರೀಕ್ಷಿಜ್ಜೀವನೈಕಕೃತ್ ॥ ೨೭೧ ॥

ಪರಿಲೀನದ್ವಿಜಸುತಾನೇತಾಽರ್ಜುನಮದಾಪಹಃ ।
ಗೂಢಮುದ್ರಾಕೃತಿಗ್ರಸ್ತಭೀಷ್ಮಾದ್ಯಖಿಲಕೌರವಃ ॥ ೨೭೨ ॥

---

ಕೊಂದವನು. ಮುಚುಕುಂದನಿಗೆ ತನ್ನ ಜಾಗವನ್ನೇ ಇಷ್ಟಬಂದಂತೆ ವಿಹರಿಸುವುದಕ್ಕೆ ಕೊಟ್ಟವನು. ಮುಳುಗಿಹೋಗಿದ್ದ ಬ್ರಾಹ್ಮಣನ ಮಗನನ್ನು ಸಮುದ್ರರಾಜನಿಂದ ತರಿಸಿಕೊಟ್ಟವನು.

೨೬೯. ಹೂವಿನ ಮಾಲೆಯಲ್ಲಿ ಅಪೇಕ್ಷೆಪಟ್ಟಿರುವ ಭಕ್ತನಿಗೋಸ್ಕರ ಇಂದ್ರನ ಐಶ್ವರ್ಯವನ್ನೇ ಭೂಮಿಗೆ ತಂದವನು. ದುಷ್ಟನಾದ ಶಿಶುಪಾಲನಿಗೂ ಕೂಡ ಮುಕ್ತಿಯನ್ನು ಕೊಟ್ಟವನು. ದ್ವಾರಕೆಗೆ ಒಡೆಯನು.

೨೭೦-೨೭೧. ಚಾಂಡಾಲನೇ ಮುಂತಾದ ಎಲ್ಲಾ ಜಾತಿಗೂ ಸಿಕ್ಕುವಂತೆ ದ್ವಾರಕೆಯಲ್ಲಿ ನಿಧಿಯನ್ನು ಏರ್ಪಡಿಸಿದವನು ಅಕ್ರೂರ ಉದ್ಧವರೇ ಮುಖ್ಯರಾದ ಭಕ್ತರನ್ನು ಉಳ್ಳವನು. ಇಷ್ಟವಾದ ಮುಕ್ತಿಯನ್ನು ಕೊಡತಕ್ಕವನು. ಮಕ್ಕಳು ಹೆಂಗಸರು ಮೊದಲುಗೊಂಡು ಜಲಕ್ರೀಡೆಯಾಡಲು ಅನುಕೂಲವಾಗುವಂತೆ ಸಮುದ್ರವನ್ನೇ ಸಿಹಿನೀರಿನ ಕೊಳವನ್ನಾಗಿ ಮಾಡಿದವನು ಬ್ರಹ್ಮಾಸ್ತ್ರದಿಂದ ಗರ್ಭದಲ್ಲಿಯೇ ಸುಟ್ಟುಹೋಗಿದ್ದ ಪರೀಕ್ಷಿತ್ತಿಗೆ ಜೀವವನ್ನು ಕೊಟ್ಟವನು.

೨೭೨-೨೭೩. ನಾಶವಾಗಿ ಹೋಗಿದ್ದ ಬ್ರಾಹ್ಮಣ ಕುಮಾರನನ್ನು ತಂದವನು. ಅರ್ಜುನನ ಮದವನ್ನು ನಾಶಮಾಡಿದವನು. ಗೂಢವಾದ ರೀತಿಯಿಂದ ಭೀಷ್ಮನೇ ಮುಂತಾದವರನ್ನೆಲ್ಲಾ ಆವರಿಸಿರುವವನು. ಅರ್ಜುನನಿಗೋಸ್ಕರ

ಪಾರ್ಥಾರ್ಥಖಂಡಿತಾಶೇಷದಿವ್ಯಾಸ್ತ್ರಪಾರ್ಥಮೋಹಕೃತ್ ।
ಗರ್ಭಶಾಪಚ್ಛಲಧ್ವಸ್ತಯಾದವೋರ್ವೀಭರಾಪಹಃ ॥ ೨೭೩ ॥

ಜರಾವ್ಯಾಧಾರಿಗತಿದಃ ಸ್ಮೃತಮಾತ್ರಾಖಿಲೇಷ್ಟದಃ ।
ಕಾಮದೇವೋ ರತಿಪತಿರ್ಮನ್ಮಥಃ ಶಂಬರಾನ್ತಕಃ ॥ ೨೭೪ ॥

ಅನಂಗೋ ಜಿತಗೌರೀಶೋ ರತಿಕಾನ್ತಸ್ಸದೇಪ್ಸಿತಃ ।
ಪುಷ್ಪೇಷುರ್ವಿಶ್ವವಿಜಯೀ ಸ್ಮರಃ ಕಾಮೇಶ್ವರೀಪ್ರಿಯಃ ॥ ೨೭೫ ॥

ಉಷಾಪತಿರ್ವಿಶ್ವಕೇತುರ್ವಿಶ್ವತೃಪ್ತೋಽಧಿಪೂರುಷಃ ।
ಚತುರಾತ್ಮಾ ಚತುರ್ವ್ಯೂಹಶ್ಚತುರ್ಯುಗವಿಧಾಯಕಃ ॥ ೨೭೬ ॥

ಚತುರ್ವೇದೈಕವಿಶ್ವಾತ್ಮಾ ಸರ್ವೋತ್ಕೃಷ್ಟಾಂಶಕೋಟಿಸೂಃ ।
ಆಶ್ರಮಾತ್ಮಾ ಪುರಾಣರ್ಷಿರ್ವ್ಯಾಸಃ ಶಾಖಾಸಹಸ್ರಕೃತ್ ॥ ೨೭೭ ॥

---

ಎಲ್ಲ ಅಸ್ತ್ರಗಳನ್ನು ಖಂಡಿಸಿ ಆಶ್ಚರ್ಯವನ್ನುಂಟುಮಾಡಿದವನು. ಗರ್ಭಶಾಪವೆಂಬ ನೆವದಿಂದ ಯಾದವರನ್ನೆಲ್ಲಾ ನಾಶಮಾಡಿ ಭೂಭಾರವನ್ನು ಕಡಿಮೆಮಾಡಿದವನು.

೨೭೪. ಜರಾವ್ಯಾಧನಿಗೆ ಮೋಕ್ಷವನ್ನು ಕೊಟ್ಟವನು. ಸ್ಮರಿಸಿದರೇನೇ ಸಮಸ್ತವನ್ನೂ ಕೊಡುವವನು ಕಾಮದೇವನು. ರತಿಪತಿಯು. ಮನ್ಮಥನು. ಶಂಬರನನ್ನು ಕೊಂದವನು.

೨೭೫-೨೭೬. ಅಂಗವಿಲ್ಲದವನು. ಈಶ್ವರನನ್ನು ಗೆದ್ದವನು. ರತಿಗೆ ಪತಿಯು. ಯಾವಾಗಲೂ ಬೇಕಾದವನು. ಹೂವನ್ನೇ ಬಾಣವಾಗಿ ಉಳ್ಳವನು. ಪ್ರಪಂಚವನ್ನೇ ಜಯಿಸುವವನು. ಸ್ಮರನು. ಕಾಮೇಶ್ವರಿಗೆ ಪ್ರಿಯನು. ಉಷಾಪತಿಯು. ಪ್ರಪಂಚದಲ್ಲಿಯೇ ಧ್ವಜದಂತೆ ಇರುವವನು. ಪ್ರಪಂಚಕ್ಕೆ ತೃಪ್ತಿಯನ್ನುಂಟುಮಾಡುವವನು. ಎಲ್ಲರಿಗೂ ಒಡೆಯನು ನಾಲ್ಕು ಬಗೆಯಾದ ಆತ್ಮವುಳ್ಳವನು. ನಾಲ್ಕು ವ್ಯೂಹವುಳ್ಳವನು. ನಾಲ್ಕು ಯುಗಗಳನ್ನು ನಿಯಮಿಸುವವನು.

೨೭೭-೨೭೮. ಚತುರ್ವೇದರೂಪನು. ಪ್ರಪಂಚವನ್ನೇ ಆತ್ಮವಾಗಿ ಉಳ್ಳವನು. ಎಲ್ಲರಿಗಿಂತಲೂ ಚೆನ್ನಾಗಿರುವ ಕೋಟಿ ಜನರನ್ನು ಹುಟ್ಟಿಸುವವನು. ಆಶ್ರಮರೂಪನು. ಪುರಾಣನಾದ ಋಷಿಯು. ವ್ಯಾಸರೂಪನು. ಅನೇಕ

ಮಹಾಭಾರತನಿರ್ಮಾತಾ ಕವೀಂದ್ರೋ ಬಾದರಾಯಣಃ ।
ಕೃಷ್ಣದ್ವೈಪಾಯನಸ್ಸರ್ವಪುರುಷಾರ್ಥೈಕಭೋಧಕಃ || ೨೭೮ ||

ವೇದಾಂತಕರ್ತಾ ಬ್ರಹ್ಮೈಕವ್ಯಂಜಕಃ ಪುರುವಂಶಕೃತ್ ।
ಬುದ್ಧೋ ಧ್ಯಾನಜಿತಾಶೇಷದೇವದೇವೀ ಜಗತ್ಪ್ರಿಯಃ || ೨೭೯ ||

ನಿರಾಯುಧೋ ಜಗಜ್ಜೈತ್ರಃ ಶ್ರೀಧನೋ ದುಷ್ಟಮೋಹನಃ ।
ದೈತ್ಯವೇದಬಹಿಷ್ಕಾರ್ತಾ ವೇದಾರ್ಥಶ್ರುತಿಗೋಪಕಃ || ೨೮೦ ||

ಶೌದ್ಧೋದನಿರ್ದೃಷ್ಟದಿಷ್ಟಃಸುಖದಸ್ಸದಸಸ್ಪತಿಃ ।
ಯಥಾಯೋಗ್ಯಾಖಿಲಕೃಪಃ ಸರ್ವಶೂನ್ಯೋಖಿಲೇಷ್ಟದಃ || ೨೮೧ ||

ಚತುಷ್ಕೋಟಿಪೃಥಕ್ತತ್ವಪ್ರಜ್ಞಾಪಾರಮಿತೇಶ್ವರಃ ।
ಪಾಷಂಡವೇದಮಾರ್ಗೇಶಃ ಪಾಷಂಡಶ್ರುತಿಗೋಪಕಃ || ೨೮೨ ||

---

ಶಾಖೆಗಳನ್ನು ನಿರ್ಮಿಸಿರುವವನು. ಮಹಾಭಾರತವನ್ನು ನಿರ್ಮಿಸಿರುವವನು. ಕವಿಶ್ರೇಷ್ಠನು. ಬಾದರಾಯಣರೂಪನು. ಕೃಷ್ಣ ದ್ವೀಪವೇ ಸ್ಥಾನವಾಗಿ ಉಳ್ಳವನು. ಪುರುಷಾರ್ಥಗಳನ್ನೆಲಾ ಭೋಧಿಸುವವನು.

೨೭೯–೨೮೦. ವೇದಾಂತವನ್ನು ಮಾಡಿರುವವನು. ಬ್ರಹ್ಮವೊಂದನ್ನೇ ತೋರಿಸಿರುವವನು. ಪುರುವಿನ ವಂಶವನ್ನು ಬೆಳೆಯಿಸಿದವನು. ಬುದ್ಧನು ಧ್ಯಾನದಿಂದ ದೇವದೇವಿಯರನ್ನೆಲ್ಲಾ ಜಯಿಸಿ ಜಗತ್ತಿಗೆ ಪ್ರಿಯನಾಗಿರುವವನು ಆಯುಧರಹಿತನು. ಜಗತ್ತನ್ನೇ ಜಯಿಸುವವನು ಶ್ರೀಯೇ ಧನವಾಗಿ ಉಳ್ಳವನು. ದುಷ್ಟರನ್ನು ಅಜ್ಞಾನ ಹೊಂದುವಂತೆ ಮಾಡುವವನು. ದೈತ್ಯರನ್ನು ವೇದದಿಂದ ಹೊರಗಿರುವಂತೆ ಮಾಡಿದವನು. ವೇದಾರ್ಥಗಳನ್ನೂ ವೇದಗಳನ್ನೂ ಗುಟ್ಟಾಗಿಟ್ಟಿರುವವನು.

೨೮೧–೨೮೨. ಶುದ್ಧೋದನನ ಮಗನು. ಕಾಲವನ್ನು ಬಲ್ಲವನು. ಸುಖವನ್ನು ಕೊಡತಕ್ಕವನು. ಮನಸ್ಸಿಗೆ ಒಡೆಯನು. ಅವರವರ ಯೋಗ್ಯತೆಗೆ ತಕ್ಕಂತೆ ಕೃಪೆಮಾಡುವವನು. ಸರ್ವಶೂನ್ಯನು. ಎಲ್ಲಾ ಇಷ್ಟವನ್ನೂ ಕೊಡುವವನು. ಹದಿನಾಲ್ಕು ಕೋಟಿ ಪೃಥಕ್ತತ್ವಗಳಿಗೂ ಜ್ಞಾನವನ್ನು ಕೊಡುವವನು. ಈಶ್ವರನು. ಪಾಷಂಡರ ವೇದಮಾರ್ಗಕ್ಕೆ ಒಡೆಯನು. ಪಾಷಂಡರ ಶ್ರುತಿಯನ್ನು ರಕ್ಷಿಸುವವನು.

ಕಲ್ಕೀ ವಿಷ್ಣುಯಶಃಪುತ್ರಃ ಕಲಿಕಾಲವಿಲೋಪಕಃ ।
ಸಮಸ್ತಮ್ಲೇಚ್ಛದುಷ್ಟಘ್ನಃ ಸರ್ವಶ್ರೇಷ್ಠದ್ವಿಜಾತಿಕೃತ್ ॥ ೨೮೩ ॥

ಸತ್ಯಪ್ರವರ್ತಕೋ ದೇವದ್ವಿಜದೀರ್ಘಕ್ಷುಧಾಪಹಃ ।
ಅಶ್ವವಾರಾದಿರೇವನ್ತಃ ಪೃಥ್ವೀದುರ್ಗತಿನಾಶನಃ ॥ ೨೮೪ ॥

ಸದ್ಯಃಕ್ಷ್ಮಾನಂತಲಕ್ಷ್ಮೀಕೃತ್ ನಷ್ಟನಿಶ್ಶೇಷಧರ್ಮವಿತ್ ।
ಅನಂತಸ್ವರ್ಣಯಾಗೈಕಹೇಮಪೂರ್ಣಾಖಿಲದ್ವಿಜಃ ॥ ೨೮೫ ॥

ಅಸಾಧ್ಯೈಕಜಗಚ್ಛಾಸ್ತಾ ವಿಶ್ವಬಂಧುಃ ಜಯಧ್ವಜಃ ।
ಆತ್ಮತತ್ವಾಧಿಪಃ ಕರ್ತೃಶ್ರೇಷ್ಠೋ ವಿಧಿರುಮಾಪತಿಃ ॥ ೨೮೬ ॥

ಭರ್ತೃಶ್ರೇಷ್ಠಃ ಪ್ರಜೇಶಾಗ್ರ್ಯೋ ಮರೀಚಿರ್ಜನಕಾಗ್ರಣೀಃ ।
ಕಶ್ಯಪೋ ದೇವರಾಡಿಂದ್ರಃ ಪ್ರಹ್ಲಾದೋ ದೈತ್ಯರಾಟ್ ಶಶೀ ॥ ೨೮೭ ॥

---

೨೮೩–೨೮೪- ಕಲ್ಕ್ಯವತಾರದವನು. ವಿಷ್ಣುವಿಗೆ ಯಶಸ್ಸನ್ನು ತರುವ ಮಗನು. ಕಲಿಯ ಕಾಲವನ್ನು ನಾಶಮಾಡುವವನು. ಮ್ಲೇಚ್ಛರು ದುಷ್ಟರುಗಳೆನ್ನೆಲ್ಲಾ ನಾಶಮಾಡುವವನು. ಶಿಷ್ಟರಾದ ದ್ವಿಜರನ್ನು ಉತ್ಪತ್ತಿಮಾಡಿದವನು. ಸತ್ಯವೇ ನಡೆಯುವಂತೆ ಮಾಡುವ ದೇವರು ಬ್ರಾಹ್ಮಣನ ಅಧಿಕವಾದ ಹಸಿವನ್ನು ನಾಶಮಾಡಿದವನು. ಕುದುರೆಗಳನ್ನೂ ರಾಹುತರನ್ನೂ ಬಹುವಾಗಿ ಉಳ್ಳವನು. ಭೂಮಿಯ ಕಷ್ಟವನ್ನು ಪರಿಹರಿಸಿದವನು.

೨೮೫. ಭೂಮಿಯಲ್ಲೆಲ್ಲಾ ಐಶ್ವರ್ಯವನ್ನು ತುಂಬಿದವನು. ನಾಶವಾದ ಧರ್ಮವನ್ನೆಲ್ಲಾ ಉದ್ಧಾರಮಾಡಿದವನು. ಅನಂತ ಸ್ವರ್ಣಯಾಗವನ್ನು ಮಾಡಿ ಬ್ರಾಹ್ಮಣರಿಗೆಲ್ಲಾ ತೃಪ್ತಿಯಾಗುವಂತೆ ಸುವರ್ಣವನ್ನು ಕೊಟ್ಟವನು.

೨೮೬. ಅಸಾಧ್ಯವಾದ ಜಗತ್ತಿಗೆಲ್ಲಾ ಒಬ್ಬನೇ ಒಡೆಯನು. ಪ್ರಪಂಚಕ್ಕೆ ಬಂಧುವು. ಜಯವೇ ಧ್ವಜವಾಗಿರುವವನು. ಆತ್ಮತತ್ವಕ್ಕೆ ಅಧಿಪನು. ಕರ್ತೃಗಳಲ್ಲಿ ಶ್ರೇಷ್ಠನು. ವಿಧಿಯು ಉಮಾಪತಿಯು.

೨೮೭–೨೮೮. ಉತ್ತಮನಾದ ಒಡೆಯನು ರಾಜರಲ್ಲಿ ಉತ್ತಮನು. ಮರೀಚಿ ಋಷಿಯು. ತಂದೆಯುವರಲ್ಲೆಲ್ಲಾ ಶ್ರೇಷ್ಠನು. ಕಶ್ಯಪನು. ದೇವರಾಜನು. ಇಂದ್ರನು. ಪ್ರಹ್ಲಾದನು. ದೈತ್ಯರಿಗೆಲ್ಲಾ ರಾಜನು. ಚಂದ್ರರೂಪಿಯು.

ನಕ್ಷತ್ರೇಶೋ ರವಿಸ್ತೇಜಃಶ್ರೇಷ್ಠಃ ಶುಕ್ರಃ ಕವೀಶ್ವರಃ ।
ಮಹರ್ಷಿರಾಡ್ಭೃಗುರ್ವಿಷ್ಣುರಾದಿತ್ಯೇಶೋ ಬಲಿಸ್ಸ್ವರಾಟ್ ॥ ೨೮೮ ॥

ವಾಯುರ್ವಹ್ನಿಃ ಶುಚಿಶ್ರೇಷ್ಠಃ ಶಂಕರೋ ರುದ್ರರಾಡ್ಗುರುಃ ।
ವಿದ್ವತ್ತಮಶ್ಚಿತ್ರರಥೋ ಗಂಧರ್ವಾಗ್ರ್ಯೋಽಕ್ಷರೋತ್ತಮಃ ॥ ೨೮೯ ॥

ವರ್ಣಾದಿರಗ್ರ್ಯಸ್ತ್ರೀ ಗೌರೀ ಶಕ್ತ್ಯಗ್ರ್ಯಾ ಶ್ರೀಶ್ಚ ನಾರದಃ ।
ದೇವರ್ಷಿರಾಟ್ಪಾಂಡವಾಗ್ರ್ಯೋಽರ್ಜುನೋ ವಾದಃ ಪ್ರವಾದರಾಟ್ ॥೨೯೦

ಪಾವನಃ ಪಾವನೇಶಾನೋ ವರುಣೋ ಯಾದಸಾಂ ಪತಿಃ ।
ಗಂಗಾ ತೀರ್ಥೋತ್ತಮೋ ದ್ಯೂತಂ ಛಲಕಾಗ್ರ್ಯಂ ವರೌಷಧಂ ॥ ೨೯೧ ॥

ಅನ್ನಂ ಸುದರ್ಶನೋಽಸ್ತ್ರಾಗ್ರ್ಯಂ ವಜ್ರಂ ಪ್ರಹರಣೋತ್ತಮಂ ।
ಉಚ್ಚೈಶ್ರವಾ ವಾಜಿರಾಜ ಐರಾವತ ಇಭೇಶ್ವರಃ ॥ ೨೯೨ ॥

---

ನಕ್ಷತ್ರಗಳಿಗೆ ಒಡೆಯನು. ಸೂರ್ಯನು ತೇಜಸ್ಸಿಗೆಲ್ಲಾ ಉತ್ತಮನಾದ ತೇಜೋರೂಪನು. ಶಕ್ರನು. ಕವಿಗಳಿಗೆ ಒಡೆಯನು. ಮಹರ್ಷಿಗಳಿಗೆಲ್ಲಾ ಒಡೆಯನು. ಭೃಗುವು. ವಿಷ್ಣುವು. ಆದಿತ್ಯರಿಗೆ ಒಡೆಯನು. ಬಲಿಗೆ ಸ್ವರಾಜ್ಯವನ್ನು ಕೊಟ್ಟವನು.

೨೮೯–೨೯೦. ವಾಯುವು. ವಹ್ನಿಯು. ಶುಚಿಗಳಲ್ಲಿ ಶ್ರೇಷ್ಠನು ಶಂಕರನು. ರುದ್ರರಾಜನು. ಗುರುವು. ವಿದ್ವಾಂಸರಲ್ಲಿ ಶ್ರೇಷ್ಠನು ಚಿತ್ರರಥನು. ಗಂಧರ್ವರಲ್ಲಿ ಉತ್ತಮನು. ನಾಶರಹಿತರಲ್ಲಿ ಉತ್ತಮನು. ವರ್ಣಗಳಿಗೆ ಆದಿಯವನು. ಉತ್ತಮಳಾದ ಹೆಂಗಸು. ಗೌರಿಯು ಶಕ್ತಿಗಳಲ್ಲಿ ಮೊದಲನೆಯವನು. ಶ್ರೀರೂಪನು ನಾರದನು. ದೇವರ್ಷಿಗಳಿಗೆ ರಾಜನು. ಪಾಂಡವರಲ್ಲಿ ಶ್ರೇಷ್ಠನು. ಅರ್ಜುನನು. ವಾದನು. ಪ್ರವಾದಿಗಳಿಗೆ ರಾಜನು

೨೯೧–೨೯೨. ಪಾವನನು. ಪಾವನಕ್ಕೆ ಈಶ್ವರನು. ವರುಣನು ಜಲಜಂತುಗಳಿಗೆಲ್ಲಾ ಒಡೆಯನು. ಗಂಗೆಯು. ತೀರ್ಥೋತ್ತಮನು. ದ್ಯೂತನು ಫಲದಲ್ಲಿ ಮೊದಲನೆಯವನು. ಉತ್ತಮವಾದ ಔಷಧವು. ಅನ್ನವು. **ಸುದರ್ಶ**ನನು. ಅಸ್ತ್ರಗಳಿಗೆ ಉತ್ತಮನು. ಉಚ್ಚೈಶ್ರವನು. ಕುದುರೆಗಳಲ್ಲಿ ಉತ್ತಮನು. ಐರಾವತನು ಆನೆಗಳಿಗೆ ಒಡೆಯನು.

ಅರುಂಧತ್ಯೇಕಪತ್ನೀಶೋ ಹ್ಯಶ್ವತ್ಥೋಽಶೇಷವೃಕ್ಷರಾಟ್ ।
ಅಧ್ಯಾತ್ಮವಿದ್ಯಾ ವಿದ್ಯಾಗ್ರ್ಯಃ ಪ್ರಣವಚ್ಛಂದಸಾಂ ವರಃ ॥ ೨೯೩ ॥

ಮೇರುರ್ಗಿರಿಪತಿರ್ಮಾರ್ಗೋ ಮಾಸಾಗ್ರ್ಯಃ ಕಾಲಸತ್ತಮಃ ।
ದಿನಾದ್ಯಾತ್ಮಾ ಪೂರ್ವಸಿದ್ಧಃ ಕಪಿಲಃ ಸಾಮ ವೇದರಾಟ್ ॥ ೨೯೪ ॥

ತಾರ್ಕ್ಷ್ಯಃ ಖಗೇಂದ್ರ ಋತ್ವಗ್ರ್ಯೋ ವಸನ್ತಃ ಕಲ್ಪಪಾದಪಃ ।
ದಾತೃಶ್ರೇಷ್ಠಃ ಕಾಮಧೇನುರಾರ್ತಿಘ್ನಾಗ್ರ್ಯಃ ಸುಹೃತ್ತಮಃ ॥ ೨೯೫ ॥

ಚಿಂತಾಮಣಿರ್ಗುರುಶ್ರೇಷ್ಠೋ ಮಾತಾ ಹಿತತಮಃ ಪಿತಾ ।
ಸಿಂಹೋ ಮೃಗೇಂದ್ರೋ ನಾಗೇಂದ್ರೋ ವಾಸುಕಿಃ ನೃವರೋ ನೃಪಃ ॥

ವರ್ಣೇಶೋ ಬ್ರಾಹ್ಮಣಶ್ಚೇತಃ ಕರುಣಾಗ್ರ್ಯಂ ನಮೋ ನಮಃ ।
ಇತ್ಯೇತದ್ವಾಸುದೇವಸ್ಯ ವಿಷ್ಣೋರ್ನಾಮ್ನಾಂ ಸಹಸ್ರಕಂ ॥ ೨೯೭ ॥

---

೨೯೩–೨೯೪. ಅರುಂಧತಿಯು. ಏಕಪತ್ನಿಯುಳ್ಳವರಿಗೆ ಒಡೆಯನು. ಅಶ್ವತ್ಥನು. ಮರಗಳಿಗೆಲ್ಲಾ ಒಡೆಯನು ಆತ್ಮವಿದ್ಯೆಯ ರೂಪನು. ವಿದ್ಯೆಗಳಲ್ಲಿ ಉತ್ತಮನು. ಪ್ರಣವಸ್ವರೂಪನು. ಛಂದಸ್ಸುಗಳಲ್ಲಿ ಶ್ರೇಷ್ಠನು. ಮೇರುವು ಗಿರಿಗಳಿಗೆ ಒಡೆಯನು. ಮಾರ್ಗನು. ಮಾಸಗಳಲ್ಲಿ ಅಗ್ರನು. ಕಾಲಗಳಲ್ಲಿ ಉತ್ತಮನು. ಧನಾದಿಗಳಿಗೆ ಆತ್ಮರೂಪನು. ಸಿದ್ಧಿಯನ್ನು ಪೂರ್ವದಲ್ಲಿಯೇ ಹೊಂದಿದವನು. ಕಪಿಲನು. ಸಾಮವೇದನು. ವೇದಗಳಿಗೆ ಒಡೆಯನು.

೨೯೫–೨೯೬. ತಾರ್ಕ್ಷ್ಯನು. ಪಕ್ಷಿಗಳಿಗೆ ಇಂದ್ರನು. ಋತುಗಳಿಗೆ ಮುಂದಾಳು. ವಸಂತನು. ಕಲ್ಪವೃಕ್ಷವು. ದಾತೃಗಳಲ್ಲಿ ಶ್ರೇಷ್ಠನು. ಕಾಮಧೇನುವು. ಕಷ್ಟಪರಿಹರಿಸುವುದರಲ್ಲಿ ಮುಂದಾಳು. ಸ್ನೇಹಿತರಲ್ಲಿ ಉತ್ತಮನು. ಚಿಂತಾಮಣಿಯು. ಗುರುಗಳಲ್ಲಿ ಶ್ರೇಷ್ಠನು. ಮಾತೆಯು. ಹಿತಕಾರಿಯು. ತಂದೆಯು. ಸಿಂಹವು. ಮೃಗಗಳಿಗೆ ಇಂದ್ರನು. ಸರ್ಪಗಳಿಗೆ ಇಂದ್ರನು. ವಾಸುಕಿಯು. ಮನುಷ್ಯಶ್ರೇಷ್ಠನು. ರಾಜನು.

೨೯೭–೨೯೮. ವರ್ಣಗಳಿಗೆ ಒಡೆಯನು ಬ್ರಾಹ್ಮಣನು. ಮನೋರೂಪನು. ಇಂದ್ರಿಯಗಳಿಗೆ ಮೊದಲನೆಯವನು. ಇಂತಹ ಸ್ವಾಮಿಗೆ ನಮಸ್ಕಾರವು. ಇವೆಲ್ಲವೂ ಕೂಡ ವಾಸುದೇವನ ಸಹಸ್ರನಾಮಗಳು. ಇವನ್ನು ಪಠಿಸಿದರೆ ಎಲ್ಲಾ

**ಸರ್ವಾಪರಾಧಶಮನಂ ಪರಂ ಭಕ್ತಿವಿವರ್ಧನಂ ।**
**ಅಕ್ಷಯಂ ಬ್ರಹ್ಮಲೋಕಾದಿಸರ್ವಸ್ವರ್ಗೈಕಸಾಧನಂ ॥ ೨೯೮ ॥**

**ವಿಷ್ಣುಲೋಕೈಕಸೋಪಾನಂ ಸರ್ವದುಃಖವಿನಾಶನಂ ।**
**ಸಮಸ್ತಸುಖದಂ ಸದ್ಯಃ ಪರಂ ನಿರ್ವಾಣದಾಯಕಂ ॥ ೨೯೯ ॥**

**ಕಾಮಕ್ರೋಧಾದಿನಿಶ್ಶೇಷಮನೋಮಲವಿಶೋಧನಂ ।**
**ಶಾನ್ತಿದಂ ಪಾವನಂ ನೃಣಾಂ ಮಹಾಪಾತಕಿನಾಮಪಿ ॥ ೩೦೦ ॥**

**ಸರ್ವೇಷಾಂ ಪ್ರಾಣಿನಾಮಾಶು ಸರ್ವಾಭೀಷ್ಟಫಲಪ್ರದಂ ।**
**ಸಮಸ್ತವಿಘ್ನಶಮನಂ ಸರ್ವಾರಿಷ್ಟವಿನಾಶನಂ ॥ ೩೦೧ ॥**

**ಘೋರದುಃಖಪ್ರಶಮನಂ ತೀವ್ರದಾರಿದ್ರ್ಯನಾಶನಂ ।**
**ಋಣತ್ರಯಾಪಹಂ ಗುಹ್ಯಂ ಧನಧಾನ್ಯ ಯಶಸ್ಕರಂ ॥ ೩೦೨ ॥**

---

ಅನರ್ಥಗಳೂ ನಾಶವಾಗುತ್ತವೆ. ಭಕ್ತಿಯು ಹೆಚ್ಚುತ್ತದೆ. ಅಕ್ಷಯವಾದ ಬ್ರಹ್ಮಲೋಕ ಸ್ವರ್ಗಲೋಕಾದಿಗಳು ಸಿಕ್ಕುತ್ತವೆ. ಸ್ವರ್ಗಕ್ಕೆಲ್ಲಾ ಸಾಧನವು.

೨೯೯-೩೦೦. ವಿಷ್ಣುಲೋಕಕ್ಕೆ ಸೋಪಾನವು. ದುಃಖಗಳನ್ನೆಲ್ಲಾ ನಾಶಮಾಡುತ್ತದೆ. ಒಡನೆಯೇ ಎಲ್ಲಾ ಸುಖಗಳನ್ನೂ ಕೊಡುತ್ತದೆ. ಉತ್ತಮವಾದ ಮೋಕ್ಷವನ್ನು ಕೊಡುತ್ತದೆ. ಕಾಮ ಕ್ರೋಧಗಳನ್ನು ನಾಶಮಾಡಿ ಮನಸ್ಸಿನ ಕಲ್ಮಷವನ್ನು ನಾಶಮಾಡುತ್ತದೆ. ಶಾನ್ತಿಯನ್ನು ಕೊಡುತ್ತದೆ. ಪಾವನವು. ಮನುಜರ ಮಹಾಪಾತಕವನ್ನು ನಾಶಮಾಡುತ್ತದೆ.

೩೦೧-೩೦೨. ಎಲ್ಲಾ ಪ್ರಾಣಿಗಳಿಗೂ ಬೇಗ ಇಷ್ಟಾರ್ಥವನ್ನು ಕೊಡುತ್ತದೆ. ವಿಘ್ನಗಳನ್ನೆಲ್ಲಾ ನಾಶಮಾಡುತ್ತದೆ. ಅರಿಷ್ಟಗಳೆಲ್ಲವೂ ಹೋಗುತ್ತದೆ. ಘೋರರೂಪವಾದ ದುಃಖವು ಹೋಗುತ್ತದೆ. ಭಯಂಕರವಾದ ದಾರಿದ್ರ್ಯವೂ ಹೋಗುತ್ತದೆ. ದೇವಋಣ, ಪಿತೃಋಣ, ಋಷಿಋಣಗಳನ್ನು ನಾಶಮಾಡುತ್ತದೆ. ಗುಪ್ತವಾದುದು. ಧನಧಾನ್ಯಗಳನ್ನು ಹೆಚ್ಚಿಸುತ್ತದೆ. ಯಶಸ್ಸನ್ನು ಕೊಡುತ್ತದೆ.

ಸರ್ವೈಶ್ವರ್ಯಪ್ರದಂ ಸರ್ವಸಿದ್ಧಿದಂ ಸರ್ವಧರ್ಮದಂ ।
ತೀರ್ಥಯಜ್ಞತಪೋದಾನವ್ರತಕೋಟಿಫಲಪ್ರದಂ ॥ ೩೦೩ ॥

ಜಗಜ್ಜಾಡ್ಯಪ್ರಶಮನಂ ಸರ್ವವಿದ್ಯಾಪ್ರವರ್ತಕಂ ।
ರಾಜ್ಯದಂ ಭ್ರಷ್ಟರಾಜ್ಯಾನಾಂ ರೋಗಿಣಾಂ ಸರ್ವರೋಗಹೃತ್ ॥ ೩೦೪ ॥

ವಂಧ್ಯಾನಾಂ ಸುತದಂ ಚಾಶು ಕ್ಷೀಣಾನಾಂ ಜೀವಿತಪ್ರದಂ ।
ಭೂತಗ್ರಹವಿಷಧ್ವಂಸಿ ಗ್ರಹಪೀಡಾವಿನಾಶನಂ ॥ ೩೦೫ ॥

ಮಾಂಗಲ್ಯಂ ಪುಣ್ಯಮಾಯುಷ್ಯಂ ಶ್ರವಣಾತ್ಪಠನಾಜ್ಜಪಾತ್ ।
ಸಕೃದಸ್ಯಾಖಿಲಾ ವೇದಾಃ ಸಾಂಗಾ ಮಂತ್ರಾಶ್ಚ ಕೋಟಿಶಃ ॥ ೩೦೬ ॥

ಪುರಾಣಶಾಸ್ತ್ರಸ್ಮೃತಯಃ ಶ್ರುತಾಸ್ಯುಃ ಪಠಿತಾಸ್ತಥಾ ।
ಜಪಸ್ತ್ವಸ್ಯೈಕಾಕ್ಷರಂ ಶ್ಲೋಕಂ ಪಾದಂ ವಾ ಪಠತಿ ಪ್ರಿಯೇ ॥ ೩೦೭ ॥

---

೩೦೩. ಸಕಲೈಶ್ವರ್ಯಗಳನ್ನೂ ಕೊಡುತ್ತದೆ. ಸಕಲಸಿದ್ಧಿಗಳನ್ನೂ ಕೊಡುತ್ತದೆ. ತೀರ್ಥ, ಯಜ್ಞ, ತಪಸ್ಸು, ದಾನ, ವ್ರತ, ಇವುಗಳ ಕೋಟಿಯನ್ನು ಆಚರಿಸಿದರೆ ಬರುವ ಫಲವನ್ನು ಕೊಡುತ್ತದೆ.

೩೦೪-೩೦೫. ಜಗತ್ತಿನ ಜಾಡ್ಯವನ್ನೇ ನಾಶಮಾಡುತ್ತದೆ. ಎಲ್ಲಾ ವಿದ್ಯೆಗಳನ್ನೂ ಕೊಡುತ್ತದೆ. ರಾಜ್ಯವನ್ನು ಕಳೆದುಕೊಂಡವರಿಗೆ ರಾಜ್ಯವನ್ನು ಕೊಡುತ್ತದೆ. ರೋಗಿಗಳ ರೋಗವನ್ನೆಲ್ಲಾ ನಾಶಮಾಡುತ್ತದೆ. ಬಂಜೆಯರಿಗೆ ಮಕ್ಕಳನ್ನು ಕೊಡುತ್ತದೆ. ಕ್ಷಯಿಸಿರುವವರಿಗೆ ಬಲವನ್ನು ಕೊಡುತ್ತದೆ. ಭೂತ, ಗ್ರಹ, ವಿಷಗಳನ್ನು ನಾಶಮಾಡುತ್ತದೆ. ಗ್ರಹಗಳ ಪೀಡೆಯನ್ನೂ ನಾಶ ಮಾಡುತ್ತದೆ.

೩೦೬-೩೦೭. ಮಂಗಳಪ್ರದವು. ಪುಣ್ಯಪ್ರದವು. ಆಯುಷ್ಯವನ್ನು ಕೊಡುತ್ತದೆ. ಇದನ್ನು ಕೇಳುವುದರಿಂದಲೂ ಓದುವುದರಿಂದಲೂ ಎಲ್ಲಾ ವೇದಗಳನ್ನೂ ಓದಿದಂತಾಗುತ್ತದೆ. ಸಾಂಗ ವೇದಾಧ್ಯಯನದ ಫಲವು ಬರುತ್ತದೆ. ಮಂತ್ರಗಳನ್ನು ಕೋಟಿಸಾರಿ ಜಪಮಾಡಿದರೆ ಬರುವ ಪುಣ್ಯವು ಬರುತ್ತದೆ. ಪುರಾಣಗಳು, ಶಾಸ್ತ್ರಗಳು, ಸ್ಮೃತಿಗಳು ಇವೆಲ್ಲವನ್ನೂ ಓದಿದ ಕೇಳಿದ ಫಲವು ಬರುತ್ತದೆ. ಇದರ ಒಂದು ಶ್ಲೋಕವನ್ನಾಗಲೀ ಪಾದವನ್ನಾಗಲೀ ಪದವನ್ನಾಗಲೀ

**ನಿತ್ಯಂ ಸಿದ್ಧ್ಯತಿ ಸರ್ವೇಷ್ಟಮಚಿರಾತ್ಕಿಮುತಾಖಿಲಂ ।**
**ನಾನೇನ ಸದೃಶಂ ಸದ್ಯಃ ಪ್ರತ್ಯಯಂ ಸರ್ವಕರ್ಮಸು ॥ ೩೦೮ ॥**

**ಇದಂ ಭದ್ರೇ ತ್ವಯಾ ಗೋಪ್ಯಂ ಪಾಠ್ಯಂ ಸ್ವಾರ್ಥೈಕ ಸಿದ್ಧಯೇ ।**
**ನಾವೈಷ್ಣವಾಯ ದಾತವ್ಯಂ ವಿಕಲ್ಪಾಪಹತಾತ್ಮನೇ ॥ ೩೦೯ ॥**

**ಭಕ್ತಿಶ್ರದ್ಧಾವಿಹೀನಾಯ ವಿಷ್ಣುಸಾಮಾನ್ಯದರ್ಶಿನೇ ।**
**ದೇಯಂ ಪುತ್ರಾಯ ಶಿಷ್ಯಾಯ ಸುಹೃದೇ ಹಿತಕಾಮ್ಯಯಾ ॥ ೩೧೦ ॥**

**ಮತ್ಪ್ರಸಾದಾದತೋ ನೇದಂ ಗೃಹೀಷ್ಯಂತ್ಯಲ್ಪಮೇಧಸಃ ।**
**ಕಲೌ ಸದ್ಯಃ ಫಲಂ ಕಲ್ಪಗ್ರಾಮಂ ನೇಷ್ಯತಿ ನಾರದಃ ॥ ೩೧೧ ॥**

**ಲೋಕಾನಾಂ ಭಾಗ್ಯಹೀನಾನಾಂ ಯೇನ ದುಃಖಂ ವಿನಶ್ಯತಿ ।**
**ದ್ವಿತ್ರೇಷು ವೈಷ್ಣವೇಷ್ವೇತದಾರ್ಯಾವರ್ತೇ ಭವಿಷ್ಯತಿ ॥ ೩೧೨ ॥**

---

ಓದಿದರೆ ಯಾವಾಗಲೂ ಇಷ್ಟಸಿದ್ಧಿಯಾಗುತ್ತದೆ. ಬಹುಕಾಲ ಓದಿದರೆ ಹೇಳತಕ್ಕದ್ದೇನಿದೆ! ಇದಕ್ಕೆ ಸಮವಾದುದು ಮತ್ತೊಂದಿಲ್ಲ. ಯಾವ ಕೆಲಸ ಮಾಡುವುದಕ್ಕಾಗಲಿ ಇದರಷ್ಟು ನಂಬಿಕೆಯನ್ನು ಕೊಡತಕ್ಕದ್ದು ಮತ್ತೊಂದಿಲ್ಲವು.

೩೦೯–೩೧೦. ಎಲೈ ಭದ್ರೆಯೇ! ಇದನ್ನು ನೀನು ಗುಟ್ಟಾಗಿಟ್ಟಿರು. ಸ್ವಾರ್ಥಸಿದ್ಧಿಗೋಸ್ಕರ ಜಪಿಸು. ವೈಷ್ಣವನಲ್ಲದವನಿಗೂ ಸಂದೆಹಪಡುವವನಿಗೂ ಕೊಡಬೇಡ. ಶ್ರದ್ಧೆಗಳಿಲ್ಲದವನಿಗೂ ವಿಷ್ಣುವನ್ನು ಎಲ್ಲರಂತೆ ಎಂದು ತಿಳಿದಿರತಕ್ಕವನಿಗೂ ಕೊಡಬೇಡ. ಮಗ ಶಿಷ್ಯ ಸ್ನೇಹಿತ ಹಿತಕಾರಿಗಳಿಗೆ ಮಾತ್ರ ಹೇಳು.

೩೧೧. ನನ್ನ ಅನುಗ್ರಹದಿಂದ ಇದನ್ನು ಅಲ್ಪ ಬುದ್ಧಿಗಳು ಗ್ರಹಿಸಲಾರರು. ಕಲಿಯುಗದಲ್ಲಿ ಒಡನೆಯೇ ಫಲವನ್ನು ಕೊಡುತ್ತದೆ. ನಾರದನು ಕಲ್ಪಗ್ರಾಮ (ವೀಣೆಯ ಬಾರಿಸುವಿಕೆಯ ಭೇದ) ಗಳಲ್ಲಿ ಇದನ್ನು ಸೇರಿಸಿಕೊಳ್ಳುತ್ತಾನೆ.

೩೧೨. ಇದನ್ನು ಓದಿದರೆ ದುಃಖಗಳಿಗೆ ದುಃಖವು ನಾಶವಾಗುತ್ತದೆ. ಇದು ಆರ್ಯಾವರ್ತದಲ್ಲಿ ಒಬ್ಬೊಬ್ಬ ವೈಷ್ಣವರಲ್ಲಿ ಉಳಿದಿರುತ್ತದೆ.

ನಾಸ್ತಿ ವಿಷ್ಣೋಃ ಪರಂ ಸತ್ಯಂ ನಾಸ್ತಿ ವಿಷ್ಣೋಃ ಪರೋ ಜಪಃ ।
ನಾಸ್ತಿ ವಿಷ್ಣೋಃ ಪರಂ ಧ್ಯಾನಂ ನಾಸ್ತಿ ವಿಷ್ಣೋಃ ಪರಾ ಗತಿಃ ॥ ೩೧೩ ॥

ನಾಸ್ತಿ ವಿಷ್ಣೋಃ ಪರಂ ಧಾಮ ನಾಸ್ತಿ ವಿಷ್ಣೋಃ ಪರಂ ತಪಃ ।
ನಾಸ್ತಿ ವಿಷ್ಣೋಃ ಪರೋ ಧರ್ಮೋ ನಾಸ್ತಿ ಮಂತ್ರೋ ಹ್ಯವೈಷ್ಣವಃ ।

ಕಿಂ ತಸ್ಯ ಬಹುಭಿರ್ಮಂತ್ರೈಃ ಶಾಸ್ತ್ರೈಃ ಕಿಂ ಬಹುವಿಸ್ತರೈಃ ।
ವಾಜಪೇಯಸಹಸ್ರೈರ್ವಾ ಭಕ್ತಿರ್ಯಸ್ಯ ಜನಾರ್ದನೇ ॥ ೩೧೫ ॥

ಸರ್ವತೀರ್ಥಮಯೋ ವಿಷ್ಣುಃ ಸರ್ವಶಾಸ್ತ್ರಮಯಃ ಪ್ರಭುಃ ।
ಸರ್ವಕ್ರತುಮಯೋ ವಿಷ್ಣುಃ ಸತ್ಯಂ ಸತ್ಯಂ ವದಾಮ್ಯಹಂ ॥
ಆಬ್ರಹ್ಮಸಾರಸಾರಸ್ವಂ ಸರ್ವಮೇತನ್ಮಯೋದಿತಂ ॥ ೩೧೬ ॥

---

೩೧೩. ವಿಷ್ಣುವಿಗಿಂತಲೂ ಉತ್ತಮವಾದ ಸತ್ಯವಿಲ್ಲ. ವಿಷ್ಣುವಿಗಿಂತಲೂ ಉತ್ತಮ ಜಪವಿಲ್ಲ. ವಿಷ್ಣುವಿಗಿಂತಲೂ ಉತ್ತಮ ಧ್ಯಾನವಿಲ್ಲ. ವಿಷ್ಣುವಿಗಿಂತಲೂ ಉತ್ತಮ ಗತಿಯಿಲ್ಲ.

೩೧೪. ವಿಷ್ಣುವಿಗಿಂತಲೂ ಉತ್ತಮವಾದ ಜಾಗವಿಲ್ಲ. ವಿಷ್ಣುವಿಗಿಂತಲೂ ಉತ್ತಮ ತಪಸ್ಸಿಲ್ಲ. ವಿಷ್ಣುವಿಗಿಂತಲೂ ಉತ್ತಮ ಧರ್ಮವಿಲ್ಲ. ವಿಷ್ಣುವಿಲ್ಲದ ಮಂತ್ರವಿಲ್ಲ.

೩೧೫. ಯಾವನು ಜನಾರ್ದನನಲ್ಲಿ ಭಕ್ತಿಯನ್ನಿಟ್ಟುಕೊಳ್ಳುತ್ತಾನೆಯೋ ಅವನಿಗೆ ಮಂತ್ರಗಳಿಂದಾಗಲೀ ಬಹುವಾದ ಶಾಸ್ತ್ರಗಳಿಂದಾಗಲಿ, ಸಾವಿರಾರು ವಾಜಪೇಯಯಾಗಗಳಿಂದಾಗಲೀ ಪ್ರಯೋಜನವಿಲ್ಲ. ವಿಷ್ಣುಭಕ್ತಿಯು ಅವೆಲ್ಲದಕ್ಕಿಂತಲೂ ಹೆಚ್ಚು ಫಲವನ್ನು ಕೊಡುತ್ತದೆ.

೩೧೬. ವಿಷ್ಣುವೇ ಸರ್ವತೀರ್ಥ ಸ್ವರೂಪನು. ಅವನೇ ಸರ್ವಶಾಸ್ತ್ರಮಯನು. ಪ್ರಭುವು. ಎಲ್ಲಾ ಯಾಗಗಳ ಸ್ವರೂಪನು. ಇದು ಸತ್ಯವು. ಖಂಡಿತವಾಗಿ ಸತ್ಯವು. ಬ್ರಹ್ಮಪರ್ಯಂತವಾಗಿರುವ ಸರ್ವಸಾರವನ್ನು ನಿನಗೆ ನಾನು ಹೇಳಿದ್ದೇನೆ.

|| ಪಾರ್ವತ್ಯುವಾಚ ||

ಧನ್ಯಾಸ್ಮ್ಯನುಗೃಹೀತಾಸ್ಮಿ ಕೃತಾರ್ಥಾಸ್ಮಿ ಜಗತ್ಪತೇ |
ಯನ್ಮಯೇದಂ ಶ್ರುತಂ ಸ್ತೋತ್ರಂ ತ್ವದ್ರಹಸ್ಯಂ ಸುದುರ್ಲಭಂ || ೩೧೭ ||

ಅಹೋ ಬತ ಮಹತ್ಕಷ್ಟಂ ಸಮಸ್ತಸುಖದೇ ಹರೌ |
ವಿದ್ಯಮಾನೇಪಿ ದೇವೇಶ ಮೂಢಾಃ ಕ್ಲಿಶ್ಯಂತಿ ಸಂಸ್ಕೃತೌ || ೩೧೮ ||

ಯಮುದ್ದಿಶ್ಯ ಸದಾ ನಾಥೋ ಮಹೇಶೋಪಿ ದಿಗಂಬರಃ |
ಜಟಿಲೋ ಭಸ್ಮಲಿಪ್ತಾಂಗೋ ತಪಸ್ವೀ ವೀಕ್ಷ್ಯತೇ ಜನೈಃ || ೩೧೯ ||

ತತೋಧಿಕೋಸ್ತಿ ಕೋ ದೇವೋ ಲಕ್ಷ್ಮೀಕಾನ್ತಾನ್ಮಧುದ್ವಿಷಃ |
ಯತ್ತಸ್ತ್ವಂ ಚಿಂತ್ಯತೇ ನಿತ್ಯಂ ತ್ವಯಾ ಯೋಗೇಶ್ವರೇಣ ಹಿ || ೩೨೦ ||

ತತಃ ಪರಂ ಕಿಮಧಿಕಂ ಪದಂ ಶ್ರೀಪುರುಷೋತ್ತಮಾತ್ |
ತಮವಿಜ್ಞಾಯ ಕಂ ಮೂಢಾ ಯಜಂತೇ ಜ್ಞಾನಮಾನಿನಃ || ೩೨೧ ||

---

೩೧೭. ಪಾರ್ವತಿಯು ಹೇಳಿದಳು–ಎಲೈ ಜಗತ್ಪತಿಯೇ! ಧನ್ಯಳಾದೆನು. ಕೃತಾರ್ಥಳಾದೆನು. ನೀನು ಅನುಗ್ರಹವನ್ನು ಮಾಡಿದೆ. ನೀನು ನಿನ್ನ ರಹಸ್ಯವಾದ ಈ ಸಹಸ್ರನಾಮವನ್ನು ಹೇಳಿದ್ದೀಯೆ.

೩೧೮. ಅಯ್ಯೋ! ಬಹು ಕಷ್ಟವು. ಸಮಸ್ತ ಸುಖವನ್ನು ಕೊಡುವ ಹರಿಯು ಇರುವಾಗ ಮೂಢರಾದವರು ಸಂಸಾರದಲ್ಲಿ ಕ್ಲೇಶಹೊಂದುತ್ತಾರಲ್ಲ!

೩೧೯. ಮಹೇಶ್ವರನೂ ಕೂಡ ದಿಂಗಬರನೂ ಜಟೆಯುಳ್ಳವನೂ ಬೂದಿಯನ್ನು ಬಳಿದುಕೊಂಡವನೂ ಆಗಿ ಕೃಷ್ಣನನ್ನು ಕುರಿತು ತಪಸ್ಸು ಮಾಡುತ್ತಿರುವುದನ್ನು ನೋಡುತ್ತಿದ್ದಾರೆ.

೩೨೦. ಲಕ್ಷ್ಮೀಕಾಂತನೂ ಮಧುಧ್ವಿಷನೂ ಆದ ಆ ದೇವರಿಗಿಂತಲೂ ಅಧಿಕನು ಬೇರೆಯಿಲ್ಲ. ಯಾಕೆಂದರೆ ಯೋಗೀಶ್ವರನಾದ ನೀನೂ ಕೂಡ ಆತನನ್ನೇ ಧ್ಯಾನಿಸುತ್ತಿರುವೆಯಲ್ಲಾ!

೩೨೧. ಆ ಪುರುಷೋತ್ತಮನ ಸ್ಥಾನಕ್ಕಿಂತಲೂ ಹೆಚ್ಚಿನದು ಮತ್ತೊಂದು ಯಾವದಿರುವುದು? ಅವನನ್ನು ತಿಳಿಯದೆ ಮೂಢರಾದವರು ಜ್ಞಾನಿಯೆಂದು ತಿಳಿದುಕೊಂಡು ಅನೇಕರ ಪೂಜಾದಿಗಳನ್ನು ಮಾಡುತ್ತಿರುವರು.

ಮುಷಿತಾಸ್ಮಿ ತ್ವಯಾ ನಾಥ ಚಿರಂ ಯದಯಮೀಶ್ವರಃ ।
ಪ್ರಕಾಶಿತೋ ನ ಮೇ ಯಸ್ಮಾತ್ ತ್ವದಾದ್ಯಾ ದಿವ್ಯಶಕ್ತಯಃ ॥ ೩೨೨ ॥

ಅಹೋ ಸರ್ವೇಶ್ವರೋ ವಿಷ್ಣುಃ ಸರ್ವದೇವೋತ್ತಮೋತ್ತಮಃ ।
ಭವದಾದಿಗುರುರ್ಮೂಢೈಃ ಸಾಮಾನ್ಯ ಇವ ವೀಕ್ಷ್ಯತೇ ॥ ೩೨೩ ॥

ಮಹೀಯಸಾಂತು ಮಾಹಾತ್ಮ್ಯಂ ಭಜಮಾನಾನ್ಭಜಂತಿ ತೇ. ।
ದ್ವಿಷತೋಽಪಿ ವೃಥಾ ಪಾಪಾತ್ ನೋಪೇಕ್ಷಂತೇ ಕ್ಷಮಾನ್ವಿತಾಃ ॥ ೩೨೪ ॥

ಮಯಾಪಿ ಬಾಲ್ಯೇ ಸ್ವಪಿತುಃ ಪ್ರಜಾ ದೃಷ್ಟ್ವಾ ಬುಭುಕ್ಷಿತಾ ।
ದುಃಖಾದಶಕ್ತಾ ಸಂಪೋಷ್ಟುಂ ಶ್ರೀಯಮಾರಾಧ್ಯ ವೈ ಭೃತಾ ॥ ೩೨೫ ॥

---

೩೨೨. ಎಲೈ ನಾಥನೇ ! ನೀನು ಆ ಸ್ವಾಮಿಯನ್ನೂ ಅವನ ವಿಷಯವನ್ನೂ ನನಗೆ ಹಿಂದೆಯೇ ಪ್ರಕಾಶಪಡಿಸದೆ ಹೋದುದರಿಂದ ನಾನು ವಂಚಿತಳಾಗಿದ್ದೇನೆ.

೩೨೩. ಸರ್ವೇಶ್ವರನೂ ಸರ್ವದೇವೋತ್ತಮನೂ ನಿನಗೆ ಆದಿಗುರುವೂ ಆದ ವಿಷ್ಣುವನ್ನು ಜನರು ಸಾಮಾನ್ಯರಂತೆ ನೋಡುತ್ತಾರೆ. ಅದು ಆಶ್ಚರ್ಯವಾದುದು.

೩೨೪. ಮಹಿಮರ ಮಹಿಮೆಯು ಭಜಿಸುವವರ ಹಿಂದೆಯೇ ಇರುತ್ತದೆ. (ಸ್ತೋತ್ರಮಾಡುವವವನ್ನು ಹೊಂದುತ್ತದೆ.) ಆ ಮಹಿಮರು ಕ್ಷಮಾವಂತರಾಗಿ ಶತ್ರುಗಳ ಪಾಪಗಳನ್ನು ಕೂಡ ಉದಾಸೀನಮಾಡದೆ ನಾಶಮಾಡುತ್ತಾರೆ.

೩೨೫. ನಾನೂ ಕೂಡ ಬಾಲ್ಯದಲ್ಲಿ ನನ್ನ ತಂದೆಯ ಪ್ರಜೆಗಳು ಕಷ್ಟವುದಿಂದ ತೊಂದರೆಪಡುತ್ತಿದ್ದು ಆತನಿಂದ ಕಾಪಾಡಲಾಗದೆ ಹೋದುದನ್ನು ನೋಡಿದೆನು. ಲಕ್ಷ್ಮಿಯನ್ನೂ ಅನಂತರ ಆರಾಧಿಸಿದುದರಿಂದ ಅವರನ್ನು ಕಾಪಾಡಿದುದನ್ನೂ ನೋಡಿದ್ದೇನೆ.

ತಯಾ ಸನ್ನಿಹಿತಾಭ್ಯಶ್ಚ ಪ್ರಜಾಭ್ಯೋ ಭವದಾದಯಃ ।
ವಿಲಸಂತಿ ಸಶಕ್ರಾದ್ಯಾಃ ಸಸುಹೃನ್ಮಿತ್ರಬಾಂಧವಾಃ || ೩೨೬ ||

ತಯಾ ವಿನಾ ಕ್ವ ದೇವತ್ವಂ ಕ್ವೈಶ್ವರ್ಯಂ ಕ್ವ ಪರಿಗ್ರಹಃ ।
ಸರ್ವೇ ಭವಂತಿ ಜೀವಂತೋ ಯಾತನಾಸ್ವಿವ ಸಂಸ್ಥಿತಾಃ || ೩೨೭ ||

ತಾಮೃತೇ ನೈವ ಧರ್ಮೋಽರ್ಥಃ ಕಾಮೋ ಮೋಕ್ಷೋಽಪಿ ದೂರತಃ ।
ಕ್ಷುಧಿತಾನಾಂ ದುರ್ಗತಾನಾಂ ಕುತೋ ಯೋಗಸಮಾಧಯಃ || ೩೨೮ ||

ಸ ಚ ಸಂಸಾರಸಾರೈಕಃ ಸರ್ವಲೋಕೈಕನಾಯಕಃ ।
ವಶಗಾ ಕಮಲಾ ಯಸ್ಯ ತ್ಯಕ್ತ್ವಾ ತ್ವಾಮಪಿ ಶಂಕರ || ೩೨೯ ||

---

೩೨೬. ಆಗ ಆ ಲಕ್ಷ್ಮಿಯು ಜೊತೆಯಲ್ಲಿ ನೀವೂ ದೇವತೆಗಳೂ ಎಲ್ಲರೂ ಪ್ರಜೆಗಳಿಗೆ ಪ್ರತ್ಯಕ್ಷರಾದಿರಿ. ಜನಗಳಲ್ಲಿ ಸಂಪತ್ತಿದ್ದರೆ ನೀವುಗಳು ಅದರಲ್ಲಿ ಪ್ರಕಾಶಿಸುತ್ತೀರಿ. ಅಲ್ಲದೆ ಮಿಕ್ಕದೇವತೆಗಳೂ ಬಂಧುಮಿತ್ರರೂ ಪ್ರಕಾಶಿಸುತ್ತಾರೆ.

೩೨೭. ಆ ಲಕ್ಷ್ಮಿಯು ಇಲ್ಲದಿದ್ದರೆ ದೇವತ್ವವೆಲ್ಲಿ ಬಂದೀತು ? ಐಶ್ವರ್ಯವೆಲ್ಲಿ ಬರುತ್ತದೆ ? ಸಂಸಾರವೆಲ್ಲಿ ಬರುವುದು ? ಆಗ ಎಲ್ಲರೂ ಕಷ್ಟ ಜೀವನದಲ್ಲಿಯೇ ಇರುವರು. ದುಃಖದಲ್ಲಿ ಸಿಕ್ಕಿಕೊಂಡಂತೆ ಬಿದ್ದಿರುವರು.

೩೨೮. ಆಕೆಯನ್ನು ಬಿಟ್ಟರೆ ಧರ್ಮವಾಗಲೀ ಅರ್ಥವಾಗಲೀ ಕಾಮವಾಗಲೀ ಮೋಕ್ಷವಾಗಲೀ ಎಲ್ಲಿಂದ ಬರುತ್ತದೆ ? ಹಸಿವುಗೊಂಡವರಿಗೆ ಬಡವರಿಗೆ ದುಃಖಿತರಿಗೆ ಯೋಗವೂ ಸಮಾಧಿಯೂ ಸಾಧಿತವಾಗುವುದು ಹೇಗೆ ?

೩೨೯. ಎಲೈ ಶಂಕರನೇ ! ನಿನ್ನನ್ನು ಸ್ಮರಿಸದಿದ್ದರೂ ಚಿಂತೆಯಿಲ್ಲ. ಆ ಲಕ್ಷ್ಮಿಯು ಯಾರಿಗೆ ವಶಳಾಗಿದ್ದಾಳೆಯೋ ಅವನೇ ಸಂಸಾರದಲ್ಲಿ ಸಾರಭೂತನು. ಅವನೇ ಸರ್ವಲೋಕಕ್ಕೂ ನಾಯಕನು.

ಅನೌದ್ಧತ್ಯೇನ ಶೌರ್ಯೇಣ ರೂಪೇಣಾರ್ಜವಸಂಪದಾ ।
ಸರ್ವಾತಿಶಾಯಿವೀರ್ಯೇಣ ಸಂಪೂರ್ಣಸ್ಯ ಮಹಾತ್ಮನಃ ॥ ೩೩೦ ॥

ಕಸ್ತೇನ ತುಲ್ಯತಾಮೇತಿ ದೇವದೇವೇನ ವಿಷ್ಣುನಾ ।
ಯಸ್ಯಾಂಶಾಂಶಾವತಾರೇಣ ವಿನಾ ಸರ್ವಂ ವಿಲೀಯತೇ ॥ ೩೩೧ ॥

ಜಗದೇತತ್ತಥಾಪ್ಯಾಹುಃ ದೋಷಾಯ್ಯೈತದ್ವಿಮೋಹಿತಾಃ ।
ನಾಸ್ಯ ಜನ್ಮ ನ ವಾ ಮೃತ್ಯುಃ ನಾಪ್ರಾಪ್ಯಂ ಸ್ವಾರ್ಥಮೇವ ಚ ॥ ೩೩೨ ॥

ಕಾಮಾದ್ಯಾಸಕ್ತಚಿತ್ತತ್ವಾತ್ ಕಿಂ ತು ಸರ್ವೇಶ್ವರ ಪ್ರಭೋ ।
ತ್ವನ್ಮಯತ್ವಾತ್ಪ್ರಮಾದಾದ್ವಾ ಶಕ್ನೋಮಿ ಪಠಿತುಂ ನ ಚೇತ್ ॥ ೩೩೩ ॥

ವಿಷ್ಣೋಸ್ಸಹಸ್ರನಾಮ್ನೈತತ್ಪ್ರತ್ಯಹಂ ವೃಷಭಧ್ವಜ ।
ನಾಮ್ನೈಕೇನ ತು ಯೇನ ಸ್ಯಾತ್ ತತ್ಫಲಂ ಬ್ರೂಹಿ ಮೇ ಪ್ರಭೋ ॥೩೩೪॥

---

೩೩೦-೩೩೧. ಉದ್ಧತನವಿಲ್ಲದ ಪರಾಕ್ರಮ ಸೌಂದರ್ಯ ಸಂಪತ್ತು ಹೆಚ್ಚಾದ ದೇಹಶಕ್ತಿ ಇವುಗಳುಳ್ಳ ಆ ವಿಷ್ಣುವಿಗೆ ಸಮರು ಯಾರು ಆಗುತ್ತಾರೆ? ಅವನ ಅಂಶವಿಲ್ಲದಿದ್ದರೆ ಎಲ್ಲವೂ ನಾಶವಾಗುತ್ತವೆ.

೩೩೨ ಈ ವಿಷ್ಣುವಿಗೆ ಹುಟ್ಟು ಸಾವುಗಳಿಲ್ಲ. ಅವನು ಹೊಂದಬೇಕಾದ ವಿಷಯವಿಲ್ಲ. ಸ್ವಾರ್ಥವೆಂಬುದು ಇಲ್ಲವೇ ಇಲ್ಲ. ಆದರೂ ಕೂಡ ಈ ಪ್ರಪಂಚವು ಮಾಯೆಯಿಂದ ಕೂಡಿಕೊಂಡು ಅವನಲ್ಲಿ ದೋಷವನ್ನೇ ಹೇಳುತ್ತದೆ.

೩೩೩. ಎಲೈ ಸರ್ವೇಶ್ವರನಾದ ಸ್ವಾಮಿಯೇ! ಕಾಮಸುಖಗಳಲ್ಲಿ ಮನಸ್ಸು ಸೇರುವುದರಿಂದಲೋ ನಾನು ಯಾವಾಗಲೂ ನಿನ್ನನ್ನೇ ಸ್ಮರಿಸುತ್ತಿರುವುದರಿಂದಲೋ ಅಜಾಗರೂಕತೆಯಿಂದಲೋ ಒಂದುವೇಳೆ ಈ ಸಹಸ್ರನಾಮವನ್ನು ಹೇಳಲು ಆಗದಿದ್ದರೂ ಆಗದಿರಬಹುದು.

೩೩೪. ಹಾಗೆ ಪ್ರತಿದಿನವೂ ಈ ವಿಷ್ಣುಸಹಸ್ರನಾಮವನ್ನು ಹೇಳಲಾಗದಿದ್ದರೆ ಯಾವುದಾದರೂ ಒಂದು ನಾಮವನ್ನು ಜಪಿಸಿದರೆ ಮಾತ್ರ ಆ ಸಮಸ್ತ ಫಲವೂ ಬರುವ ಒಂದು ನಾಮವನ್ನು ಹೇಳು.

|| ಮಹಾದೇವ ಉವಾಚ ||

ರಾಮ ರಾಮೇತಿ ರಾಮೇತಿ ರಮೇ ರಾಮೇ ಮನೋರಮೇ ।
ಸಹಸ್ರನಾಮ ತತ್ತುಲ್ಯಂ ರಾಮನಾಮ ವರಾನನೇ || ೩೩೫ ||

ಇತಿ ಶ್ರೀ ಮಹಾಪುರಾಣೇ ಪಾದ್ಮೇ ಉತ್ತರಖಂಡೇ ಪಾರ್ವತೀ ಮಹಾದೇವ ಸಂವಾದೇ ವಿಷ್ಣೋರ್ನಾಮಸಹಸ್ರಂ ನಾಮ ದ್ವಿಸಪ್ತತಿತಮೋಽಧ್ಯಾಯಸ್ಸಮಾಪ್ತಃ

---

೩೩೫. ಮಹಾದೇವನು ಹೇಳಿದನು-ಎಲೈ ಶ್ರೇಷ್ಠಳಾದ ಪಾರ್ವತಿಯೇ! ಮನೋಹರವಾದ ರಾಮ ರಾಮ ಎಂಬ ನಾಮದಲ್ಲಿ ಮನಸ್ಸನ್ನು ರಮಿಸುತ್ತೇನೆ. ಆ ನಾಮವು ಸಹಸ್ರನಾಮಗಳಿಗೆ ಸಮವಾಗುವುದು. ರಾಮ ರಾಮ ಎಂಬುದು ಅಷ್ಟು ಶ್ರೇಷ್ಠವಾದುದು.

ಇಂತು ಶ್ರೀ ಪದ್ಮಮಹಾಪುರಾಣದ ಉತ್ತರಖಂಡದ ಪಾರ್ವತೀ ಮಹಾದೇವರ ಸಂವಾದದಲ್ಲಿ ವಿಷ್ಣುವಿನ ಸಹಸ್ರನಾಮ ಎಂಬ ಎಪ್ಪತ್ತೆರಡನೆಯ ಅಧ್ಯಾಯವು ಮುಗಿದುದು.



॥ ಶ್ರೀಃ ॥

-X-

## ಅಥ ಶ್ರೀ ಮಹಾಪುರಾಣೇ ಪಾದ್ಮೇ ಉತ್ತರಖಂಡೇ

### ॥ ಏಕಸಪ್ತತಿತಮೋಽಧ್ಯಾಯಃ ॥



॥ ಮಹಾದೇವ ಉವಾಚ ॥

ಬ್ರಾಹ್ಮಣಾ ವಾ ಕ್ಷತ್ರಿಯಾ ವಾ ವೈಶ್ಯಾ ವಾ ಗಿರಿಕನ್ಯಕೇ ।
ಶೂದ್ರಾ ವಾಥ ವಿಶೇಷೇಣ ಪಠಂತ್ಯನುದಿನಂ ಯದಿ ॥ ೧ ॥

ಧನಧಾನ್ಯಸಮಾಯುಕ್ತಾ ಯಾಂತಿ ವಿಷ್ಣೋಃ ಪರಂ ಪದಂ ।
ಶ್ಲೋಕಂ ವಾ ಶ್ಲೋಕಮರ್ಧಂ ವಾ ಪಾದಂ ವಾ ಅರ್ಧಮೇವ ಚ ॥ ೨ ॥

ಪಠನಾನ್ಮೋಕ್ಷಮಾಪ್ನೋತಿ ಯಾವದಾಭೂತಸಂಪ್ಲವಂ ।
ವಿನ್ಯಾಸೇನ ಯುತಂ ದೇವಿ ವಿಷ್ಣೋರ್ನಾಮಸಹಸ್ರಕಂ ॥ ೩ ॥

---

### ಎಪ್ಪತ್ತಮೂರನೆಯ ಅಧ್ಯಾಯವು



೧–೨. ಮಹಾದೇವನು ಹೇಳಿದನು–ಬ್ರಾಹ್ಮಣರಾಗಲೀ ಕ್ಷತ್ರಿಯರಾಗಲೀ ವೈಶ್ಯರಾಗಲೀ ಶೂದ್ರರೇ ಆಗಲಿ ಪ್ರತಿದಿನವೂ ಪಠಿಸಿದರೆ ಧನ ಧಾನ್ಯಗಳನ್ನು ಹೊಂದಿ ವಿಷ್ಣುಪದವನ್ನು ಹೊಂದುತ್ತಾರೆ. ಶ್ಲೋಕವನ್ನಾಗಲೀ ಅರ್ಧ ಶ್ಲೋಕವನ್ನಾಗಲೀ ಪಾದವನ್ನಾಗಲೀ ಪಾದದ ಅರ್ಧವನ್ನಾಗಲೀ ಓದುದರಿಂದ ಅವನು ಪ್ರಪಂಚವು ನಾಶವಾಗುವವರೆಗೂ ಮೋಕ್ಷವನ್ನು ಹೊಂದುತ್ತಾನೆ.

೩. ಅಂಗ ನ್ಯಾಸ ಕರನ್ಯಾಸಗಳಿಂದ ಕೂಡಿದ ವಿಷ್ಣುಸಹಸ್ರನಾಮವನ್ನು ಯಾವ ಮನುಷ್ಯನು ಓದುತ್ತಾನೆಯೋ ಅಥವಾ ಹೇಳುತ್ತಾನೆಯೋ ಅವನು ಉತ್ತಮಗತಿಯನ್ನು ಹೊಂದುತ್ತಾನೆ.

ಯೇ ಪಠಂತಿ ನರಶ್ರೇಷ್ಠಾಸ್ತೇ ಯಾಂತಿ ಪದಮವ್ಯಯಂ ।
ಏಕಕಾಲಂ ದ್ವಿಕಾಲಂ ವಾ ತ್ರಿಕಾಲಂ ವಾಥ ಯಃ ಪಠೇತ್ ॥ ೪ ॥

ಧನಾಯುರ್ವರ್ಧತೇ ತಸ್ಯ ಯಾವದಿಂದ್ರಾಶ್ಚತುರ್ದಶ ।
ಪುತ್ರಾನ್ಪೌತ್ರಾಂಸ್ತಥಾ ಲಕ್ಷ್ಮೀಂ ಸಂಪದಂ ವಿಪುಲಾಂ ಲಭೇತ್ ॥ ೫ ॥

ಕಿಮನ್ಯದ್ಬಹುನೋಕ್ತೇನ ಭೂಯೋ ಭೂಯೋ ವರಾನನೇ ।
ವಿಷ್ಣೋರ್ನಾಮಸಹಸ್ರಂ ತು ಪದಂ ನಿರ್ವಾಣದಾಯಕಂ ॥ ೬ ॥

ಲಿಖಿತ್ವಾ ಪುಸ್ತಕಾ ಯೇನ ಸ್ಥಾಪಿತಾ ದೇವಸದ್ಮನಿ ।
ಪೂಜಿತಾ ಸ್ವಾಪದಾ ದೇವಿ ಪುತ್ರಪೌತ್ರಾರ್ಥದಾಯಕಂ ॥ ೭ ॥

ಪೂಜನಂ ಪ್ರಥಮಂ ತಸ್ಯಾ ಕೃತಂ ಯೇನ ನರೇಣ ತು ।
ಸಂಪೂರ್ಣಃ ಪೂಜಿತೋ ವಿಷ್ಣುರ್ಭವೇತ್ಪೂಜಾ ಚ ವಾರ್ಷಿಕೀ ॥ ೮ ॥

---

೪–೫. ಒಪ್ಪತ್ತು ಎರಡುಹೊತ್ತು ಮೂರು ಹೊತ್ತುಗಳಲ್ಲಿಯೂ ದಿನವೂ ಯಾವನು ಇದನ್ನು ಹೇಳುತ್ತಾನೆಯೋ ಅವನಿಗೆ ಧನ ಆಯಸ್ಸು ಇವುಗಳು ಹದಿನಾಲ್ಕುಜನ ಇಂದ್ರರಿರುವವರೆಗೂ ಲಭಿಸುತ್ತವೆ. ಅಲ್ಲದೆ ಮಕ್ಕಳು ಮೊಮ್ಮಕ್ಕಳು ಐಶ್ವರ್ಯ ತೇಜಸ್ಸು ಇವುಗಳನ್ನೂ ಹೊಂದುತ್ತಾರೆ.

೬. ಎಲೈ ಪಾರ್ವತಿಯೇ ! ಬಹಳ ಹೇಳುವುದರಿಂದ ಪ್ರಯೋಜನವೇನು ? ವಿಷ್ಣುವಿನ ಸಹಸ್ರನಾಮವು ಉತ್ತಮವಾದ ಮೋಕ್ಷವನ್ನು ಕೊಡುತ್ತದೆ.

೭. ಪುರಾಣದ ಪುಸ್ತಕಗಳನ್ನು ಬರೆದು ದೇವರಮನೆಯಲ್ಲಿಟ್ಟು ಅದನ್ನು ಪೂಜಿಸಿದರೆ ಆ ಪುರಾಣದೇವಿಯು ತನ್ನ ಜಾಗವನ್ನು ಕೊಡುವುದಲ್ಲದೆ ಪುತ್ರರು ಪೌತ್ರರನ್ನೂ ಕೊಡುತ್ತಾಳೆ.

೮. ಯಾವನು ಆ ಪುಸ್ತಕವನ್ನು ಮೊದಲು ಪೂಜಿಸುತ್ತಾನೆಯೋ ಅವನು ವಿಷ್ಣುವನ್ನು ಪೂಜಿಸಿದಂತೆ ಆಗುತ್ತದೆ. ಮತ್ತು ವರ್ಷಕಾಲ ಎಡೆಬಿಡದೆ ಪೂಜೆಮಾಡಿದ ಪುಣ್ಯವು ಬರುತ್ತದೆ.

ವ್ಯಗ್ರತ್ವಂ ಚ ನ ಕರ್ತವ್ಯಂ ಪಠನೇ ತು ವಿಶೇಷತಃ ।
ಯದಿ ಚೇತ್ಕ್ರಿಯತೇ ಪಾಠೇ ಹ್ಯಾಯುರ್ವಿತ್ತಂ ಚ ನಶ್ಯತಿ ॥ ೯ ॥

ಯಾವನ್ತಿ ಭುವಿ ತೀರ್ಥಾನಿ ಜಂಬೂದ್ವೀಪೇಷು ಸರ್ವದಾ ।
ತಾನಿ ತೀರ್ಥಾನಿ ತತ್ರೈವ ವಿಷ್ಣೋರ್ನಾಮಸಹಸ್ರಕಂ ॥ ೧೦ ॥

ತತ್ರೈವ ಗಂಗಾ ಯಮುನಾ ಚ ವೇಣೀ ಗೋದಾವರೀ ತತ್ರ ಸರಸ್ವತೀ ಚ ।
ಸರ್ವಾಣಿ ತೀರ್ಥಾನಿ ವಸಂತಿ ತತ್ರ ಯತ್ರ ಸ್ಥಿತಂ ನಾಮಸಹಸ್ರಕಂ ತತ್ ॥

ಇದಂ ಪವಿತ್ರಂ ಪರಮಂ ಭಕ್ತಾನಾಂ ವಲ್ಲಭಂ ಸದಾ ।
ಧ್ಯೇಯಂ ಹಿ ದಾಸ್ಯಭಾವೇನ ಭಕ್ತಿಭಾವೇನ ಚೇತಸಾ ॥ ೧೨ ॥

ಪರಂ ಸಹಸ್ರನಾಮಾಖ್ಯಂ ಯೇ ಪಠಂತಿ ಮನೀಷಿಣಃ ।
ಸರ್ವಪಾಪವಿನಿರ್ಮುಕ್ತಾಸ್ತೇ ಯಾಂತಿ ಹರಿಸನ್ನಿಧೌ ॥ ೧೩ ॥

---

೯. ಇದನ್ನು ಓದುವಾಗ ಅವಸರ ಪಡಕೂಡದು. ಹಾಗೆ ಅವಸರ ಪಟ್ಟರೆ ಆಯಸ್ಸೂ ಧನವೂ ನಾಶವಾಗುತ್ತವೆ.

೧೦. ಎಲ್ಲಿ ನಾವು ವಿಷ್ಣುಸಹಸ್ರನಾಮವನ್ನು ಪಠಿಸುತ್ತೇವೆಯೋ ಅಲ್ಲಿಯೇ ಜಂಬೂ ದ್ವೀಪದಲ್ಲಿರುವ ತೀರ್ಥಗಳೆಲ್ಲವೂ ಇರುತ್ತವೆ.

೧೧. ಈ ವಿಷ್ಣುವಿನ ಸಹಸ್ರನಾಮವನ್ನು ಪಠನಮಾಡುವಲ್ಲಿಯೇ ಗಂಗೆ ಯಮುನೇ ವೇಣೀ ಗೋದಾವರೀ ಸರಸ್ವತೀ ನದಿಗಳೂ ಸಕಲ ತೀರ್ಥಗಳೂ ಇರುತ್ತವೆ.

೧೨. ಇದು ಪವಿತ್ರವಾದುದು. ಭಕ್ತರಿಗೆ ಅತ್ಯಂತ ಪ್ರಿಯವಾದುದು. ದಾಸ್ಯ ಭಾವದಿಂದಲೂ ಭಕ್ತಿ ಭಾವದಿಂದಲೂ ಕೂಡಿರುವ ಮನಸ್ಸಿನಿಂದ ಇದನ್ನು ಧ್ಯಾನ ಮಾಡಬೇಕು.

೧೩. ಜ್ಞಾನಿಗಳಾದವರು ಯಾರು ಈ ಸಹಸ್ರನಾಮವನ್ನು ಪಠಿಸುತ್ತಾರೆಯೋ ಅವರು ಪಾಪಗಳಿಂದ ಮುಕ್ತರಾಗಿ ಮುಕ್ತಿಯನ್ನು ಹೊಂದಿ ಹರಿಯ ಸನ್ನಿಧಿಗೆ ಹೋಗುತ್ತಾರೆ.

ಅರುಣೋದಯಕಾಲೇ ತು ಯೇ ಪಠಂತಿ ಜಪಂತಿ ಚ ।
ಆಯುರ್ಬಲಂ ಚ ತೇಷಾಂ ಶ್ರೀರ್ವರ್ಧತೇ ಚ ದಿನೇ ದಿನೇ ॥ ೧೪ ॥

ರಾತ್ರೌ ಜಾಗರಣೇ ಪ್ರಾಪ್ತೇ ಕಲೌ ಭಾಗವತೋ ನರಃ ।
ಪಠನಾನ್ಮುಕ್ತಿಮಾಪ್ನೋತಿ ಯಾವದಿಂದ್ರಾಶ್ಚತುರ್ದಶಃ ॥ ೧೫ ॥

ಏಕೈಕೇನ ತು ನಾಮ್ನಾ ವೈ ಹರೌ ತುಳಸಿಕಾರ್ಪಣಾತ್ ।
ಪೂಜಾ ಸಾ ಚೈವ ವಿಜ್ಞೇಯಾ ಕೋಟಿಯಜ್ಞಫಲಾಧಿಕಾ ॥ ೧೬ ॥

ಮಾರ್ಗೇ ವಾ ಗಚ್ಛಮಾನಾಸ್ತು ಯೇ ಪಠಂತಿ ದ್ವಿಜಾತಯಃ ।
ನ ದೋಷಮಾರ್ಗಜಾಸ್ತೇಷಾಂ ಭವಂತಿ ಕಿಲ ಪಾರ್ವತಿ ॥ ೧೭ ॥

---

೧೪ ಅರುಣೋದಯಕಾಲದಲ್ಲಿ ಈ ಸಹಸ್ರನಾಮವನ್ನು ಯಾರು ಓದುತ್ತಾರೆಯೋ ಅಥವಾ ಜಪಿಸುತ್ತಾರೆಯೋ ಅವರಿಗೆ ಆಯುಸ್ಸೂ ಬಲವೂ ಸಂಪತ್ತೂ ದಿನದಿನಕ್ಕೂ ಹೆಚ್ಚುತ್ತವೆ.

೧೫. ರಾತ್ರಿಯಲ್ಲಿ ಜಾಗರಣೆಯು ಪ್ರಾಪ್ತವಾದ ದಿನಗಳಲ್ಲಿ ಭಗವದ್ಭಕ್ತಿಯುಳ್ಳವನು ಇದನ್ನು ಓದುವುದರಿಂದ ಹದಿನಾಲ್ಕು ಜನ ಇಂದ್ರರು ಇರುವವರೆಗೂ ಮುಕ್ತಿಯನ್ನು ಹೊಂದುತ್ತಾನೆ.

೧೬. ಈ ಸಹಸ್ರನಾಮವನ್ನು ಹೇಳುತ್ತಾ ಒಂದೊಂದು ನಾಮವನ್ನು ಹೇಳುತ್ತಾ ಅದಕ್ಕೊಂದೊಂದು ತುಳಸಿಯನ್ನು ತೆಗೆದುಕೊಂಡು ಹರಿಗೆ ಪೂಜೆ ಮಾಡಿದರೆ ಕೋಟಿ ಯಜ್ಞದ ಫಲಕ್ಕಿಂತಲೂ ಹೆಚ್ಚು ಫಲವು ಬರುತ್ತದೆ.

೧೭. ದಾರಿಯಲ್ಲಿ ಹೋಗುತ್ತಾ ಈ ಸಹಸ್ರನಾಮವನ್ನು ಹೇಳಿದರೆ ಅವರಿಗೆ ದಾರಿಯಲ್ಲಿ ಉಂಟಾಗುವ ಮಡಿಯನ್ನು ನಾಶಮಾಡುವುದೇ ಮುಂತಾದ ದೋಷಗಳು ಬರುವುದಿಲ್ಲ.

ಶೃಣು ದೇವಿ ಪ್ರವಕ್ಷ್ಯಾಮಿ ಮಾಹಾತ್ಮ್ಯಂ ಕೇಶವಸ್ಯ ತು
ಯೇ ಶೃಣ್ವಂತಿ ನರಶ್ರೇಷ್ಠಾಸ್ತೇ ಪುಣ್ಯಾಃ ಪುಣ್ಯರೂಪಿಣಃ ॥ ೧೮ ॥

ಇತಿ ಶ್ರೀ ಮಹಾಪುರಾಣೇ ಪಾದ್ಮೇ ಉತ್ತರಖಂಡೇ ಪಾರ್ವತೀ
ಮಹಾದೇವ ಸಂವಾದೇ ಸಹಸ್ರನಾಮ ಮಹಿಮಾ ನಾಮ
ತ್ರಿಸಪ್ತತಿತಮೋಽಧ್ಯಾಯಸ್ಸಮಾಪ್ತಃ

---

೧೮. ಎಲೈ ಪಾರ್ವತಿಯೇ! ಕೇಶವನ ಮಹಿಮೆಯನ್ನು ಹೇಳುತ್ತೇನೆ. ಕೇಳು. ಅದನ್ನು ಕೇಳಿದರೆ ಪುಣ್ಯ ಬರುವುದಲ್ಲದೆ ಅವರೇ ಪುಣ್ಯದ ರೂಪರಾದವರೆಂದು ತಿಳಿ.

ಇಂತು ಶ್ರೀ ಪದ್ಮಮಹಾಪುರಾಣದ ಉತ್ತರಖಂಡದ ಪಾರ್ವತೀ
ಮಹಾದೇವರ ಸಂವಾದದಲ್ಲಿ ಸಹಸ್ರನಾಮದ ಮಹಿಮೆ ಎಂಬ
ಎಪ್ಪತ್ತಮೂರನೆಯ ಅಧ್ಯಾಯವು ಮುಗಿದುದು.



|| ಶ್ರೀಃ ||

-X-

# ಅಥ ಶ್ರೀ ಮಹಾಪುರಾಣೇ ಪಾದ್ಮೇ ಉತ್ತರಖಂಡೇ

## || ಚತುಸ್ಸಪ್ತತಿತಮೋಽಧ್ಯಾಯಃ ||



|| ಮಹಾದೇವ ಉವಾಚ ||

**ಓಂ ರಾಮರಕ್ಷಾಸ್ತೋತ್ರಮಂತ್ರಸ್ಯ । ವಿಶ್ವಾಮಿತ್ರ ಋಷಿಃ । ಶ್ರೀರಾಮೋ ದೇವತಾ। ಅನುಷ್ಟುಪ್ ಛಂದಃ। ಶ್ರೀ ವಿಷ್ಣುಪ್ರೀತ್ಯರ್ಥೇ ಜಪೇ ವಿನಿಯೋಗಃ||**

**ಅತಸೀಪುಷ್ಪಸಂಕಾಶಂ ಪೀತವಾಸಸಮುಚ್ಯುತಂ ।**
**ಧ್ಯಾತ್ವಾ ವೈ ಪುಂಡರೀಕಾಕ್ಷಂ ಶ್ರೀರಾಮಂ ವಿಷ್ಣುಮವ್ಯಯಂ || ೨ ||**

**ಪಾತು ವೋ ಹೃದಯಂ ರಾಮಃ ಶ್ರೀಕಂಠಃ ಕಂಠಮೇವ ಚ ।**
**ನಾಭಿಂ ಪಾತು ಮಖತ್ರಾತಾ ಕಟಿಂ ಮೇ ವಿಶ್ವರಕ್ಷಕಃ || ೩ ||**

---

## ಎಪ್ಪತ್ತನಾಲ್ಕನೆಯ ಅಧ್ಯಾಯವು



೧ ರಾಮರಕ್ಷೆಯೆಂಬ ಮಂತ್ರಕ್ಕೆ ವಿಶ್ವಾಮಿತ್ರನು ಋಷಿಯು. ರಾಮನು ದೇವತೆಯು. ಅನುಷ್ಟುಪ್ ಎಂಬುದು ಛಂದಸ್ಸು. ಶ್ರೀ ವಿಷ್ಣು ಪ್ರೀತಿಗೋಸ್ಕರವಾಗಿ ಜಪಮಾಡಬೇಕು.

೨. ಕಪ್ಪು ಅಗಸೆಯ ಹೂವಿನ ಮೈಬಣ್ಣವುಳ್ಳ ಹೊಂಬಣ್ಣದ ಬಟ್ಟೆಯನ್ನು ಹಾಕಿಕೊಂಡಿರುವ ಪುಂಡರೀಕದಂತೆ ಕಣ್ಣುಗಳುಳ್ಳ ವಿಷ್ಣುವಾದ ರಾಮನನ್ನು ಧ್ಯಾನಿಸುತ್ತೇನೆ.

೩. ರಾಮನು ನನ್ನ ಹೃದಯವನ್ನೂ, ಶ್ರೀಕಂಠನು ಕತ್ತನ್ನೂ, ಯಜ್ಞ. ವನ್ನು ಕಾಪಾಡಿದವನು ಹೊಕ್ಕಳನ್ನೂ, ವಿಶ್ವರಕ್ಷಕನು ನಡುವನ್ನೂ ಕಾಪಾಡಲಿ

ಕರೌ ಪಾತು ದಾಶರಥಿಃ ಪಾದೌ ಮೇ ವಿಶ್ವಸೂತ್ರಧೃಕ್ ।
ಚಕ್ಷುಷೀ ಪಾತು ವೈ ದೇವಃ ಸೀತಾಪತಿರನುತ್ತಮಃ ॥ ೪ ॥

ಶಿಖಾಂ ಮೇ ಪಾತು ವಿಶ್ವಾತ್ಮಾ ಕರ್ಣೌ ಮೇ ಪಾತು ಕಾಮದಃ ।
ಪಾರ್ಶ್ವಯೋಸ್ತುಸುರತ್ರಾತಾ ಕಾಲಕೋಟಿದುರಾಸದಃ ॥ ೫ ॥

ಅನಂತಸ್ಸರ್ವಪಾ ಪಾತು ಶರೀರಂ ವಿಶ್ವನಾಯಕಃ ।
ಜಿಹ್ವಾಂ ಮೇ ಪಾತು ಪಾಪಘ್ನೋ ಲೋಕಶಿಕ್ಷಾಪ್ರವರ್ತಕಃ ॥ ೬ ॥

ರಾಘವಃ ಪಾತು ಮೇ ದಂತಾನ್ ಕೇಶಾನ್ರಕ್ಷತು ಕೇಶವಃ ।
ಸಕ್ಥಿನೀ ಪಾತು ಮೇ ದತ್ತವಿಜಯೋ ನಾಮ ವಿಶ್ವಸೃಕ್ ॥ ೭ ॥

ಏತಾಂ ರಾಮಬಲೋಪೇತಾಂ ರಕ್ಷಾಂ ಯೋ ವೈ ಪುಮಾನ್ಪಠೇತ್ ।
ಸ ಚಿರಾಯುಸ್ಸುಖೀ ವಿದ್ವಾನ್ ಲಭತೇ ದಿವ್ಯಸಂಪದಂ ॥ ೮ ॥

---

೪. ದಾಶರಥಿಯು ಕೈಗಳನ್ನೂ, ವಿಶ್ವದ ಸೂತ್ರವನ್ನು ಹಿಡಿದಿರುವವನು ಪಾದಗಳನ್ನೂ, ಸೀತಾಪತಿಯಾದ ದೇವನು ಕಣ್ಣುಗಳನ್ನೂ ಕಾಪಾಡಲಿ.

೫. ವಿಶ್ವಾತ್ಮನು ಶಿಖೆ (ಜುಟ್ಟನ್ನು) ಯನ್ನೂ ಕಾಮದನು ಕಿವಿಗಳನ್ನೂ, ದೇವತೆಗಳನ್ನು ಕಾಪಾಡಿದವನು ಪಕ್ಕಗಳನ್ನೂ ಕಾಪಾಡಲಿ.

೬. ವಿಶ್ವಕ್ಕೆ ನಾಯಕನಾದ ಅನಂತನು ಶರೀರವನ್ನೂ, ಪಾಪನಾಶಕನೂ ಲೋಕದ ನಾಲಗೆಯನ್ನು ಮಾತನಾಡುವಂತೆ ಮಾಡಿದವನೂ ಆದ ಸ್ವಾಮಿಯು ನಾಲಗೆಯನ್ನೂ ಕಾಪಾಡಲಿ.

೭. ರಾಘವನು ನನ್ನ ಹಲ್ಲುಗಳನ್ನೂ, ಕೇಶವನು ಕೂದಲುಗಳನ್ನೂ, ವಿಜಯವುಳ್ಳ ಸೃಷ್ಟಿ ಕರ್ತನಾದ ಸ್ವಾಮಿಯು ಮುಂಡಿಗಳನ್ನೂ ಕಾಪಾಡಲಿ.

೮. ಈ ರಾಮ ಬಲದಿಂದ ಕೂಡಿದ ರಕ್ಷೆಯನ್ನು ಯಾವನು ಪಠಿಸುವನೋ ಅವನು ಚಿರಾಯುವಾಗಿಯೂ ಸುಖಿಯಾಗಿಯೂ ವಿದ್ವಾಂಸನಾಗಿಯೂ ಆಗಿ ಉತ್ತಮವಾದ ಸಂಪತ್ತನ್ನೂ ಹೊಂದುತ್ತಾನೆ.

ರಕ್ಷಾಂ ಕರೋತಿ ಭೂತೇಭ್ಯಃ ಸದಾ ರಕ್ಷತು ವೈಷ್ಣವೀ ।
ರಾಮೇತಿ ರಾಮಭದ್ರೇತಿ ರಾಮಚಂದ್ರೇತಿ ಯಃ ಪಠೇತ್ ॥ ೯ ॥

ವಿಮುಕ್ತೋ ಹಿ ನರಃ ಪಾಪಾತ್ ಮುಕ್ತಿಂ ಪ್ರಾಪ್ನೋತಿ ಶಾಶ್ವತೀಂ ।
ವಸಿಷ್ಠೇನ ಇದಂ ಪ್ರೋಕ್ತಂ ಗುರವೇ ವಿಷ್ಣುರೂಪಿಣೇ ॥ ೧೦ ॥

ತತೋ ಮೇ ಬ್ರಹ್ಮಣಾ ಪ್ರೋಕ್ತಂ ಮಯೋಕ್ತಂ ನಾರದಂ ಪ್ರತಿ ।
ನಾರದೇನ ತು ಭೂರ್ಲೋಕೇ ಪ್ರಾಪಿತಂ ಸ್ವಜನೈಸ್ಸಹ ॥ ೧೧ ॥

ಸುಪ್ತ್ವಾ ವಾಥ ಗೃಹೇ ವಾಪಿ ಮಾರ್ಗೇ ಗಚ್ಛಂತ ಏವ ವಾ ।
ಯೇ ಪಠಂತಿ ನರಶ್ರೇಷ್ಠಾಃ ತೇ ನರಾಃ ಪುಣ್ಯಭಾಗಿನಃ ॥ ೧೨ ॥

ಇತಿ ಶ್ರೀ ಮಹಾಪುರಾಣೇ ಪಾದ್ಮೇ ಉತ್ತರಖಂಡೇ ಪಾರ್ವತೀ ಮಹಾದೇವ ಸಂವಾದೇ ರಾಮರಕ್ಷಾ ಸ್ತೋತ್ರಂ ನಾಮ ಚತುಸ್ಸಪ್ತತಿತಮೋಽಧ್ಯಾಯಸ್ಸಮಾಪ್ತಃ

---

೯–೧೧. ಯಾವನು ಈ ರೀತಿಯಾಗಿ ಭೂತಗಳ ದೆಸೆಯಿಂದ ರಕ್ಷೆಯನ್ನು ಮಾಡಿಕೊಳ್ಳುತ್ತಾನೆಯೋ ಅವನನ್ನು ವಿಷ್ಣುಶಕ್ತಿಯು ರಕ್ಷಿಸುತ್ತದೆ. ರಾಮ ರಾಮಭದ್ರ, ರಾಮಚಂದ್ರ ಎಂಬುದಾಗಿ ಯಾವನು ಜಪಿಸುತ್ತಾನೆಯೋ ಅವನು ಪಾಪದಿಂದ ಮುಕ್ತನಾಗಿ ಮುಕ್ತಿಯನ್ನು ಹೊಂದುತ್ತಾನೆ. ವಸಿಷ್ಠನು ಈ ಸ್ತೋತ್ರವನ್ನು ನನ್ನ ಗುರುವಾದ ವ್ಯಾಸನಿಗೆ ಹೇಳಿದನು ಆ ಬ್ರಹ್ಮನು ನನಗೆ ಹೇಳಿದನು. ನಾನು ಹೇಳಿರುವ ಇದನ್ನೇ ಬ್ರಹ್ಮನು ನಾರದನಿಗೆ ಹೇಳಿರುವನು. ನಾರದನು ತನ್ನವರಿಗೆಲ್ಲಾ ಹೇಳಿ ಅವರೂ ತಾನೂ ಈ ಭೂಲೋಕದಲ್ಲಿ ಪ್ರಕಾಶ ಪಡಿಸಿದರು.

೧೨. ಮನೆಯಲ್ಲಿ ಆಗಲಿ, ಮಲಗಿದ್ದಾಗ ಆಗಲಿ, ದಾರಿಯಲ್ಲಿ ಹೋಗು ತ್ತಲಾಗಲಿ ಯಾರು ಇದನ್ನು ಹೇಳುತ್ತಾರೆಯೋ ಅವರಿಗೆ ಬಹುವಾದ ಪುಣ್ಯವು ಬರುತ್ತದೆ.

ಇಂತು ಶ್ರೀ ಪದ್ಮಮಹಾಪುರಾಣದ ಉತ್ತರಖಂಡದ ಪಾರ್ವತೀ ಮಹಾದೇವರ ಸಂವಾದದಲ್ಲಿ ರಾಮರಕ್ಷಾ ಸ್ತೋತ್ರ ಎಂಬ ಎಪ್ಪತ್ತನಾಲ್ಕನೆಯ ಅಧ್ಯಾಯವು ಮುಗಿದುದು.



|| ಶ್ರೀಃ ||

# ಅಥ ಶ್ರೀ ಮಹಾಪುರಾಣೇ ಪಾದ್ಮೇ ಸೃಷ್ಟಿಖಂಡೇ

## || ಪಂಚಸಪ್ತತಿತಮೋಽಧ್ಯಾಯಃ ||



|| ಮಹಾದೇವ ಉವಾಚ ||

ಶೃಣು ದೇವಿ ಪ್ರವಕ್ಷ್ಯಾಮಿ ಧರ್ಮಮಾಹಾತ್ಮ್ಯಮುತ್ತಮಂ |
ಯಚ್ಛ್ರುತ್ವಾ ನ ಪುನರ್ಜನ್ಮ ಜಾಯತೇ ಭುವಿ ಕರ್ಹಿ ಚಿತ್ || ೧ ||

ಧರ್ಮಾದರ್ಥಂ ಚ ಕಾಮಂ ಚ ಮೋಕ್ಷಂ ಚ ತ್ರಿತಯಂ ಲಭೇತ್ |
ತಸ್ಮಾದ್ಧರ್ಮಂ ಸಮಾಹೇತ ವಿದ್ವಾನ್ಸ ಬಹುಧಾ ಸ್ಮೃತಃ || ೨ ||

ತಪಸಾ ಚೈವ ದಾನೇನ ವ್ರತೇನ ನಿಯಮೇನ ಚ |
ತಪಸಾ ಪ್ರಾಪ್ಯತೇ ಸ್ವರ್ಗಃ ಸಾತ್ವಿಕೇನ ತಥೈವ ಚ || ೩ ||

---

## ಎಪ್ಪತ್ತೈದನೇ ಅಧ್ಯಾಯವು



೧. ಮಹಾದೇವನು ಹೇಳಿದನು–ಎಲೈ ದೇವಿಯೇ ! ಅಧರ್ಮದ ಮಹಿಮೆಯನ್ನು ಹೇಳುತ್ತೇನೆ ಕೇಳು. ಅದನ್ನು ಕೇಳಿದರೆ ಪುನರ್ಜನ್ಮವೆಂಬುದು ಬರುವುದೇ ಇಲ್ಲವು.

೨. ಧರ್ಮದಿಂದ ಅರ್ಥವನ್ನೂ ಕಾಮವನ್ನೂ ಮೋಕ್ಷವನ್ನೂ ಹೊಂದಬೇಕು. ಆದ್ದರಿಂದ ಜಾಣನಾದವನು ಧರ್ಮವನ್ನಪೇಕ್ಷಿಸಿ ಅದನ್ನು ಆಚರಿಸಬೇಕು.

೩. ತಪಸ್ಸಿನಿಂದಲೂ ದಾನದಿಂದಲೂ ವ್ರತದಿಂದಲೂ ನಿಯಮದಿಂದಲೂ ಸಾತ್ವಿಕವಾದ ರೀತಿಯಿಂದಲೂ ಸ್ವರ್ಗವನ್ನು ಹೊಂದಬಹುದು.

ಇಹಾಯಾತೋ ಲಭೇದ್ರಾಜ್ಯಂ ಕ್ರೋಧಲೋಭವಿವರ್ಜಿತಃ ।
ಜನ್ಮಾಂತರೇಣ ಮುಕ್ತಿಸ್ಸ್ಯಾತ್ ಪದಂ ವಿಂದತಿ ವೈಷ್ಣವಂ ॥ ೪ ॥

ತಪಸಾ ರಾಜಸೇನೇಹ ರಾಜಸಶ್ಚೈವ ಜಾಯತೆ ।
ತಪ್ತ್ವಾ ತಾಮಸಭಾವೇನ ಕ್ರೂರಕರ್ಮಾತಿನಿಷ್ಠುರಃ ॥ ೫ ॥

ತಪಸ್ತದ್ರಕ್ಷಸಾಂ ಚೋಕ್ತಂ ಭುಕ್ತಿದಂ ತಾಮಸಾತ್ಮನಾಂ ।
ಯತ್ತಪ್ತಂ ಸಾತ್ವಿಕಂ ಚೈವ ತತ್ತಪೋ ಭವತಿ ಧ್ರುವಂ ॥ ೬ ॥

ರಜಸ್ತಮೋಭ್ಯಾಂ ನಿಯತಂ ತಪಸ್ಯತಾಂ ।
ಪರ್ಣಾಶಿನಾಂ ವಾಯುಭುಜಾಂ ಸುನಿರ್ಜನೇ ।
ತಪಸ್ವಿನಾಂ ಚೈವ ಧನಾದಿವಾಂಛತಾಂ ।
ವನೇಪಿ ದೋಷಾಃ ಪ್ರಭವಂತಿ ರಾಗಿಣಾಂ ॥ ೭ ॥

---

೪. ಮತ್ತೆ ಈ ಲೋಕದಲ್ಲಿ ಹುಟ್ಟಿದಮೇಲೆ ರಾಜನಾಗುತ್ತಾನೆ. ಕಾಮ ಕ್ರೋಧ ಲೋಭಗಳನ್ನು ಬಿಟ್ಟು ಮುಂದಿನ ಜನ್ಮದಲ್ಲಿ ವೈಕುಂಠವನ್ನು ಹೊಂದುತ್ತಾನೆ.

೫. ರಾಜಸವಾದ ತಪಸ್ಸಿನಿಂದ ರಾಜಸಗುಣವುಳ್ಳವನಾಗಿಯೂ ತಾಮಸವಾದ ತಪಸ್ಸಿನಿಂದ ಕ್ರೂರಕರ್ಮಿಯೂ ನಿಷ್ಠುರನೂ ಆಗಿಯೂ ಹುಟ್ಟುತ್ತಾನೆ.

೬. ಅಂತಹ ತಾಮಸವಾದ ತಪಸ್ಸು ತಾಮಸರಿಗೆ ಅನ್ನವನ್ನು ಕೊಡುತ್ತದೆ. ಸಾತ್ವಿಕವಾದ ತಪಸ್ಸೇನೇ ಶಾಶ್ವತವಾದ ಉತ್ತಮವಾದ ತಪಸ್ಸು ಎನ್ನಿಸಿಕೊಳ್ಳುತ್ತದೆ.

೭. ಕಾಡಿನಲ್ಲಿ ಎಲೆಯನ್ನು ತಿಂದುಕೊಂಡು ಹಣ ಮುಂತಾದುವುಗಳನ್ನು ಅಪೇಕ್ಷಿಸುತ್ತಾ ರಜೋಗುಣ ತಮೋಗುಣಗಳಿಂದ ಕೂಡಿ ತಪಸ್ಸು ಮಾಡುವವರಿಗೆ ಆ ನಿರ್ಜನವಾದ ಕಾಡಿನಲ್ಲಿಯೂ ಅನೇಕ ವಿಧವಾದ ದೋಷಗಳು ಉಂಟಾಗುತ್ತವೆ.

ಗೃಹೇಽಪಿ ಪಂಚೇಂದ್ರಿಯನಿಗ್ರಹಸ್ತಪ
ಸ್ತ್ವಕುತ್ಸಿತೇ ಕರ್ಮಣಿ ಯಃ ಪ್ರವರ್ತತೇ ।
ನಿವೃತ್ತರಾಗಸ್ಯ ತಪೋವನಂ ಗೃಹಂ
ಗೃಹಾಶ್ರಮೋಽತೋ ಗದಿತಃ ಸ್ವಧರ್ಮಃ ॥ ೮ ॥

ಸುದುಸ್ತರಸ್ಸತ್ವಜಿತೇಂದ್ರಿಯಾಣಾಂ
ಸಂಹನ್ಯತೇ ಶ್ರೇಷ್ಠತಮಃ ಶುಭಾಶ್ರಮಃ ।
ಗೃಹಸ್ಥಧರ್ಮಃ ಪ್ರವರೋ ಮನೀಷಿಣಾಂ
ಬ್ರಹ್ಮಾದಿಭಿಶ್ಚಾಭಿಹಿತೋ ನಗಾತ್ಮಜೇ ॥ ೯ ॥

ತಸ್ಮಾತ್ತ್ವ ತಪಸ್ಸನ್ನಿಪಿನೇ ಕ್ಷುಧಾರ್ತೇ
ಗೃಹಂ ಸಮಾಯಾತಿ ಸದಾನ್ನದಾತುಃ ।
ಭಕ್ತ್ಯಾ ಸ ಚಾನ್ನಂ ಪ್ರದದಾತಿ ತಸ್ಮೈ
ತಪೋವಿಭಾಗಂ ಭಜತೇ ಹಿ ತಸ್ಯ ॥ ೧೦ ॥

---

೮. ಮನೆಯಲ್ಲಿಯೇ ಇದುಕೊಂಡಿದ್ದರೂ ಪಂಚೇಂದ್ರಿಯಗಳನ್ನು ನಿಗ್ರಹಿಸಿ ನಿಂದಿತ ಕೆಲಸಗಳಿಗೆ ಕೈ ಹಾಕದೆ ಆಶೆಯನ್ನು ನಿಗ್ರಹಿಸಿರುವವನಿಗೆ ಆ ಮನೆಯೇ ಕಾಡಾದ ತಪೋವನವು. ಇಂತಹವನಿಗೆ ಗೃಹಾಶ್ರಮಿಯೆಂದು ಹೆಸರು.

೯. ಈ ಗೃಹಸ್ಥ ಧರ್ಮವು ಇಂದ್ರಿಯನಿಗ್ರಹ ಮಾಡದವರು ಆಚರಿಸಲು ದುಸ್ತರವಾದುದು. ಅವರು ಈ ಆಶ್ರಮಧರ್ಮಗಳನ್ನು ನಾಶಮಾಡಿಕೊಳ್ಳುತ್ತಾರೆ. ಆದ್ದರಿಂದಲೇ ಬ್ರಹ್ಮಾದಿಗಳೂ ಕೂಡ ಈ ಗೃಹಸ್ಥಧರ್ಮವು ಬಹು ಉತ್ತಮವಾದುದೆಂದು ಹೇಳಿದ್ದಾರೆ.

೧೦. ಕಾಡಿನಲ್ಲಿ ತಪಸ್ಸು ಮಾಡುವವನೂ ಬಹು ಹೊತ್ತು ತಪಸ್ಸನ್ನು ಮಾಡಿ ಹಸಿವಿನಿಂದ ಬಳಲಿ ಅನ್ನ ದಾತೃವಾದ ಗೃಹಸ್ಥನ ಮನೆಗೆ ಬರುತ್ತಾನೆ. ಈ ಗೃಹಸ್ಥನು ಅವನಿಗೆ ಭಕ್ತಿಯಿಂದ ಅನ್ನವನ್ನು ಹಾಕಿ ಅವನಿಂದ ತಪಸ್ಸನ್ನು ಕಸಿದು ಕೊಳ್ಳುತ್ತಾನೆ.

ಗೃಹಾಶ್ರಮಂ ಜ್ಯೇಷ್ಠಮಿಹಾಶ್ರಮಾಣಾಂ
ಸಮ್ಯಕ್ಸದಾ ಪಾಲಯತೇ ಮನುಷ್ಯಃ ।
ಇಹೈವ ಭುಂಜನ್ಸ ಮನುಷ್ಯಭೋಗಾ೯
ಸ್ವರ್ಗಂ ಪ್ರಯಾತೀತಿ ನ ಸಂಶಯೋತ್ರ ॥
ಸದಾ ಗೃಹಂ ಪಾಲಯತಾಂ ನರಾಣಾಂ
ಪಾಪಂ ಸಮಾಯಾತಿ ಕಥಂ ಹಿ ದೇವಿ ॥ ೧೧ ॥

ಗೃಹಾಶ್ರಮಃ ಪುಣ್ಯತಮಃ
ಸರ್ವದಾ ತೀರ್ಥವದ್ಗೃಹಂ ।
ಅಸ್ಮಿ೯ ಗೃಹಾಶ್ರಮೇ ಪುಣ್ಯೇ
ದಾನಂ ದೇಯಂ ವಿಶೇಷತಃ ॥ ೧೨ ॥

ದೇವಾನಾಂ ಪೂಜನಂ ಯತ್ರ ಅತಿಥೀನಾಂ ತು ಭೋಜನಂ ।
ಪಥಿಕಾನಾಂ ಚ ಶರಣಮತೋಧನ್ಯತಮೋ ಮತಃ ॥ ೧೩ ॥

---

೧೧. ಎಲೈ ಪಾರ್ವತಿಯೇ ! ಗೃಹಸ್ಥಾಶ್ರಮವು ಆಶ್ರಮಗಳಿಗೆಲ್ಲಾ ದೊಡ್ಡದು. ಅದನ್ನು ಚೆನ್ನಾಗಿ ಕಾಪಾಡುತ್ತಿರಬೇಕು. ಅವನು ಈ ಮನೆಯಲ್ಲಿಯೇ ಮಾನುಷ ಭೋಗಗಳನ್ನು ಅನುಭವಿಸುತ್ತಲಿದ್ದು ಸ್ವರ್ಗವನ್ನು ಹೊಂದುತ್ತಾನೆ ಎಂಬುದರಲ್ಲಿ ಸಂಶಯವಿಲ್ಲ. ಆದ್ದರಿಂದ ಗೃಹಸ್ಥಾಶ್ರಮವನ್ನು ಪಾಲಿಸುತ್ತಿರುವವರಿಗೆ ಪಾಪವೆಂಬುದು ಹೇಗೆ ಬರುತ್ತದೆ ? ಹೇಳು.

೧೨. ಗೃಹಸ್ಥಾಶ್ರಮವು ಪುಣ್ಯತಮವಾದುದು. ಮನೆಯು ತೀರ್ಥಕ್ಕೆ ಸಮವಾದುದು. ಆದ್ದರಿಂದ ಈ ಪುಣ್ಯತಮವಾದ ಗೃಹವೆಂಬ ಆಶ್ರಮದಲ್ಲಿ ಬಹುವಾಗಿ ದಾನಮಾಡಬೇಕು

೧೩. ಈ ಗೃಹವೆಂಬ ಆಶ್ರಮದಲ್ಲಿ ದೇವತೆಗಳಿಗೆ ಪೂಜೆಯು ನಡೆಯುತ್ತದೆ. ಅತಿಥಿಗಳಿಗೆ ಭೋಜನವು ಸಿಕ್ಕುತ್ತದೆ. ಪ್ರಯಾಣಿಕರಿಗೆ ವಿಶ್ರಮಿಸಿಕೊಳ್ಳಲು ಸ್ಥಳವಾಗಿದೆ. ಆದ್ದರಿಂದ ಇದಕ್ಕಿಂತಲೂ ಧನ್ಯವಾದುದು ಮತ್ತಾವುದಿದೆ ? ಇದೇ ಉತ್ತಮವಾದುದು.

ತದ್ಗೃಹಂ ತು ಸಮಾಶ್ರಿತ್ಯ ಯೇಽರ್ಚಯಂತಿ ದ್ವಿಜನ್ಮನಃ ।
ಆಯುರ್ಲಕ್ಷ್ಮೀಸ್ಸುತಾಸ್ತೇಷಾಂ ನ ಹೀಯಂತೇ ಕದಾಚನ ॥ ೧೪ ॥

ಶೃಣು ಸುಂದರಿ ವಕ್ಷ್ಯಾಮಿ ಮಹಾಪಾಪವಿಶೋಧನಂ ।
ಸರ್ವಸಂಪತ್ಕರಂ ದಾನಮಿಹಾಮುತ್ರ ಫಲಪ್ರದಂ ॥ ೧೫ ॥

ಶುಭೇ ಕಾಲೇ ಸಮಾಯಾತೇ ಸಮಭ್ಯರ್ಚ್ಯೇಂದುದೈವತಂ ।
ನಿತ್ಯಂ ನೈಮಿತ್ತಿಕಂ ಕೃತ್ವಾ ದದ್ಯಾದ್ದಾನಂ ಸ್ವಶಕ್ತಿತಃ ॥ ೧೬ ॥

ಗೃಹೀತ್ವಾ ಪರದ್ರವ್ಯಂ ಚ ದ್ವಿಜದೇವೇಭ್ಯ ಏವ ಹಿ ।
ದಧ್ಯಾತ್ಸನಿರಯಂ ದೃಷ್ಟ್ವಾ ಪಶ್ಚಾದ್ಯಾತಿ ಪರಾಂ ಗತಿಂ ॥ ೧೭ ॥

ಶತಾನೀಕೋ ಯಥಾ ದಾನಾತ್ ಸ್ವಪುತ್ರೈಶ್ಚಾವತಾರಿತಃ ।
ದತ್ತ್ವಾನ್ಯೇ ಚ ದ್ವಿಚೇಭ್ಯಶ್ಚ ಸಂಗತಾ ಧರ್ಮತೋ ದಿವಂ ॥ ೧೮ ॥

---

೧೪. ಅಂತಹ ಗೃಹಸ್ಥಾಶ್ರಮವನ್ನು ಹೊಂದಿ ಯಾರು ಬ್ರಾಹ್ಮಣರನ್ನು ಪೂಜಿಸುತ್ತಾರೆಯೋ ಅವರಿಗೆ ಆಯುಸ್ಸು ಸಂಪತ್ತು ಮಕ್ಕಳುಗಳು ಯಾವಾಗಲೂ ಕಡಿಮೆಯಾಗುವುದೇ ಇಲ್ಲ.

೧೫. ಎಲೈ ಸುಂದರಿಯೆ! ಮಹಾಪಾಪಗಳನ್ನು ನಾಶಮಾಡುವ ಇಹಪರ ಸಂಪತ್ತಿಗೆ ಕಾರಣವಾದ ಫಲವನ್ನು ಕೊಡುವ ದಾನಗಳನ್ನು ಹೇಳುತ್ತೇನೆ. ಕೇಳು.

೧೬. ದಾನ ಮಾಡಲು ಒಳ್ಳೆಯ ಕಾಲಗಳು ಬಂದಾಗ ನಿತ್ಯ ನೈಮಿತ್ತಿಕ ಕರ್ಮಗಳನ್ನು ಮಾಡಿಕೊಂಡು ಬ್ರಾಹ್ಮಣರನ್ನು ಪೂಜಿಸಿ ಶಕ್ತ್ಯನುಗುಣವಾಗಿ ದಾನವನ್ನು ಕೊಡಬೇಕು.

೧೭. ಯಾವನು ಪರರ ವಸ್ತುಗಳನ್ನು ತೆಗೆದುಕೊಂಡು ಬ್ರಾಹ್ಮಣರಿಗೆ ದಾನಮಾಡುವನೋ ಅವನು ನರಕ ದರ್ಶನವನ್ನು ಮಾಡಿದಮೇಲೆ ಉತ್ತಮ ಗತಿಯನ್ನು ಹೊಂದುತ್ತಾನೆ.

೧೮. ಶತಾನೀಕನು ಮಕ್ಕಳು ದಾನವನ್ನು ಮಾಡಿ ತಂದೆಯನ್ನು ನರಕ ದಿಂದ ಬಿಡುಗಡೆ ಮಾಡಿದಂತೆ ಮಿಕ್ಕವರೂ ಕೂಡ ಬ್ರಾಹ್ಮಣರಿಗೆ ದಾನಮಾಡಿದರೆ ಸ್ವರ್ಗವನ್ನು ಹೊಂದುತ್ತಾರೆ.

ಧರ್ಮಸ್ಥಾನೇಷು ಯೈರ್ದತ್ತಂ ತೇಷಾಂ ಧರ್ಮಮುದಾಹೃತಂ ।
ಶೃಣು ದೇವಿ ಪ್ರವಕ್ಷ್ಯಾಮಿ ವಿತ್ತದಾನಂ ಸಮಾಸತಃ ॥ ೧೯ ॥

ದೇಹಶುದ್ಧಿಕರಂ ದಾನಂ ನ ಭೂತಂ ನ ಭವಿಷ್ಯತಿ ।
ಪಾಪಹನ್ತಾ ಯೇನ ಪುರ್ಮಾ ಜಾಯತೇ ನಾತ್ರ ಸಂಶಯಃ ॥ ೨೦ ॥

ಭೋಗಾನ್ಭುಕ್ತ್ವಾ ತತಶ್ಚಾಯಂ ಯಾತಿ ವಿಷ್ಣುಂ ಸನಾತನಂ ।
ಪುರಾ ವೈ ಬ್ರಹ್ಮಣಾ ಚೋಕ್ತಂ ಭಾರ್ಗವಾಯ ಮಹಾತ್ಮನೇ ॥ ೨೧ ॥

ಪಾಪಯುಕ್ತಾಯ ರಾಮಾಯ ತುಲಾವೃಷಭಮೇವ ಚ ।
ಪಾಪಕರ್ಮರತಶ್ಚೈವ ವಧಬಂಧಕ್ರಿಯೋ ನೃಪಃ ॥ ೨೨ ॥

ಅಭಕ್ಷ್ಯಭಕ್ಷಣರತೋ ಭ್ರೂಣಹಾ ಗುರುತಲ್ಪಗಃ ।
ಏತೇಷ್ಯನೃತವಾದೀ ಚ ಪ್ರಸೂಯಂತೇ ವಿಯೋನಿಷು ॥ ೨೩ ॥

---

೧೯. ಧರ್ಮ ಬರುವುದಕ್ಕೆ ಯೋಗ್ಯವಾದ ಜಾಗದಲ್ಲಿ ಯೋಗ್ಯರಾದ ಜನರಿಗೆ ಕೊಟ್ಟರೆ ಧರ್ಮವು ಬರುತ್ತದೆ ಎಂದು ತಿಳಿ. ಎಲೈ ದೇವಿಯೆ ! ಹಣವನ್ನು ದಾನಮಾಡುವ ಬಗೆಯನ್ನು ಸಂಗ್ರಹವಾಗಿ ಹೇಳುತ್ತೇನೆ. ಕೇಳು.

೨೦. ಈ ಹಣವನ್ನು ದಾನಮಾಡುವುದರಿಂದ ದೇಹಶುದ್ಧಿಯಾಗುತ್ತದೆ. ಇಂತಹ ದಾನವು ಹಿಂದೆ ಇರಲಿಲ್ಲ. ಮುಂದಿಲ್ಲ ಇದರಿಂದ ಮನುಷ್ಯನು ಪಾಪಗಳನ್ನು ಕಳೆದು ಕೊಳ್ಳುತ್ತಾನೆ. ಸಂಶಯವಿಲ್ಲ.

೨೧. ಇವನು ಅನೇಕ ಭೋಗಗಳನ್ನು ಅನುಭವಿಸಿ ವೈಕುಂಠದಲ್ಲಿ ವಿಷ್ಣುವಿನ ಬಳಿಗೆ ಹೋಗುತ್ತಾನೆ. ಇದನ್ನೂ ತುಲಾ ವೃಷಭದಾನವನ್ನೂ ಪೂರ್ವದಲ್ಲಿ ಬ್ರಹ್ಮನು ಅನೇಕ ಪಾಪಗಳನ್ನು ಮಾಡಿದ ಪರಶುರಾಮನಿಗೆ ಹೇಳಿದನು.

೨೨–೨೩. ಎಲೈ ರಾಮನೆ ! ತುಲಾಮಾಸ ವೃಷಭಮಾಸಗಳೆನ್ನದೆ ಪಾಪ ಕಾರ್ಯದಲ್ಲಿ ಆಸಕ್ತನಾಗಿ ಎಲ್ಲರನ್ನೂ ಕೊಲ್ಲುತ್ತಿದ್ದವನು. ನಿಷಿದ್ಧವಾದವುಗಳನ್ನು ತಿನ್ನುತ್ತಿದ್ದವನು. ಮಕ್ಕಳನ್ನು ಕೊಲ್ಲುತ್ತಿದ್ದವನು. ಗುರುವಿನ ಹೆಂಡತಿಯಲ್ಲಿ ರಮಿಸುವವನು. ಮತ್ತು ಸುಳ್ಳು ಹೇಳುವವನು. ಇವರು ಕೆಟ್ಟ ಜನ್ಮದಲ್ಲಿ ಹುಟ್ಟುತ್ತಾರೆ.

ಅಯಾಜ್ಯಯಾಜನಂ ಕೃತ್ವಾ ಯಾಚಯಿತ್ವಾ ತು ನಿಂದಿತಾತ್ ।
ಸದಾ ಕೋಪಸಮಾಯುಕ್ತಃ ಸಾಧೂನಾಂ ಪೀಡನೇ ರತಃ ॥ ೨೪ ॥

ನಿಶ್ವಾಸೋಽಪಹತಶ್ಚೈವ ಅಶುಚಿರ್ಧರ್ಮನಿಂದಕಃ ।
ಪಾಪೈರೇಭಿಸ್ಸಮಾಯುಕ್ತೋ ಜ್ಞಾತ್ವಾತ್ಮಾನಂ ಗತಾಯುಷಂ ॥ ೨೫ ॥

ಇತಿ ಜ್ಞಾತ್ವಾ ತು ಭೋ ದೇವಿ ದಾನಂ ದೇಯಂ ವಿಶೇಷತಃ ।
ಬಹವೋ ಧರ್ಮಕರ್ತಾರೋ ವೈಷ್ಣವಾ ಭುವಿ ವಿಶ್ರುತಾಃ ॥ ೨೬ ॥

ಇತಿ ಶ್ರೀ ಮಹಾಪುರಾಣೇ ಪಾದ್ಮೇ ಉತ್ತರಖಂಡೇ ಪಾರ್ವತೀ
ಮಹಾದೇವ ಸಂವಾದೇ ದಾನ ಧರ್ಮ ಕಥನಂ ನಾಮ
ಸಪ್ತತಿತಮೋಽಧ್ಯಾಯಸ್ಸಮಾಪ್ತಃ

---

೨೪-೨೫. ಯಾಗಾದಿಗಳನ್ನು ಮಾಡಲು ಯೋಗ್ಯತೆಯಿಲ್ಲದವರಿಗೆ ಯಾಗಾದಿಗಳನ್ನು ಮಾಡಿಸಿದವನು, ಪಾಪಿಯಿಂದ ಯಾಚಿಸಿ ಪದಾರ್ಥವನ್ನು ಹೊಂದುವವನೂ ಯಾವಾಗಲೂ ಕೋಪಗೊಳ್ಳುವವನೂ ಸಾಧುಗಳನ್ನು ಪೀಡಿಸುವವನೂ ಅಶುಚಿಯೂ ಧರ್ಮವನ್ನು ನಿಂದಿಸುವವನೂ ಪಾಪಿಗಳು. ಈ ಪಾಪಗಳಿಂದ ಕೂಡಿಕೊಂಡವನು ತನ್ನ ಆಯುಸ್ಸನ್ನು ಇವು ನಾಶಮಾಡುತ್ತವೆಂದು ತಿಳಿಯಬೇಕು.

೨೬. ಈ ರೀತಿಯಾಗಿ ಆಯುಸ್ಸು ಕ್ಷೀಣಿಸುವುದನ್ನು ತಿಳಿದು ವಿಶೇಷವಾಗಿ ದಾನವನ್ನು ಮಾಡಬೇಕು. ಧರ್ಮಮಾಡಿ ವಿಷ್ಣು ಭಕ್ತಿಯುಳ್ಳವರು ಲೋಕದಲ್ಲಿ ಬಹುಜನರು ಪ್ರಸಿದ್ಧರಾಗಿದ್ದಾರೆ.

ಇಂತು ಶ್ರೀ ಪದ್ಮಮಹಾಪುರಾಣದ ಉತ್ತರಖಂಡದ ಪಾರ್ವತೀ
ಮಹಾದೇವರ ಸಂವಾದದಲ್ಲಿ ದಾನ ಧರ್ಮ ಕಥನ ಎಂಬ
ಎಪ್ಪತ್ತೈದನೆಯ ಅಧ್ಯಾಯವು ಮುಗಿದುದು.



॥ ಶ್ರೀಃ ॥

-X-

# ಅಥ ಶ್ರೀ ಮಹಾಪುರಾಣೇ ಪಾದ್ಮೇ ಉತ್ತರಖಂಡೇ

## ॥ ಷಟ್‌ಸಪ್ತತಿತಮೋಽಧ್ಯಾಯಃ ॥



॥ ಮಹಾದೇವ ಉವಾಚ ॥

**ಗಲ್ಲಿಕಾಯಾಸ್ತು ಮಾಹಾತ್ಮ್ಯಂ ವಕ್ಷ್ಯೇ ದೇವಿ ವಿಧಾನತಃ ।**
**ಯಥಾ ಗಂಗಾ ತಥಾ ಸಾ ಚ ಕಥಿತಾ ನಗನಂದಿನೀ ॥ ೧ ॥**

**ಶಾಲಗ್ರಾಮಶಿಲಾ ಯತ್ರ ಜಾಯತೇ ಬಹುಧಾ ತಥಾ ।**
**ಮಾಹಾತ್ಮ್ಯಂ ಚೈವ ತಸ್ಯಾಶ್ಚ ಕಥಿತಂ ಮುನಿಸತ್ತಮೈಃ ॥ ೨ ॥**

**ಅಂಡಜಾ ಉದ್ಭಿಜಾ ಯತ್ರ ಸ್ವೇದಜಾಶ್ಚ ಜರಾಯುಜಾಃ ।**
**ಯಸ್ಯಾ ದರ್ಶನಮಾತ್ರೇಣ ಪುಣ್ಯರೂಪಾಸ್ತು ಪಾರ್ವತೀ ॥ ೩ ॥**

---

## ಎಪ್ಪತ್ತಾರನೆಯ ಅಧ್ಯಾಯವು



೧. ಮಹಾದೇವನು ಹೇಳಿದನು–ಎಲೈ ಪಾರ್ವತಿಯೆ! ಗಲ್ಲಿಕೆಯ ಮಹಿಮೆಯನ್ನು ಹೇಳುತ್ತೇನೆ. ಕೇಳು. ಅದು ಬೆಟ್ಟದಿಂದ ಹುಟ್ಟಿ ಹರಿಯುವ ನದಿಯು. ಗಂಗೆಯಂತೆ ಪಾವನವಾದುದು.

೨. ಆ ಗಲ್ಲಿಕೆಯಲ್ಲಿ ಅನೇಕವಾಗಿ ಸಾಲಗ್ರಾಮಗಳು ಹುಟ್ಟುತ್ತವೆ. ಅದು ಬಹು ಮಹಿಮೆಯುಳ್ಳದೆಂದು ಋಷಿಗಳು ಹೇಳುತ್ತಾರೆ. ಈ ನದಿಯನ್ನು ನಾವು ಗಂಡಕಿಯೆಂದೆನ್ನುತ್ತೇವೆ.

೩. ಎಲೈ ಪಾರ್ವತಿಯೇ! ಮೊಟ್ಟೆಯಿಂದ ಹುಟ್ಟುವ, ಮೇಲಕ್ಕೇ ಕೊರೆದುಕೊಂಡು ಹುಟ್ಟುವ, ಬೆವರಿನಿಂದ ಹುಟ್ಟುವ, ಜರಾಯುವೆಂಬ ಚೀಲದಿಂದ ಹುಟ್ಟುವ ಎಲ್ಲ ರೀತಿಯ ಪ್ರಾಣಿಗಳೂ ಆ ಗಲ್ಲಕಿ (ಗಂಡಕಿ) ಯನ್ನು ನೋಡಿದ ಮಾತ್ರದಿಂದಲೇ ಪುಣ್ಯವನ್ನು ಹೊಂದುತ್ತವೆ.

ಉತ್ತರೇ ಸಾ ತು ಸಂಭೂತಾ ಗಲ್ಲಿಕಾ ತು ಮಹಾನದೀ ।
ಸಂಸ್ಮೃತಾ ಸಂಸ್ಕೃತಾ ನೂನಂ ಪಾಪಂ ಹಂತ್ಯಗನಂದಿನೀ ॥ ೪ ॥

ಯತ್ರ ನಾರಾಯಣೋ ದೇವೋ ನಿತ್ಯಂ ತಿಷ್ಠತಿ ಭೂತಿದಃ ।
ಶಂಖಚಕ್ರಧರಾಸ್ತಸ್ಯ ಸಮೀಪೇ ನಿವಸಂತಿ ಯೇ ॥ ೫ ॥

ತೇ ಮೃತ್ಯುಂ ಸಮನುಪ್ರಾಪ್ಯ ದಿವ್ಯರೂಪಾಶ್ಚತುರ್ಭುಜಾಃ ।
ಋಷಯಸ್ತತ್ರ ತಿಷ್ಠಂತಿ ದೇವಾಶ್ಚೈವ ವಿಶೇಷತಃ ॥ ೬ ॥

ರುದ್ರಾ ನಾಗಾಸ್ತಥಾ ಯಕ್ಷಾ ನಾತ್ರ ಕಾರ್ಯಾ ವಿಚಾರಣಾ ।
ತಸ್ಯಾಸ್ಸಮೀಪೇ ಹ್ಯೇಕೋಽಯಂ ಸ್ಥೂಲೋ ವೈ ವಿಷ್ಣುರೂಪಧೃಕ್ ॥೭॥

ಸ್ಥಲೇಽಸ್ಮಿನ್ವರ್ತತೇ ಮೂರ್ತಿರ್ಬಹುರೂಪಾ ಸುಖಪ್ರದಾ ।
ಚತುರ್ವಿಂಶತಿಮೂರ್ತೀನಾಂ ಜಾತಯಸ್ಸಂತಿ ತತ್ರ ವೈ ॥ ೮ ॥

---

೪. ಇದು ಪರ್ವತದ ಉತ್ತರದ ಕಡೆಯಲ್ಲಿ ಹುಟ್ಟುತ್ತದೆ. ಮಹಾನದಿಯು. ಇದನ್ನು ಸ್ಮರಿಸುತ್ತಿದ್ದರೆ ಪಾಪಗಳೆಲ್ಲವೂ ಹೋಗುತ್ತವೆ.

೫. ಆ ನದಿಯ ಸಮೀಪದಲ್ಲಿಯೇ ನಾರಾಯಣನು ಯಾವಾಗಲೂ ಇರುವನು. ಅದರ ಬಳಿಯಲ್ಲಿರುವವರು ಶಂಖ ಚಕ್ರಗಳನ್ನು ಧರಿಸಿದವರಾಗಿಯೇ ನಾರಾಯಣನಂತೆಯೇ ಇರುವರು.

೬-೮. ಅವರು ಸತ್ತನಂತರದಲ್ಲಿ ನಾಲ್ಕು ತೋಳುಗಳನ್ನು ಹೊಂದಿ ಉತ್ತಮವಾದ ಆಕಾರವನ್ನು ಹೊಂದುತ್ತಾರೆ. ಆ ನದಿಯ ದಡದಲ್ಲಿ ಋಷಿಗಳೂ ದೇವತೆಗಳೂ ಹೆಚ್ಚಾಗಿದ್ದಾರೆ. ರುದ್ರರೂ ನಾಗರೂ ಯಕ್ಷರೂ ಕೂಡ ಅಲ್ಲಿ ಇದ್ದಾರೆ. ಇದರಲ್ಲಿ ಸಂಶಯವಿಲ್ಲ ಆ ನದಿಯ ಸಮೀಪದಲ್ಲಿ ನೆಲದಮೇಲೆ ಒಂದು ದೊಡ್ಡದಾದ ಪ್ರತಿಮೆಯಿದೆ. ಅದು ಚೆನ್ನಾಗಿದೆ. ಆ ಜಾಗದಲ್ಲಿ ಇಪ್ಪತ್ತನಾಲ್ಕು ಬಗೆಯ ಮೂರ್ತಿಗಳಿವೆ.

ಏಕಾ ವೈ ಮತ್ಸ್ಯರೂಪಾ ಚ ಕೂರ್ಮರೂಪಾ ತಥೈವ ಚ ।
ವಾರಾಹೀ ನಾರಸಿಂಹೀ ಚ ವಾಮನೀ ಚ ಶುಭಪ್ರದಾ ॥ ೯ ॥

ರಾಮಾಖ್ಯಾ ಪರಶುರಾಮಾ ಚ ಕೃಷ್ಣರೂಪಾ ತು ಮುಕ್ತಿದಾ ।
ಅನ್ಯಾ ಚ ಯಾ ಬುಧ ಪ್ರೋಕ್ತಾ ಸ್ಥಳೇ ವೈ ವಿಷ್ಣುಸಂಜ್ಞಕೇ ॥ ೧೦ ॥

ಕಲ್ಕಿನಾಮ್ನೀ ತಥಾ ಪುಣ್ಯಾ ಕಪಿಲಾ ಯಾ ಮಯೋದಿತಾ ।
ಅನ್ಯಾಸ್ತು ವಿವಿಧಾಕಾರಾ ದೃಶ್ಯಂತೇ ಬಹುಧಾ ಅಪಿ ॥ ೧೧ ॥

ತಿಷ್ಠಂತಿ ಮೂರ್ತಯಸ್ತತ್ರ ನಾನಾರೂಪಾ ಹನೇಕಶಃ ।
ಸಾ ಗಂಗಾ ಮಹತೀ ಪುಣ್ಯಾ ಧರ್ಮಕಾಮಾರ್ಥಮುಕ್ತಿದಾ ॥ ೧೨ ॥

ಯಸ್ಯಾಂ ಭೂಮೌ ಹೃಷೀಕೇಶೋ ನಿಯಮೇನ ಸಮನ್ವಿತಃ ।
ವರ್ತತೇಽದ್ಯಾಪಿ ತತ್ರೈವ ಮಯಾ ಸಹ ನ ಸಂಶಯಃ ॥ ೧೩ ॥

---

೯–೧೦. ಮತ್ಸ್ಯಮೂರ್ತಿ, ಕೂರ್ಮಮೂರ್ತಿ, ವರಾಹಮೂರ್ತಿ, ನರಸಿಂಹಮೂರ್ತಿ, ವಾಮನಮೂರ್ತಿ, ಶ್ರೀರಾಮಮೂರ್ತಿ, ಪರಶುರಾಮ ಮೂರ್ತಿ, ಕೃಷ್ಣಮೂರ್ತಿ ಇವುಗಳಿವೆ. ಅಲ್ಲದೆ ತಿಳಿದವರು ಪರೀಕ್ಷಿಸಿ ಹೇಳತಕ್ಕ ಬೇರೆಯ ಬಗೆಯಾದ ಇನ್ನೂ ಅನೇಕ ಮೂರ್ತಿಗಳಿವೆ.

೧೧. ಕಲ್ಕಿಮೂರ್ತಿ ಕಪಿಲಾಮೂರ್ತಿಗಳೂ ಇವೆ. ಅನೇಕ ಆಕಾರವುಳ್ಳ ಇನ್ನೂ ಅನೇಕ ಮೂರ್ತಿಗಳಿವೆ. ಬಹು ವಿಧವಾಗಿ ಕಾಣಬರುತ್ತವೆ.

೧೨. ಬಗೆಬಗೆಯಾದ ಅನೇಕ ಮೂರ್ತಿಗಳು ಅಲ್ಲದೆ ಅದೇ ಪುಣ್ಯಪ್ರದ ವಾದ ಗಂಗೆಯು. ಧರ್ಮ, ಅರ್ಥ, ಕಾಮ, ಮೋಕ್ಷಗಳನ್ನು ಕೊಡುತ್ತದೆ.

೧೩. ಆ ಸ್ಥಳದಲ್ಲಿ ವಿಷ್ಣುವು ನಿಯಮವುಳ್ಳವನಾಗಿದ್ದಾನೆ. ನಾನೂ ಕೂಡ ಅವನ ಜೊತೆಯಲ್ಲಿ ಅಲ್ಲಿ ಯಾವಾಗಲೂ ಇರುತ್ತೇನೆ.

ಭ್ರೂಣಹತ್ಯಾ ಬಾಲಹತ್ಯಾ ಗೋಹತ್ಯಾ ಚ ವಿಶೇಷಶಃ ।
ಯಸ್ಯಾಃ ಸ್ಪರ್ಶನಮಾತ್ರೇಣ ಮುಚ್ಯತೇ ಸರ್ವಕಿಲ್ಬಿಷಾತ್ ॥ ೧೪ ॥

ಬ್ರಾಹ್ಮಣಾ ಕ್ಷತ್ರಿಯಾ ವೈಶ್ಯಾ ಶೂದ್ರಾಶ್ಚೈವಾನ್ಯಜಾತಯಃ ।
ಸರ್ವೇ ತೇ ವೈ ವಿಮುಚ್ಯಂತೇ ದರ್ಶನಾದ್ಗಲ್ಲಿಕಾಂಬುನಃ ॥ ೧೫ ॥

ಇಯಂ ವೇಣೀಸಮಾ ಪುಣ್ಯಾ ಪಾಪಿನಾಂ ತು ವಿಶೇಷತಃ ।
ಮುಚ್ಯತೇ ಬ್ರಹ್ಮಹಾ ಯತ್ರ ಇತರೇಷಾಂ ತು ಕಾ ಕಥಾ ॥ ೧೬ ॥

ಸರ್ವದಾ ಸರ್ವಕಾಲೇ ತು ಅಹಂ ಗಚ್ಛಾಮಿ ಪಾರ್ವತಿ ।
ತೀರ್ಥಾನಾಂ ತೀರ್ಥರಾಜೋಽಯಂ ಬ್ರಹ್ಮಣಾ ಭಾಷಿತಃ ಕಿಲ ॥ ೧೭ ॥

ತತ್ರ ಸ್ನಾನಂ ಚ ದಾನಂ ಚ ಮುನಿಭಿಃ ಪರಿಕಲ್ಪಿತಂ ।
ಆಷಾಢೇ ಪುಣ್ಯಕಾಲೇ ತು ತತ್ರ ಗಚ್ಛಾಮಿ ಸುಂದರಿ ॥ ೧೮ ॥

---

೧೪. ಭ್ರೂಣಹತ್ಯೆ ಬಾಲಹತ್ಯೆ, ಗೋಹತ್ಯೆಗಳ ಪಾಪವೆಲ್ಲಾ ಇದರ ನೀರನ್ನು ಮುಟ್ಟಿದ ಮಾತ್ರದಿಂದಲೇ ಹೊರಟುಹೋಗುತ್ತವೆ.

೧೫. ಬ್ರಾಹ್ಮಣರು, ಕ್ಷತ್ರಿಯರು, ವೈಶ್ಯರು, ಶೂದ್ರರು ಇನ್ನೂ ಇತರ ಜಾತಿಯವರು ಎಲ್ಲರೂ ಕೂಡ ಈ ಗಂಡಕಿಯ ನೀರನ್ನು ನೋಡುವುದರಿಂದಲೇ ಪಾಪಗಳನ್ನು ಕಳೆದುಕೊಳ್ಳುತ್ತಾರೆ.

೧೬. ಈ ನದಿಯು ಕೃಷ್ಣವೇಣೀ ನದಿಗೆ ಸಮವಾದ ಪುಣ್ಯವಾದುದು. ಪಾಪಿಗಳಿಗೆ ಇದು ಬಹು ಮುಖ್ಯವಾದುದು. ಬ್ರಹ್ಮಹತ್ಯೆಯ ಪಾಪವೂ ಕೂಡ ಇಲ್ಲಿ ನಾಶವಾಗುವಾಗ ಮಿಕ್ಕವುಗಳನ್ನು ಹೇಳತಕ್ಕದ್ದೇನಿದೆ.

೧೭. ನಾನು ಯಾವಾಗಲೂ ಅಲ್ಲಿಗೆ ಹೋಗುತ್ತಿರುತ್ತೇನೆ. ತೀರ್ಥಗಳಿಗೆಲ್ಲಾ ಅದು ರಾಜನೆಂದು ಬ್ರಹ್ಮನು ಹೇಳಿದ್ದಾನೆ.

೧೮. ಅಲ್ಲಿಯ ಸ್ನಾನವೂ ದಾನವೂ ಉತ್ತಮವೆಂದು ಋಷಿಗಳು ಮಾಡುತ್ತಾರೆ. ಆಷಾಢ ಮಾಸದ ಪುಣ್ಯಕಾಲದಲ್ಲಿ ನಾನು ಅಲ್ಲಿಗೆ ಹೋಗುತ್ತೇನೆ.

ಮಾಸ್ಯೈಕಂ ವಿಧಿನಾ ಚೈವ ಸ್ನಾನಂ ತತ್ರ ಕರೋಮ್ಯಹಂ ।
ತಾರಕಂ ತತ್ರ ವಿಶದಂ ಜಪಾಮಿ ತು ನಿರಂತರಂ　　॥ ೧೯ ॥

ಅತೋಽಹಂ ವೈಷ್ಣವೋ ಜಾತೋ ವಿಷ್ಣುಕ್ಷೇತ್ರೇ ಯತೋ ಗತಃ ।
ವಿಷ್ಣುನಾ ನಿರ್ಮಿತಂ ಪೂರ್ವಂ ಕ್ಷೇತ್ರಂ ತತ್ತು ಮಹತ್ತರಂ　　॥ ೨೦ ॥

ವೈಷ್ಣವಾನಾಂ ಚ ಗತಿದಂ ಪಾವನಂ ಪರಮಂ ಸ್ಮೃತಂ ।
ಭವೇಽಸ್ಮಿನ್ಮಾನುಷೇ ಜನ್ಮ ದುರ್ಲಭಂ ದೇವಿ ಸರ್ವದಾ　　॥ ೨೧ ॥

ದುರ್ಲಭಂ ಗಣ್ಡಿಕಾತೀರ್ಥಂ ವಿಷ್ಣುಕ್ಷೇತ್ರಂ ತು ದುರ್ಲಭಂ ।
ಅತೋ ಹ್ಯಾಷಾಢಮಾಸೇ ತು ಗಂತವ್ಯಂ ದ್ವಿಜಸತ್ತಮೈಃ　　॥ ೨೨ ॥

ತತ್ರ ಗತ್ವಾ ವಿಶೇಷೇಣ ಶಂಖಚಕ್ರಾದಿಧಾರಣಂ ।
ಕರ್ತವ್ಯಂ ತು ದ್ವಿಜಶ್ರೇಷ್ಠೈಃ ಪವಿತ್ರಂ ಪರಮಂ ಸ್ಮೃತಂ　　॥ ೨೩ ॥

---

೧೯. ಆ ಆಷಾಢ ಮಾಸದಲ್ಲಿ ಪೂರ್ತಿಯಾಗಿ ಆ ನದಿಯಲ್ಲಿ ನಾನು ಸ್ನಾನ ಮಾಡುತ್ತೇನೆ. ಮತ್ತು ತಾರಕ ಮಂತ್ರವನ್ನು ಯಾವಾಗಲೂ ಅಲ್ಲಿ ಜಪ ಮಾಡುತ್ತೇನೆ.

೨೦. ನಾನು ಹೀಗೆ ವಿಷ್ಣು ಕ್ಷೇತ್ರಗಳಿಗೆ ಹೋಗುವುದರಿಂದಲೇ ವಿಷ್ಣು ಭಕ್ತನಾಗಿದ್ದೇನೆ. ಈ ಕ್ಷೇತ್ರವನ್ನು ವಿಷ್ಣುವೇ ಮೊದಲು ಸೃಷ್ಟಿಸಿದವನು.

೨೧–೨೨. ವಿಷ್ಣುಭಕ್ತರಿಗೆ ಗತಿಯನ್ನು ಕೊಡುತ್ತದೆ. ಪರಮ ಪಾವನ ವಾದುದು. ಎಲೈ ದೇವಿಯೆ ! ಈ ಸಂಸಾರದಲ್ಲಿ ಮನುಷ್ಯ ಜನ್ಮವು ಸಿಕ್ಕುವುದು ಕಷ್ಟವು. ಅದರಲ್ಲಿಯೂ ಈ ಗಂಡಕಿಯ ತೀರ್ಥವು ಸಿಕ್ಕುವುದೇ ಕಷ್ಟವು. ಅದರಲ್ಲಿಯೂ ಅದರಲ್ಲಿರುವ ವಿಷ್ಣು ಕ್ಷೇತ್ರವು ಮತ್ತೂ ದುರ್ಲಭವು. ಆದ್ದರಿಂದ ಬ್ರಾಹ್ಮಣರಾದವರು ಆಷಾಢ ಮಾಸದಲ್ಲಿ ಅಲ್ಲಿಗೆ ಸ್ನಾನಕ್ಕೆ ಹೋಗಬೇಕು.

೨೩. ಆ ಗಂಡಕಿಯ ವಿಷ್ಣು ಕ್ಷೇತ್ರಕ್ಕೆ ಆಷಾಢಮಾಸದಲ್ಲಿ ಹೋಗಿ ಶಂಖ ಚಕ್ರಾದಿ ಧಾರಣಗಳನ್ನು ಮಾಡಿಸಿಕೊಂಡರೆ ಪರಮ ಪವಿತ್ರವೆಂದು ಹೇಳಿದ್ದಾರೆ.

ಶಂಖಚಿಹ್ನಂ ತು ವಾಮೇ ವೈ ದಕ್ಷಿಣೇ ಚಕ್ರಚಿಹ್ನಿತಂ ।
ದ್ವಿಜಾನಾಂ ಮುಕ್ತಿದಂ ಪ್ರೋಕ್ತಂ ಧಾರಿತವ್ಯಂ ಪ್ರಯತ್ನತಃ ॥ ೨೪ ॥

ಬ್ರಾಹ್ಮಣೈಶ್ಚ ವಿಶೇಷೇಣ ಶಂಖಚಕ್ರಾದಿಧಾರಣಂ ।
ಧೃತೇ ಸತಿ ಮಹಾದೇವಿ ವೈಷ್ಣವಾಸ್ತೇ ಹಿ ಮಾನವಾಃ ॥ ೨೫ ॥

ನ ಗಣ್ಡಿಕಾಸಮಂ ತೀರ್ಥಂ ನ ವ್ರತಂ ದ್ವಾದಶೀ ಸಮಂ ।
ನ ದೇವಃ ಕೇಶವಾದನ್ಯೋ ಭೂಯೋ ಭೂಯೋ ವರಾನನೇ ॥ ೨೬ ॥

ಗಣ್ಡಿಕಾಯಾಸ್ತು ಮಾಹಾತ್ಮ್ಯಂ ಯೇ ಶೃಣ್ವಂತಿ ನರೋತ್ತಮಾಃ ।
ಇಹ ಲೊಕೇ ಸುಖಂ ಭುಕ್ತ್ವಾ ವಿಷ್ಣುಲೋಕಂ ಹಿ ಯಾಂತಿ ತೇ ॥ ೨೭ ॥

ಇತಿ ಶ್ರೀ ಮಹಾಪುರಾಣೇ ಪಾದ್ಮೇ ಉತ್ತರಖಂಡೇ ಪಾರ್ವತೀ ಮಹಾದೇವ ಸಂವಾದೇ ಗಣ್ಡಿಕಾತೀರ್ಥ ಮಾಹಾತ್ಮ್ಯಂ ನಾಮ ಷಟ್ಸಪ್ತತಿತಮೋಽಧ್ಯಾಯಸ್ಸಮಾಪ್ತಃ

---

೨೪. ಎಡತೋಳಿಗೆ ಶಂಖಚಿಹ್ನೆಯನ್ನೂ ಬಲಗಡೆಗೆ ಚಕ್ರಚಿಹ್ನೆಯನ್ನೂ ಮಾಡಿಸಿಕೊಳ್ಳಬೇಕು. ಹೀಗೆ ಮಾಡಿಸಿಕೊಂಡರೆ ಬ್ರಾಹ್ಮಣರಿಗೆ ಮೋಕ್ಷವು ಬರುತ್ತದೆ. ಆದ್ದರಿಂದ ಪ್ರಯತ್ನಪಟ್ಟಾದರೂ ಮಾಡಿಸಿಕೊಳ್ಳಬೇಕು.

೨೫. ಬ್ರಾಹ್ಮಣರುಗಳು ಅಗತ್ಯವಾಗಿ ಶಂಖಚಕ್ರಗಳನ್ನು ಧಾರಣೆಮಾಡಿಕೊಳ್ಳಬೇಕು. ಹಾಗೆ ಮಾಡಿಸಿಕೊಂಡು ವೈಷ್ಣವರು ಮನುಷ್ಯರಲ್ಲ. ದೇವರ ಅವತಾರಿಗಳು.

೨೬. ಪ್ರಪಂಚದಲ್ಲಿ ಗಂಡಕಿಗೆ ಸಮವಾದ ತೀರ್ಥವಿಲ್ಲ. ದ್ವಾದಶಿಗೆ ಸಮವಾದ ವ್ರತವಿಲ್ಲ. ಕೇಶವನಿಗಿಂತಲೂ ಉತ್ತಮವಾದ ದೇವರಿಲ್ಲ. ಇದನ್ನು ನಾನು ಬಾರಿಬಾರಿಗೂ ಒತ್ತಿ ಹೇಳುತ್ತೇನೆ.

೨೭ ಈ ಗಂಡಕಿಯ ಮಹಿಮೆಯನ್ನು ಕೇಳಿದವರು ಈ ಲೋಕವಲ್ಲಿ ಸುಖವನ್ನೇ ಅನುಭವಿಸಿ ಸತ್ತಮೇಲೆ ವೈಕುಂಠವನ್ನು ಹೊಂದುತ್ತಾರೆ

ಇಂತು ಶ್ರೀ ಪದ್ಮಮಹಾಪುರಾಣದ ಉತ್ತರಖಂಡದ ಪಾರ್ವತೀ ಮಹಾದೇವರ ಸಂವಾದದಲ್ಲಿ ಗಂಡಕೀತೀರ್ಥ ಮಹಿಮೆ ಎಂಬ ಎಪ್ಪತ್ತಾರನೆಯ ಅಧ್ಯಾಯವು ಮುಗಿದುದು.



|| ಶ್ರೀಃ ||

-X-

# ಅಥ ಶ್ರೀ ಮಹಾಪುರಾಣೇ. ಪಾದ್ಮೇ ಉತ್ತರಖಂಡೇ

## || ಸಪ್ತಸಪ್ತತಿತಮೋಽಧ್ಯಾಯಃ ||



|| ಮಹಾದೇವ ಉವಾಚ ||

ಶೃಣು ಸುಂದರಿ ವಕ್ಷ್ಯಾಮಿ ಸ್ತೋತ್ರಂ ಚಾಭ್ಯುದಯಂ ತತಃ ।
ಯಚ್ಛ್ರುತ್ವಾ ಮುಚ್ಯತೇ ಪಾಪೀ ಬ್ರಹ್ಮಹಾ ನಾತ್ರ ಸಂಶಯಃ || ೧ ||

ಧಾತಾ ವೈ ನಾರದಂ ಪ್ರಾಹ ತದಹಂ ತು ಬ್ರವೀಮಿ ತೇ ।
ಮಾಮುವಾಚ ತತೋ ದೇವಃ ಸ್ವಯಂಭೂರಮಿತದ್ಯುತಿಃ || ೨ ||

ಪ್ರಗೃಹ್ಯ ರುಚಿರಂ ಬಾಹುಂ ಸ್ಮಾರಯೇ ಚೋರ್ಧ್ವದೇಹಕಂ ।
ಭಗವಾನ್ನಾರಾಯಣಶ್ಶ್ರೀಮಾನ್ ದೇವಶ್ಚಕ್ರಾಯುಧೋ ಹರಿಃ || ೩ ||

---

## ಎಪ್ಪತ್ತೇಳನೆಯ ಅಧ್ಯಾಯವು



೧. ಮಹಾದೇವನು ಹೇಳಿದನು-ಎಲೈ ಸುಂದರಿಯೆ! ಅಭ್ಯುದಯ ಸ್ತೋತ್ರವನ್ನು ಹೇಳುತ್ತೇನೆ, ಕೇಳು. ಇದನ್ನು ಕೇಳಿದವನು ಬ್ರಹ್ಮಹತ್ಯೆ ಮಾಡಿದ ಪಾಪಿಯಾದರೂ ಆ ಪಾಪವನ್ನೆಲ್ಲಾ ಕಳೆದು ಕೊಳ್ಳುತ್ತಾನೆ.

೨. ಬ್ರಹ್ಮನು ನಾರದನಿಗೆ ಹೇಳಿದನು, ಅದನ್ನೇ ನಾನು ನಿನಗೆ ಹೇಳುತ್ತೇನೆ, ಅಲ್ಲದೆ ಆ ಬ್ರಹ್ಮನೇ ನನಗೂ ಹೇಳಿರುವನು.

೩. ಕೈಗಳೆರಡನ್ನೂ ಮೇಲಕ್ಕೆತ್ತಿ ಕೈಮುಗಿದುಕೊಂಡು ಆ ಸ್ವಾಮಿಯನ್ನು ಸ್ಮರಿಸಿಕೊಳ್ಳುತ್ತೇನೆ. ಭಗವಂತನಾದ ನಾರಾಯಣನು ಸಂಪತ್ತುಳ್ಳವನು ಚಕ್ರವನ್ನೇ ಆಯುಧವಾಗಿ ಉಳ್ಳವನು ಪಾಪಹಾರಕನು.

ಶಾರ್ಙ್ಗಧಾರೀ ಹೃಷೀಕೇಶಃ ಪುರಾಣಪುರುಷೋತ್ತಮಃ ।
ಅಜಿತಃ ಖಡ್ಗಬಿಜ್ಜಿಷ್ಣುಃ ಕೃಷ್ಣಶ್ಚೈವ ಸನಾತನಃ ॥ ೪ ॥

ಏಕಶೃಂಗೋ ವರಾಹಸ್ತ್ವಂ ಭೂತಭವ್ಯಭವಾತ್ಮಕಃ ।
ಅಕ್ಷರಂ ಬ್ರಹ್ಮ ಸತ್ಯಂ ತು ಆದೌ ಚಾನ್ತೇ ಚ ರಾಘವಃ ॥ ೫ ॥

ಲೋಕಾನಾಂ ತ್ವಂ ಪರೋ ಧರ್ಮೋ ವಿಶ್ವಕ್ಸೇನಶ್ಚತುರ್ಭುಜಃ ।
ಸೇನಾನೀರಕ್ಷಣಸ್ತ್ವಂ ಚ ವೈಕುಂಠಸ್ತ್ವಂ ಜಗತ್ಪ್ರಭೋ ॥ ೬ ॥

ಪ್ರಭವಶ್ಚಾಽವ್ಯಯಸ್ತ್ವಂ ಚ ಉಪೇಂದ್ರೋ ಮಧುಸೂದನಃ ।
ಪೃಶ್ನಿಗರ್ಭೋ ಧೃತಾರ್ಚಿಸ್ತ್ವಂ ಪದ್ಮನಾಭೋ ರಣಾಂತಕೃತ್ ॥ ೭ ॥

ಶರಣ್ಯಂ ಶರಣಂ ಚ ತ್ವಾಮಾಹುಃ ಸೇಂದ್ರಾ ಮಹರ್ಷಯಃ ।
ಋಕ್ಸಾಮಶ್ರೇಷ್ಠೋ ವೇದಾತ್ಮಾ ಶತಜಿಹ್ವೋ ಮಹರ್ಷಯಃ ॥ ೮ ॥

---

೪-೫. ಶಾರ್ಙ್ಗವೆಂಬ ಧನುಸ್ಸನ್ನು ಹಿಡಿದಿರುವನು. ಇಂದ್ರಿಯಗಳಿಗೆ ಒಡೆಯನು. ಬಹು ಹಳಬನು. ಜಯಿಸಲಸಾಧ್ಯನು. ಖಡ್ಗನನ್ನು ಕೊಂದವನು. ಜಯಶೀಲನು. ಸನಾತನನಾದ ಕೃಷ್ಣನು. ಒಂದೇ ಕೋರೆಯುಳ್ಳ ಹಂದಿಯ ಅವತಾರಿಯು. ಭೂತಭವಿಷ್ಯದ್ವರ್ತಮಾನ ರೂಪನು. ನಾಶರಹಿತನು. ಬ್ರಹ್ಮನು. ಸತ್ಯರೂಪನು. ಮೊದಲು ಕೊನೆಗಳಲ್ಲಿ ತನ್ನ ಶಕ್ತಿಯನ್ನು ತೋರ್ಪಡಿಸುವವನು. ಶ್ರೀ ರಾಮಾವತಾರಿಯು.

೬. ನೀನು ಲೋಕಗಳಿಗೆ ಉತ್ತಮವಾದ ಧರ್ಮರೂಪನು. ಎಲ್ಲಾ ಕಡೆಯಲ್ಲಿಯೂ ಗಮನಗಳುಳ್ಳವನು. ನಾಲ್ಕು ತೋಳುಗಳುಳ್ಳವನು. ಸೇನೆಗಳನ್ನು ಕಾಪಾಡುವವನು. ನೀನೇ ವೈಕುಂಠವು. ಜಗತ್ತಿಗೆಲ್ಲಾ ಸ್ವಾಮಿಯು.

೭. ಉತ್ಪತ್ತಿ ಮಾಡುವವನು. ನಾಶರಹಿತನು. ಇಂದ್ರನ ತಮ್ಮನು. ಮಧುವನ್ನು ಕೊಂದವನು. ಪುಷ್ಟಿಯೇ ಗರ್ಭದಲ್ಲಿ ಉಳ್ಳವನು ಕಾಂತಿಯುಳ್ಳ ಪದ್ಮವೇ ಹೊಕ್ಕಳಲ್ಲಿ ಉಳ್ಳವನು. ರಣಕ್ಕೆ ಕೊನೆಗಾಣಿಸುವವನು.

೮. ನಿನ್ನನ್ನು ರಕ್ಷಣನನ್ನಾಗಿಯೂ ರಕ್ಷಣರೂಪನನ್ನಾಗಿ ಮಹರ್ಷಿಗಳೆಲ್ಲರೂ ಹೇಳುತ್ತಾರೆ. ಋಕ್ಕುಗಳಿಗೂ ಸಾಮಕ್ಕೂ ಶ್ರೇಷ್ಠನು. ವೇದಸ್ವರೂಪನು. ನೂರು ನಾಲಿಗೆಯುಳ್ಳವನು.

ತ್ವಂ ಯಜ್ಞಸ್ತ್ವಂ ವಷಟ್ಕಾರಃ ತ್ವಮೋಂಕಾರಃ ಪರಂತಪಃ ।
ಶತಧನ್ವಾ ವಸುಃ ಪೂರ್ವಂ ವಸೂನಾಂ ತ್ವಂ ಪ್ರಜಾಪತಿಃ ॥ ೯ ॥

ತ್ರಯಾಣಾಮಪಿ ಲೋಕಾನಾಮಾದಿಕರ್ತಾ ಸ್ವಯಂ ಪ್ರಭುಃ ।
ರುದ್ರಾಣಾಮಷ್ಟಮೋ ರುದ್ರಃ ಸಾಧ್ಯಾನಾಮಪಿ ಪಂಚಮಃ ॥ ೧೦ ॥

ಅಶ್ವಿನೌ ಚಾಪಿ ಕರ್ಣೌ ತೇ ಸೂರ್ಯಚಂದ್ರೌ ಚ ಚಕ್ಷುಷೀ ।
ಅಂತೇ ಚಾದೌ ಚ ಮಧ್ಯೇ ಚ ದೃಶ್ಯಸೇ ತ್ವಂ ಪರಂತಪ ॥ ೧೧ ॥

ಪ್ರಭವೋ ಸಾಧನಂ ಚಾಪಿ ನ ವಿದುಃ ಕೋ ಭವಾನಿತಿ ।
ದೃಶ್ಯಸೇ ಸರ್ವಲೋಕೇಷು ಗೋಷು ಚ ಬ್ರಾಹ್ಮಣೇಷುಚ ॥ ೧೨ ॥

ದಿಕ್ಷು ಸರ್ವಾಸು ಗಗನೇ ಪರ್ವತೇಷು ಗುಹಾಸು ಚ ।
ಸಹಸ್ರನಯನಃ ಶ್ರೀಮಾನ್ ಶತಶೀರ್ಷಸ್ಸಹಸ್ರಪಾತ್ ॥ ೧೩ ॥

---

೯. ನೀನೇ ಯಜ್ಞರೂಪನು. ನೀನೇ ವಷಟ್ಕಾರ ರೂಪನು. ನೀನೇ ಓಂಕಾರರೂಪನು ಮತ್ತು ಪರಂತಪನು. ಮೊದಲು ಶತಧನ್ವನೆಂಬ ವಸುವಾಗಿದ್ದೆ. ವಸುಗಳಿಗೆಲ್ಲಾ ಯಜಮಾನನು.

೧೦. ನೀನು ಮೂರು ಲೋಕಗಳನ್ನೂ ಮೊದಲು ಸೃಷ್ಟಿ ಮಾಡಿದವನು. ಸ್ವತಃ ರಾಜನಾಗಿದ್ದೀಯೆ. ರುದ್ರರಲ್ಲಿ ನೀನು ಎಂಟನೆಯ ರುದ್ರನು. ಸಾಧ್ಯರಲ್ಲಿ ನೀನು ಐದನೆಯವನು.

೧೧. ಅಶ್ವಿನೀ ದೇವತೆಗಳೇ ನಿನ್ನ ಕಿವಿಗಳು. ಸೂರ್ಯ ಚಂದ್ರರೇ ನಿನ್ನ ಕಣ್ಣುಗಳು. ಆದಿಯಲ್ಲಿಯೂ ಮಧ್ಯದಲ್ಲಿಯೂ ಕೊನೆಯಲ್ಲಿಯೂ ಕೂಡ ನೀನೇ ಕಾಣುತ್ತೀಯೆ.

೧೨. ನೀನು ಹುಟ್ಟತಕ್ಕನನೂ ಸಾಯತಕ್ಕವನೂ ಆಗಿದ್ದೀಯೆ ನೀನಾರೆಂಬುದೇ ಗೊತ್ತಾಗುವುದಿಲ್ಲ. ನಿನ್ನನ್ನು ಪ್ರಾಣಿಗಳು ಗೋವುಗಳಲ್ಲಿಯೂ ಬ್ರಾಹ್ಮಣರಲ್ಲಿಯೂ ನೋಡಬಹುದು

೧೩. ದಿಕ್ಕುಗಳಲ್ಲಿಯೂ, ಗಗನದಲ್ಲಿಯೂ, ಪರ್ವತಗಳಲ್ಲಿಯೂ, ನಿನ್ನನ್ನು ನೋಡಬಹುದು. ನೀನು ಸಾವಿರ ಕಣ್ಣುಗಳನ್ನು ಹೊಂದಿದ್ದೀಯೆ. ನೂರು ತಲೆಗಳಿವೆ. ಸಾವಿರ ಕಾಲುಗಳಿವೆ.

ತ್ವಂ ಧಾರಯಸಿ ಭೂತಾನಿ ವಸುಧಾಂ ಚ ಸಪರ್ವತಾಂ ।
ಅಂತಃಪೃಥಿವ್ಯಾಂ ಸಲಿಲೇ ವರ್ತಸೇ ತ್ವಂ ಮಹೋರಗಃ ॥ ೧೪ ॥

ತ್ರೀಂಲ್ಲೋಕಾನ್ ಧಾರಯನ್ ರಾಮ ದೇವಗಂಧರ್ವ ದಾನವಾನ್ ।
ಅಹಂ ತೇ ಹೃದಯಂ ರಾಮ ಜಿಹ್ವಾ ದೇವೀ ಸರಸ್ವತೀ ॥ ೧೫ ॥

ದೇವಾ ರೋಮಾಣಿ ಗಾತ್ರೇಷು ನಿರ್ಮಿತಾಸ್ತೇ ಸ್ವಮಾಯಯಾ ।
ನಿಮಿಷಸ್ತೇ ಸ್ಮೃತಾ ರಾತ್ರಿರುನ್ಮೇಷೋ ದಿವಸಸ್ತಥಾ ॥ ೧೬ ॥

ಸಂಸ್ಕಾರಸ್ತೇ ಭವೇದ್ದೇಹೋ ನ ತದಸ್ತಿ ವಿನಾ ತ್ವಯಾ ।
ಜಗತ್ಸರ್ವಂ ಶರೀರಂ ತೇ ಸ್ಥೈರ್ಯಂ ಚ ವಸುಧಾತಲಂ ॥ ೧೭ ॥

ಅಗ್ನಿಃ ಕೋಪಃ ಪ್ರಸಾದಸ್ತೇ ಶೇಷಃ ಶ್ರೀಮಾಂಶ್ಚ ಲಕ್ಷ್ಮಣಃ ।
ತ್ವಯಾ ಲೋಕಸ್ತ್ರಯಃ ಕ್ರಾನ್ತಾಃ ಪುರಾಣೈರ್ವಿಕ್ರಮೈಸ್ತ್ರಿಭಿಃ ॥ ೧೮ ॥

---

೧೪. ನೀನೇ ಪಂಚ ಭೂತಗಳನ್ನೂ ಧರಿಸಿದ್ದೀಯೆ. ಪರ್ವತದೊಡನೆ ಕೂಡಿದ ಭೂಮಿಯನ್ನೂ ಧರಿಸಿದ್ದೀಯೆ. ಭೂಮಿಯ ಮತ್ತು ನೀರಿನ ಒಳಗಡೆಯಲ್ಲೆಲ್ಲಾ ಇದ್ದೀಯೆ. ನೀನೇ ಮಹಾ ಸರ್ಪನು.

೧೫. ಎಲೈ ರಾಮನೆ ! ನೀನು ಮೂರು ಲೋಕಗಳನ್ನೂ ದೇವ ಗಂಧರ್ವ ರಾಕ್ಷಸರನ್ನೂ ಧರಿಸಿದ್ದೀಯೆ. ಎಲೈ ರಾಮನೆ ! ನಾನೇ ನಿನ್ನ ಹೃದಯವು. ಸರಸ್ವತಿಯೇ ನಿನ್ನ ನಾಲಿಗೆಯು.

೧೬. ದೇವತೆಗಳೇ ರೋಮಗಳು. ಈ ರೀತಿಯಾಗಿ ನಿನ್ನ ದೇಹದಲ್ಲಿಯೇ ಎಲ್ಲರನ್ನೂ ನಿರ್ಮಿಸಿದ್ದೀಯೆ. ನೀನು ರೆಪ್ಪೆ ಮುಚ್ಚುವುದೇ ರಾತ್ರಿಯು. ರೆಪ್ಪೆ ತೆಗೆಯುವುದೇ ಹಗಲು.

೧೭. ನಿನ್ನ ದೇಹವನ್ನು ಕಾಪಾಡಿಕೊಳ್ಳುವುದೇ ಜಗತ್ತನ್ನು ಸರಿಮಾಡುವಿಕೆಯು ನೀನಿಲ್ಲದಿರುವುದು ಯಾವುದೂ ಇಲ್ಲ. ಜಗತ್ತೆಲ್ಲವೂ ನಿನ್ನ ಶರೀರವು. ನಿನ್ನ ಸ್ಥಿರತೆಯೇ ಭೂಮಿಯು.

೧೮. ಅಗ್ನಿಯೇ ನಿನ್ನ ಕೋಪವು ಅನುಗ್ರಹವೇ ಶೇಷ ರೂಪನಾದ ಲಕ್ಷ್ಮಣನು. ನೀನು ತ್ರಿವಿಕ್ರಮಾವತಾರದಲ್ಲಿ ಮೂರು ಲೋಕವನ್ನೂ ಆಕ್ರಮಿಸಿದ್ದೀಯೆ.

ತ್ವಯೇಂದ್ರಶ್ಚ ಕೃತೋ ರಾಜಾ ಬಲಿರ್ಬದ್ಧೋ ಮಹಾಸುರಃ ।
ಲೋಕಾನ್ಸಂಹೃತ್ಯ ಕಾಲಸ್ತ್ವಂ ನಿವೇಶ್ಯಾತ್ಮನಿ ಕೇವಲಂ ॥ ೧೯ ॥

ಕರೋಷ್ಯೇಕಾರ್ಣವಂ ಘೋರಂ ದೃಶ್ಯಾದೃಶ್ಯೇಚ ನಾನ್ಯಥಾ ।
ತ್ವಯಾ ಸಿಂಹವಪುಃ ಕೃತ್ವಾ ಪರಮಂ ದಿವ್ಯಮದ್ಭುತಂ ॥ ೨೦ ॥

ಭಯದಸ್ಸರ್ವಭೂತಾನಾಂ ಹಿರಣ್ಯಕಶಿಪುರ್ಹತಃ ।
ತ್ವಮಶ್ವವದನೋ ಭೂತ್ವಾ ಪಾತಾಳತಳಮಾಶ್ರಿತಃ ॥ ೨೧ ॥

ಸಂಹೃತಂ ಪರಮಂ ಹವ್ಯಂ ರಹಸ್ಯಂ ವೈ ಪುನಃ ಪುನಃ ।
ಯತ್ಪರಂ ಶ್ರೂಯತೇ ಜ್ಯೋತಿರ್ಯತ್ಪರಂ ಶ್ರೂಯತೇ ಪರಃ ॥ ೨೨ ॥

ಯತ್ಪರಂ ಪರತಶ್ಚೈವ ಪರಮಾತ್ಮೇತಿ ಕಥ್ಯತೇ ।
ಪರೋ ಮಂತ್ರಃ ಪರಂ ತೇಜಃ ತ್ವಮೇವ ಹಿ ನಿಗದ್ಯಸೇ ॥ ೨೩ ॥

ಹವ್ಯಂ ಕವ್ಯಂ ಪವಿತ್ರಂ ಚ ಪ್ರಾಪ್ತಿಸ್ಸ್ವರ್ಗಾಪವರ್ಗಯೋಃ ।
ಸ್ಥಿತ್ಯುತ್ಪತ್ತಿರ್ವಿನಾಶಾಂತಂ ತ್ವಾಮಾಹುಃ ಪ್ರಕೃತೇಃ ಪರಂ ॥ ೨೪ ॥

---

೧೯. ನೀನೇ ಇಂದ್ರನನ್ನು ರಾಜನನ್ನಾಗಿ ಮಾಡಿದೆ. ಮಹಾಸುರನಾದ ಬಲಿಯನ್ನು ಕಟ್ಟಿಹಾಕಿದೆ. ನೀನೇ ಕಾಲರೂಪನಾಗಿ ಪ್ರಪಂಚವೆಲ್ಲವನ್ನೂ ನಾಶ ಮಾಡಿ ನಿನ್ನಲ್ಲಿಟ್ಟುಕೊಂಡೆ.

೨೦-೨೩. ಆ ರೀತಿಯಾಗಿ ಪ್ರಾಣಿಗಳನ್ನು ಇಟ್ಟುಕೊಂಡು ಪ್ರಪಂಚವನ್ನೆಲ್ಲಾ ಒಂದೇ ಸಮುದ್ರವನ್ನಾಗಿ ಮಾಡುತ್ತೀಯೆ. ನೀನೇ ಉತ್ತಮವಾದ ಸಿಂಹದ ದೇಹವನ್ನು ಹೊಂದಿ ಭಯಂಕರನಾದ ಹಿರಣ್ಯಕಶಿಪುವನ್ನು ಕೊಂದೆ. ನೀನು ಕುದುರೆಯ ಮುಖವುಳ್ಳವನಾಗಿ ಹಯಗ್ರೀವಾವತಾರಮಾಡಿ ಪಾತಾಳಕ್ಕೆ ಹೋಗಿ ಹವ್ಯವನ್ನೂ ರಹಸ್ಯಗಳನ್ನೂ ತಂದಿರುತ್ತೀಯೆ. ಉತ್ತಮವಾದ ತೇಜಸ್ಸೂ ಪರಾತ್ಪರನೂ ಪರಮಾತ್ಮನೂ ನೀನೇ ಆಗಿದ್ದೀಯೆ. ಉತ್ತಮವಾದ ಮಂತ್ರವೂ ಉತ್ತಮವಾದ ತೇಜಸ್ಸೂ ನೀನೆಂದೇ ಹೇಳುತ್ತಾರೆ.

೨೪. ಹವ್ಯವೂ ಕವ್ಯವೂ ಪವಿತ್ರವಾದ ವಸ್ತುವೂ ಸ್ವರ್ಗಮೋಕ್ಷಗಳ ಪ್ರಾಪ್ತಿಯೂ ನೀನಾಗಿದ್ದೀಯೆ. ಸ್ಥಿತಿ ಉತ್ಪತ್ತಿ ನಾಶ ಇವೆಲ್ಲಕ್ಕೂ ನೀನೇ ಕಾರಣನೆಂದೆನ್ನುತ್ತಾರೆ. ನೀನು ಪ್ರಕೃತಿಗಿಂತಲೂ ಉತ್ತಮನು.

**ಯಜ್ಞಶ್ಚ ಯಜಮಾನಶ್ಚ ಹೋತಾ ಚಾಧ್ವರ್ಯುರೇವ ಚ ।**
**ಭೋಕ್ತಾ ಯಜ್ಞಫಲಾನಾಂ ಚ ತ್ವಂ ವೈ ವೇದೈಶ್ಚ ಗೀಯಸೇ ॥ ೨೫ ॥**

**ಸೀತಾ ಲಕ್ಷ್ಮೀಃ ಭವಾನ್ವಿಷ್ಣುಃ ಭವಃ ಕೃಷ್ಣಃ ಪ್ರಜಾಪತಿಃ ।**
**ವಧಾರ್ಥಂ ರಾವಣಸ್ಯ ತ್ವಂ ಪ್ರವಿಷ್ಟೋ ಮಾನುಷೀಂ ತನುಂ ॥ ೨೬ ॥**

**ತದಿದಂ ಚ ತ್ವಯಾ ಕಾರ್ಯಂ ಕೃತಂ ಕರ್ಮಭೃತಾಂ ವರ ।**
**ನಿಹತೋ ರಾವಣೋ ರಾಮ ಪ್ರಹೃಷ್ಟಾ ದೇವತಾಃ ಕೃತಾಃ ॥ ೨೭ ॥**

**ಅಮೋಘಂ ದೇವ ವೀರ್ಯಂ ತೇ ನಮೋಽಮೋಘಪರಾಕ್ರಮ ।**
**ಅಮೋಘಂ ದರ್ಶನಂ ರಾಮ ನಮೋಽಮೋಘಸ್ತವಸ್ತವಃ ॥ ೨೮ ॥**

---

೨೫ ನೀನೇ ಯಜ್ಞವು. ನೀನೇಯಜಮಾನನು. ನೀನೇ ಹೋಮಮಾಡುವವನು. ನೀನೇ ಅಧ್ವರ್ಯುವು. ಯಜ್ಞ ಫಲವನ್ನು ತಿನ್ನುವವನೂ ನೀನೇ ಎಂದು ವೇದಗಳು ಹೇಳುತ್ತವೆ.

೨೬. ಲಕ್ಷ್ಮಿಯು ಸೀತೆಯಾಗಿಯೂ ವಿಷ್ಣುವಾದ ನೀನು ರಾಮನಾಗಿಯೂ ಹುಟ್ಟಿದ್ದೀರಿ ಕೃಷ್ಣನೂ ನೀನೇ. ಬ್ರಹ್ಮನೂ ನೀನೇ. ಆ ರಾಮಾವತಾರದಲ್ಲಿ ಮನುಷ್ಯನಾಗಿ ರಾವಣನ ವಧೆಗೋಸ್ಕರ ಹುಟ್ಟಿದ್ದೀಯೆ.

೨೭. ಎಲೈ ರಾಮನೆ! ಕರ್ಮಗಳನ್ನು ಮಾಡಿರುವುದಕ್ಕೆ ಹುಟ್ಟಿದ ನೀನು ಆ ರಾವಣನ ವಧೆಯನ್ನು ಮಾಡಿ ದೇವತೆಗಳಿಗೆ ತೃಪ್ತಿಯನ್ನುಂಟುಮಾಡಿದೆ. ಅವರೆಲ್ಲರೂ ಸಂತೋಷಗೊಂಡರು.

೨೮. ಎಲೈ ರಾಮನೇ! ನಿನ್ನ ಪರಾಕ್ರಮವು ವ್ಯರ್ಥವಲ್ಲದ್ದು. ನಿನಗೆ ನಮಸ್ಕಾರವು. ಎಲೈ ರಾಮನೆ! ನಿನ್ನ ದರ್ಶನವು ವ್ಯರ್ಥವಲ್ಲದ್ದು. ನಿನಗೆ ನಮಸ್ಕಾರವು. ನಿನ್ನ ವೀರ್ಯವು ವ್ಯರ್ಥವಲ್ಲದ್ದು. ನಿನ್ನ ಹೊಗಳಿಕೆಯೂ ಬಹು ಉತ್ತಮವಾದುದು.

ಅಮೋಘಾಸ್ತೇ ಭವಿಷ್ಯಂತೀ ಭಕ್ತಿಮಂತೋ ನರಾ ಭುವಿ ।
ಯೇ ಚ ತ್ವಾಂ ದೇವ ಸಂಭಕ್ತಾಃ ಪುರಾಣಂ ಪುರುಷೋತ್ತಮಂ ॥ ೨೯ ॥

ಇಮಮಾರ್ಷಂಸ್ತವಂ ಪುಣ್ಯಮಿತಿಹಾಸಂ ಪುರಾತನಂ ।
ಯೇ ನರಾಃ ಕೀರ್ತಯಿಷ್ಯಂತಿ ನಾಸ್ತಿ ತೇಷಾಂ ಪರಾಭವಃ ॥ ೩೦ ॥

ಕಥಮಿಹ ಹಿ ಪರಾಭವಂ ವ್ರಜೇಯುಃ ।
ಪುರುಷವರಾಃ ಪುರುಷೋತ್ತಮೇ ಹಿ ಭಕ್ತಾಃ ॥
ನ ಹಿ ವಿಗತಿಶ್ಚತುಭುಜಪ್ರಿಯಾಣಾಂ ।
ತ್ರಿದಶ ಇಹಾಸ್ತಿ ವರಪ್ರದೋ ವಿಶಿಷ್ಟಃ ॥ ೩೧ ॥

ಸ್ತೋತ್ರಾಣಾಂ ಪ್ರವರಂ ಸ್ತೋತ್ರಂ ರಾಘವಸ್ಯ ಮಹಾತ್ಮನಃ ।
ತ್ರಿಕಾಲಂ ಯಃ ಪಠೇನ್ನಿತ್ಯಂ ಮಹಾಪಾತಕವಾನಪಿ ॥ ೩೨ ॥

---

೨೯. ಎಲೈ ರಾಮನೇ ! ನಿನ್ನನ್ನು ತಿಳಿದು ನಿನ್ನಲ್ಲಿ ಭಕ್ತಿಯುಳ್ಳವರು ಲೋಕದಲ್ಲಿ ಉತ್ತಮೋತ್ತಮರಾಗಿ ಆಗುತ್ತಾರೆ. ನಿನ್ನನ್ನು ತಿಳಿಯುವುದು ನಿನ್ನಲ್ಲಿ ಭಕ್ತಿಮಾಡುವುದು ಬಹು ಉತ್ತಮವು.

೩೦. ಇತಿಹಾಸ ರೂಪವಾದ ಪುಣ್ಯಪ್ರದವಾದ ಋಷಿಯಿಂದ ಹೇಳಲ್ಪಟ್ಟ ಈ ಸ್ತೋತ್ರವನ್ನು ಯಾರು ಹೇಳುತ್ತಾರೆಯೋ ಅವರಿಗೆ ಅಪಜಯವೆಂಬುವೇ ಇರುವದಿಲ್ಲ.

೩೧. ಎಲೈ ಪಾರ್ವತಿಯೆ ! ಪುರುಷೋತ್ತಮನಾದ ವಿಷ್ಣುವಿನಲ್ಲಿ ಭಕ್ತಿಯನ್ನು ಹೊಂದಿದವರಿಗೆ ಸೋಲೆಂಬುದೇ ಇರುವುದಿಲ್ಲ. ನಾಲ್ಕು ತೋಳುಳ್ಳ ಆ ಸ್ವಾಮಿಯಲ್ಲಿ ಪ್ರೀತಿಯುಳ್ಳವರಿಗೆ ನರಕವೆಂಬುದೇ ಇರುವುದಿಲ್ಲ. ಆ ಸ್ವಾಮಿಯು ಬೇಕಾದ ವರಗಳನ್ನು ಕೊಡುವನು.

೩೨. ಈ ಸ್ತೋತ್ರವು ಮಹಾಮಹಿಮನಾದ ಶ್ರೀರಾಮನದು. ಇದು ಸ್ತೋತ್ರಗಳಲ್ಲೆಲ್ಲಾ ಉತ್ತಮವಾದುದು. ಮೂರುಕಾಲಗಳಲ್ಲಿಯೂ ಹೇಳಿದರೆ ಮಹಾಪಾಪಿಯಾದರೂ ಆಪಾಪವನ್ನು ಹೋಗಲಾಡಿಸಿಕೊಳ್ಳುತ್ತಾನೆ.

ಸಂಧ್ಯಾಕಾಲೇ ದ್ವಿಜಶ್ರೇಷ್ಠೈಃ ಶ್ರಾದ್ಧಕಾಲೇ ವಿಶೇಷತಃ ।
ಪಠನೀಯಂ ಪ್ರಯತ್ನೇನ ಭಕ್ತಿಭಾವೇನ ಚೇತಸಾ ॥ ೩೩ ॥

ಇದಂ ಗೋಪ್ಯಂ ಹಿ ಪರಮಂ ನಾಖ್ಯೇಯಂ ಕರ್ಹಿಚಿತ್ಕ್ವಚಿತ್ ।
ಪಠನಾನ್ಮುಕ್ತಿಮಾಪ್ನೋತಿ ಶಾಶ್ವತೀ ಸಾ ಭವೇದ್ಧ್ರುವಂ ॥ ೩೪ ॥

ಪ್ರಥಮಂ ಪಿಂಡಪೂಜಾಂತೇ ಬ್ರಾಹ್ಮಣೈರ್ನರಸತ್ತಮೈಃ ।
ಪಠಿತವ್ಯಮಿದಂ ಸ್ತೋತ್ರಂ ಶ್ರಾದ್ಧಮಕ್ಷಯ್ಯಮಾಪ್ನುಯಾತ್ ॥ ೩೫ ॥

ಇದಂ ಪವಿತ್ರಂ ಪರಮಂ ಜನಾನಾಂ ಮುಕ್ತಿದಾಯಕಂ ।
ಲಿಖಿತ್ವಾ ಸ್ವೈ ಗೃಹೇ ಯಸ್ತು ಧಾರಯೇತ್ಸುಸಮಾಧಿನಾ ॥ ೩೬ ॥

ಆಯುಶ್ಶ್ರೀಶ್ಚ ಬಲಂ ತಸ್ಯ ವೃದ್ಧಿಂ ಯಾಂತಿ ದಿನೇ ದಿನೇ ।
ಲಿಖಿತ್ವಾ ಬ್ರಾಹ್ಮಣೇ ದದ್ಯಾತ್ ಧೀಮಾನ್ ಯೋ ವೈ ಕದಾಚನ ॥ ೩೭ ॥

ವಿಮುಕ್ತಾಃ ಪೂರ್ವಜಾಸ್ತಸ್ಯ ಯಾನ್ತಿ ವಿಷ್ಣೋಃ ಪರಂ ಪದಂ ।
ಚತುರ್ಣಾಂ ಚೈವ ವೇದಾನಾಂ ಪಾಠೇ ಚೈವ ತು ಯತ್ಫಲಂ ॥ ೩೮ ॥

---

೩೩. ಬ್ರಾಹ್ಮಣರಾದವರು ಸಂಧ್ಯಾಕಾಲದಲ್ಲಿಯೂ ಶ್ರಾದ್ಧಕಾಲಗಳಲ್ಲಿಯೂ ಭಕ್ತಿಯಿಂದ ಪ್ರಯತ್ನಪಟ್ಟು ಹೇಳಬೇಕು.

೩೪. ಇದು ಬಹು ರಹಸ್ಯವಾದುದು. ಯಾರಿಗೂ ಹೇಳತಕ್ಕದಲ್ಲ. ಬಾಯಲ್ಲಿ ಹೇಳಿದರೆ ಶಾಶ್ವತವಾದ ಮುಕ್ತಿಯು ಬರುವುದರಲ್ಲಿ ಸಂಶಯವಿಲ್ಲ.

೩೫. ಶ್ರಾದ್ಧದಲ್ಲಿ ಪಿಂಡಪೂಜೆಯಾಗುವವರೆಗೂ ಇದನ್ನು ಹೇಳುತ್ತಿರಬೇಕು. ಆ ಶ್ರಾದ್ಧವು ಅಕ್ಷಯ ಫಲವನ್ನು ಕೊಡುತ್ತದೆ.

೩೬–೪೦. ಈ ಸ್ತೋತ್ರವು ಪವಿತ್ರವಾದುದು. ಜನಗಳಿಗೆ ಮುಕ್ತಿಯನ್ನು ಕೊಡುತ್ತದೆ. ಬರೆದು ಮನೆಯಲ್ಲಿಟ್ಟುಕೊಂಡಿದ್ದರೆ ಆಯುಸ್ಸು ಸಂಪತ್ತು ಇವು ದಿನ ದಿನಕ್ಕೆ ಹೆಚ್ಚುತ್ತವೆ. ಬರೆದು ಬ್ರಾಹ್ಮಣನಿಗೆ ಕೊಟ್ಟರೆ ಅವನ ಹಿಂದಿನವರು ಪಾಪಗಳಿಂದ ಮುಕ್ತರಾಗಿ ವಿಷ್ಣುಪದವನ್ನು ಹೊಂದುತ್ತಾರೆ. ಈ ಸ್ತೋತ್ರವನ್ನು ಹೇಳಿದರೆ ಜಪಿಸಿದರೆ ನಾಲ್ಕುವೇದಗಳನ್ನು ಪಠಿಸಿದರೆ ಬರುವ ಫಲವು ಬರುತ್ತದೆ.

ತತ್ಫಲಂ ಸಮವಾಪ್ನೋತಿ ಏತತ್ ಸ್ತೋತ್ರಂ ಪಠನ್ ಜಪನ್ ।
ಧೃತ್ವಾ ವೈ ಶಂಖಚಕ್ರಾದಿ ಬ್ರಾಹ್ಮಣೈರ್ವೇದತತ್ಪರೈಃ ॥ ೩೯ ॥

ಶ್ರಾದ್ಧಕಾಲೇ ಮಹಾದೇವಿ ಅಕ್ಷಯಂ ತದ್ಭವೇದ್ಧ್ರುವಂ ।
ಕಂಠೇ ಚೈವಾಕ್ಷಮಾಲಾಯಾಃ ಶಂಖಚಕ್ರಾದಿಧಾರಣಂ ॥ ೪೦ ॥

ತತಶ್ಶ್ರಾದ್ಧಂ ಪ್ರಕುರ್ವೀತ ಇದಂ ಸ್ತೋತ್ರಂ ಪಠನ್ ಜಪನ್ ।
ವಿಧಿನಾ ಭಕ್ತಿಭಾವೇನ ಪೂರ್ಣಂ ಭವತಿ ನಾನ್ಯಥಾ ॥ ೪೧ ॥

ಅತೋ ಭಕ್ತಿಮತಾ ಪುಂಸಾ ಪಠನೀಯಂ ಪ್ರಯತ್ನತಃ ।
ಪಠನಾತ್ಸರ್ವಮಾಪ್ನೋತಿ ಸ ನರಸ್ಸುಖಮೇಧತೇ ॥ ೪೨ ॥

ಇತಿ ಶ್ರೀ ಮಹಾಪುರಾಣೇ ಪಾದ್ಮೇ ಉತ್ತರಖಂಡೇ ಪಾರ್ವತೀ ಮಹಾದೇವ ಸಂವಾದೇ ಆಭ್ಯುದಯಿಕಮೌರ್ಧ್ವದೇಹಿಕ ಸ್ತೋತ್ರಂ ನಾಮ ಸಪ್ತಸಪ್ತತಿತಮೋಽಧ್ಯಾಯಸ್ಸಮಾಪ್ತಃ

---

ಬ್ರಾಹ್ಮಣರು ಶ್ರಾದ್ಧಕಾಲದಲ್ಲಿ ಶಂಖ ಚಕ್ರಗಳನ್ನು ಧರಿಸಿಕೊಂಡರೆ ಆ ಶ್ರಾದ್ಧವು ಅಕ್ಷಯವಾಗುತ್ತದೆ. ಕತ್ತಿನಲ್ಲಿ ತುಳಸಿಮಣಿ ಮಾಲೆಯ ಜೊತೆಯಲ್ಲಿ ಶಂಖಚಕ್ರಗಳನ್ನು ಸೇರಿಸಿ ಧರಿಸಿಕೊಂಡು ಶ್ರಾದ್ಧಮಾಡುತ್ತಾ ಈ ಸ್ತೋತ್ರವನ್ನು ಹೇಳಬೇಕು.

೪೧. ಅಂತಹ ಶ್ರಾದ್ಧವು ವಿಧಿಯಂತೆಮಾಡಿದುದಾಗಿಯೂ ಪೂರ್ಣವಾಗಿಯೂ ಆಗುತ್ತದೆ. ಇಲ್ಲದಿದ್ದರೆ ಆಗುವುದಿಲ್ಲ.

೪೨. ಆದ್ದರಿಂದ ಭಕ್ತಿಯಿಂದ ಇದನ್ನು ಓದಬೇಕು. ಹಾಗೆ ಓದಿದರೆ ಆತನು ಎಲ್ಲವನ್ನೂ ಹೊಂದಿ ಸುಖಿಯಾಗುತ್ತಾನೆ.

ಇಂತು ಶ್ರೀ ಪದ್ಮಮಹಾಪುರಾಣದ ಉತ್ತರಖಂಡದ ಪಾರ್ವತೀ ಮಹಾದೇವರ ಸಂವಾದದಲ್ಲಿ ಅಭ್ಯುದಯ ಮತ್ತು ಊರ್ಧ್ವದೇಹದ ಸ್ತೋತ್ರ ಎಂಬ ಎಪ್ಪತ್ತೇಳನೆಯ ಅಧ್ಯಾಯವು ಮುಗಿದುದು.



|| ಶ್ರೀಃ ||

-X-

# ಅಥ ಶ್ರೀ ಮಹಾಪುರಾಣೇ ಪಾದ್ಮೇ ಉತ್ತರಖಂಡೇ

## || ಅಷ್ಟಸಪ್ತತಿತಮೋಽಧ್ಯಾಯಃ ||



|| ಮಹಾದೇವ ಉವಾಚ ||

**ಪಪ್ರಚ್ಛಾಹಂ ಜಗನ್ನಾಥಂ ವ್ರತಾನಾಮುತ್ತಮಂ ವ್ರತಂ ।**
**ಪುತ್ರಪೌತ್ರವಿವೃದ್ಧ್ಯರ್ಥಂ ಸುಖಸೌಭಾಗ್ಯದಾಯಕಂ || ೧ ||**

**ತವಾಗ್ರೇ ಸಂಪ್ರವಕ್ಷ್ಯಾಮಿ ಶೃಣು ಸುಂದರಿ ಸಾಂಪ್ರತಂ ।**
**ಇದಂ ಕಥಾನಕಂ ದಿವ್ಯಮೃಷೀಣಾಂ ವ್ರತಮುತ್ತಮಂ || ೨ ||**

**ರಜಸ್ವಲಾ ತು ಯಾ ನಾರೀ ಸಾ ಹತಾ ಪಾಪರೂಪಿಣೀ ।**
**ಕೃತೇನ ಚ ವ್ರತೇನೈವ ಮಹಾಪಾಪೈಃ ಪ್ರಮುಚ್ಯತೇ ।**
**ಪಿತೄಣಾಮಕ್ಷಯಂ ದೇವಿ ಧರ್ಮಕಾಮಾರ್ಥಸಾಧನಂ || ೩ ||**

---

## ಎಪ್ಪತ್ತೆಂಟನೆಯ ಅಧ್ಯಾಯವು



೧-೩. ಮಹಾದೇವನು ಹೇಳಿದನು–ನಾನು ಒಂದುಸಾರಿ ಆ ಜಗನ್ನಾಥನಾದ ಸ್ವಾಮಿಯನ್ನು ವ್ರತಗಳಲ್ಲಿ ಉತ್ತಮ ವ್ರತವಾವುದೆಂದೂ ಅದು ಮಕ್ಕಳು ಮುಮ್ಮಕ್ಕಳು ಸುಖ ಸಂಪತ್ತುಗಳನ್ನು ಕೊಡತಕ್ಕದಾಗಿರಬೇಕೆಂದೂ ಕೇಳಿದೆನು. ಅವನು ಹೇಳಿದುದನ್ನು ನಿನ್ನ ಎದುರಿಗೆ ಹೇಳುತ್ತೇನೆ. ಕೇಳು. ಈ ಕಥೆಯು ಉತ್ತಮವಾದುದು. ಋಷಿಗಳು ಮಾಡುವ ಉತ್ತಮ ವ್ರತವು. ಮುಟ್ಟಾಗುವ ಹೆಂಗಸು ಯಾವಾಗಲೂ ಪಾಪಿನಿಯು. ಈ ವ್ರತವನ್ನು ಮಾಡಿದರೆ ಆ ಮಹಾಪಾಪಗಳಿಂದ ಮುಕ್ತಳಾಗುತ್ತಾಳೆ. ಪಿತೃಗಳಿಗೆ ಅಕ್ಷಯ ಸುಖವು ಬರುತ್ತದೆ. ಧರ್ಮ ಅರ್ಥ ಕಾಮಗಳು ಹೆಚ್ಚುತ್ತವೆ.

|| ಶ್ರೀ ವಿಷ್ಣುರುವಾಚ ||

ಪೂರ್ವಮಾಸೀನ್ಮಹಾಬಾಹೋ ಬ್ರಾಹ್ಮಣೋ ವೇದಪಾರಗಃ |
ಸದಾಧ್ಯಯನಶೀಲಸ್ತು ದೇವಶರ್ಮಾ ಇತಿ ದ್ವಿಜಃ || ೪ ||

ಅಗ್ನಿಹೋತ್ರಕ್ರಿಯಾಯುಕ್ತಃ ಷಟ್ಕರ್ಮನಿರತಸ್ಸದಾ |
ಸರ್ವವರ್ಣೇಷು ಸಂಪೂಜ್ಯಃ ಸಪುತ್ರಪಶುಬಾಂಧವಃ || ೫ ||

ತಸ್ಯ ಬ್ರಾಹ್ಮಣಮುಖ್ಯಸ್ಯ ಭಗ್ನಾ ಚ ಗೃಹವಾಹಿನೀ |
ಪ್ರಾಪ್ತೇ ಭಾದ್ರಪದೇಮಾಸೇ ಶುಕ್ಲಪಕ್ಷೇ ತು ಪಂಚಮಿಾ || ೬ ||

ಪಿತುಃ ಕ್ಷಯಾಹಂ ಕುರುತೇ ತಪಸಾ ಚ ಜಿತೇಂದ್ರಿಯಃ |
ರಾತ್ರೌ ನಿಮಂತ್ರಯೇದ್ವಿಪ್ರಾನ್ ಸುಖಸೌಭಾಗ್ಯದಾಯಕಾನ್ || ೭ ||

ಪ್ರಭಾತೇ ವಿಮಲೇ ಪ್ರಾಪ್ತೇ ಭಾಂಡಾನ್ಯನ್ಯಾನಿ ಕಾರಯೇತ್ |
ಪಾಕಂ ಸರ್ವೇಷು ಪಾತ್ರೇಷು ಸ ಕಾರಯತಿ ಜಾಯಯಾ || ೮ ||

---

೪. ಶ್ರೀ ವಿಷ್ಣುವು ಹೇಳಿದನು–ಪೂರ್ವಕಾಲದಲ್ಲಿ ವೇದದಲ್ಲಿ ಬುದ್ಧಿವಂತನೂ ಯಾವಾಗಲೂ ವೇದವನ್ನೇ ಹೇಳುತ್ತಿರುವವನೂ ಆದ ದೇವಶರ್ಮನೆಂಬ ಬ್ರಾಹ್ಮಣನೊಬ್ಬನಿದ್ದನು.

೫-೮. ಅವನು ಯಾವಾಗಲೂ ಅಗ್ನಿ ಹೋತ್ರಗಳನ್ನು ಮಾಡುತ್ತ ಯಜನ ಯಾಜನ ಅಧ್ಯಯನ ಅಧ್ಯಾಪನ ದಾನ ಪ್ರತಿಗ್ರಹಗಳೆಂಬ ಆರು ಕೆಲಸದಲ್ಲಿಯೂ ನಿರತನಾಗಿದ್ದನು. ಎಲ್ಲಾ ಜಾತಿಯವರೂ ಗೌರವಿಸುತ್ತಿದ್ದರು. ಮಕ್ಕಳು ನೆಂಟರು ಇಷ್ಟರು ಅವನಿಗೆ ಬಹುವಾಗಿ ಇದ್ದರು. ಆ ಬ್ರಾಹ್ಮಣನಿಗೆ ಆಗ ಸಂಸಾರವು ಕೊನೆಗಂಡಿತು. ಒಂದುಸಾರಿ ಭಾದ್ರಪದ ಮಾಸದ ಶುಕ್ಲ ಪಂಚಮಿಯ ದಿವಸ ಪಿತೃಗಳ ಶ್ರಾದ್ಧವು ಬರಲು ನಿಯಮದಿಂದಲೂ ಜಿತೇಂದ್ರಿಯನಾಗಿಯೂ ಅದನ್ನು ಮಾಡಿದನು ಹಿಂದಿನ ದಿನದ ರಾತ್ರಿಯಲ್ಲಿಯೇ ಯೋಗ್ಯರಾದ ಬ್ರಾಹ್ಮಣರಿಗೆ ನಿಮಂತ್ರಣಕ್ಕೆ ಹೇಳಿದನು. ಬೆಳಗಾಗುತ್ತಲೂ ಹೊಸ ಮಡಕೆಗಳನ್ನು ತಂದು ಹೆಂಡತಿಯೊಡನೆ ಅವುಗಳಲ್ಲಿ ಬೇರೆಬೇರೆಯಾಗಿ ಅಡಿಗೆಗಳನ್ನು ಮಾಡಿದನು.

ಅಷ್ಟಾದಶರಸೋಪೇತಂ ಪಿತೄಣಾಂ ಪ್ರೀತಿದಾಯಕಂ ।
ಆ ಕಾರಣಂ ತತೋ ದತ್ವಾ ವಿಪ್ರಾಣಾಂ ಚ ಪೃಥಕ್‌ಪೃಥಕ್ ॥ ೯ ॥

ಸರ್ವೇ ವಿಪ್ರಾಸ್ತು ಸಂಪ್ರಾಪ್ತಾ ಮಧ್ಯಾಹ್ನೇ ವೇದಪಾಠಕಾಃ ।
ಅರ್ಘಪಾದ್ಯಾದಿ ವಿಧಿವತ್ ಕೃತವಾನ್ದ್ವಿಜಸತ್ತಮಃ ॥ ೧೦ ॥

ರಜೋದೂಷಿತಯಾ ತತ್ರ ಚರಣಕ್ಷಾಳನಂ ಕೃತಂ ।
ಗೃಹಮಧ್ಯಗತಾಸ್ಸರ್ವ ಆಸನೇ ತೇ ನಿರೂಪಿತಾಃ ॥ ೧೧ ॥

ಪ್ರದತ್ತಂ ಭೋಜನಂ ತೇನ ಮಿಷ್ಟಾನ್ನೇನ ವಿಶೇಷತಃ ।
ವಿಧಿನಾ ಚ ಕೃತಂ ಶ್ರಾದ್ಧಂ ಪಿಂಡದಾನಪ್ರಪೂರ್ವಕಂ ॥ ೧೨ ॥

ತಾಂಬೂಲಂ ದಕ್ಷಿಣಾಂ ಚೈವ ವಸ್ತ್ರಾಣಿ ವಿವಿಧಾನಿ ಚ ।
ಸರ್ವಂ ದದೌ ದ್ವಿಜೇಭ್ಯೋ ಸ್ಯೈ ಪಿತೃಧ್ಯಾನಪರಾಯಣಃ ॥ ೧೩ ॥

---

೯. ಬೆಳಗಾಗುತ್ತಲೂ ಬ್ರಾಹ್ಮಣರನ್ನು ನಿಮಂತ್ರಣಕ್ಕೆ ಬರಹೇಳಿ ಪಿತೃಗಳಿಗೆ ಪ್ರೀತಿಯಾಗುವಂತೆ ಹದಿನೆಂಟು ಬಗೆಯ ರಸಗಳಿಂದ ಕೂಡಿದ ಅಡಿಗೆಯನ್ನು ಮಾಡಿದನು.

೧೦. ಮಧ್ಯಾಹ್ನದವೇಳೆಗೆ ಆ ವೇದಾಧ್ಯಾಯಿಗಳಾದ ಬ್ರಾಹ್ಮಣರೆಲ್ಲರೂ ಬಂದರು. ಅವರಿಗೆ ಈ ದೇವಶರ್ಮನು ಅರ್ಘ್ಯಪಾದ್ಯ ಮುಂತಾದುವುಗಳನ್ನು ಕೊಟ್ಟನು.

೧೧. ಆತನ ಹೆಂಡತಿಯು ರಜೋವತಿಯಾಗಿ (ಮುಟ್ಟಾಗಿ) ಆ ಬ್ರಾಹ್ಮಣರ ಕಾಲನ್ನು ತೊಳೆದಳು. ಅನಂತರ ಆ ಬ್ರಾಹ್ಮಣರು ಮನೆಯೊಳಗೆ ಹೋಗಿ ಆಸನವನ್ನು ತೆಗೆದುಕೊಂಡು ಅದರಲ್ಲಿ ಕುಳಿತರು.

೧೨. ಆ ದೇವಶರ್ಮನು ಒಳ್ಳೇ ರುಚಿ ರುಚಿಯಾದ ಅನ್ನವನ್ನು ಅವರಿಗೆ ಬಡಿಸಿ ಭೋಜನ ಮಾಡಿಸಿದನು. ಪಿಂಡದಾನವನ್ನು ಮಾಡಿ ಶ್ರಾದ್ಧವನ್ನೆಲ್ಲಾ ಕ್ರಮವಾಗಿ ಮಾಡಿದನು.

೧೩. ತಾಂಬೂಲ ದಕ್ಷಿಣೆ ಬಟ್ಟೆಗಳು ಮುಂತಾದ ಎಲ್ಲವನ್ನೂ ಆ ಬ್ರಾಹ್ಮಣರಿಗೆ ಪಿತೃಗಳ ಹೆಸರನ್ನು ಹೇಳುತ್ತಾ ಕೊಟ್ಟನು.

ವಿಪ್ರಾ ವಿಸರ್ಜಿತಾಸ್ಸರ್ವೆ ಆಶೀರ್ವಾದಪರಾಯಣಾಃ ।
ಗೋತ್ರಿಣೋ ಬಾಂಧವಾಶ್ಚೈವ ಅನ್ಯೇ ಯೇ ಚ ಬುಭುಕ್ಷಿತಾಃ ॥ ೧೪ ॥

ದತ್ತಮನ್ನಂ ತದಾ ತೇನ ಭೋಜನಂ ವಿಧಿಪೂರ್ವಕಂ ।
ನಿಶಾಯಾಂ ತು ಕುಟೀದ್ವಾರ ಉಪವಿಷ್ಟಾ ಯದಾ ತದಾ ॥ ೧೫ ॥

ಬ್ರಾಹ್ಮಣ್ಯಾ ವಾರಿ ಸಂಗೃಹ್ಯ ಪಾದಪ್ರಕ್ಷಾಳನಂ ಕೃತಂ ।
ತದಾ ಶುನೀ ಬಲೀವರ್ದೌ ಪರಸ್ಪರಮಭಾಷತಾಂ ॥ ೧೬ ॥

॥ ಶುನ್ಯುವಾಚ ॥

ಶೃಣು ಕಾಂತ ವಚೋ ಮಹ್ಯಂ ಯಾದೃಶಂ ಕೃತವಾನ್ವಧೂಃ ।
ತಾದೃಶಂ ಸಂಪ್ರವಕ್ಷ್ಯಾಮಿ ನಾನ್ಯಥಾ ಪ್ರಬ್ರವೀಮ್ಯಹಂ ॥ ೧೭ ॥

ಕದಾಚಿದ್ದೈವಯೋಗೇನ ಗತಾಹಂ ಪುತ್ರಸದ್ಮನಿ ।
ತತ್ರ ಸ್ಥಿತಂ ಪಯಃ ಪೀತಂ ವಧ್ವಾ ದೃಷ್ಟಂ ತು ತತ್ಪುನಃ ॥ ೧೮ ॥

---

೧೪. ಬ್ರಾಹ್ಮಣರನ್ನು ವಿಸರ್ಜನೆ ಮಾಡಲು ಅವರು ಆಶೀರ್ವಾದ ಮಾಡುತ್ತಾ ಹೋದರು. ಆನಂತರ ದಾಯಾದಿಗಳು ಬಾಂಧವರು ಅತಿಥಿಗಳು ಎಲ್ಲರಿಗೂ ಭೋಜನ ಮಾಡಿಸಿದನು.

೧೫-೧೬. ಅನಂತರದಲ್ಲಿ ಎಲ್ಲವೂ ಮುಗಿದಮೇಲೆ ಮನೆಯ ಬಾಗಿಲಲ್ಲಿ ಈಕೆಯು ಕುಳಿತುಕೊಂಡಳು. ಆಗ ಆಕೆಯು ನೀರನ್ನು ತೆಗೆದುಕೊಂಡು ಬ್ರಾಹ್ಮಣರ ಕಾಲನ್ನು ತೊಳೆದುದನ್ನು ತಿಳಿದು ಅಲ್ಲಿದ್ದ ನಾಯಿ ಎತ್ತುಗಳು ಮಾತಾಡಿಕೊಂಡುವು.

೧೭. ನಾಯಿಯು ಹೇಳಿತು–ಎಲೈ ಕಾಂತನೆ! ಕೇಳು. ಈ ಸೊಸೆಯು ಎಂತಹ ಕೆಲಸವನ್ನು ಮಾಡಿಬಿಟ್ಟಳು! ಅದನ್ನು ಹೇಳುತ್ತೇನೆ. ಕೇಳು. ಸ್ವಲ್ಪವೂ ಸುಳ್ಳನ್ನು ಹೇಳುವುದಿಲ್ಲ.

೧೮. ಅಕಸ್ಮಾತ್ತಾಗಿ ಒಂದುಸಾರಿ ಮಗನ ಮನೆಗೆ ಹೋದೆನು. ಅಲ್ಲಿದ್ದ ಹಾಲನ್ನು ಕುಡಿದೆನು. ಅದನ್ನು ನನ್ನ ಸೊಸೆ ನೋಡಿದಳು.

ಪೀತಂ ಪಯಸ್ತು ಸರ್ಪೇಣ ತದ್ದೃಷ್ಟಂ ತು ಮಯಾ ಪುನಃ ।
ಪಶ್ಚಾತ್ಪೀತಂ ಮಯಾ ಸಮ್ಯಗ್ದೃಷ್ಟಂ ಪ್ರವಧ್ವಾ ತದಾ ನಃ ॥ ೧೯ ॥

ತೇನ ಸಂಪರ್ಕದೋಷೇಣ ಕಟಿರ್ಭಗ್ನಾ ಚ ಮೇ ತದಾ ।
ತೇನ ದುಃಖೇನ ಭೋ ಸ್ವಾಮಿನ್ ಜಾತಾಹಂ ದುಃಖಭಾಗಿನೀ ॥ ೨೦ ॥

ಭಗ್ನಾ ಕಟಿಶ್ಚ ಸಂಜಾತಾ ಹ್ಯಾಹಾರೋ ನೈವ ರೋಚತೇ ॥ ೨೧ ॥

॥ ಬಲೀವರ್ದ ಉವಾಚ ॥

ಶೃಣು ತ್ವಂ ಶುನಿ ವಕ್ಷ್ಯಾಮಿ ಮಮ ದುಃಖಸ್ಯ ಕಾರಣಂ ।
ಅಸ್ಮಿನ್ನೈ ದಿವಸೇ ಪ್ರಾಪ್ತೇ ಬ್ರಾಹ್ಮಣಾನಾಂ ತು ಭೋಜನಂ ॥ ೨೨ ॥

ಕಾರಿತಂ ಮಮ ಪುತ್ರೇಣ ಮಮ ಚಿಂತಾಪಿ ನೋ ಕೃತಾ ।
ನೋದಕಂ ತು ತೃಣಂ ಚೈವ ನ ದತ್ತಂ ಕೇನ ಚಿತ್ಕ್ವಚಿತ್ ॥ ೨೩ ॥

---

೧೯. ಒಂದು ಹಾವೂ ಆ ಹಾಲನ್ನು ಕುಡಿಯಿತು. ಅದನ್ನು ನಾನು ನೋಡಿದೆನು. ಅನಂತರ ಆ ಹಾಲನ್ನೆಲ್ಲಾ ನಾನು ಕುಡಿದೆನು. ಅದನ್ನೂ ಆಕೆಯು ನೋಡಿದಳು.

೨೦. ಆಕೆಯು ನೋಡಿ ನಾಯಿಯ ಸಂಪರ್ಕದಿಂದ ನನ್ನ ಹಾಲು ಅಪರಿಶುದ್ಧವಾಯಿತೆಂದು ತಿಳಿದು ಹೊಡೆಯಲು ನನ್ನ ನಡುವು ಮುರಿದು ಹೋಯಿತು. ಅದರಿಂದ ಬಹು ದುಃಖಪಡುತ್ತಿದ್ದೇನೆ.

೨೧. ನಡುವು ಮುರಿದುಹೋದುದರಿಂದ ಆ ನೋವನ್ನು ತಾಳಲಾರೆನು. ಆಹಾರವೂ ನನಗೆ ಬೇಕಿಲ್ಲವಾಗಿದೆ.

೨೨–೨೪. ಎತ್ತು ಹೇಳಿತು–ಎಲೈ ನಾಯಿಯೇ! ಕೇಳು. ನನಗೆ ದುಃಖ ವಾಗುತ್ತಿದೆ. ಈ ದಿನದಲ್ಲಿ ಬ್ರಾಹ್ಮಣರಿಗೆಲ್ಲಾ ಬೇಕಾದಹಾಗೆ ಭೋಜನ ಮಾಡಿಸಿ ದನು. ನನ್ನ ಯೋಚನೆಯನ್ನೇ ಆತನು ಮಾಡಲಿಲ್ಲ. ನನಗೆ ಹುಲ್ಲನ್ನಾಗಲಿ ನೀರನ್ನಾಗಲಿ ಕೊಡಲೇ ಇಲ್ಲ. ನನ್ನನ್ನೂ ಕಟ್ಟಿಹಾಕಿದ್ದಾನೆ. ನಾನು

ಅನಾಹಾರೋಽಹ್ಯಹಂ ಪಾಪೀ ಬದ್ಧೋಽಸ್ಮಿ ಪಾಪಭಾವಿತಃ ।
ಪೂರ್ವಪಾಪವಿಶೇಷೇಣ ಜಾತಂ ಶುನಿ ನ ಸಂಶಯಃ ॥ ೨೪ ॥

॥ ಮಹಾದೇವ ಉವಾಚ ॥

ತದ್ವಾಕ್ಯಂ ತು ತದಾ ದೇವಿ ಶ್ರುತಂ ಪುತ್ರೇಣ ಧೀಮತಾ ।
ಮಮಾಯಂ ತು ಪಿತಾ ಸಾಕ್ಷಾತ್ ಜಾತೋ ಮಮ ಗೃಹೇ ಪಶುಃ ॥೨೫॥

ಇಯಂ ತು ಜನನೀ ಸಾಕ್ಷಾತ್ ಮಮ ಮಾತಾ ನ ಸಂಶಯಃ ।
ದೈವಯೋಗಾಚ್ಛುನೀ ಜಾತಾ ಕಿಂ ಕರೋಮಿ ಸುನಿಶ್ಚಯಂ ॥ ೨೬ ॥

ಏವಂ ವಿಚಾರ್ಯಾಸೌ ವಿಪ್ರೋ ನೈವ ನಿದ್ರಾಮವಾಪ ಸಃ ।
ರಾತ್ರೌ ಚಿಂತಾಪರೋ ಭೂತ್ವಾ ಸ್ಮರನ್ವಿಶ್ವೇಶ್ವರಂ ಪರಂ ॥ ೨೭ ॥

ನಾನಾಧರ್ಮಪರೋಽಹಂ ಚ ಮಮೈವ ಚ ಕಥಂ ಭವೇತ್ ।
ವಿಚಾರಯಿತ್ವಾ ಚ ತತೋ ರಾತ್ರೌ ಸುಪ್ತಸ್ತದಾ ಪುನಃ ॥ ೨೮ ॥

---

ಆಹಾರವನ್ನು ಹೊಂದಲೇ ಇಲ್ಲ. ಇದು ನನ್ನ ಪೂರ್ವದ ಪಾಪವಾಗಿಬೇಕು. ಸಂಶಯವಿಲ್ಲ.

೨೫-೨೬ ಮಹಾದೇವನು ಹೇಳಿದನು–ಆ ಮಾತನ್ನು ಈ ಮಗನಾದ ದೇವಶರ್ಮನು ಕೇಳಿದನು. ಈ ಎತ್ತು ನನ್ನ ತಂದೆಯು. ನನ್ನ ಮನೆಯಲ್ಲಿ ಪಶುವಾಗಿ ಹುಟ್ಟಿದ್ದಾನೆ. ಈ ನಾಯಿಯು ನನ್ನ ತಾಯಿಯು. ದುರದೃಷ್ಟದಿಂದ ನಾಯಾಗಿ ಹುಟ್ಟಿದ್ದಾಳೆ. ಇದು ಖಂಡಿತವು. ಈಗ ನಾನೇನು ಮಾಡಲಿ?

೨೭. ಆ ಬ್ರಾಹ್ಮಣನು ಈ ರೀತಿ ಯೋಚಿಸುತ್ತಾ ಇರಲು ನಿದ್ದೆಯೇ ಬರಲಿಲ್ಲ. ರಾತ್ರಿಯೆಲ್ಲವೂ ನಿದ್ದೆಯಿಲ್ಲದೆ ವಿಶ್ವೇಶ್ವರನನ್ನು ಸ್ಮರಿಸುತ್ತ ಯೋಚಿಸುತ್ತಿದ್ದನು.

೨೮. ನಾನು ಅನೇಕ ಬಗೆಯ ಧರ್ಮಗಳನ್ನೂ ಆಚರಿಸುತ್ತಿದ್ದೇನೆ. ನನಗೆ ಹೀಗಾಗಲು ಕಾರಣವೇನು? ಈ ರೀತಿಯಲ್ಲಿ ಯೋಚಿಸುತ್ತ ರಾತ್ರಿಯಲ್ಲಿ ಕೊಂಚ ಮಲಗಿದನು.

ಪ್ರಭಾತೇ ವಿಮಲೇ ಪ್ರಾಪ್ತೇ ಋಷೀಣಾಂ ಪುರತೋ ಗತಃ ।
ತೇಷಾಂ ಮಧ್ಯೇ ವಸಿಷ್ಠೇನ ತಸ್ಯ ಸುಸ್ವಾಗತಂ ಕೃತಂ || ೨೯ ||

|| ವಸಿಷ್ಠ ಉವಾಚ ||

ಬ್ರೂಹಿ ತ್ವಂ ಬ್ರಾಹ್ಮಣಶ್ರೇಷ್ಠ ತವಾಗಮನಕಾರಣಂ || ೩೦ ||

|| ಮಹಾದೇವ ಉವಾಚ ||

ಇತಿ ಪೃಷ್ಟಸ್ತೇನ ವಿಪ್ರಃ ಪ್ರಣಾಮಮಕರೋತ್ತದಾ || ೩೧ ||

|| ಅಗ್ರಜನ್ಮೋವಾಚ ||

ಅದ್ಯ ಮೇ ಸಫಲಂ ಜನ್ಮ ಅದ್ಯ ಮೇ ಸಫಲಾ ಕ್ರಿಯಾ ।
ಅದ್ಯ ಮೇ ಪಿತರಸ್ತೃಪ್ತಾ ದುರ್ಲಭಂ ತವ ದರ್ಶನಂ || ೩೨ ||

ಯಥೋಕ್ತಂ ಚ ಕೃತಂ ಶ್ರಾದ್ಧಂ ದ್ವಿಜಾಶ್ಚೈವಾಪಿ ಭೋಜಿತಾಃ ।
ಕುಟುಂಬಾನಾಂ ಚ ಸರ್ವೇಷಾಂ ಭೋಜನಂ ಕಾರಿತಂ ತಥಾ || ೩೩ ||

---

೨೯. ಬೆಳಗಾಗುತ್ತಲೂ ಆತನು ಋಷಿಗಳಿರುವಲ್ಲಿಗೆ ಹೋದನು. ಅಲ್ಲಿ ವಸಿಷ್ಠನು ಇವನನ್ನು ಬರಹೇಳಿದನು.

೩೦. ವಸಿಷ್ಠನು ಹೇಳಿದನು–ಎಲೈ ಬ್ರಾಹ್ಮಣ ಶ್ರೇಷ್ಠನೇ ! ನೀನು ಬಂದುದೇಕೆಂಬುದನ್ನು ಹೇಳು.

೩೧. ಮಹಾದೇವನು ಹೇಳಿದನು–ವಸಿಷ್ಠನು ಹೀಗೆ ಕೇಳುತ್ತಲೂ ಈ ಬ್ರಾಹ್ಮಣನು ಆತನಿಗೆ ನಮಸ್ಕರಿಸಿದನು.

೩೨. ಬ್ರಾಹ್ಮಣನು ಹೇಳಿದನು–ಎಲೈ ಮಹರ್ಷಿಯೆ ! ದುರ್ಲಭವಾದ ನಿನ್ನ ದರ್ಶನವು ನನಗಾದುದರಿಂದ ನನ್ನ ಜನ್ಮವು ಸಾರ್ಥಕವಾಯಿತು. ನನ್ನ ಕೆಲಸಗಳೆಲ್ಲವೂ ಫಲ ಕೊಟ್ಟವು. ನನ್ನ ಪಿತೃಗಳೆಲ್ಲರೂ ತೃಪ್ತರಾದರು.

೩೩. ಎಲೈ ವಸಿಷ್ಠನೇ ! ನಾನು ಶಾಸ್ತ್ರದಲ್ಲಿ ಹೇಳಿರುವಂತೆ ಶ್ರಾದ್ಧವನ್ನು ಮಾಡಿದೆನು. ಬ್ರಾಹ್ಮಣರನ್ನು ಹದಿನೆಂಟು ರಸಗಳ ಪದಾರ್ಥಗಳಿಂದಲೂ ಭೋಜನ ಮಾಡಿಸಿ ತೃಪ್ತಿ ಪಡಿಸಿದೆನು. ಮತ್ತು ನನ್ನ ಜ್ಞಾತಿ ವರ್ಗದವರಿಗೂ ಅತಿಥಿಗಳಿಗೂ ವಂಚನೆಯಿಲ್ಲದೆ ಅನ್ನ ಹಾಕಿದೆನು.

ಭೋಜನಾನಂತರಂ ಪ್ರಾಪ್ತಾ ಶುನೀ ತತ್ರ ಉವಾಚ ಹ |
ಅಸ್ಮಾಕಂ ತು ಗೃಹೇ ಹ್ಯೇಕೋ ಬಲೀವರ್ದಸ್ತು ವರ್ತತೇ || ೩೪ ||

ತಂ ಪತಿಂ ಸಾ ಉವಾಚೇದಂ ಯಜ್ಜ್ಞಾತಂ ಚ ಶೃಣುಷ್ವ ತತ್ |
ಗೃಹೇ ಸ್ಥಿತಂ ದುಗ್ಧಭಾಂಡಮಹಿನಾ ದೂಷಿತಂ ಮಯಾ || ೩೫ ||

ದೃಷ್ಟಂ ಮೇ ಮಹತೀ ಚಿಂತಾ ತದಾ ಜಾತಾ ನ ಸಂಶಯಃ |
ಅನೇನ ಪಯಸಾ ಚೈವ ಪಕ್ವಮನ್ನಂ ಯದಾ ಭವೇತ್ || ೩೬ ||

ತದಾತ್ರ ಸರ್ವೇ ವಿಪ್ರಾಶ್ಚ ಮ್ರಿಯನ್ತೇ ಭೋಜನಾತ್ತತಃ |
ಏವಂ ವಿಚಾರ್ಯ ಭೋ ಸ್ವಾಮಿನ್ ದುಗ್ಧಂ ಪೀತಂ ತದಾ ಮಯಾ || ೩೭ ||

ತದಾ ದೃಷ್ಟಂ ತು ವಧ್ವಾ ವೈ ತಯಾ ಮೇ ತಾಡನಂ ಕೃತಂ |
ಚರಾಮಿ ತೇನ ಸಂಭಗ್ನಾ ಕಿಂ ಕರೋಮಿ ಸುದುಃಖಿತಾ || ೩೮ ||

---

೩೪. ಊಟವಾದ ಮೇಲೆ ಅಲ್ಲಿಗೊಂದು ಹೆಣ್ಣುನಾಯಿಯು ಬಂದಿತು. ನಮ್ಮ ಮನೆಯಲ್ಲಿ ಒಂದು ಎತ್ತು ಇರುವುದು. ಹೆಂಡತಿಯಾದ ಆ ನಾಯಿಯು ಗಂಡನಾದ ಆ ಎತ್ತನ್ನು ಕುರಿತು ಇಂತೆಂದಿತು. ಅದನ್ನು ಹೇಳುವೆನು. ಕೇಳು.

೩೫. ಮನೆಯಲ್ಲಿದ್ದ ಹಾಲಿನ ಪಾತ್ರೆಯಲ್ಲಿದ್ದ ಹಾಲನ್ನು ಸರ್ಪವು ಕುಡಿಯಿತು. ಅದನ್ನು ನಾನು ನೋಡಿದೆನು. ಆಗ ನನಗೆ ಬಹು ಯೋಚನೆಯಾಯಿತು. ಇದು ನಿಶ್ಚಯವು.

೩೬–೩೭. ಈ ಹಾಲಿನಿಂದ ಅಡಿಗೆ ಮುಂತಾದುವನ್ನು ಮಾಡಿದರೆ ಆಗ ಆ ಹಾಲಿನ ವಿಷದಿಂದ ಬ್ರಾಹ್ಮಣರೆಲ್ಲರೂ ಸಾಯುವರಲ್ಲ! ಎಂಬ ಹೆದರಿಕೆಯಿಂದ ಯೋಚಿಸಿ ನಾನು ಆ ಹಾಲೆಲ್ಲವನ್ನೂ ಕುಡಿದೆನು.

೩೮. ನಾನು ಹಾಲು ಕುಡಿಯುತ್ತಿರುವುದನ್ನು ನನ್ನ ಸೊಸೆಯು ನೋಡಿದಳು. ನಾಯಿಯು ಹಾಲನ್ನು ಮುಟ್ಟಿತಲ್ಲಾ! ಎಂಬ ಮೈಲಿಗೆಯ ಹೆದರಿಕೆಯಿಂದ ಆಕೆಯು ನನ್ನನ್ನು ಹೊಡೆದಳು. ಅದರಿಂದ ನನ್ನ ನಡುವು ಮುರಿದುಹೋಯಿತು. ಇದರಿಂದ ಬಗ್ಗಿಹೋಗಿದ್ದೇನೆ. ಬಹು ನೋವಾಗುತ್ತದೆ. ಏನು ಮಾಡಲಿ? ಹಾಗೆಯೇ ನಡೆಯುತ್ತಿದ್ದೇನೆ.

ತಸ್ಯಾ ದುಃಖಂ ತು ಸಂಸ್ಮೃತ್ಯ ವೃಷಃ ಪ್ರಾಹ ಶುನೀಂ ಪ್ರತಿ ।
ಶೃಣು ಶುನಿ ಪ್ರವಕ್ಷ್ಯಾಮಿ ಮಮ ದುಃಖಸ್ಯ ಕಾರಣಂ ॥ ೩೯ ॥

ಅಸ್ಯಾಹಂ ತು ಪಿತಾ ಸಾಕ್ಷಾತ್ ಪೂರ್ವಜನ್ಮನಿ ವೈ ಶುನಿ ।
ಅದ್ಯ ವೈ ಭೋಜಿತಾ ವಿಪ್ರಾ ದತ್ತಮನ್ನಂ ತು ಭೂರಿಶಃ ॥ ೪೦ ॥

ನ ತೃಣಂ ನೋದಕಂ ಚೈವ ಮಮಾಗ್ರೇ ಸನ್ನಿವೇದಿತಂ ।
ತೇನ ದುಃಖೇನ ಮೇ ದುಃಖಂ ಜಾತಂ ಬಹುತರಂ ತದಾ ॥ ೪೧ ॥

ಏತತ್ಕಥಾನಕಂ ಶ್ರುತ್ವಾ ರಾತ್ರೌ ನಿದ್ರಾಮವಾಪ ನ ।
ಮಮ ಚಿಂತಾ ತು ತತ್ರೈವ ಜಾತಾ ವೈ ಋಷಿಸತ್ತಮ ॥ ೪೨ ॥

ವೇದಾಧ್ಯಯನಶೀಲೋಽಹಂ ಕುಶಲೋ ವೇದಕರ್ಮಣಿ ।
ಅನಯೋಶ್ಚ ಮಹದ್ದುಃಖಂ ಕಿಂ ಕರೋಮೀತಿ ಚಿಂತಯನ್ ॥ ೪೩ ॥

---

೩೯. ಆಗ ಆ ಎತ್ತು ಆ ನಾಯಿಯ ದುಃಖವನ್ನು ಕೇಳಿ ತಾನೂ ದುಃಖಪಡುತ್ತಾ ಎಲೈ ನಾಯಿಯೇ! ನನಗೂ ದುಃಖವಾಗುತ್ತಿದೆ. ಹೇಳುತ್ತೇನೆ. ಅದರ ಕಾರಣವನ್ನು ಕೇಳು.

೪೦-೪೧. ಎಲೈ ನಾಯಿಯೇ! ನಾನು ಪೂರ್ವಜನ್ಮದಲ್ಲಿ ಇವನಿಗೆ ಪ್ರತ್ಯಕ್ಷನಾದ ತಂದೆಯು ಈ ದಿನ ಆ ನನ್ನನ್ನು ಕುರಿತು ಬಹುವಾಗಿ ಬ್ರಾಹ್ಮಣರಿಗೆ ಅನ್ನಹಾಕಿ ಭೋಜನ ಮಾಡಿಸಿದನು. ನನಗಾದರೋ ಹುಲ್ಲನ್ನೂ ಹಾಕಲಿಲ್ಲ. ನೀರನ್ನೂ ಕೊಡಲಿಲ್ಲ. ಅದರಿಂದ ಹಸಿವು ಬಾಯಾರಿಕೆಗಳಿಂದ ಬಹು ದುಃಖವು ನನಗಾಗುತ್ತಿದೆ.

೪೨. ಈ ಕಥೆಯನ್ನು ಕೇಳಿದಮೇಲೆ ನನಗೆ ರಾತ್ರಿಯಲ್ಲೆಲ್ಲಾ ನಿದ್ರೆಯೇ ಬರಲಿಲ್ಲ. ಬಹುಚಿಂತೆಗೊಳಗಾದೆನು.

೪೩-೪೪. ನಾನು ವೇದಾಧ್ಯಯನ ಮಾಡಿದ್ದೇನೆ. ವೈದಿಕಕೆಲಸದಲ್ಲಿ ಚೆನ್ನಾಗಿ ಪರಿಶ್ರಮವಿದೆ. ಈ ತಾಯಿತಂದೆಗಳಿಗೆ ಈ ರೀತಿಯಾದ ದುಃಖವು

ಆಗತಸ್ತ್ವತ್ಸಮೀಪೇ ತು ಮಮ ಕಷ್ಟಂ ನಿವಾರಯ                    || ೪೪ ||

|| ಋಷಿರುವಾಚ ||

ಅಗ್ರಜನ್ಮನ್ ಶೃಣುಷ್ವ ತ್ವಂ ಪೂರ್ವಜನ್ಮನಿ ಯಚ್ಛ್ರುತಂ |
ಅಯಂ ವೈ ತು ದ್ವಿಜಶ್ರೇಷ್ಠಃ ಕುಂಡಿನೇ ನಗರೇ ಶುಭೇ                    || ೪೫ ||

ಮಾಸೇ ಭಾದ್ರಪದೇ ಚೈವ ಪಂಚಮೀ ಯಾ ಸಮಾಗತಾ |
ತದ್ವ್ರತಂ ತೇನ ನ ಜ್ಞಾತಂ ಪಿತುಶ್ಶ್ರಾದ್ಧಾದಿಕಾರಣಾತ್                    || ೪೬ ||

ಸ್ತ್ರೀಧರ್ಮೇಣ ತು ಸಂಪ್ರಾಪ್ತಾ ಕ್ಷಯಾಹೇ ತು ತದಾನಘ |
ತಯಾ ಚೈವ ಕೃತಂ ಸರ್ವಂ ಬ್ರಾಹ್ಮಣಾನಾಂ ಚ ಭೋಜನಂ                    || ೪೭ ||

ನ ಜ್ಞಾತಂ ಚ ವ್ರತಂ ತೇನ ಪಾಪಿಷ್ಠೇನ ದುರಾತ್ಮನಾ |
ಪ್ರಥಮೇಽಹನಿ ಚಂಡಾಲೀ ದ್ವಿತೀಯೇ ಬ್ರಹ್ಮಘಾತಿನೀ                    || ೪೮ ||

---

ಪ್ರಾಪ್ತವಾಗಿದೆ. ಏನುಮಾಡಲಿ ? ಎಂದು ಯೋಚಿಸುತ್ತ ನಿನ್ನ ಬಳಿಗೆ ಬಂದಿದ್ದೇನೆ. ನನ್ನಕಷ್ಟವನ್ನು ನೀನು ನಿವಾರಿಸು.

೪೫. ಋಷಿಯು ಹೇಳಿದನು–ಎಲೈ ಬ್ರಾಹ್ಮಣನೇ ಕೇಳು. ಅವನು ಪೂರ್ವಜನ್ಮದಲ್ಲಿ ಮಾಡಿದುದನ್ನು ಹೇಳುತ್ತೇನೆ. ಈತನು ಕುಂಡಿನ ನಗರದಲ್ಲಿದ್ದ ಒಬ್ಬಬ್ರಾಹ್ಮಣ ಶ್ರೇಷ್ಠನು.

೪೬. ಭಾದ್ರಪದ ಮಾಸದ ಶುಕ್ಲಪಕ್ಷದ ಪಂಚಮಿಯು ಬಂದಿತು. ಆದಿನ ಮಾಡಬೇಕಾದ ವ್ರತವನ್ನು ತಂದೆಯ ಶ್ರಾದ್ಧದ ಕಾರಣದಿಂದ ಮರೆತುಬಿಟ್ಟನು.

೪೭-೪೯. ಆ ಶ್ರಾದ್ಧದ ದಿನದಲ್ಲಿ ಆತನ ಹೆಂಡತಿಯು ಮುಟ್ಟಾಗಿದ್ದಳು. ಹಾಗೆಯೇ ಎಲ್ಲವನ್ನೂಮಾಡಿ ಬ್ರಾಹ್ಮಣರಿಗೂ ಭೋಜನಮಾಡಿಸಿದಳು. ಆ ಪಾಪಿಯಾದ ಆತನಿಗೆ ಆದಿನದ ವ್ರತವೇ ಗೊತ್ತಾಗಲಿಲ್ಲ. ಹಾಗೆ ಋತುವಾದ ಹೆಂಗಸು ಮೊದಲನೆಯದಿನ ಚಂಡಾಲಿಗೂ ಎರಡನೆಯದಿನ ಬ್ರಹ್ಮಘಾತಿನಿಗೂ

ತೃತೀಯೇ ರಜಕೀ ಪ್ರೋಕ್ತಾ ಚತುರ್ಥೇಽಹನಿ ಶುದ್ಧ್ಯತಿ ।
ತೇನ ಪಾಪೇನ ಸಾ ಜಾತಾ ಶುನೀ ಸ್ವಗೃಹಚಾರಿಣೀ ।
ಬಲೀವರ್ದಸ್ತ್ವಯಂ ಜಾತಃ ಕರ್ಮಣಾನೇನ ಸುವ್ರತ ॥ ೪೯ ॥

॥ ಅಗ್ರಜನ್ಮೋವಾಚ ॥

ವ್ರತಂ ದಾನಂ ತಥಾ ಯಜ್ಞಾಃ ತೀರ್ಥಂ ವಾ ಮಮ ಸುವ್ರತ ।
ಬ್ರೂಹಿ ಯೇನ ವಿಶೇಷೇಣ ಮುಕ್ತಿಃ ಪಿತ್ರೋಃ ಭವೇನ್ಮಮ ॥ ೫೦ ॥

॥ ಋಷಿರುವಾಚ ॥

ಮಾಸೇ ಭಾದ್ರಪದೇ ಶುಕ್ಲೇ ಜಾಯತೇ ಋಷಿಪಂಚಮೀ ।
ರಜಸಾದಿಕೃತಂ ಪಾಪಂ ನಶ್ಯತೇ ಕರಣಾದ್ಯತಃ ॥ ೫೧ ॥

ಪುತ್ರಪೌತ್ರಪ್ರದಾತ್ರೀ ಚ ಪಿತೄಣಾಂ ಮುಕ್ತಿದಾಯಿನೀ ।
ನದ್ಯಾಂ ಕೂಪೇ ತಟಾಗೇ ವಾ ಬ್ರಾಹ್ಮಣಸ್ಯ ಗೃಹೇ ತಥಾ ॥ ೫೨ ॥

---

ಮೂರನೆಯದಿನ ಅಗಸಿತಿಗೂ ಸಮಾನಳಾಗಿ ನಾಲ್ಕನೆಯದಿನ ಶುದ್ಧಳಾಗುತ್ತಾಳೆ. ಆ ಪಾಪದಿಂದ ಆಕೆಯು ನಾಯಿಯಾಗಿಯೂ ಆತನು ಎತ್ತಾಗಿಯೂ ಹುಟ್ಟಿದ್ದಾರೆ.

೫೦. ಬ್ರಾಹ್ಮಣನು ಹೇಳಿದನು–ಎಲೈ ಮಹರ್ಷಿಯೆ! ಆ ನನ್ನ ತಾಯಿ ತಂದೆಗಳಿಗೆ ಮುಕ್ತಿ ಬರುವಂತೆ ವ್ರತ, ದಾನ ಯಜ್ಞ ತೀರ್ಥ ಇವಾವುದನ್ನಾದರೂ ಹೇಳು. ಮಾಡುತ್ತೇನೆ.

೫೧. ಋಷಿಯು ಹೇಳಿದನು–ಭಾದ್ರಪದ ಶುದ್ಧ ಪಂಚಮಿಯ ದಿನ ಋಷಿಪಂಚಮಿಯು ಬರುತ್ತದೆ. ಅದನ್ನು ಆಚರಿಸಿದರೆ ಈ ಋತುದೋಷದಿಂದ ಬಂದ ಪಾಪಗಳೆಲ್ಲವೂ ಹೋಗುತ್ತವೆ.

೫೨. ಆ ವ್ರತವು ಮಕ್ಕಳು ಮರಿಗಳನ್ನು ಕೊಡುತ್ತದೆ. ಪಿತೃಗಳಿಗೆ ಮುಕ್ತಿಯನ್ನು ಕೊಡುತ್ತದೆ. ನದಿ, ಬಾವಿ, ಕೆರೆ ಬ್ರಾಹ್ಮಣನ ಮನೆ ಈ ಸ್ಥಳಗಳಲ್ಲಿ ಅದನ್ನು ಮಾಡಬೇಕು.

ಗೋಮಯಂ ಮಂಡಲಂ ಕುರ್ಯಾತ್ ಕುಂಭಂ ತತ್ರೈವ ಸ್ಥಾಪಯೇತ್ ।
ತತ್ರೋಪರಿ ನ್ಯಸೇತ್ಪಾತ್ರಮುಷಿಧಾನ್ಯೇನ ಪೂರಯೇತ್ ॥ ೫೩ ॥

ಯಜ್ಞೋಪವೀತಸೂತ್ರಂ ಚ ಸಹಿರಣ್ಯಂ ಫಲಂ ತಥಾ ।
ಸ್ಥಾಪ್ಯಾಸ್ತತ್ರರ್ಷಯಸ್ಸಪ್ತ ಸುಖಸೌಭಾಗ್ಯದಾಯಕಾಃ ॥ ೫೪ ॥

ಆವಾಹಯಿತ್ವಾ ತಾನ್ಸರ್ವಾನ್ಪೂಜನೀಯಾ ವ್ರತಸ್ಥಿತೈಃ ।
ನೈವೇದ್ಯಮೃಷಿಧಾನ್ಯಂ ಚ ಋಷಿಧಾನ್ಯಂ ತು ಭೋಜನಂ ॥ ೫೫ ॥

ಏಕಭುಕ್ತೇನ ಕರ್ತವ್ಯಮೃಷೀಣಾಮರ್ಚನಂ ತಥಾ ।
ಪೂಜಯೇತ್ಪರಯಾ ಭಕ್ತ್ಯಾ ಮಂತ್ರೇಣ ವಿಧಿಪೂರ್ವಕಂ ॥ ೫೬ ॥

ನಿರ್ವಾಪಂ ಸಘೃತಂ ದೇಯಂ ದಕ್ಷಿಣಾಸಂಯುತಂ ತದಾ ।
ದೇಯಂ ವಿಪ್ರಾಯ ವಿಧಿವದೃಷೀಣಾಂ ಪ್ರೀಯತಾಮಿತಿ ॥ ೫೭ ॥

---

೫೩. ಹಸುವಿನ ಸಗಣಿಯಿಂದ ಮಂಡಲವನ್ನು ಮಾಡಿ ಅದರಮೇಲೆ ಕುಂಭವನ್ನಿಡಬೇಕು. ಅದರಮೇಲೆ ಒಂದು ಪಾತ್ರೆಯನ್ನಿಟ್ಟು ಅದರಲ್ಲಿ ಋಷಿಗಳು ತಿನ್ನುವ ನೀವಾರವೆಂಬ ಧಾನ್ಯವನ್ನು ಹಾಕಿ ತುಂಬಬೇಕು.

೫೪. ಆ ಕಲಶಕ್ಕೆ ಯಜ್ಞೋಪವೀತವನ್ನು ಹಾಕಬೇಕು. ಚಿನ್ನ ಹಣ್ಣುಗಳನ್ನು ಅದರೊಳಕ್ಕೆ ಹಾಕಬೇಕು. ಅದರಮುಂದೆ ಸೌಭಾಗ್ಯವನ್ನು ಕೊಡುವ ಸಪ್ತರ್ಷಿಗಳನ್ನಿಡಬೇಕು.

೫೫. ವ್ರತಮಾಡುವವನು ಆ ಋಷಿಗಳನ್ನು ಆವಾಹನೆಮಾಡಬೇಕು. ಋಷಿ ಧಾನ್ಯವಾದ ನೀವಾರವನ್ನು ನಿವೇದನಮಾಡಬೇಕು. ಅದನ್ನೇ ಊಟಮಾಡಬೇಕು.

೫೬. ಋಷಿಪೂಜೆಯನ್ನು ಮಾಡಿ ಒಪ್ಪತ್ತು ಊಟಮಾಡಬೇಕು. ಮಂತ್ರದಿಂದ ಆ ಋಷಿಗಳನ್ನು ಭಕ್ತಿಪೂರ್ವಕವಾಗಿ ಪೂಜಿಸಬೇಕು.

೫೭. ದಕ್ಷಿಣೆ ತುಪ್ಪಗಳೊಡನೆ ಅರ್ಘ್ಯವನ್ನು ಕೊಡಬೇಕು. ಋಷಿಗಳು ಪ್ರೀತಿಹೊಂದಲಿ ಎಂದು ಬ್ರಾಹ್ಮಣರಿಗೆ ಉಪಾಯನದಾನವನ್ನು ಕೊಡಬೇಕು.

ಕಥಾಂ ಶ್ರುತ್ವಾ ವಿಧಾನೇನ ಕೃತ್ವಾ ಚೈವ ಪ್ರದಕ್ಷಿಣಾಂ ।
ಧೂಪಂ ದೀಪಂ ಚ ನೈವೇದ್ಯಮರ್ಘ್ಯಂ ದದ್ಯಾತ್ಪೃಥಕ್ ಪೃಥಕ್॥ ೫೮ ॥

ಋಷಯಸ್ಸನ್ತು ಮೇ ನಿತ್ಯಂ ವ್ರತಸಂಪೂರ್ಣಕಾರಿಣಃ ।
ಪೂಜಾಂ ಗೃಹ್ಣಂತು ಮದ್ದತ್ತಾಮೃಷಿಭ್ಯೋಽಸ್ತು ನಮೋ ನಮಃ ॥ ೫೯ ॥

ಪುಲಸ್ತ್ಯಃ ಪುಲಹಶ್ಚೈವ ಕ್ರತುಃ ಪ್ರಾಚೇತಸಸ್ತಥಾ ।
ವಸಿಷ್ಠಮಾರೀಚಾತ್ರೇಯಾ ಅರ್ಘ್ಯಂ ಗೃಹ್ಣಂತು ವೋ ನಮಃ ॥ ೬೦ ॥

ಏವಂ ಪೂಜಾ ಪ್ರಕರ್ತವ್ಯಾ ಧೂಪದೀಪೈರ್ಮನೋರಮೈಃ ।
ಪಿತೄಣಾಂ ಜಾಯತೇ ಮುಕ್ತಿಃ ಕೃತಸ್ಯಾಸ್ಯ ಪ್ರಭಾವತಃ ॥ ೬೧ ॥

ಪೂರ್ವಕರ್ಮವಿಪಾಕೇನ ರಜಸಾ ದೋಷಭಾವತಃ ।
ಕೃತೇ ಹ್ಯೇವಂ ತು ಭೋ ವತ್ಸ ಮುಕ್ತಿಸ್ತಸ್ಯ ನ ಸಂಶಯಃ ॥ ೬೨ ॥

---

೫೮. ಕಥೆಯನ್ನು ಕೇಳಬೇಕು. ಪ್ರದಕ್ಷಿಣೆ ಮಾಡಬೇಕು. ಧೂಪ, ದೀಪ, ನೈವೇದ್ಯ, ಅರ್ಘ್ಯಗಳನ್ನು ಒಬ್ಬೊಬ್ಬರಿಗೂ ಬೇರೆಬೇರೆಯಾಗಿ ಕೊಡಬೇಕು.

೫೯. ಈ ಸಪ್ತರ್ಷಿಗಳು ನನ್ನ ವ್ರತವನ್ನು ಸಂಪೂರ್ಣಗೊಳಿಸಲಿ. ನಾನು ಮಾಡಿದ ಪೂಜೆಯನ್ನು ಆ ಋಷಿಗಳು ಸ್ವೀಕರಿಸಲಿ. ಋಷಿಗಳಿಗೆಲ್ಲಾ ನಮಸ್ಕಾರವು.

೬೦. ಪುಲಸ್ತ್ಯ, ಪುಲಹ, ಕ್ರತು, ಪ್ರಾಚೇತಸ, ವಸಿಷ್ಠ, ಮರೀಚಿ, ಅತ್ರಿ ಈ ಸಪ್ತರ್ಷಿಗಳು ನಾನು ಕೊಟ್ಟ ಅರ್ಘ್ಯವನ್ನು ಸ್ವೀಕರಿಸಲಿ. ಅವರಿಗೆ ನಮಸ್ಕಾರವು.

೬೧. ಈ ರೀತಿಯಾಗಿ ಧೂಪ, ದೀಪ, ನೈವೇದ್ಯಗಳಿಂದ ಋಷಿಗಳನ್ನು ಪೂಜಿಸಿದರೆ ಆ ವ್ರತದ ಪ್ರಭಾವದಿಂದ ಪಿತೃಗಳಿಗೆ ಮೋಕ್ಷವು ಬರುತ್ತದೆ.

೬೨. ಪೂರ್ವಜನ್ಮದಲ್ಲಿ ಮಾಡಿದ ಪಾಪದಿಂದಲೂ, ಹೆಂಗಸರ ರಜಸ್ಸಿನ ದೋಷದಿಂದಲೂ ಉಂಟಾದ ಪಾಪಗಳು ಹೀಗೆಮಾಡಿದರೆ ನಾಶ ಹೊಂದುತ್ತವೆ. ಸಂಶಯವಿಲ್ಲ.

|| ಮಹಾದೇವ ಉವಾಚ ||

ತದ್ವ್ರತಂ ಚ ಕೃತಂ ತೇನ ಮುಕ್ತ್ಯರ್ಥಂ ಪಿತೃಹೇತವೇ |
ತೌ ಗತೌ ಮುಕ್ತಿಮಾರ್ಗೇಣ ಆಶೀರ್ವಾದಪರಾಯಣೌ || ೭೩ ||

ಋಷಿಪಂಚಮೀವ್ರತಂ ಪುಣ್ಯಂ ವಿಪ್ರಾಯ ಪರಿಕೀರ್ತಿತಂ |
ಯೇ ಕುರ್ವಂತಿ ನರಶ್ರೇಷ್ಠಾಸ್ತೇ ನರಾಃ ಪುಣ್ಯಭಾಗಿನಃ || ೭೪ ||

ಯೇ ಕುರ್ವಂತಿ ನರಶ್ರೇಷ್ಠಾ ಋಷಿವ್ರತಮನುತ್ತಮಂ |
ಭುಕ್ತ್ವಾತ್ರ ಭೋಗಾನ್ವಿಪುಲಾನ್ ಯಾಂತಿ ವಿಷ್ಣೋಸ್ಸನಾತನಂ || ೭೫ ||

ಇತಿ ಶ್ರೀ ಮಹಾಪುರಾಣೇ ಪಾದ್ಮೇ ಉತ್ತರಖಂಡೇ ಪಾರ್ವತೀ
ಮಹಾದೇವ ಸಂವಾದೇ ಋಷಿಪಂಚಮೀ ವ್ರತ ಕಥನಂ ನಾಮ
ಅಷ್ಟಸಪ್ತತಿತಮೋಽಧ್ಯಾಯಸ್ಸಮಾಪ್ತಃ

---

೭೩. ಮಹಾದೇವನು ಹೇಳಿದನು-ಪಿತೃಗಳ ಮುಕ್ತಿಗೋಸ್ಕರ ಆ ದೇವ ಶರ್ಮನು ಈ ವ್ರತವನ್ನು ಮಾಡಿದನು. ಆಗ ಆ ಪಿತೃಗಳು ಇವನನ್ನು ಆಶೀರ್ವದಿಸುತ್ತ ಮುಕ್ತಿ ಹೊಂದಿದರು.

೭೪. ಪುಣ್ಯಪ್ರದವಾದ ಋಷಿಪಂಚಮೀ ವ್ರತವನ್ನು ವಸಿಷ್ಠನು ಆ ಬ್ರಾಹ್ಮಣನಿಗೆ ಹೇಳಿದನು. ಅದನ್ನು ಮಾಡಿದವರು ಪುಣ್ಯವನ್ನು ಹೊಂದುತ್ತಾರೆ.

೭೫. ಈ ಋಷಿಪಂಚಮಿ ವ್ರತವನ್ನು ಮಾಡಿದವರು ಈ ಲೋಕದಲ್ಲಿ ಅನೇಕ ಭೋಗಗಳನ್ನು ಅನುಭವಿಸಿ ಕೊನೆಗೆ ವೈಕುಂಠವನ್ನು ಹೊಂದುತ್ತಾರೆ.

ಇಂತು ಶ್ರೀ ಪದ್ಮಮಹಾಪುರಾಣದ ಉತ್ತರಖಂಡದ ಪಾರ್ವತೀ
ಮಹಾದೇವರ ಸಂವಾದದಲ್ಲಿ ಋಷಿಪಂಚಮೀ ವ್ರತ ಕಥನ ಎಂಬ
ಎಪ್ಪತ್ತೆಂಟನೆಯ ಅಧ್ಯಾಯವು ಮುಗಿದುದು.



॥ ಶ್ರೀಃ ॥

# ಅಥ ಶ್ರೀ ಮಹಾಪುರಾಣೇ ಪಾದ್ಮೇ ಉತ್ತರಖಂಡೇ

## ॥ ಊನಾಶೀತಿತಮೋಽಧ್ಯಾಯಃ ॥



॥ ಮಹಾದೇವ ಉವಾಚ ॥

**ಅಥಾತಸ್ಸಂಪ್ರವಕ್ಷ್ಯಾಮಿ ಅಪಾಮಾರ್ಜನಮುತ್ತಮಂ ।**
**ಪುಲಸ್ತ್ಯೇನ ಯಥೋಕ್ತಂ ತು ದಾಲಭ್ಯಾಯ ಮಹಾತ್ಮನೇ ॥ ೧ ॥**

**ಸರ್ವೇಷಾಂ ರೋಗದೋಷಾಣಾಂ ನಾಶನಂ ಮಂಗಳಪ್ರದಂ ।**
**ತತ್ತೇಽಹಂ ತು ಪ್ರವಕ್ಷ್ಯಾಮಿ ಶೃಣು ತ್ವಂ ನಗನಂದಿನಿ ॥ ೨ ॥**

॥ ಪಾರ್ವತ್ಯುವಾಚ ॥

**ಭಗವನ್ಪ್ರಾಣಿನಸ್ಸರ್ವೇ ವಿಷರೋಗಾದ್ಯುಪದ್ರವಾಃ ।**
**ದುಷ್ಟಗ್ರಹಾಭಿಭೂತಾಶ್ಚ ಸರ್ವಕಾಲೇ ಹ್ಯುಪದ್ರುತಾಃ ॥ ೩ ॥**

---

## ಎಪ್ಪತ್ತೊಂಭತ್ತನೆಯ ಅಧ್ಯಾಯವು



೧. ಮಹಾದೇವನು ಹೇಳಿದನು—ಇನ್ನುಮೇಲೆ ಉತ್ತಮವಾಗಿರುವ ಅಪಾಮಾರ್ಜನ ವ್ರತವನ್ನು ಹೇಳುತ್ತೇನೆ. ಇದನ್ನು ಪುಲಸ್ತ್ಯನು ದಾಲಭ್ಯನಿಗೆ ಹಿಂದೆ ಹೇಳಿದನು.

೨. ಈ ವ್ರತವು ಎಲ್ಲಾರೋಗ ದೋಷಗಳನ್ನೂ ನಾಶಮಾಡುತ್ತದೆ. ಮಂಗಳವನ್ನು ಉಂಟುಮಾಡುತ್ತದೆ. ಅದನ್ನು ನಿನಗೆ ಹೇಳುತ್ತೇನೆ. ಕೇಳು.

೩-೪. ಪಾರ್ವತಿಯು ಹೇಳಿದಳು—ಎಲೈ ಸ್ವಾಮಿಯೆ! ಎಲ್ಲಾ ಪ್ರಾಣಿಗಳೂ ವಿಷ ರೋಗ ತೊಂದರೆ ದುಷ್ಟಗ್ರಹ ಮಾಟ ಮುಂತಾದ ಕೃತ್ಯ ಅಪಮೃತ್ಯು

ಆಭಿಚಾರಕಕೃತ್ಯಾದಿಬಹುರೋಗೈಶ್ಚ ದಾರುಣೈಃ ।
ನ ಭವಂತಿ ಸುರಶ್ರೇಷ್ಠ ತನ್ಮೇ ತ್ವಂ ವಕ್ತುಮರ್ಹಸಿ　　　　|| ४ ||

|| ಮಹಾದೇವ ಉವಾಚ ||

ವ್ರತೋಪವಾಸೈರ್ನಿಯಮೈಃ ವಿಷ್ಣುರ್ನ್ಯತೋಷಿತಸ್ತು ಯೈಃ ।
ತೇ ನರಾ ನೈವ ರೋಗಾರ್ತಾ ಜಾಯಂತೇ ನಗನಂದಿನಿ　　　　|| ೫ ||

ಯೈಃ ಕೃತಂ ನ ವ್ರತಂ ಪುಣ್ಯಂ ನ ದಾನಂ ನ ತಪಸ್ತಥಾ ।
ನ ತೀರ್ಥಂ ದೇವಪೂಜಾ ಚ ನಾನ್ನಂ ದತ್ತಂ ತು ಭೂರಿಶಃ　　　　|| ೬ ||

ತೇ ವೈ ಲೋಕಾಸ್ಸದಾ ಜ್ಞೇಯಾಃ ರೋಗದೋಷಪ್ರಪೀಡಿತಾಃ ।
ಆರೋಗ್ಯಂ ಪರಮಾಮೃದ್ಧಿಂ ಮನಸಾ ಯದ್ಯದಿಚ್ಛತಿ　　　　|| ೭ ||

ತತ್ತದಾಪ್ನೋತ್ಯಸಂದಿಗ್ಧಂ ವಿಷ್ಣೋಸ್ಸೇವಾವಿಶೇಷತಃ ।
ನಾಧಿಂ ಪ್ರಾಪ್ನೋತಿ ನ ವ್ಯಾಧಿಂ ನ ವಿಷಗ್ರಹಬಂಧನಂ　　　　|| ೮ ||

---

ಮುಂತಾದವುಗಳು ಈ ವ್ರತವನ್ನು ಮಾಡುವುದರಿಂದ ಅವರಿಗೆ ತೊಂದರೆ ಕೊಡುವುದಿಲ್ಲ. ಆದ್ದರಿಂದ ಅದನ್ನು ಹೇಳು.

೫. ಮಹಾದೇವನು ಹೇಳಿದನು–ಎಲೈ ಪಾರ್ವತಿಯೆ! ವ್ರತ ಉಪವಾಸ ನಿಯಮಗಳಿಂದ ಯಾರು ವಿಷ್ಣುವನ್ನು ತೃಪ್ತಿ ಪಡಿಸುತ್ತಾರೆಯೋ ಅವರು ಈ ಮೇಲೆ ಹೇಳಿದ ರೋಗಾದಿಗಳಿಂದ ತೊಂದರೆಯನ್ನು ಹೊಂದುವುದಿಲ್ಲ.

೬-೮. ವ್ರತ ಪುಣ್ಯದ ಕೆಲಸ ದಾನ ತಪಸ್ಸು ತೀರ್ಥಸೇವೆ ದೇವತಾ ಪೂಜೆ ಅನ್ನದಾನ ಇವನ್ನು ಯಾರು ಮಾಡಿರುವುದಿಲ್ಲವೋ ಅವರು ಯಾವಾಗಲೂ ರೋಗಿಗಳಾಗಿಯೇ ಇರುತ್ತಾರೆ. ವಿಷ್ಣುವಿನ ಸೇವೆಯನ್ನು ಮಾಡಿದರೆ ಆರೋಗ್ಯ ಬಹುವಾದ ಏಳಿಗೆ ಮತ್ತು ತನ್ನ ಮನಸ್ಸಿಗೆ ಬೇಕಾದುದು ಎಲ್ಲವನ್ನೂ ಅವನು ಸಂದೇಹವಿಲ್ಲದೆ ಹೊಂದುತ್ತಾನೆ. ಮಧುಸೂದನನು ಯಾವನ ಸೇವೆಯಿಂದ ಸಂತೋಷಗೊಳ್ಳುತ್ತಾನೆಯೋ ಅವನಿಗೆ ಮನೋವ್ಯಥೆ ಇರುವುದಿಲ್ಲ. ರೋಗ ಬರುವುದಿಲ್ಲ ವಿಷ ಅಂಟುವುದಿಲ್ಲ. ಪೀಡೆಪಿಶಾಚಾದಿಗಳು ಬಾಧಿಸುವುದಿಲ್ಲ.

ಕೃತ್ಯಾಸ್ಪರ್ಶಭಯಂ ಚಾಪಿ ತೋಷಿತೇ ಮಧುಸೂದನೇ ।
ಸಮಸ್ತದೋಷನಾಶಶ್ಚ ಸರ್ವದಾ ಚ ಶುಭಾ ಗ್ರಹಾಃ ॥ ೯ ॥

ದೇವಾನಾಮಪ್ಯದೃಷ್ಯೋಽಸೌ ತೋಷಿತೇ ಚ ಜನಾರ್ದನೇ ।
ಯಸ್ಸರ್ವೇಷು ಚ ಭೂತೇಷು ಯಥಾತ್ಮನಿ ತಥಾಪರೇ ॥ ೧೦ ॥

ಉಪವಾಸದಿನಾನ್ತೇ ತು ತೋಷಿತೋ ಮಧುಸೂದನಃ ।
ತೋಷಿತೇ ತತ್ರ ಜಾಯಂತೇ ನರಾಃ ಪೂರ್ಣಮನೋರಥಾಃ ॥ ೧೧ ॥

ಅರೋಗಾಸ್ಸುಖಿನೋ ಭೋಗಭೋಕ್ತಾರೋ ನಗನಂದಿನಿ ।
ತೇಷಾಂ ಚ ಶತ್ರವೋ ನೈವ ನ ಚ ರೋಗಾಭಿಚಾರಿಕಂ ॥ ೧೨ ॥

ಗ್ರಹರೋಗಾದಿಕಂ ಚೈವ ಪಾಪಕಾರ್ಯಂ ನ ಜಾಯತೇ ।
ಅವ್ಯಾಹತಾನಿ ಕೃಷ್ಣಸ್ಯ ಚಕ್ರಾದೀನ್ಯಾಯುಧಾನಿ ವೈ ॥
ರಕ್ಷಂತಿ ಸಕಲಾಪದ್ಭ್ಯೋ ಯೇನ ವಿಷ್ಣುರುಪಾಸಿತಃ ॥ ೧೩ ॥

---

ಮಾಟ ಮುಂತಾದವು ಬಾಧಿಸುವುದಿಲ್ಲ. ಎಲ್ಲಾ ದೋಷಗಳೂ ನಾಶವಾಗುತ್ತವೆ. ಅಲ್ಲದೆ ಗ್ರಹಗಳೆಲ್ಲರೂ ಶುಭಫಲವನ್ನು ಕೊಡತಕ್ಕವರಾಗುತ್ತಾರೆ.

೧೦. ಜನಾರ್ದನನು ತೃಪ್ತಿಪಟ್ಟರೆ ಈತನು ದೇವತೆಗಳಿಗೂ ಅಂಜಬೇಕಾದುದಿಲ್ಲ. ಸರ್ವಪ್ರಾಣಿಗಳನ್ನೂ ತನ್ನಂತೆ ನೋಡುತ್ತಿರಬೇಕು. ಶತ್ರುಗಳನ್ನೂ ಕೂಡ ತನ್ನಂತೆ ಕಾಣುತ್ತಿರಬೇಕು.

೧೧. ಹರಿದಿನಗಳಲ್ಲಿ ಉಪವಾಸಮಾಡಿ ಅದು ಮುಗಿದೊಡನೆಯೇ ಪೂಜಿಸಿ ಸ್ವಾಮಿಯನ್ನು ತೃಪ್ತಿಪಡಿಸಬೇಕು. ಹಾಗೆ ಆ ಸ್ವಾಮಿಯು ಸಂತೋಷಪಟ್ಟರೆ ಆ ಮನುಷ್ಯರು ಇಷ್ಟಪೂರ್ತಿಯುಳ್ಳವರಾಗಿ ಹುಟ್ಟುತ್ತಾರೆ.

೧೨. ಹಾಗೆ ದೇವರು ಸಂತೋಷಗೊಂಡವನಿಗೆ ರೋಗ ಬರುವುದಿಲ್ಲ. ಸುಖಿಗಳಾಗಿ ಇರುತ್ತಾರೆ. ಭೋಗಗಳನ್ನು ಅನುಭವಿಸುತ್ತಾರೆ. ಅವರಿಗೆ ಶತ್ರುಗಳೇ ಇರುವುದಿಲ್ಲ. ಮಾಟ ಮುಂತಾದವುಗಳಿಂದ ಬರುವ ರೋಗಗಳೂ ಬರುವುದಿಲ್ಲ.

೧೩. ವಿಷ್ಣುವನ್ನು ಪೂಜಿಸಿದವನಿಗೆ ಗ್ರಹಪೀಡೆ ರೋಗಪೀಡೆಗಳುಂಟಾಗುವುದಿಲ್ಲ. ಪಾಪಕಾರ್ಯಕ್ಕೆ ಮನಸ್ಸು ಹೋಗುವುದಿಲ್ಲ. ಮತ್ತು ಶ್ರೀ ಕೃಷ್ಣನ ಚಕ್ರಾದಿ ಆಯುಧಗಳು ಅವನಿಗೆ ಆಪತ್ತುಗಳು ಬರದಂತೆ ಕಾಪಾಡುತ್ತವೆ.

|| ಪಾರ್ವತ್ಯುವಾಚ ||

ಅನಾರಾಧಿತಗೋವಿಂದಾ ಯೇ ನರಾ ದುಃಖಭಾಗಿನಃ ।
ತೇಷಾಂ ದುಃಖಾಭಿಭೂತಾನಾಂ ಯತ್ಕರ್ತವ್ಯಂ ದಯಾಳುಭಿಃ || ೧೪ ||

ಪಶ್ಯದ್ಭಿಸ್ಸರ್ವಭೂತಸ್ಥಂ ವಾಸುದೇವಂ ಸನಾತನಂ ।
ಸಮದೃಷ್ಟಿಭಿರಪ್ಯತ್ರ ತನ್ಮೇ ಬ್ರೂಹಿ ವಿಶೇಷತಃ || ೧೫ ||

|| ಮಹಾದೇವ ಉವಾಚ ||

ತದ್ವಕ್ಷ್ಯಾಮಿ ಸುರಶ್ರೇಷ್ಠೇ ಸಮಾಹಿತಮನಾಶ್ಶೃಣು ।
ರೋಗದೋಷಾಶುಭಹರಂ ವಿದ್ವಿದಾಪದ್ವಿನಾಶನಂ || ೧೬ ||

ಶಿಖಾಯಾಂ ಶ್ರೀಧರಂ ನ್ಯಸ್ಯ ಶಿಖಾಧಶ್ಶ್ರೀಕರಂ ತಥಾ ।
ಹೃಷೀಕೇಶಂ ತು ಕೇಶೇಷು ಮೂರ್ಧ್ನಿ ನಾರಾಯಣಂ ಪರಂ || ೧೭ ||

---

೧೪. ಪಾರ್ವತಿಯು ಹೇಳಿದಳು—ಎಲೈ ಶಿವನೆ ! ಗೋವಿಂದನನ್ನು ಪೂಜಿಸದವರು ದುಃಖವನ್ನೇ ಹೊಂದುತ್ತಾರೆ. ಅಂತಹ ದುಃಖಗಳನ್ನು ನೋಡಿ ಕೃಪಾವಂತರು ಯಾವ ರೀತಿಯಾಗಿ ಸಹಾಯಮಾಡಬೇಕು ? ಎಂಬುದನ್ನೂ ತಿಳಿಸು.

೧೫. ವಾಸುದೇವನು ಎಲ್ಲಾ ಪ್ರಾಣಿಗಳಲ್ಲಿಯೂ ಇರುವನೆಂದು ತಿಳಿದುಕೊಂಡಿರುವ ಎಲ್ಲರನ್ನೂ ಒಂದೇ ರೀತಿಯಲ್ಲಿ ನೋಡುವವರು ಅಂತಹ ದುಃಖಿಗಳ ವಿಷಯದಲ್ಲಿ ಏನುಮಾಡಬೇಕು. ?

೧೬. ಮಹಾದೇವನು ಹೇಳಿದನು—ರೋಗ, ದೋಷ, ಅಶುಭ, ಶತ್ರುಭಾಧೆ, ವಿಪತ್ತುಗಳನ್ನು ನಾಶಮಾಡುವ ಆ ವಿಷಯವನ್ನು ಹೇಳುತ್ತೇನೆ. ಮನಸ್ಸಿಟ್ಟು ಕೇಳು.

೧೭-೧೮. ಶಿಖೆಯಲ್ಲಿ ಶ್ರೀಧರನನ್ನೂ ಶಿಖೆಯ ಕೆಳಗೆ (ಕಳ್ಳ ಗುಳಿಯಲ್ಲಿ) ಶ್ರೀಕರನನ್ನೂ ಕೇಶದಲ್ಲಿ ಹೃಷೀಕೇಶನನ್ನೂ ಮೂರ್ಧ್ವದಲ್ಲಿ ನಾರಾಯಣನನ್ನೂ

ಊರ್ಧ್ವಶ್ರೋತ್ರೇ ನ್ಯಸೇದ್ವಿಷ್ಣುಂ ಲಲಾಟೇ ಜಲಶಾಯಿನಂ ।
ವಿಷ್ಣುಂ ವೈ ಭ್ರೂಯುಗೇ ನ್ಯಸ್ಯ ಭ್ರೂಮಧ್ಯೇ ಹರಿಮೇವ ಚ ॥ ೧೮ ॥

ನಾರಸಿಂಹಂ ನಾಸಿಕಾಗ್ರೇ ಕರ್ಣಯೋರರ್ಣವೇಶಯಂ ।
ಚಕ್ಷುಷೋಃ ಪುಂಡರೀಕಾಕ್ಷಂ ತದಧೋ ಭೂಧರಂ ನ್ಯಸೇತ್ ॥ ೧೯ ॥

ಕಪೋಲಯೋಃ ಕಲ್ಕಿನಾಥಂ ವಾಮನಂ ಕರ್ಣಮೂಲಯೋಃ ।
ಶಂಖಿನಂ ಶಂಖಯೋರ್ನ್ಯಸ್ಯ ಗೋವಿಂದಂ ವದನೇ ತಥಾ ॥ ೨೦ ॥

ಮುಕುಂದಂ ದಂತಪಂಕ್ತೌ ಚ ಜಿಹ್ವಾಯಾಂ ವಾಕ್ಪತಿಂ ತಥಾ ।
ರಾಮಂ ಹನೌ ತು ವಿನ್ಯಸ್ಯ ಕಂಠೇ ವೈಕುಂಠಮೇವ ಚ ॥ ೨೧ ॥

ಬಲಘ್ನಂ ಬಾಹುಮೂಲಾಧಶ್ಚಾಂಸಯೋಃ ಕಂಸಘಾತಿನಂ ।
ಅಜಂ ಭುಜದ್ವಯೇ ನ್ಯಸ್ಯ ಶಾರ್ಙ್ಗಪಾಣಿಂ ಕರದ್ವಯೇ ॥ ೨೨ ॥

---

ಕಿವಿಯಮೇಲೆ ವಿಷ್ಣುವನ್ನೂ ಹಣೆಯಲ್ಲಿ ಜಲಶಾಯಿಯನ್ನೂ ಹುಬ್ಬುಗಳೆರಡರಲ್ಲಿಯೂ ವಿಷ್ಣುವನ್ನೂ ಹುಬ್ಬಿನ ಮಧ್ಯದಲ್ಲಿ ಹರಿಯನ್ನೂ ನ್ಯಾಸ ಮಾಡಿಕೊಳ್ಳಬೇಕು.

೧೯–೨೦. ಮೂಗಿನ ತುದಿಯಲ್ಲಿ ನಾರಸಿಂಹನನ್ನೂ ಕಿವಿಗಳಲ್ಲಿ ಕರ್ಣವೇಶನನ್ನೂ ಕಣ್ಣುಗಳಲ್ಲಿ ಪುಂಡರೀಕಾಕ್ಷನನ್ನೂ ಕಣ್ಣುಗಳ ಕೆಳಗೆ ಭೂಧರನನ್ನೂ ಕಪೋಲಗಳಲ್ಲಿ ಕಲ್ಕಿನಾಥನನ್ನೂ ಕಿವಿಯ ಬುಡಗಳಲ್ಲಿ ವಾಮನನನ್ನೂ ಕಿವಿಯಲ್ಲಿ ಶಂಖದಂತಿರುವ ಜಾಗದಲ್ಲಿ ಶಂಖಿಯನ್ನೂ ಮುಖದಲ್ಲಿ ಗೋವಿಂದನನ್ನೂ ನ್ಯಾಸ ಮಾಡಿಕೊಳ್ಳಬೇಕು.

೨೧-೨೪. ಹಲ್ಲುಪಂಕ್ತಿಗಳಲ್ಲಿ ಮುಕುಂದನನ್ನೂ ನಾಲಿಗೆಯಲ್ಲಿ ವಾಕ್ಪತಿಯನ್ನೂ ಹನುವಿನಲ್ಲಿ ರಾಮನನ್ನೂ ಕಂಠದಲ್ಲಿ ವೈಕುಂಠನನ್ನೂ ಎರಡು ಭುಜಗಳಲ್ಲಿ ಅಜನನ್ನೂ ಎರಡುಕೈಗಳಲ್ಲಿಯೂ ಶಾರ್ಙ್ಗಪಾಣಿಯನ್ನೂ ನ್ಯಾಸಮಾಡಿಕೊಳ್ಳಬೇಕು.

ಸಂಕರ್ಷಣಂ ಕರಾಂಗುಷ್ಠೇ ಗೋಪಮಂಗುಳಿಪಂಕ್ತಿಷು ।
ವಕ್ಷಸ್ಯಧೋಕ್ಷಜಂ ನ್ಯಸ್ಯ ಶ್ರೀವತ್ಸಂ ತಸ್ಯ ಮಧ್ಯತಃ ॥ ೨೩ ॥

ಸ್ತನಯೋರನಿರುದ್ಧಂ ಚ ದಾಮೋದರಮಥೋದರೇ ।
ಪದ್ಮನಾಭಂ ತಥಾ ನಾಭೌ ನಾಭ್ಯಧಶ್ಚಾಪಿ ಕೇಶವಂ ॥ ೨೪ ॥

ಮೇಢ್ರೇ ಧರಾಧರಂ ದೇವಂ ಗುದೇ ಚೈವ ಗದಾಗ್ರಜಂ ।
ಪೀತಾಂಬರಧರಂ ಕಟ್ಯಾಮೂರುಯುಗ್ಮೇ ಮಧುದ್ವಿಷಂ ॥ ೨೫ ॥

ಮುರದ್ವಿಷಂ ಪಿಂಡಕಯೋಃ ಜಾನುಯುಗ್ಮೇ ಜನಾರ್ದನಂ ।
ಫಣೀಶಂ ಗುಲ್ಫಯೋರ್ನ್ಯಸ್ಯ ಕ್ರಮಯೋಶ್ಚ ತ್ರಿವಿಕ್ರಮಂ ॥ ೨೬ ॥

ಪಾದಾಂಗುಷ್ಠೇ ಶ್ರೀಪತಿಂ ಚ ಪಾದಾಧೋ ಧರಣೀಧರಂ ।
ರೋಮಕೂಪೇಷು ಸರ್ವೇಷು ವಿಷ್ವಕ್ಸೇನಂ ನ್ಯಸೇದ್ಬುಧಃ ॥ ೨೭ ॥

---

೨೩–೨೪. ಕೈಗಳ ಹೆಬ್ಬೆರಳಿನಲ್ಲಿ ಸಂಕರ್ಷಣನನ್ನೂ ಕೈಯ್ಯಿನ ಉಳಿದ ಬೆರಳುಗಳಲ್ಲಿ ಗೋಪನನ್ನೂ ಎದೆಯಲ್ಲಿ ಅಧೋಕ್ಷಜನನ್ನೂ ಆ ಎದೆಯ ಮಧ್ಯ ಭಾಗದಲ್ಲಿ ಶ್ರೀವತ್ಸನನ್ನೂ ಸ್ತನಗಳಲ್ಲಿ ಅನಿರುದ್ಧನನ್ನೂ ಹೊಟ್ಟೆಯಲ್ಲಿ ದಾಮೋದರನನ್ನೂ ಹೊಕ್ಕಳಿನಲ್ಲಿ ಪದ್ಮನಾಭನನ್ನೂ ಹೊಕ್ಕಳಿನ ಕೆಳಗೆ ಕೇಶವನನ್ನೂ ನ್ಯಾಸಮಾಡಿಕೊಳ್ಳಬೇಕು.

೨೫-೨೬. ವೃಷಣದಲ್ಲಿ ಧರಾಧರನನ್ನೂ ಗುದಪ್ರದೇಶದಲ್ಲಿ ಗದಾಗ್ರಜನನ್ನೂ ಸೊಂಟದಲ್ಲಿ ಪೀತಾಂಬರಧರನನ್ನೂ ತೊಡೆಗಳೆರಡರಲ್ಲಿಯೂ ಮಧುದ್ವಿಷನನ್ನೂ ಗುದದ ಎರಡು ಪಿರ್ರಿಗಳಮೇಲೆ ಮುರದ್ವಿಷನನ್ನೂ ಮಂಡಿಯಿಂದ ಮೇಲುಗಡೆ ಜನಾರ್ದನನನ್ನೂ ಮೊಣಕಾಲುಗಳಲ್ಲಿ ಫಣೀಶನನ್ನೂ ಹೆಜ್ಜೆಗಳಮೇಲೆ ಗದಾಗ್ರಜನನ್ನೂ ನ್ಯಾಸಮಾಡಬೇಕು.

೨೭. ಕಾಲಿನ ಅಂಗುಷ್ಠಗಳಲ್ಲಿ ಶ್ರೀಪತಿಯನ್ನೂ ಪಾದಗಳ ಕೆಳಗೆ ಧರಣೀಧರನನ್ನೂ ರೋಮಗಳ ಕೂಪದಲ್ಲೆಲ್ಲಾ ವಿಷ್ವಕ್ಸೇನನನ್ನೂ ನ್ಯಾಸಮಾಡಿಕೊಳ್ಳಬೇಕು.

ಮತ್ಸ್ಯಂ ಮಾಂಸೇ ತು ವಿನ್ಯಸ್ಯ ಕೂರ್ಮಂ ಮೇದಸಿ ವಿನ್ಯಸೇತ್ ।
ವಾರಾಹಂ ತು ವಸಾಮಧ್ಯೇ ಸರ್ವಾಸ್ಥಿಷು ತಥಾಚ್ಯುತಂ ॥ ೨೮ ॥

ದ್ವಿಜಪ್ರಿಯಂ ತು ಮಜ್ಜಾಯಾಂ ಶುಕ್ರೇ ಶ್ವೇತಪತಿಂ ತಥಾ ।
ಸರ್ವಾಂಗೇ ಯಜ್ಞಪುರುಷಂ ಪರಮಾತ್ಮಾನಮಾತ್ಮನಿ ॥ ೨೯ ॥

ಏವಂ ನ್ಯಾಸವಿಧಿಂ ಕೃತ್ವಾ ಸಾಕ್ಷಾನ್ನಾರಾಯಣೋ ಭವೇತ್ ।
ಯಾವನ್ನ ವ್ಯಾಹರೇತ್ಕಿಂಚಿತ್ತಾವದ್ವಿಷ್ಣುಮಯಸ್ಸ್ಥಿತಃ ॥ ೩೦ ॥

ಗೃಹೀತ್ವಾ ತು ಸಮೂಲಾಗ್ರಾನ್ ಕುಶಾನ್ ಶುದ್ಧಾನ್ ಸಮಾಹಿತಃ ।
ಮಾರ್ಜಯೇತ್ಸರ್ವಗಾತ್ರಾಣಿ ಕುಶಾಗ್ರೈರಿಹ ಶಾಂತಿಕೃತ್ ॥ ೩೧ ॥

ವಿಷ್ಣುಭಕ್ತೋ ವಿಶೇಷೇಣ ರೋಗಗ್ರಹವಿಷಾರ್ದಿತಃ ।
ವಿಷಾರ್ತಾನಾಂ ರೋಗಿಣಾಂ ಚ ಕುರ್ಯಾಚ್ಛಾಂತಿಮಿಮಾಂ ಶುಭಾಂ ॥ ೩೨ ॥

---

೨೮-೨೯. ಮಾಂಸದಲ್ಲಿ ಮತ್ಸ್ಯನನ್ನೂ, ಮೇದಸ್ಸಿನಲ್ಲಿ ಕೂರ್ಮನನ್ನೂ, ವಸೆ (ಕೊಬ್ಬು) ಯಲ್ಲಿ ವಾರಾಹನನ್ನೂ, ಎಲ್ಲಾ ಮೂಳೆಗಳಲ್ಲಿಯೂ ಅಚ್ಯುತನನ್ನೂ, ಮಜ್ಜೆಯಲ್ಲಿ ದ್ವಿಜಪ್ರಿಯನನ್ನೂ, ಶುಕ್ಲದಲ್ಲಿ (ವೀರ್ಯದಲ್ಲಿ) ಶ್ವೇತಪತಿಯನ್ನೂ, ಸರ್ವಾಂಗದಲ್ಲಿಯೂ ಯಜ್ಞಪುರುಷನನ್ನೂ, ಆತ್ಮದಲ್ಲಿ ಪರಮಾತ್ಮನನ್ನೂ ನ್ಯಾಸಮಾಡಿಕೊಳ್ಳಬೇಕು.

೩೦. ಈ ರೀತಿಯಾಗಿ ನ್ಯಾಸಮಾಡಿಕೊಂಡರೆ ಪ್ರತ್ಯಕ್ಷನಾದ ನಾರಾಯಣನೇ ಆಗುತ್ತಾನೆ. ನ್ಯಾಸಮಾಡಿಕೊಂಡಮೇಲೆ ಮಾತನಾಡುವವರೆಗೂ ಅವನು ವಿಷ್ಣುವೇ ಆಗಿರುತ್ತಾನೆ.

೩೧. ಬೇರೂ ಅಗ್ರವೂ ಕೂಡಿರುವ ದರ್ಭೆಯನ್ನು ತೆಗೆದುಕೊಂಡು ಅದರ ತುದಿಯಿಂದ ಮೈಯೆಲ್ಲವನ್ನೂ ಸವರಿಕೊಳ್ಳಬೇಕು. ಅದು ಶಾಂತಿಯನ್ನುಂಟು ಮಾಡುತ್ತದೆ.

೩೨. ರೋಗ, ವಿಷ, ಗ್ರಹ ಮುಂತಾದವುಗಳಿಂದ ತೊಂದರೆಯನ್ನು ಹೊಂದಿದ ವಿಷ್ಣುಭಕ್ತನು ಈ ಶಾಂತಿಯನ್ನು ಅತ್ಯಗತ್ಯವಾಗಿ ಮಾಡಿಕೊಳ್ಳಬೇಕು.

ಜಪೇತ್ತತ್ರ ತು ಭೋ ದೇವಿ ಸರ್ವರೋಗಪ್ರಣಾಶನಂ ।
ಓಂ ನಮಶ್ಶ್ರೀಪರಮಾರ್ಥಾಯ ಪುರುಷಾಯ ಮಹಾತ್ಮನೇ ॥ ೩೩ ॥

ಅರೂಪಬಹುರೂಪಾಯ ವ್ಯಾಪಿನೇ ಪರಮಾತ್ಮನೇ ।
ವಾರಾಹಂ ನಾರಸಿಂಹಂ ಚ ವಾಮನಂ ಚ ಸುಖಪ್ರದಂ ॥ ೩೪ ॥

ಧ್ಯಾತ್ವಾ ಕೃತ್ವಾ ನಮೋ ವಿಷ್ಣೋರ್ನಾಮಾನ್ಯಂಗೇಷು ವಿನ್ಯಸೇತ್ ।
ನಿಷ್ಕಲ್ಮಷಾಯ ಶುದ್ಧಾಯ ವ್ಯಾಧಿಪಾಪಹರಾಯ ವೈ ॥ ೩೫ ॥

ಗೋವಿಂದಪದ್ಮನಾಭಾಯ ವಾಸುದೇವಾಯ ಭೂಭೃತೇ ।
ನಮಸ್ಕೃತ್ವಾ ಪ್ರವಕ್ಷ್ಯಾಮಿ ಯತ್ತತ್ಸಿದ್ಧ್ಯತಿ ಮೇ ವಚಃ ॥ ೩೬ ॥

ತ್ರಿವಿಕ್ರಮಾಯ ರಾಮಾಯ ವೈಕುಂಠಾಯ ನರಾಯ ಚ ।
ವಾರಾಹಾಯ ನೃಸಿಂಹಾಯ ವಾಮನಾಯ ಮಹಾತ್ಮನೇ ॥ ೩೭ ॥

ಹಯಗ್ರೀವಾಯ ಶುಭ್ರಾಯ ಹೃಷೀಕೇಶ ಹರಾಶುಭಂ ।
ಪರೋಪತಾಪಮಹಿತಂ ಪ್ರಯುಕ್ತಂ ಚಾಭಿಚಾರಿಣಾ ॥ ೩೮ ॥

---

೩೩. ಅನಂತರ ಸರ್ವರೋಗ ನಾಶಕನಾದ "ಓಂ ನಮಃ ಶ್ರೀಪರಮಾರ್ಥಾಯ ಪುರುಷಾಯ ಮಹಾತ್ಮನೇ, ಅರೂಪ ಬಹುರೂಪಾಯ ವ್ಯಾಪಿನೇ ಪರಮಾತ್ಮನೇ" ಎಂದು ಜಪಿಸಬೇಕು.

೩೪–೩೬. ವಾರಾಹ, ನಾರಸಿಂಹ, ವಾಮನ ಮುಂತಾದ ಸುಖವನ್ನು ಕೊಡುವ ವಿಷ್ಣುವಿನ ಮಂತ್ರಗಳನ್ನು ಆಯಾಮಂತ್ರಗಳ ರೀತಿಯಲ್ಲಿ ನ್ಯಾಸವನ್ನು ಮಾಡಿಕೊಂಡು ಜಪಿಸಬಹುದು. ಪಾಪರಹಿತನಾದ, ಶುದ್ಧನಾದ, ರೋಗ, ಪಾಪಗಳನ್ನು ನಾಶಮಾಡುವ, ಗೋವುಗಳನ್ನು ಕಾಪಾಡುವ, ಪದ್ಮನಾಭನಾದ, ವಸುದೇವನ ಮಗನಾದ, ಪರ್ವತಧಾರಿಯಾದ ಆ ಸ್ವಾಮಿಗೆ ನಮಸ್ಕರಿಸಿ ಹೇಳುತ್ತೇನೆ. ನನ್ನ ಮಾತು ಸತ್ಯವಾಗಲಿ. ಸಿದ್ಧಿಸಲಿ.

೩೭–೪೦. ತ್ರಿವಿಕ್ರಮನೆ! ರಾಮನೆ! ವೈಕುಂಠನೆ! ನಾರಾಯಣನೆ! ವರಾಹನೇ! ನೃಸಿಂಹನೇ! ವಾಮನನೆ! ಹಯಗ್ರೀವನೆ! ಶುಭ್ರನೆ! ಹೃಷೀಕೇಶನೆ! ನಿನಗೆನಮಸ್ಕಾರವು. ನನಗೆ ಇರುವ, ಬರುವ ಅಶುಭಗಳನ್ನು ಪರಿಹರಿಸು

**ಗೆರಸ್ಪರ್ಶಮಹಾರೋಗಪ್ರಯೋಗಂ ಜರಯಾ ಜರ ।**
**ನಮೋಽಸ್ತು ವಾಸುದೇವಾಯ ನಮಃ ಕೃಷ್ಣಾಯ ಖಡ್ಗಿನೇ ॥ ೩೯ ॥**

**ನಮಃ ಪುಷ್ಕರನೇತ್ರಾಯ ಕೇಶವಾಯಾದಿಚಕ್ರಿಣೇ ।**
**ನಮಃ ಕಿಂಜಲ್ಕವರ್ಣಾಯ ಪೀತನಿರ್ಮಲವಾಸಸೇ ॥ ೪೦ ॥**

**ಮಹಾದೇವವಪುಸ್ಕಂಧಸ್ಪೃಷ್ಟಚಕ್ರಾಯ ಚಕ್ರಿಣೇ ।**
**ದಂಷ್ಟ್ರೋದ್ಧೃತಕ್ಷಿತಿತಲತ್ರಿಮೂರ್ತಿಪತಯೇ ನಮಃ ॥ ೪೧ ॥**

**ಮಹಾಯಜ್ಞವರಾಹಾಯ ಶ್ರೀವಿಷ್ಣವೇ ನಮೋಽಸ್ತು ತೇ ।**
**ತಪ್ತಹಾಟಕಕೇಶಾನ್ತ ಜ್ವಲತ್ಪಾವಕಲೋಚನ ॥ ೪೨ ॥**

**ವಜ್ರಾಧಿಕನಖಸ್ಪರ್ಶ ದಿವ್ಯಸಿಂಹ ನಮೋಽಸ್ತು ತೇ ।**
**ಕಶ್ಯಪಾಯಾತಿಹ್ರಸ್ವಾಯ ಋಗ್ಯಜುಸ್ಸಾಮಲಕ್ಷಣ ॥ ೪೩ ॥**

**ತುಭ್ಯಂ ವಾಮನರೂಪಾಯ ಕ್ರಮತೇ ಗಾಂ ನಮೋ ನಮಃ ।**
**ವಾರಾಹಶೇಷದುಃಖಾನಿ ಸರ್ವಪಾಪಫಲಾನಿ ಚ ॥ ೪೪ ॥**

---

ಮಾಟ ಮುಂತಾದುವು, ವಿಷದಸಂಬಂಧ ಮಹಾರೋಗ ಇವನ್ನೆಲ್ಲಾ ನೀನು ಕ್ಷಯಿಸಿ ನಾಶಮಾಡು. ವಾಸುದೇವನೆ! ಕೃಷ್ಣನೆ! ಖಡ್ಗಿಯೆ! ಪುಷ್ಕರನೇತ್ರನೆ! ಕೇಶವನೆ! ಚಕ್ರಿಯೆ! ಹೊಂಬಣ್ಣವುಳ್ಳವನೆ! ಪೀತಾಂಬರಧಾರಿಯೇ! ನಿನಗೆ ನಮಸ್ಕಾರವು.

೪೧. ಮಹಾದೇವನ ದೇಹವನ್ನು ಮರ್ದಿಸಿ ಅದರಿಂದ ಬಂದ ಚಕ್ರವನ್ನು ಧರಿಸಿರುವವನೇ ! ಕೋರೆದಾಡೆಯಿಂದ ಭೂಮಿಯನ್ನು ಮೇಲಕ್ಕೆ ಎತ್ತಿರುವವನೇ ! ತ್ರಿಮೂರ್ತಿಗಳಿಗೂ ಒಡೆಯನೆ ! ನಿನಗೆ ನಮಸ್ಕಾರವು.

೪೨–೪೭. ಮಹಾಯಜ್ಞವರಾಹನೇ ! ಶ್ರೀವಿಷ್ಣುವೇ ! ನಿನಗೆ ನಮಸ್ಕಾರವು. ಕಾದಿರುವ ಚಿನ್ನದಂತೆ ಕೂದಲುಗಳುಳ್ಳ, ಉರಿಯುತ್ತಿರುವ ಬೆಂಕಿಯಂತೆ ಕಣ್ಣುಗಳುಳ್ಳ, ವಜ್ರಕ್ಕಿಂತಲೂ ಗಟ್ಟಿಯಾದ ಉಗುರುಗಳುಳ್ಳ ಎಲೈ ನರಸಿಂಹನೇ ! ನಿನಗೆ ನಮಸ್ಕಾರವು. ಕಶ್ಯಪನೆ ! ವಾಮನನೆ ! ಋಕ್ ಯಜುಸ್ ಸಾಮವೇದಗಳ ಸ್ವರೂಪನೇ ! ಭೂಮಿಯನ್ನಳೆದವನೆ ! ನಿನಗೆ ನಮಸ್ಕಾರವು. ಎಲೈ ವರಾಹ ರೂಪಿಯೆ ! ಎಲ್ಲ ದುಃಖಗಳನ್ನೂ ಪಾಪಫಲಗಳನ್ನೂ ನಾಶಮಾಡು.

ಮರ್ದ ಮರ್ದ ಮಹಾದಂಷ್ಟ್ರ ಮರ್ದ ಮರ್ದ ಚ ತತ್ಫಲಂ ।
ನರಸಿಂಹ ಕರಾಳಸ್ಯದಂತಪ್ರಾಂತ ನಖೋಜ್ವಲ ॥ ೪೫ ॥

ಭಂಜ ಭಂಜ ನಿನಾದೇನ ದುಃಖಾನ್ಯಸ್ಯಾರ್ತಿನಾಶನ ।
ಋಗ್ಯಜುಸ್ಸಾಮಭಿರ್ವಾಗ್ಭಿಃ ಕಾಮರೂಪಧರಾದಿಧೃಕ್ ॥ ೪೬ ॥

ಪ್ರಶಮಂ ಸರ್ವದುಃಖಾನಿ ಸಶ್ಯಂತ್ವಸ್ಯ ಜನಾರ್ದನ ।
ಐಕಾಹಿಕಂ ದ್ವ್ಯಾಹಿಕಂ ಚ ತಥಾ ತ್ರಿದಿವಸಂ ಜ್ವರಂ ॥ ೪೭ ॥

ಚಾತುರ್ಥಿಕಂ ತಥಾನುಗ್ರಂ ತಥಾ ವೈ ಸತತಜ್ವರಂ ।
ದೋಷೋತ್ಥಂ ಸನ್ನಿಪಾತೋತ್ಥಂ ತಥೈವಾಗಂತುಕಜ್ವರಂ ॥ ೪೮ ॥

ಶಮಂ ನಯತು ಗೋವಿಂದೋ ಛಿತ್ವಾ ಛಿತ್ವಾಸ್ಯ ವೇದನಾಂ ।
ನೇತ್ರದುಃಖಂ ಶಿರೋದುಃಖಂ ದುಃಖಂ ತೂದರಸಂಭವಂ ॥ ೪೯ ॥

ಅನುಚ್ಛ್ವಾಸಂ ಮಹಾಶ್ವಾಸಂ ಪರಿತಾಪಂ ತು ವೇಪಥುಂ ।
ಗುದಘ್ರಾಣಾಂಘ್ರಿರೋಗಾಂಶ್ಚ ಕುಷ್ಠರೋಗಂ ತಥಾ ಕ್ಷಯಂ ॥ ೫೦ ॥

---

ಮಹಾದಂಷ್ಟ್ರನೇ ! ಆ ಪಾಪ ಫಲವನ್ನು ನಾಶಮಾಡು. ನರಸಿಂಹನೇ ! ಭಯಂಕರವಾದ ಮುಖವುಳ್ಳವನೇ ! ಕೋರೆಹಲ್ಲು ಉಗುರುಗಳಿಂದ ಪ್ರಕಾಶಿಸುವವನೇ ! ನಿನ್ನ ಘರ್ಜನೆಯಿಂದಲೇ ದುಃಖಗಳನ್ನೂ, ತೊಂದರೆಯನ್ನೂ ನಾಶಮಾಡು. ಋಕ್, ಯಜುಸ್ಸು, ಸಾಮಗಳ ಮಾತುಗಳಿಂದ ನಾನಾ ರೂಪಗಳನ್ನೂ ಹೊಂದಿರುವ ಸ್ವಾಮಿಯೇ ! ಜನಾರ್ದನನೇ ! ನನ್ನ ಎಲ್ಲಾ ದುಃಖಗಳನ್ನೂ ನಾಶಮಾಡು. ಒಂದು ದಿನಕ್ಕೊಮ್ಮೆ ಬರುವುದು ಎರಡುದಿನಕ್ಕೊಮ್ಮೆ ಬರುವುದು ಮೂರುದಿನಕ್ಕೊಮ್ಮೆ ಬರುವುದು. ನಾಲ್ಕುದಿನಕ್ಕೊಮ್ಮೆ ಬರುವುದು. ಉಗ್ರವಾದುದು, ಯಾವಾಗಲೂ ಇದ್ದೇ ಇರುವುದು, ದೋಷದಿಂದ ಬಂದುದು. ಸನ್ನಿಪಾತದಿಂದ ಬಂದುದು, ಆಗನ್ತುಕವಾದುದು ಇಂತಹ ಜ್ವರಗಳೆಲ್ಲವನ್ನೂ ಗೋವಿಂದನು ನಾಶಮಾಡಿ ನನ್ನ ವೇದನೆಯನ್ನು ತಪ್ಪಿಸಲಿ. ಕಣ್ಣುನೋವು, ತಲೆನೋವು, ಹೊಟ್ಟೆನೋವು, ಉಸಿರುಬಿಡಲಾಗದಿರುವುದು, ಉಸಿರು ಹೆಚ್ಚಾಗಿ ಬಿಡುವುದು, ಮೈಯುರಿ, ನಡುಕ, ಅಂಡು, ಮೂಗು, ಕಾಲುಗಳಲ್ಲಿನ ರೋಗ,

ಕಾಮಿಲಾದೀಂಸ್ತಥಾರೋಗಾನ್ ಪ್ರಮೇಹಾದೀಂಶ್ಚ ದಾರುಣಾನ್ |
ಯೇ ವಾತಪ್ರಭವಾ ರೋಗಾ ಲೂತಾ ವಿಸ್ಫೋಟಕಾದಯಃ ॥ ೫೧ ॥

ತೇ ಸರ್ವೇ ವಿಲಯಂ ಯಾನ್ತು ವಾಸುದೇವಾಪಮಾರ್ಜಿತಾಃ |
ವಿಲಯಂ ಯಾಂತಿ ತೇ ಸರ್ವೇ ವಿಷ್ಣೋರುಚ್ಚಾರಣೇನ ವಾ ॥ ೫೨ ॥

ಕ್ಷಯಂ ಗಚ್ಛಂತು ಚಾಶೇಷಾಃ ತೇ ಚಕ್ರಾಭಿಹತಾ ಹರೇಃ ।
ಅಚ್ಯುತಾನಂತಗೋವಿಂದನಾಮೋಚ್ಚಾರಣಭೇಷಜಾತ್ ॥ ೫೩ ॥

ನಶ್ಯಂತಿ ಸಕಲಾ ರೋಗಾಃ ಸತ್ಯಂ ಸತ್ಯಂ ವದಾಮ್ಯಹಂ |
ಸ್ಥಾವರಂ ಜಂಗಮಂ ಯಚ್ಚ ಕೃತ್ರಿಮಂ ಚಾಪಿ ಯದ್ವಿಷಂ ॥ ೫೪ ॥

ದಂತೋದ್ಭವಂ ನಖೋದ್ಭೂತಮಾಕಾಶಪ್ರಭವಂ ಚ ಯತ್ |
ಭೂತಾದಿಪ್ರಭವಂ ಯಚ್ಚ ವಿಷಮತ್ಯಂತದುಸ್ಸಹಂ ॥ ೫೫ ॥

ಶಮಂ ನಯತು ತತ್ಸರ್ವಂ ಕೀರ್ತಿತೋಽಸ್ಯ ಜನಾರ್ದನಃ ।
ಗ್ರಹಾನ್ಪ್ರೇತಗ್ರಹಾಂಶ್ಚೈವ ತಥಾನ್ಯಾನ್ ಶಾಕಿನೀಗ್ರಹಾನ್ ॥ ೫೬ ॥

ಮುಖಮಂಡಲಕಾನ್ ಕ್ರೂರಾನ್ ರೇವತೀಂ ವೃದ್ಧರೇವತೀಂ |
ವೃದ್ಧಿಕಾಖ್ಯಾನ್ ಗ್ರಹಾಂಶ್ಚೋಗ್ರಾನ್ ತಥಾ ಮಾತೃಗ್ರಹಾನಪಿ ॥ ೫೭ ॥

---

ಕುಷ್ಠ, ಕ್ಷಯ, ಕಾಮಾಲೆ ಪ್ರಮೇಹ, ವಾತರೋಗಗಳು, ಶಿಡುಬು ಮುಂತಾದುವು ಈ ರೋಗಗಳೆಲ್ಲವೂ ವಾಸುದೇವನಿಂದ ತೊಡೆಯಲ್ಪಟ್ಟವುಗಳಾಗಿ ನಾಶವಾಗಲಿ. ವಿಷ್ಣುನಾಮವನ್ನು ಉಚ್ಚಾರಣೆ ಮಾಡಿದ ಮಾತ್ರದಿಂದಲೇ ಅವೆಲ್ಲವೂ ನಾಶವಾಗುತ್ತವೆ. ವಿಷ್ಣುವಿನ ಚಕ್ರದಿಂದ ಹೊಡೆಯಲ್ಪಟ್ಟವುಗಳಾಗಿ ಅವೆಲ್ಲವೂ ನಾಶಹೊಂದಲಿ. ಅಚ್ಯುತ, ಅನಂತ, ಗೋವಿಂದಗಳೆಂಬ ನಾಮುಗಳನ್ನು ಉಚ್ಚಾರಣೆ ಮಾಡುವುದರಿಂದಲೇ ಆ ರೋಗಗಳೆಲ್ಲವೂ ನಾಶವಾಗುತ್ತವೆ. ಇದು ಸತ್ಯವು. ಸತ್ಯವು. ಹೇಳುತ್ತೇನೆ. ಸ್ಥಾವರ ಜಂಗಮುಗಳ ವಿಷ, ಕೃತ್ರಿಮ ವಿಷ, ಹಲ್ಲು ಉಗುರುಗಳಿಂದ ಹುಟ್ಟಿದ ವಿಷ, ತನ್ನಷ್ಟಕ್ಕೆ ತಾನೇ ಹುಟ್ಟಿದ ವಿಷ, ಪ್ರಾಣಿಗಳ ವಿಷ, ತಡೆಯಲಾಗದ ವಿಷ ಇವೆಲ್ಲವೂ ಕೂಡ ಆ ಜನಾರ್ದನನ ಸ್ಮರಣೆಯಿಂದ ನಾಶವಾಗಲಿ. ಗ್ರಹಗಳು, ಪ್ರೇತಗಳು, ಶಾಕಿನಿಗಳು, ಮುಖಮಂಡಲಗಳು, ರೇವತೀ ಗ್ರಹಗಳು, ವೃದ್ಧ ರೇವತೀ ಗ್ರಹಗಳು, ವೃದ್ಧವೆಂಬ ಗ್ರಹಗಳು, ಉಗ್ರ ಗ್ರಹಗಳು, ಮಾತೃಗ್ರಹಗಳು ಇವೆಲ್ಲವನ್ನೂ ಆ ಸ್ವಾಮಿಯು ನಾಮಸ್ಮರಣಮಾತ್ರದಿಂದಲೇ ನಾಶಮಾಡಲಿ.

ಬಾಲಸ್ಯ ವಿಷ್ಣೋಶ್ಚರಿತಂ ಹಂತಿ ಬಾಲಗ್ರಹಾನಪಿ ।
ವೃದ್ಧಾನಾಂ ಯೇ ಗ್ರಹಾಃ ಕೇಚಿತ್ ಬಾಲಾನಾಂ ಚಾಪಿ ಯೇ ಗ್ರಹಾಃ ॥೫೮॥

ನೃಸಿಂಹದರ್ಶನಾದೇವ ನಶ್ಯಂತೇ ತತ್‍ಕ್ಷಣಾದಪಿ ।
ದಂಷ್ಟ್ರಾಕರಾಳವದನೋ ನೃಸಿಹ್ಮೋ ದೈತ್ಯಭೀಷಣಃ ॥ ೫೯ ॥

ತಂ ದೃಷ್ಟ್ವಾ ತೇ ಗ್ರಹಾಸ್ಸರ್ವೇ ದೂರಂ ಯಾಂತಿ ವಿಶೇಷತಃ ।
ನರಸಿಂಹ ಮಹಾಸಿಂಹ ಜ್ವಾಲಾಮಾಲೋಜ್ಜ್ವಲಾನನ ॥ ೬೦ ॥

ಗ್ರಹಾನಶೇಷಾನ್ಸರ್ವೇಶ ನುದ ಸ್ವಾಸ್ಯವಿಲೋಚನ ।
ಯೇ ರೋಗಾ ಯೇ ಮಹೋತ್ಪಾತಾ ಯದ್ವಿಷಂ ಯೇ ಮಹಾಗ್ರಹಾಃ ॥೬೧

ಯಾನಿ ಚ ಕ್ರೂರಭೂತಾನಿ ಗ್ರಹಪೀಡಾಶ್ಚ ದಾರುಣಾಃ ।
ಶಸ್ತ್ರಕ್ಷತೇಷು ಯೇ ರೋಗಾಃ ಜ್ವಾಲಾಗರ್ದಭಕಾದಯಃ ॥ ೬೨ ॥

ವಿಸ್ಫೋಟಕಾದಯೋ ಯೇ ಚ ಗ್ರಹಗಾತ್ರೇಷು ಸಂಸ್ಥಿತಾಃ ।
ತ್ರೈಲೋಕ್ಯರಕ್ಷಕರ್ತಾಸ್ತ್ವಂ ದುಷ್ಟದಾನವವಾರಣ ॥ ೬೩ ॥

---

೫೮. ಬಾಲರೂಪಿಯಾದ ವಿಷ್ಣುವಿನ ಚರಿತ್ರೆಯು ಬಾಲಗ್ರಹಗಳನ್ನು ನಾಶಮಾಡುತ್ತದೆ. ದೊಡ್ಡವರಿಗೆ ಬಂದ ಗ್ರಹಗಳು, ಬಾಲರಿಗೆ ಹಿಡಿದಿರುವ ಗ್ರಹಗಳು ಇವೆಲ್ಲವೂ ನರಸಿಂಹನ ದರ್ಶನದಿಂದಲೇ ಒಡನೆಯೇ ನಾಶ ಹೊಂದುತ್ತವೆ.

೫೯–೬೮. ಕೋರೆಹಲ್ಲು, ಭಯಂಕರವಾದ ಮುಖಗಳಿಂದ ಕೂಡಿರುವ ಆ ನರಸಿಂಹನು ಭಯಂಕರನು ಆತನನ್ನು ನೋಡಿದರೆ ಎಲ್ಲಾ ಗ್ರಹಗಳೂ ದೂರಕ್ಕೆ ಓಡಿಹೋಗುತ್ತವೆ. ನರಸಿಂಹನೇ! ಮಹಾಸಿಂಹನೇ! ಜ್ವಾಲೆಯಿಂದ ಪ್ರಕಾಶಮಾನನಾದ ಮುಖವುಳ್ಳವನೇ! ಎಲ್ಲಾ ಗ್ರಹಗಳನ್ನೂ ಓಡಿಸು. ರೋಗಗಳು, ಉತ್ಪಾತಗಳು, ವಿಷ, ಮಹಾಗ್ರಹ, ಕ್ರೂರಭೂತಗಳು, ಗ್ರಹಪೀಡೆಗಳು. ಶಸ್ತ್ರಗಳ ಗಾಯದಿಂದ ಉಂಟಾಗಿರುವ ರೋಗಗಳು, ಜ್ವಾಲಾಗರ್ದಭಗಳೆಂಬ ರೋಗಗಳು. ಸಿಡುಬು ಮುಂತಾದುವೆಲ್ಲವನ್ನೂ ದುಷ್ಟದಾನವರನ್ನು ನಾಶಮಾಡುವ ಸುದರ್ಶನನೇ! ನೀನು ಮೂರುಲೋಕವನ್ನೂ ರಕ್ಷಿಸುವವನಾದ್ದರಿಂದ ನಾಶಪಡಿಸು.

ಸುದರ್ಶನ ಮಹಾತೇಜಃ ಛಿಂದಿ ಛಿಂದಿ ಮಹಾಜ್ವರಂ ।
ಛಿಂದಿ ವಾತಂ ಚ ಲೂತಂ ಚ ಛಿಂದಿ ಘೋರಂ ಮಹಾವಿಷಂ ॥ ೭೪ ॥

ಉದ್ದಂಡಾಸುರಶೂಲಂ ಚ ವಿಷಜ್ವಾಲಾಸಗರ್ದಭಂ ।
ಓಂ ಹ್ರಾಂ ಹ್ರಾಂ ಹ್ರೂಂ ಹ್ರೂಂ ಪ್ರಧಾರೇಣ ಕುಠಾರೇಣ ಹನ ದ್ವಿಷಃ ॥

ಓಂ ನಮೋ ಭಗವತೇ ತುಭ್ಯಂ ದುಃಖದಾರಣವಿಗ್ರಹ ।
ಯಾನಿ ಚಾನ್ಯಾನಿ ದುಷ್ಟಾನಿ ಪ್ರಾಣಿಪೀಡಾಕರಾಣಿ ವೈ ॥ ೭೬ ॥

ತಾನಿ ಸರ್ವಾಣಿ ಸರ್ವಾತ್ಮಾ ಪರಮಾತ್ಮಾ ಜನಾರ್ದನಃ ।
ಕಿಂಚಿದ್ರೂಪಂ ಸಮಾಸ್ಥಾಯ ವಾಸುದೇವ ನಮೋಽಸ್ತು ತೇ ॥ ೭೭ ॥

ಕ್ಷಿಪ್ತ್ವಾ ಸುದರ್ಶನಂ ಚಕ್ರಂ ಜ್ವಾಲಾಮಾಲಾವಿಭೀಷಣಂ ।
ಸರ್ವದುಷ್ಟೋಪಶಮನಂ ಕುರು ದೇವವರಾಚ್ಯುತ ॥ ೭೮ ॥

ಸುದರ್ಶನ ಮಹಾಚಕ್ರ ಗೋವಿಂದಸ್ಯ ವರಾಯುಧ ।
ತೀಕ್ಷ್ಣಧಾರ ಮಹಾವೇಗ ಸೂರ್ಯಕೋಟಿಸಮದ್ಯುತೇ ॥ ೭೯ ॥

---

ಮಹಾಜ್ವರಗಳನ್ನು ನಾಶಮಾಡು. ವಾತವೆಂಬ ರೋಗ, ಲೂತವೆಂಬ ರೋಗ ಇವೆಲ್ಲವನ್ನೂ ನಾಶಮಾಡು. ಮಹಾವಿಷಗಳನ್ನೂ ನಾಶಮಾಡು. ಮಹಾಶೂಲ ರೋಗವನ್ನೂ ನಾಶಮಾಡು. ವಿಷಜ್ವಾಲೆ ಗರ್ದಭ ರೋಗಗಳನ್ನು ನಾಶಮಾಡು. ಓಂ ಹ್ರಾಂ ಹ್ರಾಂ ಹ್ರೂಂ ಹ್ರೂಂ ಉಗ್ರವಾದ ಕೊಡಲಿಯಿಂದ ಶತ್ರುಗಳನ್ನು ನಾಶಮಾಡು. ದುಃಖನಾಶಕನಾದ ಮೂರ್ತಿಯೇ! ಭಗವಂತನಾದ ನಿನಗೆ ನಮಸ್ಕಾರವು. ಇನ್ನೂ ಉಳಿದಿರುವ ದುಷ್ಟಗಳಾದ ಪ್ರಾಣಿಪೀಡಾಕರಗಳಾದ ಗ್ರಹಗಳನ್ನೆಲ್ಲಾ ಎಲೈ ಜನಾರ್ದನನೇ! ನಾಶಮಾಡು. ಎಲೈ ವಾಸುದೇವನೇ! ಯಾವುದಾದರೂ ರೂಪವನ್ನು ಹೊಂದಿ ಜ್ವಾಲೆಯಿಂದ ಕೂಡಿದ ಸುದರ್ಶನವನ್ನು ಬಿಟ್ಟು ನನಗೆ ಒದಗಿರುವ ಕ್ರೂರಗ್ರಹಗಳನ್ನು ನಾಶಮಾಡು. ನಿನಗೆ ನಮಸ್ಕಾರವು.

೭೯–೭೯. ಎಲೈ ಮಹಾಚಕ್ರವಾದ ಸುದರ್ಶನವೇ! ಗೋವಿಂದನ ಉತ್ತಮವಾದ ಆಯುಧವೇ! ಹರಿತವಾದ ಬಾಯುಳ್ಳವನೇ! ಕೋಟಿ ಸೂರ್ಯರಂತೆ

**ಸುದರ್ಶನಮಹಾಜ್ವಾಲ ಛಿಂದಿ ಛಿಂದಿ ಮಹಾರವ ।**
**ಸರ್ವದುಃಖಾನಿ ರಕ್ಷಾಂಸಿ ಪಾಪಾನಿ ಚ ವಿಭೀಷಣ ॥ ೨೦ ॥**

**ದುರಿತಂ ಹನ ಚಾರೋಗ್ಯಂ ಕುರು ತ್ವಂ ಭೋ ಸುದರ್ಶನ ।**
**ಪ್ರಾಚ್ಯಾಂ ಚೈವ ಪ್ರತೀಚ್ಯಾಂ ಚ ದಕ್ಷಿಣೋತ್ತರತಸ್ತಥಾ ॥ ೨೧ ॥**

**ರಕ್ಷಾಂ ಕರೋತು ವಿಶ್ವಾತ್ಮಾ ನರಸಿಂಹಸ್ಸ್ವಗರ್ಜಿತೈಃ ।**
**ಭೂಮ್ಯಂತರಿಕ್ಷೇ ಚ ತಥಾ ಪೃಷ್ಠತಃ ಪಾರ್ಶ್ವತೋಗ್ರತಃ ॥ ೨೨ ॥**

**ರಕ್ಷಾಂ ಕರೋತು ಭಗವಾನ್ ಬಹುರೂಪೀ ಜನಾರ್ದನಃ ।**
**ತಥಾ ವಿಷ್ಣುಮಯಂ ಸರ್ವಂ ಸದೇವಾಸುರಮಾನುಷಂ ॥ ೨೩ ॥**

**ತೇನ ಸತ್ಯೇನ ಸಕಲಂ ದುಃಖಮಸ್ಯ ಪ್ರಣಶ್ಯತು ।**
**ಯಥಾ ಯೋಗೇಶ್ವರೋ ವಿಷ್ಣುಃ ಸರ್ವವೇದೇಷು ಗೀಯತೇ ॥ ೨೪ ॥**

**ತೇನ ಸತ್ಯೇನ ಸಕಲಂ ದುಃಖಮಸ್ಯ ಪ್ರಣಶ್ಯತು ।**
**ಪರಮಾತ್ಮಾ ಯಥಾ ವಿಷ್ಣುರ್ವೇದಾಂಗೇಷು ಚ ಗೀಯತೇ ॥ ೨೫ ॥**

**ತೇನ ಸತ್ಯೇನ ವಿಶ್ವಾತ್ಮಾ ಸುಖದಸ್ತಸ್ಯ ಕೇಶವಃ ।**
**ಶಾನ್ತಿರಸ್ತು ಶಿವಂ ಚಾಸ್ತು ಪ್ರಣಾಶಂ ಯಾತು ಚಾಸುಖಂ ॥ ೨೬ ॥**

---

ಕಾಂತಿಯುಳ್ಳವನೇ! ನನ್ನ ದುಷ್ಟಗ್ರಹಗಳೆಲ್ಲವನ್ನೂ ಕತ್ತರಿಸು ಕತ್ತರಿಸು. ಎಲ್ಲಾ ದುಃಖಗಳನ್ನೂ ರಾಕ್ಷಸರನ್ನೂ ಪಾಪಗಳನ್ನೂ ದುರಿತಗಳನ್ನೂ ನಾಶಮಾಡು. ಎಲೈ ಸುದರ್ಶನನೇ! ಆರೋಗ್ಯವನ್ನುಂಟುಮಾಡು. ನರಸಿಂಹನು ತನ್ನ ಘರ್ಜನೆಗಳಿಂದ ಪೂರ್ವ ಪಶ್ಚಿಮ ದಕ್ಷಿಣೋತ್ತರಗಳಲ್ಲಿಯೂ ಎಲ್ಲಾ ಕಡೆಯಲ್ಲಿಯೂ ರಕ್ಷಿಸಲಿ. ಭೂಮಿ ಅಂತರಿಕ್ಷ ಹಿಂದೆ ಮುಂದೆ ಪಕ್ಕಗಳಲ್ಲಿ ಆ ಬಹು ರೂಪಿಯಾದ ಜನಾರ್ದನನು ಕಾಪಾಡಲಿ. ದೇವತೆಗಳು ಅಸುರರು ಮನುಷ್ಯರು ಎಲ್ಲವೂ ಇರುವ ಈ ಜಗತ್ತೇ ವಿಷ್ಣುರೂಪವಾದುದು. ಆ ಸತ್ಯದಿಂದ ಎಲ್ಲಾ ದುಃಖಗಳೂ ನಾಶವಾಗಲಿ. ಎಲ್ಲಾ ವೇದಗಳಲ್ಲಿಯೂ ಕೂಡ ಸರ್ವೇಶ್ವರನಾದ ವಿಷ್ಣುವೇ ಇರುವನು. ಆ ಸತ್ಯದಿಂದ ನನ್ನ ದುಃಖಗಳೆಲ್ಲವೂ ನಾಶವಾಗಲಿ. ಪರಮಾತ್ಮನಾದ ವಿಷ್ಣುವು ವೇದಾಂತಗಳಲ್ಲಿ ಹೇಳಲ್ಪಟ್ಟಿದ್ದಾನೆ. ಆ ಸತ್ಯದಿಂದ ವಿಶ್ವಾತ್ಮನಾದ ಕೇಶವನು ನನ್ನನ್ನು ರಕ್ಷಿಸಲಿ. ವಾಸುದೇವನ ಶರೀರದಿಂದ ಹುಟ್ಟಿದ

ವಾಸುದೇವಶರೀರೋತ್ಥೈಃ ಕುಶೈಸ್ಸಮ್ಮಾರ್ಜಿತಂ ಮಯಾ ।
ಅಪಾಮಾರ್ಜತ ಗೋವಿಂದೋ ನರೋ ನಾರಾಯಣಸ್ತಥಾ ॥ ೭೭ ॥

ತಥಾಪಿ ಸರ್ವದುಃಖಾನಾಂ ಪ್ರಶಮೋ ವಚನಾದ್ಧರೇಃ ।
ಶಾನ್ತಾಸ್ಸಮಸ್ತದೋಷಾಸ್ತೇ ಗ್ರಹಾಸ್ಸರ್ವೇ ವಿಷಾಣಿ ಚ ।
ಭೂತಾನಿ ಚ ಪ್ರಶಾಮ್ಯಂತಿ ಸಂಸ್ಮೃತೇ ಮಧುಸೂದನೇ ॥ ೭೮ ॥

ಏತೇ ಕುಶಾ ವಿಷ್ಣುಶರೀರಸಂಭವಾ ।
ಜನಾರ್ದನೋಽಹಂ ಸ್ವಯಮೇವ ಜಾಗ್ರತಃ ॥
ಹತಂ ಮಯಾ ದುಃಖಮಶೇಷಮಸ್ಯ ವೈ ।
ಸ್ವಸ್ಥೋ ಭವತ್ವೇಷ ವಚೋ ಯಥಾ ಹರೇಃ ॥ ೭೯ ॥

ಶಾನ್ತಿರಸ್ತು ಶಿವಂ ಚಾಸ್ತು ಪ್ರಣಶ್ಯತ್ವಸುಖಂ ಚ ಯತ್ ।
ಯದ್ಯತ್ತದ್ದುರಿತಂ ಕಿಂಚಿತ್ ಕ್ಷಿಪ್ತಂ ತಲ್ಲವಣಾಂಭಸಿ ॥ ೮೦ ॥

ಸ್ವಾಸ್ಥ್ಯಮಸ್ಯ ಸದೈವಾಸ್ತು ಹೃಷೀಕೇಶಸ್ಯ ಕೀರ್ತನಾತ್ ।
ಯದ್ಯತೋತ್ರ ಗತಂ ಪಾಪಂ ತತ್ತು ತತ್ರ ಪ್ರಗಚ್ಛತು ॥ ೮೧ ॥

---

ದರ್ಭೆಗಳಿಂದ ನಾನು ಎಲ್ಲವನ್ನೂ ಸವರಿ ಗುಡಿಸಿರುವೆನು. ಶಾನ್ತಿಯುಂಟಾಗಲಿ. ಮಂಗಳವಾಗಲಿ. ದುಃಖವೂ ಅಮಂಗಳವೂ ನಾಶವಾಗಲಿ. ಗೋವಿಂದನೂ ನರನಾರಾಯಣರೂ ಸವರಿದ್ದಾರೆ. ಆ ಹರಿಯ ವಚನದಂತೆ ಎಲ್ಲಾ ದುಃಖಗಳೂ ನಾಶವಾಗಲಿ. ಮಧುಸೂದನನನ್ನು ಸ್ಮರಿಸಿದರೆ ದೋಷಗಳೂ ವಿಷಗಳೂ ಭೂತಗಳೂ ನಾಶವಾಗುತ್ತವೆ. ಈ ದರ್ಭೆಗಳು ವಿಷ್ಣುವಿನ ಶರೀರ ದಿಂದ ಹುಟ್ಟಿದುವು. ನಾನು ಪ್ರತ್ಯಕ್ಷನಾದ ಜನಾರ್ದನನು ನಾನು ಇವನ ದುಃಖ ಗಳನ್ನೆಲ್ಲಾ ನಾಶಮಾಡಿದ್ದೇನೆ. ಹರಿಯ ಮಾತಿನಂತೆ ಇವನು ಸ್ವಸ್ಥವಾಗಲಿ.

೮೦. ಶಾನ್ತಿಯಾಗಲಿ, ಮಂಗಳವಾಗಲಿ, ಇವನ ಅಶುಭವೆಲ್ಲವೂ ನಾಶವಾಗಲಿ. ಇವನ ದುಃಖವೆಲ್ಲವೂ ಲವಣಸಮುದ್ರದಲ್ಲಿ ಬೀಳಲಿ.

೮೧. ಹೃಷೀಕೇಶನನ್ನು ಸ್ಮರಣೆ ಮಾಡುವುದರಿಂದ ಇವನಿಗೆ ಯಾವಾಗಲೂ ರೋಗವಿಲ್ಲದೆ ಇರಲಿ. ಇವನಲ್ಲಿರುವ ಪಾಪಗಳೆಲ್ಲವೂ ಆ ಸಮುದ್ರಕ್ಕೆ ಹೋಗಲಿ.

ಏತದ್ರೋಗೇಷು ಪೀಡಾಸು ಜಂತೂನಾ ಹಿತಮಿಚ್ಛುಭಿಃ ।
ವಿಷ್ಣುಭಕ್ತೈಶ್ಚ ಕರ್ತವ್ಯಮಪಾಮಾರ್ಜನಕಂ ವ್ರತಂ ॥ ೮೨ ॥

ಅನೇನ ಸರ್ವದುಃಖಾನಿ ವಿಲಯಂ ಯಾಂತ್ಯಶೇಷತಃ ।
ಸರ್ವಪಾಪವಿಶುದ್ಧ್ಯರ್ಥಂ ವಿಷ್ಣೋಃಶ್ಚೈವಾಪಮಾರ್ಜನಾತ್ ॥ ೮೩ ॥

ಆರ್ದ್ರಂ ಶುಷ್ಕಂ ಲಘು ಸ್ಥೂಲಂ ಬ್ರಹ್ಮಹತ್ಯಾದಿಕಂ ಚ ಯತ್ ।
ತತ್ಸರ್ವಂ ನಶ್ಯತೇ ತೂರ್ಣಂ ತಮೋವದ್ರವಿದರ್ಶನಾತ್ ॥ ೮೪ ॥

ನಶ್ಯಂತಿ ರೋಗಾ ದೋಷಾಶ್ಚ ಸಿಂಹಾತ್ ಕ್ಷುದ್ರಮೃಗಾ ಯಥಾ ।
ಗ್ರಹಭೂತಪಿಶಾಚಾದಿ ಶ್ರವಣಾದೇವ ನಶ್ಯತಿ ॥ ೮೫ ॥

---

೮೨. ಈ ರೀತಿಯಾಗಿ ರೋಗಗಳು ಬಂದಾಗಲೂ ಕಷ್ಟಗಳು ಬಂದಾಗಲೂ ಪ್ರಾಣಿಗಳಿಗೆ ಹಿತವನ್ನು ಅಪೇಕ್ಷಿಸುವವರೂ ವಿಷ್ಣುಭಕ್ತರೂ ಈ ಅಪಾಮಾರ್ಜನಕ ವ್ರತವನ್ನುಮಾಡಬೇಕು.

೮೩. ವಿಷ್ಣುವಿನ ಅಪಾಮಾರ್ಜನವ್ರತದಿಂದ ಸರ್ವಪಾಪಗಳೂ ಸರ್ವದುಃಖಗಳೂ ಪೂರ್ಣವಾಗಿ ಹೋಗುತ್ತವೆ.

೮೪. ಹಸಿಯ ಒಣಗಿದ ದೊಡ್ಡ ಚಿಕ್ಕ ಪಾಪಗಳೂ ಬ್ರಹ್ಮಹತ್ಯೆಯೇ ಮುಂತಾದ ಪಾಪಗಳೂ ಸೂರ್ಯನನ್ನು ಕಂಡರೆ ಕತ್ತಲೆಯು ನಾಶವಾಗುವಂತೆ ಒಡನೆಯೇ ಹೋಗುತ್ತವೆ.

೮೫. ಎಲ್ಲಾ ರೋಗಗಳೂ ದೋಷಗಳು ಸಿಂಹವನ್ನು ಕಂಡರೆ ಸಣ್ಣಮೃಗಗಳು ಓಡುವಂತೆ ಸ್ವಾಮಿಯ ನಾಮಕೀರ್ತನದಿಂದ ಓಡಿಹೋಗುತ್ತವೆ. ಗ್ರಹ ಭೂತ ಪಿಶಾಚಾದಿಗಳೂ ಹೋಗುತ್ತವೆ.

ದ್ರವ್ಯಾರ್ಥಂ ಲೋಭಪರಮೈರ್ನ ಕರ್ತವ್ಯಂ ಕದಾಚನ ।
ಕೃತೇಽಪಾಮಾರ್ಜನೇ ಕಿಂಚಿನ್ನ ಗ್ರಾಹ್ಯಂ ಹಿತಕಾಮ್ಯಯಾ ॥ ೮೬ ॥

ನಿರಪೇಕ್ಷೈಃ ಪ್ರಕರ್ತವ್ಯಮಾದಿಮಧ್ಯಾನ್ತಬೋಧಕೈಃ ।
ವಿಷ್ಣುಭಕ್ತೈಸ್ಸದಾ ಶಾನ್ತೈರನ್ಯಥಾಽಸಿದ್ಧಿದಂ ಭವೇತ್ ॥ ೮೭ ॥

ಅತುಲೇಯಂ ನೃಣಾಂ ಸಿದ್ಧಿರಿಯಂ ರಕ್ಷಾ ಪರಾ ನೃಣಾಂ ।
ಭೇಷಜಂ ಪರಮಂ ಹ್ಯೇತದ್ವಿಷ್ಣೋರ್ಯದಪಮಾರ್ಜನಂ ॥ ೮೮ ॥

ಉಕ್ತಂ ಹಿ ಬ್ರಹ್ಮಣಾ ಪೂರ್ವಂ ಪುಲಸ್ತ್ಯಾಯ ಸುತಾಯ ವೈ ।
ಏತತ್ಪುಲಸ್ತ್ಯಮುನಿನಾ ದಾಲಭ್ಯಾಯೋದಿತಂ ಸ್ವಯಂ ॥ ೮೯ ॥

ಸರ್ವಭೂತಹಿತಾರ್ಥಾಯ ದಾಲಭ್ಯೇನ ಪ್ರಕಾಶಿತಂ ।
ತ್ರೈಲೋಕ್ಯೇ ತದಿದಂ ವಿಷ್ಣೋಃ ಸಮಾಪ್ತಂ ಚಾಪಮಾರ್ಜನಂ ॥ ೯೦ ॥

---

೮೬. ಈ ಅಪಾಮಾರ್ಜನ ಸಂಸ್ಕಾರವನ್ನು ಹಣದಾಸೆಯಿಂದ ಮಾಡಬಾರದು. ಅಪಾಮಾರ್ಜನವನ್ನು ಮಾಡಿದಮೇಲೆ ಅವನಿಗೆ ಹಿತವಾಗಬೇಕೆಂಬ ಇಚ್ಛೆಯಿಂದ ಏನನ್ನೂ ತೆಗೆದುಕೊಳ್ಳಬಾರದು.

೮೭. ಈ ಅಪಾಮಾರ್ಜನ ವ್ರತವನ್ನು ಅಪೇಕ್ಷೆಯನ್ನಿಟ್ಟುಕೊಳ್ಳದೇ ಮಾಡಬೇಕು. ಯಾವಾಗಲೂ ಒಳ್ಳೆಯ ಉಪದೇಶಕರಾದ ವಿಷ್ಣುಭಕ್ತರಿಂದ ಇದನ್ನು ಮಾಡಿಸಬೇಕು. ಇಲ್ಲದಿದ್ದರೆ ಸಿದ್ಧಿಯಾಗುವುದಿಲ್ಲ.

೮೮. ಈ ವಿಷ್ಣುಮಂತ್ರದ ಅಪಾಮಾರ್ಜನವು ಉತ್ತಮವಾದ ಸಿದ್ಧಿಯು. ಉತ್ತಮವಾದ ರಕ್ಷೆಯು. ಉತ್ತಮವಾದ ಔಷಧಿಯು.

೮೯–೯೦. ಮೊದಲು ಬ್ರಹ್ಮನು ಪುಲಸ್ತ್ಯನಿಗೂ ಪುಲಸ್ತ್ಯನು ದಾಲಭ್ಯನಿಗೂ ಹೇಳಿದರು. ಆ ದಾಲಭ್ಯಮುನಿಯು ಎಲ್ಲಾ ಪ್ರಾಣಿಗಳ ಹಿತಕ್ಕೋಸ್ಕರವಾಗಿ ಪ್ರಕಾಶಪಡಿಸಿದನು. ಮೂರು ಲೋಕದಲ್ಲಿಯೂ ಪ್ರಸಿದ್ಧವಾದ ಈ ವಿಷ್ಣು ಅಪಾಮಾರ್ಜನಸ್ತೋತ್ರವು ಮುಗಿದುದು.

**ತವಾಗ್ರೇ ಕಥಿತಂ ದೇವಿ ಯತೋ ಭಕ್ತಾಸಿ ಮೇ ಸದಾ ।**
**ಶ್ರುತ್ವಾ ತು ಸರ್ವಂ ಭಕ್ತ್ಯಾ ಚ ರೋಗಾನ್ದೋಷಾನ್ವ್ಯಪೋಹತಿ || ೯೧ ||**

**ಇತಿ ಶ್ರೀ ಮಹಾಪುರಾಣೇ ಪಾದ್ಮೇ ಉತ್ತರಖಂಡೇ ಪಾರ್ವತೀ ಮಹಾದೇವ ಸಂವಾದೇ ಅಪಾಮಾರ್ಜನ ಸ್ತೋತ್ರ ಕಥನಂ ನಾಮ ಊನಾಶೀತಿತಮೋಽಧ್ಯಾಯಸ್ಸಮಾಪ್ತಃ**

---

೯೧. ಎಲೈ ದೇವಿಯೇ ! ನೀನು ಭಕ್ತಳಾಗಿರುವುದರಿಂದ ಇದನ್ನು ನಿನಗೆ ಹೇಳಿದೆನು. ಇದನ್ನು ಭಕ್ತಿಯಿಂದ ಕೇಳಿದರೇನೇ ರೋಗ ದೋಷಗಳೆಲ್ಲವೂ ಹೋಗುತ್ತವೆ.

ಇಂತು ಶ್ರೀ ಪದ್ಮಮಹಾಪುರಾಣದ ಉತ್ತರಖಂಡದ ಪಾರ್ವತೀ ಮಹಾದೇವರ ಸಂವಾದದಲ್ಲಿ ಅಪಾಮಾರ್ಜನ ಸ್ತೋತ್ರ ಕಥನ ಎಂಬ ಎಪ್ಪತ್ತೊಂಭತ್ತನೆಯ ಅಧ್ಯಾಯವು ಮುಗಿದುದು.



॥ ಶ್ರೀಃ ॥

-X-

## ಅಥ ಶ್ರೀ ಮಹಾಪುರಾಣೇ ಪಾದ್ಮೇ ಉತ್ತರಖಂಡೇ

### ॥ ಅಶೀತಿತಮೋಽಧ್ಯಾಯಃ ॥



॥ ಮಹಾದೇವ ಉವಾಚ ॥

ಅಪಾಮಾರ್ಜನಕಂ ದಿವ್ಯಂ ಪರಮಾದ್ಭುತಮೇವ ಚ ।
ಪಠಿತವ್ಯಂ ವಿಶೇಷೇಣ ಪುತ್ರಕಾಮಾರ್ಥಸಿದ್ಧಯೇ ॥ ೧ ॥

ಏತತ್ಸ್ತೋತ್ರಂ ಪಠೇತ್ಪ್ರಾಜ್ಞಃ ಸರ್ವಕಾಮಾರ್ಥಸಿದ್ಧಯೇ ।
ಏಕಕಾಲಂ ದ್ವಿಕಾಲಂ ವಾ ಯೇ ಪಠಂತಿ ದ್ವಿಜಾತಯಃ ॥ ೨ ॥

ಆಯುಶ್ಚ ಶ್ರೀರ್ಬಲಂ ತೇಷಾಂ ವೃದ್ಧಿಂ ಯಾಸ್ತಿ ದಿನೇ ದಿನೇ ।
ಬ್ರಾಹ್ಮಣೋ ಲಭತೇ ವಿದ್ಯಾಂ ಕ್ಷತ್ರಿಯೋ ರಾಜ್ಯಮೇವ ವಾ ॥ ೩ ॥

---

### ಎಂಭತ್ತನೆಯ ಅಧ್ಯಾಯವು



೧. ಮಹಾದೇವನು ಹೇಳಿದನು-ಈ ಅಪಾಮಾರ್ಜನಕವು ಉತ್ತಮವು ವಾದುದು. ಅದ್ಭುತವಾದುದು. ಇದನ್ನು ಓದಿದರೆ ಮಕ್ಕಳಾಗುತ್ತವೆ. ಸೌಭಾಗ್ಯ ವುಂಟಾಗುತ್ತದೆ.

೨-೪. ಧರ್ಮ ಕಾಮಾರ್ಥಗಳ ಸಿದ್ಧಿಗೋಸ್ಕರ ಮನುಷ್ಯನು ಈ ಸ್ತೋತ್ರ ವನ್ನು ಓದಬೇಕು. ಎರಡು ಹೊತ್ತು ಅಥವಾ ಒಂದು ಹೊತ್ತಾದರೂ ದಿನವೂ ಹೇಳುತ್ತಿದ್ದರೆ ಆಯುಸ್ಸು ಸಂಪತ್ತು ಬಲ ಇವೆಲ್ಲವೂ ಆವನಿಗೆ ಹೆಚ್ಚುತ್ತವೆ. ಇದನ್ನು ಪಠಿಸಿದರೆ ಬ್ರಾಹ್ಮಣನು ವಿದ್ಯೆಯನ್ನೂ ಕ್ಷತ್ರಿಯನು ರಾಜ್ಯವನ್ನೂ

ವೈಶ್ಯೋ ಧನಸಮೃದ್ಧಿಂ ಚ ಶೂದ್ರೋ ಭಕ್ತಿಂ ಚ ವಿಂದತಿ ।
ಅನ್ಯಶ್ಚ ಲಭತೇ ಭಕ್ತಿಂ ಪಠನಾಚ್ಛ್ರವಣಾಜ್ಜಪಾತ್ ॥ ೪ ॥

ಸಾಮವೇದಫಲಂ ತಸ್ಯ ಜಾಯತೇ ನಗನಂದಿನಿ ।
ಅಖಿಲಃ ಪಾಪಸಂಘಾತಸ್ತತ್ಕ್ಷಣಾದೇವ ನಶ್ಯತಿ ॥ ೫ ॥

ಇತಿ ಜ್ಞಾತ್ವಾ ತು ಭೋ ದೇವಿ ಪಠಿತವ್ಯಂ ಸಮಾಹಿತೈಃ ।
ಪುತ್ರಾಶ್ಚೈವ ತಥಾ ಲಕ್ಷ್ಮೀಃ ಸಂಪೂರ್ಣಾ ಭವತಿ ಧ್ರುವಂ ॥ ೬ ॥

ಲಿಖಿತ್ವಾ ಭೂರ್ಜಪತ್ರೇ ತು ಯೋ ಧಾರಯತಿ ವೈಷ್ಣವಃ ।
ಇಹ ಲೋಕೇ ಸುಖಂ ಭುಕ್ತ್ವಾ ಯಾತಿ ವಿಷ್ಣೋಃ ಪರಂ ಪದಂ ॥ ೭ ॥

ಪಠಿತ್ವಾ ಶ್ಲೋಕಮೇಕಂ ತು ತುಲಸೀ ಯಸ್ತ್ವಮರ್ಪಯೇತ್ ।
ಸರ್ವಂ ತೀರ್ಥಂ ಕೃತಂ ತೇನ ತುಲಸ್ಯಾ ಪೂಜನೇ ಕೃತೇ ॥ ೮ ॥

---

ವೈಶ್ಯನು ಧನವನ್ನೂ ಶೂದ್ರನು ಭಕ್ತಿಯನ್ನೂ ಹೊಂದುತ್ತಾರೆ. ಮಿಕ್ಕವರೂ ಕೂಡ ಈ ಸ್ತೋತ್ರವನ್ನು ಜಪಿಸಿದರೆ ಭಕ್ತಿಯನ್ನು ಹೊಂದುತ್ತಾರೆ.

೫. ಎಲೈ ಪಾರ್ವತಿಯೇ ! ಇದನ್ನು ಓದಿದರೆ ಸಾಮವನ್ನು ಪಾರಾಯಣ ಮಾಡಿದ ಫಲವು ಬರುತ್ತದೆ. ಎಲ್ಲಾ ಪಾಪಗಳೂ ಒಡನೆಯೇ ಹೋಗುತ್ತವೆ.

೬. ಇದನ್ನು ತಿಳಿದು ಎಲ್ಲರೂ ಮನಸ್ಸಿಟ್ಟು ಪಠಿಸಬೇಕು. ಪಠಿಸಿದರೆ ಮಕ್ಕಳು ಸಂಪತ್ತು ಸಂಪೂರ್ಣವಾಗಿ ಉಂಟಾಗುವುದರಲ್ಲಿ ಸಂದೇಹವಿಲ್ಲ.

೭. ವಿಷ್ಣುಭಕ್ತನಾದವನು ಭುಜಪತ್ರೆಯಲ್ಲಿ ಇದನ್ನು ಬರೆದು ಕಟ್ಟಿಕೊಳ್ಳಬೇಕು. ಅವನು ಇಹದಲ್ಲಿ ಸುಖವನ್ನು ಅನುಭವಿಸಿ ಕೊನೆಗೆ ವೈಕುಂಠವನ್ನು ಹೊಂದುತ್ತಾನೆ.

೮. ಇದರ ಒಂದೊಂದು ಶ್ಲೋಕವನ್ನು ಹೇಳಿ ಒಂದೊಂದು ತುಳಸೀದಳವನ್ನು ವಿಷ್ಣುವಿಗೆ ಪೂಜೆಮಾಡಿದರೆ ಅವನು ಎಲ್ಲಾ ತೀರ್ಥಗಳಲ್ಲಿಯೂ ಸ್ನಾನ ಮಾಡಿದಂತಾಗುವುದು.

ಏತತ್ ಸ್ತೋತ್ರಂ ತು ಪರಮಂ ವೈಷ್ಣವಂ ಮುಕ್ತಿದಾಯಕಂ ।
ಪೃಥಿವೀದಾನಮಾತ್ರೇಣ ವಿಷ್ಣುಲೋಕಂ ತು ಗಚ್ಛತಿ ॥ ೯ ॥

ಜಪೇತ್ ಸ್ತೋತ್ರಂ ವಿಶೇಷೇಣ ವಿಷ್ಣುಲೋಕಸ್ಯ ವಾಂಛಯಾ ।
ಬಾಲಾನಾಂ ಜೀವನಾರ್ಥಾಯ ಪಠಿತವ್ಯಂ ದ್ವಿಜಾತಿಭಿಃ ॥ ೧೦ ॥

ರೋಗಗ್ರಹಾಭಿಭೂತಾನಾಂ ಬಾಲಾನಾಂ ಶಾಂತಿಕಾರಕಂ ।
ಭೂತಗ್ರಹವಿಷಂ ಚೈವ ಪಠನಾದೇವ ನಶ್ಯತಿ ॥ ೧೧ ॥

ಕಂಠೇ ತುಲಸಿಜಾಂ ಮಾಲಾಂ ಧೃತ್ವಾ ವಿಪ್ರೋ ಹಿ ಯಃ ಪಠೇತ್ ।
ಸ ಚ ವೈ ವೈಷ್ಣವೋ ಜ್ಞೇಯೋ ವಿಷ್ಣುಲೋಕಂ ಚ ಗಚ್ಛತಿ ॥ ೧೨ ॥

ಕಂಠೇ ಮಾಲಾ ಧೃತಾ ಯೇನ ಶಂಖಚಕ್ರಾದಿಚಿಹ್ನಿತಾ ।
ವೈಷ್ಣವಃ ಪ್ರೋಚ್ಯತೇ ವಿಪ್ರಃ ಸ್ತೋತ್ರಂ ಚೈತತ್ಪಠನ್ಸದಾ ॥ ೧೩ ॥

---

೯. ಈ ಸ್ತೋತ್ರವು ಉತ್ತಮವಾದುದು. ಮುಕ್ತಿಯನ್ನು ಕೊಡುತ್ತದೆ. ಭೂದಾನಮಾಡಿದಷ್ಟು ಪುಣ್ಯಬರುತ್ತದೆ.

೧೦. ಇದನ್ನು ವೈಕುಂಠವನ್ನು ಹೊಂದುವವನು ಓದಬೇಕು. ದ್ವಿಜರು ಇದನ್ನು ಪಠಿಸಿದರೆ ಬಾಲರಿಗೆ ದೀರ್ಘಾಯುಸ್ಸುಂಟಾಗುತ್ತದೆ.

೧೧. ರೋಗಗಳೂ ಬಾಲಗ್ರಹಗಳೂ ಉಳ್ಳಮಕ್ಕಳಿಗೆ ಶಾಂತಿಕಾರಕವು. ಭೂತಗಳು ಗ್ರಹಗಳು ವಿಷವು ಇವೆಲ್ಲವೂ ಇದನ್ನು ಓದುವುದರಿಂದಲೇ ಹೋಗುತ್ತವೆ.

೧೨. ಕತ್ತಿನಲ್ಲಿ ತುಳಸಿಯ ಮಾಲೆಯನ್ನು ಹಾಕಿಕೊಂಡು ಇದನ್ನು ಪಠಿಸಿದರೆ ವೈಷ್ಣವನು ವಿಷ್ಣುಲೋಕವನ್ನು ಹೊಂದುತ್ತಾನೆ.

೧೩. ಶಂಖಚಕ್ರಗಳನ್ನು ಹಾಕಿರುವ ತುಳಸೀಮಾಲೆಯನ್ನು ಕತ್ತಿಗೆ ಹಾಕಿಕೊಂಡು ಈ ಸ್ತೋತ್ರವನ್ನು ಪಠಿಸಿದರೆ ಅವನೇ ವೈಷ್ಣವನು.

ಇಹಲೋಕಂ ಪರಿತ್ಯಜ್ಯ ವಿಷ್ಣುಲೋಕಂ ಸ ಗಚ್ಛತಿ ।
ಮೋಹಮಾಯಾಪರಿತ್ಯಕ್ತೋ ದಂಭತೃಷ್ಣಾವಿವರ್ಜಿತಃ || ೧೪ ||

ಏತತ್ ಸ್ತೋತ್ರಂ ಪಠನ್ದಿವ್ಯಂ ಪರಂ ನಿರ್ವಾಣಮಾಪ್ನುಯಾತ್ ।
ತೇ ಧನ್ಯಾಸ್ಸಂತಿ ಭೂಲೋಕೇ ಯೇ ವಿಪ್ರಾ ವೈಷ್ಣವಾ ಸ್ಮೃತಾಃ ||೧೫||

ಸ್ನಾತ್ವಾ ವೈ ತಾರಿತ್ವಸ್ತೈಸ್ತು ಸಕುಲೋ ನಾತ್ರ ಸಂಶಯಃ ।
ತೇ ವೈ ಧನ್ಯತಮಾ ಲೋಕೇ ನಾರಾಯಣಪರಾಯಣಾಃ ।
ತೈರ್ಭಕ್ತಿಶ್ಚ ಸದಾ ಕಾರ್ಯಾ ತೇ ವೈ ಭಾಗವತಾ ನರಾಃ || ೧೬ ||

ಇತಿ ಶ್ರೀ ಮಹಾಪುರಾಣೇ ಪಾದ್ಮೇ ಉತ್ತರಖಂಡೇ ಪಾರ್ವತೀ ಮಹಾದೇವ ಸಂವಾದೇ ಆಪಾಮಾರ್ಜನ ಮಹಿಮ ಕಥನಂ ನಾಮ ಅಶೀತಿತಮೋಽಧ್ಯಾಯಸ್ಸಮಾಪ್ತಃ

---

೧೪. ಅಂತಹವನು ಮೋಹಮಾಯೆಗಳನ್ನೂ ದಂಭತೃಷ್ಣೆಗಳನ್ನೂ ಬಿಟ್ಟು ಈ ಲೋಕವನ್ನು ತ್ಯಜಿಸಿದಮೇಲೆ ವಿಷ್ಣುಲೋಕವನ್ನು ಹೊಂದುತ್ತಾನೆ.

೧೫. ಈ ಉತ್ತಮವಾದ ಸ್ತೋತ್ರವನ್ನು ಪಠಿಸಿದರೆ ವೈಕುಂಠವು ಪ್ರಾಪ್ತವಾಗುತ್ತದೆ. ಅಂತಹ ವೈಷ್ಣವರೇ ಈ ಲೋಕದಲ್ಲಿ ಧನ್ಯರು.

೧೬. ಅವರು ತಮ್ಮ ಕುಲದೊಡನೆ ತಮ್ಮನ್ನೂ ಉದ್ಧಾರಮಾಡಿಕೊಳ್ಳುತ್ತಾರೆ. ನಾರಾಯಣನಲ್ಲಿ ಆಸಕ್ತರಾದ ಅವರೇ ಲೋಕದಲ್ಲಿ ಧನ್ಯರು. ಅವರಲ್ಲಿ ಉಳಿದವರು ಭಕ್ತಿಯಿಡಬೇಕು. ಅವರೇ ಭಾಗವತರು.

ಇಂತು ಶ್ರೀ ಪದ್ಮಮಹಾಪುರಾಣದ ಉತ್ತರಖಂಡದ ಪಾರ್ವತೀ ಮಹಾದೇವರ ಸಂವಾದದಲ್ಲಿ ಅಪಾಮಾರ್ಜನ ಮಹಿಮೆಯ ಕಥನ ಎಂಬ ಎಂಭತ್ತನೆಯ ಅಧ್ಯಾಯವು ಮುಗಿದುದು.



|| ಶ್ರೀಃ ||

# ಅಥ ಶ್ರೀ ಮಹಾಪುರಾಣೇ ಪಾದ್ಮೇ ಉತ್ತರಖಂಡೇ

## || ಏಕಾಶೀತಿತಮೋಽಧ್ಯಾಯಃ ||



|| ಶ್ರೀ ಪಾರ್ವತ್ಯುವಾಚ ||

ಅಹೋ ವಿಷ್ಣೋಶ್ಚ ಮಾಹಾತ್ಮ್ಯಂ ವದ ವಿಶ್ವೇಶ್ವರ ಪ್ರಭೋ ।
ಯನ್ಮಾಹಾತ್ಮ್ಯಂ ಪುನಶ್ಶ್ರುತ್ವಾ ನ ಭವೋ ಜಾಯತೇ ಕ್ವಚಿತ್ || ೧ ||

|| ಮಹಾದೇವ ಉವಾಚ ||

ಶೃಣು ಸುಂದರಿ ವಕ್ಷ್ಯಾಮಿ ವಿಷ್ಣೋರ್ಮಾಹಾತ್ಮ್ಯಮುತ್ತಮಂ ।
ಶ್ರುತ್ವಾ ತು ಲಭತೇ ಪುಣ್ಯಂ ಹ್ಯಂತೇ ಮೋಕ್ಷಮವಾಪ್ನುಯಾತ್ || ೨ ||

ದೇವವ್ರತಂ ಮಹಾಪ್ರಾಜ್ಞಂ ಧ್ಯಾನಯೋಗಪರಾಯಣಂ ।
ಆಶ್ರಮಂ ಸರ್ವಶಾಸ್ತ್ರಾಣಾಂ ಯತೇಂದ್ರಿಯಮಕಲ್ಮಷಂ || ೩ ||

---

## ಎಂಭತ್ತೊಂದನೆಯ ಅಧ್ಯಾಯವು



೧. ಪಾರ್ವತಿಯು ಹೇಳಿದಳು–ಎಲೈ ಈಶ್ವರನೇ ! ವಿಷ್ಣುವಿನ ಮಹಿಮೆಯನ್ನು ಹೇಳು. ಆ ಸ್ವಾಮಿಯ ಮಹಿಮೆಯನ್ನು ಕೇಳಿದರೆ ಮತ್ತೆ ಸಂಸಾರದಲ್ಲಿ ಹುಟ್ಟುವಂತಿಲ್ಲ.

೨. ಮಹಾದೇವನು ಹೇಳಿದನು–ಎಲೈ ಸುಂದರಿಯೇ ! ಹೇಳುತ್ತೇನೆ. ಕೇಳು. ಇದನ್ನು ಕೇಳಿದರೆ ಪುಣ್ಯವನ್ನು ಹೊಂದುತ್ತಾನೆ. ಕೊನೆಯಲ್ಲಿ ಮೋಕ್ಷವು ಸಿಕ್ಕುತ್ತದೆ.

೩-೬. ಎಲೈ ಪಾರ್ವತಿಯೇ ! ಬಹು ಬುದ್ಧಿವಂತನಾದ ಧ್ಯಾನಯೋಗದಲ್ಲಿ ಆಸಕ್ತವಾದ, ಎಲ್ಲಾ ಶಾಸ್ತ್ರಗಳಿಗೂ ಮನೆಯಾದ, ಇಂದ್ರಿಯಗಳನ್ನು ನಿಗ್ರಹಿಸಿರುವ

ಅಪ್ರಧೃಷ್ಯಂ ಮಹಾಭಾಗಂ ದೇವೈರಪಿ ಸವಾಸವೈಃ ।
ಸತ್ಯಸಂಧಂ ಜಿತಕ್ರೋಧಂ ಸಮತ್ವೇ ಪರಿನಿಷ್ಠಿತಂ ॥ ೪ ॥

ನಾರಾಯಣೇ ಜಗನ್ನಾಥೇ ಶರಣ್ಯೇ ಭಕ್ತವತ್ಸಲೇ ।
ಪರಾಂ ನಿಷ್ಠಾಮನುಪ್ರಾಪ್ತಂ ವಾಙ್ಮನಃಕಾಯಕರ್ಮಭಿಃ ॥ ೫ ॥

ಗುಣಾನಾಮಾಶ್ರಯಂ ಶಾಂತಂ ಭೀಷ್ಮಂ ಕುರುಪಿತಾಮಹಂ ।
ಪ್ರಣಮ್ಯ ಶಿರಸಾ ಭೂಮೌ ಪಪ್ರಚ್ಛೇದಂ ಯುಧಿಷ್ಠಿರಃ ॥ ೬ ॥

॥ ಯುಧಿಷ್ಠಿರ ಉವಾಚ ॥

ಕೇಚಿದಾಹುಃ ಪರಂ ಧರ್ಮಂ ಕೇಚಿದಾಹುಃ ಪರಂ ಧನಂ ।
ಕೇಚಿದ್ದಾನಂ ಪ್ರಶಂಸಂತಿ ಸಮುದಾಯಂ ತಥಾ ಪರೇ ॥ ೭ ॥

ಸಾಂಖ್ಯಂ ಕೇಚಿತ್ಪ್ರಶಂಸಂತಿ ಯೋಗಮನ್ಯೇ ತಥಾ ಪರೇ ।
ಸಮ್ಯಜ್ಞಾನಂ ಪರಂ ಕೇಚಿತ್ ಕೇಚಿದ್ವೈರಾಗ್ಯ ಮುತ್ತಮಂ ॥ ೮ ॥

---

ಪಾಪದ ಸಂಬಂಧವಿಲ್ಲದ, ಜಯಿಸಲಸಾಧ್ಯನಾದ, ಸತ್ಯವಂತನಾದ, ಕೋಪವನ್ನು ಜಯಿಸಿರುವ, ಪ್ರಾಣಿಗಳಲ್ಲಿ ಸಮತ್ವವನ್ನು ಹೊಂದಿರುವ, ಪ್ರಪಂಚವನ್ನು ಕಾಪಾಡುವ ನಾರಾಯಣನಲ್ಲಿ ಬಹುವಾಗಿ ಪ್ರೀತಿಯನ್ನಿಟ್ಟಿರುವ, ಎಲ್ಲಾ ಗುಣಗಳೆನ್ನೂ ಹೊಂದಿರುವ, ಕುರುಗಳಿಗೆ ತಾತನಾದ, ಭೀಷ್ಮನನ್ನು ಧರ್ಮರಾಜನು ತಲೆ ಬಗ್ಗಿಸಿ ನಮಸ್ಕರಿಸಿ ಹೀಗೆಂದು ಕೇಳಿದನು.

೭. ಯುಧಿಷ್ಠಿರನು ಹೇಳಿದನು–ಎಲೈ ಪಿತಾಮಹನೇ ! ಕೆಲವರು ಧರ್ಮವೇ ಉತ್ತಮವೆಂದೂ, ಕೆಲವರು ಧರ್ಮವೇ ಉತ್ತಮವೆಂದೂ, ಕೆಲವರು ದಾನವು ಉತ್ತಮವೆಂದೂ, ಕೆಲವರು ಎಲ್ಲವನ್ನೂ ಮಾಡಿದರೆ ಉತ್ತಮವೆಂದೂ ಹೇಳುತ್ತಾರೆ.

೮. ಕೆಲವರು ಸಾಂಖ್ಯವು ಉತ್ತಮವೆಂದೂ, ಕೆಲವರು ಯೋಗವು ಒಳ್ಳೆಯದೆಂದೂ, ಕೆಲವರು ಸಮಜ್ಞಾನವು ಒಳ್ಳೆಯದೆಂದೂ, ಕೆಲವರು ವೈರಾಗ್ಯವು ಉತ್ತಮವೆಂದೂ ಹೇಳುತ್ತಾರೆ.

ಅಗ್ನಿಷ್ಟೋಮಾದಿಕಂ ಕರ್ಮ ತಥಾ ಕೇಚಿತ್ಪರಂ ವಿದುಃ ।
ಆತ್ಮಜ್ಞಾನಂ ಪರಂ ಕೇಚಿತ್ ಸಮಲೋಷ್ಟಾಶ್ಮಕಾಂಚನಂ ॥ ೯ ॥

ಯಮಾಶ್ಚ ನಿಯಮಾಶ್ಚೈವ ಕೇಚಿತ್ಪ್ರೋಕ್ತಾ ಮುನೀಷಿಭಿಃ ।
ಕಾರುಣ್ಯಮಪರೇ ಕೇಚಿದಹಿಂಸಾಂ ಚ ತಪಸ್ವಿನಃ ॥ ೧೦ ॥

ಶೌಚಂ ಕೇಚಿತ್ಪರಂ ಪ್ರಾಹುಃ ಕೇಚಿದ್ದೇವಾರ್ಚನಂ ನರಾಃ ।
ವ್ಯಾಮೋಹಂ ಚಾತ್ರ ಇಚ್ಛಂತಿ ವ್ಯಾಮುಗ್ಧಾಃ ಪಾಪಕರ್ಮಭಿಃ ॥ ೧೧ ॥

ಯದೇತೇಷು ಪರಂ ಕೃತ್ಯಮನುಷ್ಠೇಯಂ ಮಹಾತ್ಮಭಿಃ ।
ವಕ್ತುಮರ್ಹಸಿ ಧರ್ಮಜ್ಞ ಸರ್ವಶಾಸ್ತ್ರಭೃತಾಂ ವರ ॥ ೧೨ ॥

॥ ಮಹಾದೇವ ಉವಾಚ ॥

ಭೂಲೋಕೇ ಯಾ ಕಥಾ ಜಾತಾ ಭೈಷ್ಮೀ ಯೌಧಿಷ್ಠಿರೀ ಸತೀ ।
ತಾಮಹಂ ಸಂಪ್ರವಕ್ಷ್ಯಾಮಿ ಲೋಕಾನಾಂ ಚ ಹಿತಾಯ ವೈ ।
ಏತಾನ್ಪ್ರಶ್ನಾಂಸ್ತದಾ ಶ್ರುತ್ವಾ ಪ್ರಾಹ ಭೀಷ್ಮೋ ಯುಧಿಷ್ಠಿರಂ ॥ ೧೩ ॥

---

೯-೧೨ ಕೆಲವರು ಅಗ್ನಿಷ್ಟೋಮ ಯಾಗಗಳು ಉತ್ತಮವೆಂದೂ, ಕೆಲವರು ಆತ್ಮಜ್ಞಾನವು ಉತ್ತಮವೆಂದೂ, ಕೆಲವರು ಹೆಣ್ಣು, ಹೊನ್ನು, ಮಣ್ಣುಗಳನ್ನು ಒಂದೇ ರೀತಿಯಾದ ಬುದ್ಧಿಯಿಂದ ನೋಡುವುದು ಉತ್ತಮವೆಂದೂ ಹೇಳುತ್ತಾರೆ, ಕೆಲವರು ಯಮವು ಉತ್ತಮವೆಂದೂ, ಕೆಲವರು ನಿಯಮವು ಉತ್ತಮವೆಂದೂ, ಕೆಲವರು ದಯೆಯು ಮುಖ್ಯವೆಂದೂ, ಕೆಲವರು ಅಹಿಂಸೆಯೇ ಮುಖ್ಯವೆಂದೂ ಹೇಳುತ್ತಾರೆ. ಕೆಲವರು ಶೌಚವೇ ಉತ್ತಮವೆಂದೂ, ಕೆಲವರು ದೇವತಾರ್ಚನೆಯೇ ಉತ್ತಮವೆಂದೂ ಹೇಳುತ್ತಾರೆ. ಪಾಪಿಗಳಾದ ಕೆಲವರು ಬುದ್ಧಿಗೆಟ್ಟು ಇದೆಲ್ಲಾ ಅಜ್ಞಾನದಿಂದ ಮಾಡುವ ಕೆಲಸವೆಂದೂ ಹೇಳುತ್ತಾರೆ. ಇವುಗಳಲ್ಲಿ ಯಾವುದು ಉತ್ತಮವು ? ಮಹಾತ್ಮರು ಯಾವುದನ್ನು ಮಾಡಬೇಕೆಂಬುದನ್ನು ಹೇಳು. ಎಲೈ ಭೀಷ್ಮನೇ ! ನೀನು ಎಲ್ಲಾ ಶಾಸ್ತ್ರಗಳನ್ನು ತಿಳಿದಿರುವೆ. ದಯವಿಟ್ಟು ಹೇಳು.

೧೩. ಮಹಾದೇವನು ಹೇಳಿದನು—ಎಲೈ ಪಾರ್ವತಿಯೇ ! ಭೂಲೋಕದಲ್ಲಿ ಈ ಭೀಷ್ಮ ಯುಧಿಷ್ಠಿರರಿಗೆ ನಡೆದ ಉತ್ತಮವಾದ ಆ ಕಥೆಯನ್ನು ಲೋಕಗಳ ಹಿತಕ್ಕೋಸ್ಕರ ಹೇಳುತ್ತೇನೆ. ಕೇಳು. ಎನ್ನಲು ಯುಧಿಷ್ಠಿರನ ಈ ಮಾತುಗಳನ್ನು ಭೀಷ್ಮನು ಕೇಳಿ ಇಂತೆಂದನು.

|| ಭೀಷ್ಮ ಉವಾಚ ||

ಶ್ರೂಯತಾಮಿದಮತ್ಯಂತಂ ಗೂಢಂ ಸಂಸಾರಮೋಚನಂ |
ಶ್ರೋತವ್ಯಂ ಯತ್ತ್ವಯಾ ಸಮ್ಯಕ್ ಜ್ಞಾತವ್ಯಂ ಧರ್ಮನಂದನ || ೧೪ ||

ಅತ್ರೈವೋದಾಹರಂತೀಮಂ ಪುಣ್ಯಂ ಚೈವ ಪುರಾತನಂ |
ಪುಂಡರೀಕಸ್ಯ ಸಂವಾದಂ ಮಹರ್ಷೇರ್ನಾರದಸ್ಯ ಚ || ೧೫ ||

ಬ್ರಾಹ್ಮಣಃ ಶ್ರುತಿಸಂಪನ್ನಃ ಪುಂಡರೀಕೋ ಮಹಾಮತಿಃ |
ಆಶ್ರಮೇ ಪ್ರಥಮೇ ತಿಷ್ಠನ್ ಗುರೂಣಾಂ ವಶಗಸ್ಸದಾ || ೧೬ ||

ಜಿತೇಂದ್ರಿಯೋ ಜಿತಕ್ರೋಧಃ ಸಂಧ್ಯೋಪಾಸನತತ್ಪರಃ |
ವೇದವೇದಾಂಗನಿಪುಣಃ ಶಾಸ್ತ್ರೇಷು ಚ ವಿಚಕ್ಷಣಃ || ೧೭ ||

ಸಮಿದ್ಭಿಸ್ಸಾಧು ಹವ್ಯೇನ ಸಾಯಂಪ್ರಾತರ್ಹುತಾನಲಃ |
ಧ್ಯಾತ್ವಾ ಜಗತ್ಪತಿಂ ವಿಷ್ಣುಂ ಸಮ್ಯಗಾರಾಧಯನ್ವಿಭುಃ || ೧೮ ||

---

೧೪. ಭೀಷ್ಮನು ಹೇಳಿದನು–ಎಲೈ ಧರ್ಮರಾಜನೇ! ಇದು ಗೂಢವಾದುದು. ಸಂಸಾರವನ್ನು ಪಾರಗಾಣಿಸುವಂತಹುದು. ನೀನು ಇದನ್ನು ಚೆನ್ನಾಗಿ ಕೇಳಿ ತಿಳಿದುಕೋ. ಹೇಳುತ್ತೇನೆ.

೧೫. ಈ ವಿಷಯದಲ್ಲಿ ಮಹರ್ಷಿಯಾದ ನಾರದನಿಗೂ ಪುಂಡರೀಕನಿಗೂ ನಡೆದ ಒಂದು ಪುಣ್ಯಪ್ರದವಾದ ಕಥೆಯನ್ನು ಹೇಳುತ್ತೇನೆ. ಕೇಳು.

೧೬–೧೭. ಆ ಪುಂಡರೀಕನು ವೇದವನ್ನು ಅಧ್ಯಯನ ಮಾಡಿದವನು. ಬುದ್ಧಿವಂತನು. ಬ್ರಹ್ಮಚಾರಿಯು. ಗುರುಗಳು ಹೇಳಿದಂತೆ ಕೇಳುತ್ತಿದ್ದನು. ಇಂದ್ರಿಯಗಳನ್ನು ಜಯಿಸಿದ್ದನು. ಕೋಪವನ್ನು ಬಿಟ್ಟಿದ್ದನು. ಸಂಧ್ಯಾವಂದನೆಯೇ ಮುಂತಾದುವುಗಳಲ್ಲಿ ಆಸಕ್ತನಾಗಿದ್ದನು. ವೇದವೇದಾಂಗಗಳಲ್ಲಿ ಪಂಡಿತನು. ಶಾಸ್ತ್ರಗಳಲ್ಲಿಯೂ ಬುದ್ಧಿಶಾಲಿಯು.

೧೮. ಸಮಿತ್ತುಗಳಿಂದಲೂ, ಹವಿಸ್ಸಿನಿಂದಲೂ, ಸಾಯಂಕಾಲ ಪ್ರಾತಃಕಾಲಗಳಲ್ಲಿ ಹೋಮ ಮಾಡುತ್ತಿದ್ದನು. ಜಗತ್ಪತಿಯಾದ ವಿಷ್ಣುವನ್ನು ಧ್ಯಾನ ಮಾಡಿ ಅವನನ್ನು ಆರಾಧಿಸುತ್ತಿದ್ದನು.

ತಪಸ್ಸ್ವಾಧ್ಯಾಯನಿರತಃ ಸಾಕ್ಷಾದ್ಬ್ರಹ್ಮಸುತೋ ಯಥಾ ।
ಉಪಕೇಂಧನಪುಷ್ಪಾದ್ಯೈರಶಕ್ಯತ್ಪೂಜಯದ್ಗುರುಂ ॥ ೧೯ ॥

ಮಾತಪಿತ್ರೋಶ್ಚ ಶುಶ್ರೂಷುಃ ಭಿಕ್ಷಾಹಾರೀ ವಿಮತ್ಸರಃ ।
ಬ್ರಹ್ಮವಿದ್ಯಾಮಧೀಯಾನಃ ಪ್ರಾಣಾಯಾಮಪರಾಯಣಃ ॥ ೨೦ ॥

ತಸ್ಯ ಸರ್ವಾತ್ಮಭೂತಸ್ಯ ಸಂಸಾರೇ ನಿಸ್ಸ್ಪೃಹಸ್ಯ ಚ ।
ಮಹಾತ್ಮನೋ ಬುದ್ಧಿರಾಸೀತ್ಸಂಸಾರಾರ್ಣವತಾರಿಣೀ ॥ ೨೧ ॥

ಮಾತರಂ ಪಿತರಂ ಚೈವ ಭ್ರಾತೄನಥ ಸುಹೃಜ್ಜನಾನ್ ।
ಮಿತ್ರಾಣಿ ಮಾತುಲಾಂಶ್ಚೈವ ಸಖಿಸಂಬಂಧಿಬಾಂಧವಾನ್ ॥ ೨೨ ॥

ಧನಧಾನ್ಯಸಮೃದ್ಧಂ ಚ ಗೃಹಂ ವಂಶಕ್ರಮಾಗತಂ ।
ಕ್ಷೇತ್ರಾಣಿ ಸಮಹಾರ್ಹಾಣಿ ಸರ್ವಸಸ್ಯೋದ್ಭವಾನಿ ಚ ॥ ೨೩ ॥

ಪರಿತ್ಯಜ್ಯ ಮಹಾಸತ್ವಸ್ತೃಷ್ಣಾಂ ಚೈವ ಮಹಾಸುಖೀ ।
ವಿಚಚಾರಮಹೀಂ ಪದ್ಭ್ಯಾಂ ಶಾಕಮೂಲಫಲಾಶನಃ ॥ ೨೪ ॥

---

೧೯. ತಪಸ್ಸು ಅಧ್ಯಯನಗಳಲ್ಲಿ ಬ್ರಹ್ಮನ ಮಗನಾದ ಕಶ್ಯಪನಂತೆಯೇ ನಿಷ್ಠನಾಗಿದ್ದನು. ನೀರು, ಸೌದೆ, ಹೂ ಮುಂತಾದುವುಗಳನ್ನು ತರುತ್ತಾ ಗುರುವನ್ನು ಬಹುವಾಗಿ ತೃಪ್ತಿಪಡಿಸಿದ್ದನು.

೨೦. ತಾಯಿತಂದೆಗಳಿಗೆ ಶುಶ್ರೂಷೆ ಮಾಡುತ್ತಿದ್ದನು. ಭಿಕ್ಷಾನ್ನವನ್ನು ತರುತ್ತಿದ್ದನು. ಮಾತ್ಸರ್ಯವನ್ನು ಬಿಟ್ಟಿದ್ದನು. ವೇದಾಂತವನ್ನು ಓದುತ್ತಿದ್ದನು. ಪ್ರಾಣಾಯಾಮವನ್ನು ಮಾಡುತ್ತಿದ್ದನು.

೨೧. ಎಲ್ಲವನ್ನೂ ತಿಳಿದಿರುವ ಸಂಸಾರದಲ್ಲಿ ಆಸೆಯನ್ನು ಬಿಟ್ಟಿರುವ ಈ ಮಹಾತ್ಮನಿಗೆ ಸಂಸಾರವೆಂಬ ಸಮುದ್ರವನ್ನು ದಾಟುವ ಒಂದು ಬುದ್ಧಿಯುಂಟಾಯಿತು.

೨೨-೨೪. ತಾಯಿ, ತಂದೆ, ಸಹೋದರರು, ಮಿತ್ರರು, ಸೋದರ ಮಾವಂದಿರು, ಸಂಬಂಧಿಗಳು, ಬಂಧುಗಳು, ಧನ, ಧಾನ್ಯ, ಮನೆ, ಒಳ್ಳೆಯ ಬೆಳೆ ಬರುವ ಭೂಮಿ, ಇವೆಲ್ಲವನ್ನು ಬಿಟ್ಟು ಆಸೆಯೆಂಬುದಕ್ಕೆ ಎಡೆಗೊಡದೆ ಗೆಡ್ಡೆ, ಗೆಣಸುಗಳನ್ನು ತಿನ್ನುತ್ತಾ ಕಾಲಿನಿಂದಲೇ ಭೂಮಿಯೆಲ್ಲವನ್ನೂ ಸುತ್ತಿದನು.

ಅನಿತ್ಯಂ ಯೌವನಂ ರೂಪಮಾಯುಷ್ಯಂ ದ್ರವ್ಯಸಂಚಯಃ ।
ಇತಿ ಸಂಚಿಂತ್ಯಮಾನಸ್ತು ತ್ರೈಲೋಕ್ಯೇವಕ್ರತಾಂ ತಥಾ ॥ ೨೫ ॥

ಪುರಾಣೋದಿತಮಾರ್ಗೇಣ ಸರ್ವತೀರ್ಥಾನಿ ಪಾಂಡವ ।
ಅಗಮತ್ಸ ಯಥಾಕಾಮಮಿತಿ ನಿಶ್ಚಿತಮಾನಸಃ ॥ ೨೬ ॥

ಗಂಗಾಂ ಚ ಯಮುನಾಂ ಚೈವ ಗೋಮತೀಮಥ ಗಲ್ಲಿಕಾಂ ।
ಶತದ್ರೂಂ ಚ ಪಯೋಷ್ಣೀಂ ಚ ಸರಯೂಂ ಚ ಸರಸ್ವತೀಂ ॥ ೨೭ ॥

ಪ್ರಯಾಗಂ ನರ್ಮದಾಂ ಚೈವ ಶೋಣಂ ಚೈವ ಮಹಾನದಂ ।
ಪ್ರಭಾಸಂ ವಿಂಧ್ಯತೀರ್ಥಾನಿ ಹಿಮವತ್ಪ್ರಭವಾನಿ ಚ ॥ ೨೮ ॥

ಆಶ್ರಮೇಷು ಚ ಯಾನಿಸ್ಯುರ್ನೈಮಿಷೇ ಪುಷ್ಕರಾದಿಷು ।
ಕುರುಕ್ಷೇತ್ರೇ ಚ ಯಾನಿ ಸ್ಯುಃ ತಥಾ ಗೋವರ್ಧನಾದಿಷು ॥ ೨೯ ॥

ಅನ್ಯಾನಿ ಸುಮಹಾತೇಜಾಸ್ತೀರ್ಥಾನಿ ಸುಸಮಾಹಿತಃ ।
ವಿಚಚಾರ ಮಹಾಯೋಗೀ ಯಥಾಕಾಲೇ ಯಥಾವಿಧಿ ॥ ೩೦ ॥

---

೨೫-೨೬. ಈ ಯೌವನದಲ್ಲಿ ಈ ರೂಪವೂ ಆಯುಸ್ಸೂ ಹಣಗಳೂ ಅನಿತ್ಯವಾದುವು ಎಂಬುದನ್ನೂ ಮೂರು ಲೋಕದಲ್ಲಿಯೂ ನಡೆಯುತ್ತಿರುವ ನೀತಿ ಬಾಹಿರತೆಯನ್ನೂ ಯೋಚಿಸಿ ಪುರಾಣದಲ್ಲಿ ಹೇಳಿರುವಂತೆ ಎಲ್ಲಾ ತೀರ್ಥಗಳಿಗೂ ಹೋಗುತ್ತಾ ಮನಸ್ಸನ್ನು ನಿಶ್ಚಯಮಾಡಿಕೊಂಡಿದ್ದನು.

೨೭-೨೮. ಗಂಗೆ, ಯಮುನೆ, ಗೋಮತಿ, ಗಂಡಕಿ, ಶತದ್ರು, ಪಯೋಷ್ಟಿ, ಸರಯೂ, ಸರಸ್ವತಿ, ಪ್ರಯಾಗ ನರ್ಮದೆ, ಶೋಣ ಮಹಾನದಿ, ಪ್ರಭಾಸ, ವಿಂಧ್ಯ ಪರ್ವತದ ತೀರ್ಥಗಳು ಮತ್ತು ಹಿಮವತ್ಪರ್ವತದ ತೀರ್ಥಗಳು ಇವೆಲ್ಲದರಲ್ಲಿಯೂ ಸ್ನಾನಮಾಡಿದನು.

೨೯-೩೦. ಇನ್ನೂ ಅನೇಕವಾದ ಆಶ್ರಮಗಳಲ್ಲಿರುವ ಪುಣ್ಯ ಜಲಗಳು, ನೈಮಿಷಾರಣ್ಯ, ಪುಷ್ಕರಕ್ಷೇತ್ರ, ಕುರುಕ್ಷೇತ್ರ, ಗೋವರ್ಧನಪರ್ವತ ಇನ್ನೂ ತೀರ್ಥವೆಂಬುದು ಎಲ್ಲೆಲ್ಲಿವೆಯೋ ಅಲ್ಲೆಲ್ಲವೂ ಅಲ್ಲಲ್ಲಿಗೆ ಹೇಳಿರುವ ಕಾಲದಲ್ಲಿ ಹೋಗಿ ವಿಧಿಪೂರ್ವಕವಾಗಿ ಸ್ನಾನಮಾಡಿದನು.

ಕದಾಚಿತ್ಪ್ರಾಪ್ತವಾಸ್ಥೀರಃ ಶಾಲಗ್ರಾಮಂ ತಪೋಧನಃ ।
ಪುಂಡರೀಕೋ ಮಹಾಭಾಗಃ ಪೂರ್ವಕರ್ಮವಶಾನುಗಃ ॥ ೩೧ ॥

ಆಸೇವ್ಯಮಾನಂ ಮುನಿಭಿಃ ತತ್ವವಿದ್ಭಿಸ್ತಪೋಧನೈಃ ।
ಮುನೀನಾಮಾಸ್ಪದಂ ರಮ್ಯಂ ಪುರಾಣೇಷ್ವಪಿವಿಶ್ರುತಂ ॥ ೩೨ ॥

ಭೂಷಿತಂ ಚೈವ ಚಕ್ರಾದ್ಯೈಃ ಚಕ್ರಾಂಕಿತಶಿಲಾತಲಂ ।
ರಮ್ಯಂ ವಿವಿಕ್ತಂ ವಿಸ್ತೀರ್ಣಂ ಮಹಾವಿಷ್ಣು ಪ್ರಸಾದಕಂ ॥ ೩೩ ॥

ಕೇಚಿಚ್ಚಕ್ರಾಂಕಿತಾಸ್ತತ್ರ ಪ್ರಾಣಿನಃ ಪುಣ್ಯದರ್ಶನಾಃ ।
ವಿಚರಂತಿ ಯಥಾಕಾಮಂ ಪುಣ್ಯತೀರ್ಥಪ್ರದರ್ಶನಾತ್ ॥ ೩೪ ॥

ತಸ್ಮಿನ್ಕ್ಷೇತ್ರೇ ಮಹಾಪುಣ್ಯೇ ಶಾಲಗ್ರಾಮೇ ಮಹಾಮತಿಃ ।
ಸ್ನಾತ್ವಾ ದೇವಹ್ರದೇ ತೀರ್ಥೇ ಸರಸ್ವತ್ಯಾಂ ಚ ಸುವ್ರತಃ ॥ ೩೫ ॥

ಜಾತಿಸ್ಮರ್ಯಾಂ ಚಕ್ರಕುಂಡೇ ಚಕ್ರನದ್ಯಾಶ್ರಿತೇಷು ಚ ।
ತಥಾನ್ಯಾನ್ಯಪಿ ತೀರ್ಥಾನಿ ತಸ್ಮಿನ್ನೇವ ಚಚಾರ ಸಃ ॥ ೩೬ ॥

---

೩೧-೩೩. ಒಂದು ಸಲ ಆ ಪುಡರೀಕನು ತನ್ನ ಪೂರ್ವ ಪುಣ್ಯದಿಂದ ತತ್ವ ಜ್ಞಾನವನ್ನು ಬಲ್ಲ ಋಷಿಗಳು ಸೇವಿಸುತ್ತಿರುವ ಸಾಲಗ್ರಾಮಕ್ಕೆ ಹೋದನು. ಅಲ್ಲಿ ಮನೋಹರವಾದ ಋಷಿಗಳ ಆಶ್ರಮವಿದೆ. ಪುರಾಣಗಳಲ್ಲಿ ಪ್ರಸಿದ್ಧವಾದುದು. ಚಕ್ರವೇ ಮುಂತಾದುವುಗಳಿಂದ ಅಲಂಕೃತವಾದ ಕಲ್ಲುಗಳು ಅಲ್ಲಿವೆ. ಅದು ಮನೋಹರವಾಗಿಯೂ, ಇನ್ನೊಬ್ಬರ ಸಂಪರ್ಕವಿಲ್ಲದೆಯೂ, ವಿಸ್ತಾರವಾಗಿಯೂ ಮಹಾವಿಷ್ಣುವಿನ ಅನುಗ್ರಹವನ್ನು ಕೊಡುವುದಾಗಿಯೂ ಇದೆ.

೩೪. ಅಲ್ಲಿರುವ ಕೆಲವರು ಚಕ್ರದಿಂದ ಗುರುತು ಮಾಡಿಸಿಕೊಂಡಿದ್ದಾರೆ. ಆ ತೀರ್ಥವನ್ನು ದರ್ಶನಮಾಡಿಕೊಂಡು ಸುಖವಾಗಿರುತ್ತಾರೆ.

೩೫-೩೬. ಪುಂಡರೀಕನು ಆ ಆಶ್ರಮದಲ್ಲಿದ್ದ ಸಾಲಗ್ರಾಮ, ದೇವಹ್ರದ, ಸರಸ್ವತಿ, ಜಾತಿಸ್ಮರಿ, ಚಕ್ರನದಿಗಳೆಂಬ ತೀರ್ಥಗಳಲ್ಲಿಯೂ ಇನ್ನೂ ಇತರ ತೀರ್ಥಗಳಲ್ಲಿಯೂ ಸ್ನಾನಮಾಡಿದನು.

ತತ್ರಕ್ಷೇತ್ರಪ್ರಭಾವೇನ ತೀರ್ಥಾನಾಂ ಚೈವ ತೇಜಸಾ ।
ಮನಃಪ್ರಸಾದಮಭಜತ್ ತಸ್ಮಿನ್ನೇವ ಮಹಾತ್ಮನಃ ॥ ೩೭ ॥

ಸೋಽಪಿ ತೀರ್ಥವಿಶುದ್ಧಾತ್ಮಾ ಪುಂಡರೀಕಸ್ತಪೋಧನಃ ।
ತತ್ರೈವ ವಸತಿಂ ಚಕ್ರೇ ಧ್ಯಾನಯೋಗಪರಾಯಣಃ ॥ ೩೮ ॥

ತತ್ರೈವ ಸಿದ್ಧಿಮಾಕಾಂಕ್ಷನ್ನಾರಾಧ್ಯ ಗರುಡಧ್ವಜಂ ।
ಶಾಸ್ತ್ರೋಕ್ತೇನ ವಿಧಾನೇನ ಭಕ್ತ್ಯಾ ಪರಮಯಾ ಪುನಃ ॥ ೩೯ ॥

ಉವಾಸ ಚಿರಮೇಕಾಕೀ ನಿರ್ದ್ವಂದ್ವಸ್ಸ ಜಿತೇಂದ್ರಿಯಃ ।
ಶಾಕಮೂಲಫಲಾಹಾರಃ ಸಂತುಷ್ಟಸ್ಸಮದರ್ಶನಃ ॥ ೪೦ ॥

ಯಮೈಶ್ಚ ನಿಯಮೈಶ್ಚೈವ ತಥೈವಾಸನಬಂಧನೈಃ ।
ಪ್ರಾಣಾಯಾಮೈಶ್ಚ ತೀರ್ಥೈಶ್ಚ ಪ್ರತ್ಯಾಹಾರೈಶ್ಚ ಸಂತತೈಃ ॥ ೪೧ ॥

ಧಾರಣಾಭಿಸ್ತಥಾ ಧ್ಯಾನೈಸ್ಸಮಾಧಿಭಿರತಂದ್ರಿತಃ ।
ಯೋಗಾಭ್ಯಾಸಂ ಸದಾ ಸಮ್ಯಕ್ ಚಕ್ರೇ ವಿಗತಕಿಲ್ಬಿಷಃ ॥ ೪೨ ॥

---

೩೭. ಅಲ್ಲಿ ಆ ಕ್ಷೇತ್ರದ ಪ್ರಭಾವದಿಂದಲೂ ತೀರ್ಥಗಳ ತೇಜಸ್ಸಿನಿಂದಲೂ ಮನಸ್ಸಿಗೆ ಹರ್ಷವನ್ನು ಹೊಂದಿದನು.

೩೮. ಆ ಪುಂಡರೀಕನು ಆ ತೀರ್ಥಗಳಿಂದ ಪರಿಶುದ್ಧನಾಗಿ ಆ ತೀರ್ಥದಲ್ಲಿಯೇ ಯೋಗದಲ್ಲಿ ನಿರತನಾಗಿ ನಿಂತನು.

೩೯–೪೨. ಅಲ್ಲಿಯೇ ಗುರುಡಧ್ವಜನನ್ನು ಧ್ಯಾನಮಾಡಿ ಸಿದ್ಧಿಯನ್ನು ಹೊಂದಬೇಕೆಂದು ನಿಂತನು. ಶಾಸ್ತ್ರದ ರೀತಿಯಂತೆಯೂ ಭಕ್ತಿಯಿಂದಲೂ, ಧ್ಯಾನಿಸುತ್ತ ಒಬ್ಬಂಟಿಗನಾಗಿ ಜಿತೇಂದ್ರಿಯನಾಗಿ ಕಷ್ಟ ಸುಖಗಳಿಗೆ ಮನಸ್ಸು ಕೊಡದೆ ಇದ್ದನು. ಆತನು ಗೆಡ್ಡೆಗೆಣಸುಗಳನ್ನು ತಿನ್ನುತ್ತಾ ತೃಪ್ತಿಪಟ್ಟುಕೊಂಡು ಎಲ್ಲಾ ಪ್ರಾಣಿಗಳಲ್ಲಿಯೂ ಸಮದೃಷ್ಟಿಯುಳ್ಳವನಾಗಿ ಯಮ, ನಿಯಮ, ಪ್ರಾಣಾಯಾಮ, ಪ್ರತ್ಯಾಹಾರಗಳಿಂದಲೂ, ಆಸನ ಬಂಧನಗಳಿಂದಲೂ ಧಾರಣ ಸಮಾಧಿಗಳಿಂದಲೂ ಕೂಡಿ ಯೋಗಾಭ್ಯಾಸವನ್ನು ಮಾಡುತ್ತ ಪಾಪಗಳನ್ನು ಕಳೆದುಕೊಂಡನು.

ವೈದಿಕೈಸ್ತಾಂತ್ರಿಕೈಶ್ಚೈವ ತಥಾ ಪೌರಾಣಿಕೈರಪಿ ।
ಆರಾಧಯತಿ ಸರ್ವೇಶಂ ತತಶ್ಸಿದ್ಧಿಮವಾಪ ಸಃ ॥ ೪೩ ॥

ರಾಗದ್ವೇಷವಿನಿರ್ಮುಕ್ತಃ ಸ್ವಧರ್ಮ ಇವ ರೂಪವಾನ್ ।
ಆರಾಧಯಾಮಾಸ ದೇವಂ ತದ್ಗತೇನಾಂತರಾತ್ಮನಾ ॥ ೪೪ ॥

ತುತೋಷ ಭಗವಾನ್ವಿಷ್ಣುಃ ಪುಂಡರೀಕಾಯತೇಕ್ಷಣಃ ।
ಜಗಾದ ಭಗವಾನ್ಪ್ರಾರ್ಜ ಪ್ರಸನ್ನಸ್ತಸ್ಯ ಧೀಮತಃ ॥ ೪೫ ॥

ತತಃ ಕದಾಚಿತ್ತಂ ದೇಶಂ ನಾರದಃ ಪರಮಾರ್ಥವಿತ್ ।
ಜಗಾಮ ಸ ಮಹಾತೇಜಾಃ ಸಾಕ್ಷಾದಾದಿತ್ಯಸನ್ನಿಭಃ ॥ ೪೬ ॥

ತಂ ದ್ರಷ್ಟುಕಾಮೋ ಭಗವಾನ್ಪುಂಡರೀಕಂ ತಪೋನಿಧಿಂ ।
ವಿಷ್ಣುಭಕ್ತಿಪರೀತಾತ್ಮಾ ವೈಷ್ಣವಾನಾಂ ಹಿತೇ ರತಃ ॥ ೪೭ ॥

---

೪೩. ವೈದಿಕ ಮಂತ್ರಗಳ ರೀತಿಯಲ್ಲಿಯೂ, ತಂತ್ರ ಸಿದ್ಧಾಂತ ರೀತಿಯಲ್ಲಿಯೂ, ಇನ್ನೂ ಬಗೆಬಗೆಯಾದ ರೀತಿಯಲ್ಲಿಯೂ ಸ್ವಾಮಿಯನ್ನು ಆರಾಧಿಸಿ ಸಿದ್ಧಿಯನ್ನು ಹೊಂದಿದನು.

೪೪. ರಾಗದ್ವೇಷಗಳನ್ನು ಬಿಟ್ಟು ಧರ್ಮವೇ ಪ್ರತ್ಯಕ್ಷವಾಗಿ ಅವತರಿಸಿದಂತೆ ಇರುತ್ತಾ ಆ ಕೇಶವನನ್ನು ಪೂಜಿಸಿದನು.

೪೫. ಆಗ ಆ ಪುಂಡರೀಕಾಕ್ಷನಾದ ವಿಷ್ಣುವು ಸಂತೋಷಪಟ್ಟು ಪ್ರಸನ್ನನಾದನು. ಮತ್ತು ಅವನನ್ನುಕುರಿತು ಅವನಿಗೆ ಬೇಕಾದುದನ್ನು ಕೇಳಿಕೋ ಎಂದು ಹೇಳಿ ಅದನ್ನೆಲ್ಲಾ ಕೊಟ್ಟನು.

೪೬. ಹೀಗಿರಲು ಒಂದುಸಾರಿ ಆದಿತ್ಯನಂತೆ ಬಹು ಪ್ರಕಾಶಮಾನನಾದ ತತ್ವಗಳನ್ನೆಲ್ಲಾ ಬಲ್ಲ ನಾರದನು ಅಲ್ಲಿಗೆ ಹೋದನು.

೪೭. ವಿಷ್ಣುಭಕ್ತಿಯಿಂದ ಕೂಡಿದ ಮತ್ತು ವಿಷ್ಣುಭಕ್ತರಿಗೆ ಒಳ್ಳೆಯದನ್ನು ಮಾಡಬೇಕೆಂಬ ಮನಸ್ಸುಳ್ಳ ಪೂಜ್ಯನಾದ ನಾರದನು ಆ ಪುಂಡರೀಕನನ್ನು ನೋಡಲು ಅಲ್ಲಿಗೆ ಹೋದನು.

ಸ ದೃಷ್ಟ್ವಾ ನಾರದಂ ಪ್ರಾಪ್ತಂ ತೇಜೋಮಂಡಲಮಂಡಿತಂ ।
ಮಹಾಮತಿಂ ಮಹೋದಾರಂ ಸರ್ವವೇದೈಕಭಾಜನಂ || ೪೮ ||

ಪ್ರಾಂಜಲಿಃ ಪ್ರಣತೋ ಭೂತ್ವಾ ಪ್ರಹೃಷ್ಟೇನಾಂತರಾತ್ಮನಾ ।
ಅರ್ಘ್ಯಂ ದತ್ವಾ ವಿಧಾನೇನ ಪ್ರಣಾಮಮಕರೋತ್ಸ್ವನಃ || ೪೯ ||

ಕೋಯಮತ್ಯದ್ಭುತಾಕಾರಃ ತೇಜಸ್ವೀ ಹೃದ್ಯವೇಷಧೃಕ್ ।
ಆತೋದ್ಯಹಸ್ತಸ್ಸುಮುಖೋ ಜಯಮಂಡಲಮಂಡಿತಃ || ೫೦ ||

ವಿವಸ್ವಾನಥವಾ ವಹ್ನಿರಿಂದ್ರೋ ವರುಣ ಏವ ಚ ।
ಇತಿ ಸಂಚಿಂತಯನ್ ಸ್ಥಿತ್ವಾ ಜಗಾಮ ಪರಮದ್ಯುತಿಂ || ೫೧ ||

|| ಪುಂಡರೀಕ ಉವಾಚ ||

ಕೋ ಭವಾನಿಹ ಸಂಪ್ರಾಪ್ತಃ ಕುತೋ ವಾ ಪರಮದ್ಯುತೇ ।
ತ್ವದ್ದರ್ಶನಂ ಹಿ ಭಗವನ್ ಪ್ರಾಣಿನಾಂ ಭುವಿ ದುರ್ಲಭಂ || ೫೨ ||

---

೪೮–೪೯. ತೇಜಸ್ವಿಯಾದ, ಮಹಾಬುದ್ಧಿಯುಳ್ಳ, ಉದಾರನಾದ, ವೇದಗಳಿಗೆ ಸ್ಥಾನವಾದ ಆ ನಾರದನನ್ನು ನೋಡಿ ಕೈಮುಗಿದು ನಮ್ರನಾಗಿ ಸಂತೋಷದಿಂದ ಅರ್ಘ್ಯಪಾದ್ಯಗಳನ್ನು ಕೊಟ್ಟು ನಮಸ್ಕರಿಸಿದನು.

೫೦–೫೧. ಆ ನಾರದನನ್ನು ನೋಡಿ ಪುಂಡರೀಕನು ಈ ಅದ್ಭುತವಾದ ಕಾಂತಿಯುಳ್ಳ, ಮನೋಹರವಾದ ವೇಷವುಳ್ಳ, ವೀಣೆಯನ್ನು ಹಿಡಿದಿರುವ, ಪ್ರಸನ್ನನಾದ ಜಯಮಂಡಲದಿಂದ ಕೂಡಿರುವ ಈತನು ಸೂರ್ಯನೋ, ವಹ್ನಿಯೋ, ಇಂದ್ರನೋ, ವರುಣನೋ ಇವರಲ್ಲಿ ಯಾರಾದರೂ ಒಬ್ಬರಾಗಿರಬೇಕೆಂದು ತಿಳಿದು ಆ ಕಾಂತಿಮಯವಾದ ತೇಜೋರೂಪಿಯಾದ ನಾರದನನ್ನು ಪ್ರಶ್ನಿಸಿದನು.

೫೨. ಪುಂಡರೀಕನು ಹೇಳಿದನು–ಎಲೈ ತೇಜಶ್ಶಾಲಿಯೇ! ನೀನಾರು? ಎಲ್ಲಿಂದ ಬಂದಿದ್ದೀಯೆ? ನಿನ್ನ ದರ್ಶನವು ಭೂಮಿಯಲ್ಲಿರುವ ಜನರಿಗೆ ದುರ್ಲಭವಾಗಿ ಕಾಣುವುದಲ್ಲ!

ನೈವ ದೃಷ್ಟಃ ಪುಮಾನ್ಕ್ವಾಪಿ ಮಯಾ ತವ ಸಮಃ ಪ್ರಭೋ ।
ವಕ್ತುಮರ್ಹಸ್ಯಶೇಷೇಣ ಯತ್ಪ್ರವಿಷ್ಟಂ ಮಯಾನಘ ॥ ೫೩ ॥

॥ ನಾರದ ಉವಾಚ ॥

ನಾರದೋಽಹಮನುಪ್ರಾಪ್ತಃ ತ್ವದ್ದರ್ಶನಕುತೂಹಲಾತ್ ।
ಪ್ರಭಾವೋ ಭಗವದ್ಭಕ್ತಸ್ತ್ವಾದೃಶಃ ಸತತಂ ದ್ವಿಜ ॥ ೫೪ ॥

ಸ್ಮೃತಸ್ಸಂಭಾಷಿತೋ ವಾಪಿ ಪೂಜಿತೋ ವಾ ದ್ವಿಜೋತ್ತಮಃ ।
ಪುನಾತಿ ಭಗವದ್ಭಕ್ತಶ್ಚಾಂಡಾಲೋಽಪಿ ಯದೃಚ್ಛಯಾ ॥ ೫೫ ॥

ದಾಸೋಽಹಂ ವಾಸುದೇವಸ್ಯ ದೇವದೇವಸ್ಯ ಶಾರ್ಙ್ಗಿಣಃ ।
ಶಂಖಚಕ್ರಗದಾಪಾಣಿಸ್ತ್ರೈಲೋಕ್ಯಸ್ಯೈವ ಚಕ್ಷುಷಃ ॥ ೫೬ ॥

॥ ಭೀಷ್ಮ ಉವಾಚ ॥

ಇತ್ಯುಕ್ತೋ ನಾರದೇನಾಸೌ ಭಕ್ತಿಪರ್ಯಾಕುಲಾತ್ಮನಾ ।
ಪ್ರೋವಾಚ ಮಧುರಂ ವಿಪ್ರಃ ತದ್ದರ್ಶನಸುವಿಸ್ಮಿತಃ ॥ ೫೭ ॥

---

೫೩. ಎಲೈ ಭಗವಂತನೇ! ನಿನಗೆ ಸಮಾನನಾದವನನ್ನು ನಾನು ನೋಡಿಯೇ ಇಲ್ಲ. ಆದ್ದರಿಂದ ನಾನು ಕೇಳಿದುದಕ್ಕೆಲ್ಲಾ ದಯವಿಟ್ಟು ಉತ್ತರವನ್ನು ಕೊಡು.

೫೪-೫೫. ನಾರದನು ಹೇಳಿದನು–ಎಲೈ ಪುಣ್ಯಶಾಲಿಯೇ! ನಾನು ನಾರದನು. ನಿನ್ನನ್ನು ನೋಡಬೇಕೆಂದು ಬಂದಿದ್ದೆನೆ. ನಾನು ಇಲ್ಲಿಗೆ ಬರಲು ಭಗವದ್ಭಕ್ತನಾದ ನಿನ್ನ ಪ್ರಭಾವವೇ ಕಾರಣವು. ಭಗವದ್ಭಕ್ತರನ್ನು ಸ್ಮರಿಸಿದರಾಗಲೀ, ಅವರೊಡನೆ ಮಾತನಾಡಿದರಾಗಲೀ, ಅವರನ್ನು ಪೂಜಿಸಿದರಾಗಲೀ ಅವನು ಚಾಂಡಾಲನಾಗಿದ್ದರೂ ಪವಿತ್ರನನ್ನಾಗಿ ಮಾಡುತ್ತಾರೆ.

೫೬. ಶಾರ್ಙ್ಗಧನುಸ್ಸನ್ನು ಹಿಡಿದಿರುವ ದೇವದೇವನಾದ ಶಂಖಚಕ್ರಗಳನ್ನು ಹಿಡಿದಿರುವ ಲೋಕಕ್ಕೆಲ್ಲಾ ಕಣ್ಣಾಗಿರುವ ಆ ವಾಸುದೇವನ ದಾಸನು.

೫೭. ಭೀಷ್ಮನು ಹೇಳಿದನು–ಭಕ್ತಿಯಿಂದ ಕೂಡಿಕೊಂಡು ನಾರದನು ಇಂತೆಂದು ಹೇಳಲು ಆ ಪುಂಡರೀಕನು ನಾರದನ ದರ್ಶನದಿಂದ ಆಶ್ಚರ್ಯಗೊಂಡು ಇಂತೆಂದನು.

॥ ಪುಂಡರೀಕ ಉವಾಚ ॥

ಧನ್ಯೋಽಹಂ ದೇಹಿನಾಂ ಮಧ್ಯೇ ಸುಪೂಜ್ಯೋಽಹಂ ಸುರೈರಪಿ ।
ಕೃತಾರ್ಥೌ ಪಿತರೌ ಮೇಽದ್ಯ ಸಂಪ್ರಾಪ್ತಂ ಜನ್ಮನಃ ಫಲಂ ॥ ೫೮ ॥

ಅನುಗೃಹ್ಣೀಷ್ವ ದೇವರ್ಷೇ ತ್ವದ್ಭಕ್ತಸ್ಯ ವಿಶೇಷತಃ ।
ತತ್ಕರಿಷ್ಯಾಮ್ಯಹಂ ವಿದ್ವನ್ ಭ್ರಾಮ್ಯಮಾಣಃ ಸ್ವಕರ್ಮಭಿಃ ॥ ೫೯ ॥

ಕರ್ತವ್ಯಂ ಪರಮಂ ಗುಹ್ಯಮುಪದೇಷ್ಟುಂ ತ್ವಮರ್ಹಸಿ ।
ತ್ವಂ ಗತಿಸ್ಸರ್ವಭೂತಾನಾಂ ವೈಷ್ಣವಾನಾಂ ವಿಶೇಷತಃ ॥ ೬೦ ॥

॥ ನಾರದ ಉವಾಚ ॥

ಅನೇಕಾನೀಹ ಶಾಸ್ತ್ರಾಣಿ ಕರ್ಮಾಣಿ ಚ ತಥಾ ದ್ವಿಜ ।
ಧರ್ಮವರ್ಗಂ ಬಹುವಿಧಂ ತಥೈವ ಭುವಿ ಮಾನದ ॥ ೬೧ ॥

---

೫೮. ಪುಂಡರೀಕನು ಹೇಳಿದನು-ಎಲೈ ನಾರದನೇ ! ನಾನು ದೇಹಿಗಳೊಳಗೆ ಈಗ ಧನ್ಯನು. ದೇವತೆಗಳಿಂದಲೂ ಕೂಡ ಪೂಜ್ಯನು. ನನ್ನ ಪಿತೃಗಳು ಈಗ ಕೃತಾರ್ಥರಾದರು. ನಾನು ಜನ್ಮವನ್ನು ಹೊಂದಿದುದಕ್ಕೆ ಫಲವು ಸಿಕ್ಕಿತು.

೫೯. ಎಲೈ ದೇವರ್ಷಿಯೇ ! ನಿನ್ನ ಭಕ್ತನಾದ ನನ್ನನ್ನು ಅನುಗ್ರಹಿಸು. ಈ ಕರ್ಮಗಳಿಗೆ ಸಿಕ್ಕಿಕೊಂಡು ಸುತ್ತುತ್ತಿರುವ ನಾನು ನೀನು ಹೇಳಿದುವನ್ನು ಮಾಡುತ್ತೇನೆ.

೬೦. ನಾನು ಮಾಡುವ ಗುಹ್ಯವಾದುವುಗಳನ್ನು ಉಪದೇಶಮಾಡು. ನೀನು ಎಲ್ಲಾ ಪ್ರಾಣಿಗಳಿಗೂ ಗತಿಯನ್ನು ಕೊಡತಕ್ಕವನು. ವೈಷ್ಣವರಿಗಂತೂ ನೀನೇ ಪ್ರಧಾನನು.

೬೧. ನಾರದನು ಹೇಳಿದನು-ಎಲೈ ಪುಂಡರೀಕನೇ ! ಶಾಸ್ತ್ರಗಳೂ ಕರ್ಮಗಳೂ ಅನೇಕವಾಗಿವೆ. ಧರ್ಮಗಳಂತೂ ಲೋಕದಲ್ಲಿ ಬಹು ವಿಧವಾಗಿವೆ.

ವೈಲಕ್ಷಣ್ಯಂ ಚ ಜಗತಃ ತಸ್ಮಾದೇವಂ ದ್ವಿಜೋತ್ತಮ ।
ಅನ್ಯಥಾ ಸರ್ವಸತ್ವಾನಾಂ ಸುಖಂ ವಾ ದುಃಖಮೇವ ಚ ॥ ೬೨ ॥

ವಿಜ್ಞಾನಮಾತ್ರೇ ಕ್ಷಣಿಕಂ ನಿರಾತ್ಮಕಮಿದಂ ಜಗತ್ ।
ಇತಿ ಕೈಶ್ಚಿತ್ಪರಿಜ್ಞಾತಂ ಬಾಹ್ಯಾರ್ಥನಿರಪೇಕ್ಷಕಂ ॥ ೬೩ ॥

ಅವ್ಯಕ್ತಂ ಜಾಯತೇ ನಿತ್ಯಂ ನಿತ್ಯಾನಿತ್ಯಮಿದಂ ಜಗತ್ ।
ಇತ್ಯೇವಂ ಪ್ರಾಹುರಪರೇ ತತ್ರೈವ ಲಯಮೇತಿ ಚ ॥ ೬೪ ॥

ಆತ್ಮಾನೋ ಬಹವಃ ಪ್ರೋಕ್ತಾಃ ನಿತ್ಯಾಸ್ಸರ್ವಗತಾಸ್ತಥಾ ।
ಅನ್ಯೇ ಮತಿಮತಾಂ ಶ್ರೇಷ್ಠಾಃ ತತ್ವಾಲೋಕನತತ್ಪರಾಃ ॥ ೬೫ ॥

ಯಾವಚ್ಛರೀರಮಾತ್ಮಾನಂ ಪ್ರತಿಪನ್ನಾಸ್ತಥಾಽಪರೇ ।
ಹಸ್ತಿಕೀಟಾದಿದೇಹೇಷಿ ಮಹಾನ್ತಮಣುಮೇವ ಚ ॥ ೬೬ ॥

---

೬೨. ಆದ್ದರಿಂದಲೇ ಈ ಪ್ರಪಂಚವು ಒಬ್ಬರಂತೆ ಮತ್ತೊಬ್ಬರು ನಡೆಯದೆ ಇರುವುದರಿಂದ ವಿಲಕ್ಷಣವಾಗಿರುವುದು. ವೈಲಕ್ಷಣ್ಯವಾದ ಧರ್ಮಗಳಿಲ್ಲದಿದ್ದರೆ ಎಲ್ಲಾ ಪ್ರಾಣಿಗಳೂ ಸುಖವನ್ನೇ ಆಗಲಿ ಅಥವಾ ದುಃಖವನ್ನೇ ಆಗಲಿ ಅನುಭವಿಸ ಬೇಕಾಗುತ್ತಿದ್ದಿತು.

೬೩. ವಿಜ್ಞಾನವಾದಿಗಳ ಮತದಂತೆ ಈ ಪ್ರಪಂಚವು ಕ್ಷಣಿಕವಾದುದು. ಆತ್ಮವೇ ಇಲ್ಲದಿರತಕ್ಕುದು. ಇದು ಬಾಹ್ಯವಾದ ವಿಷಯವನ್ನು ತೆಗೆದುಕೊಳ್ಳದೆ ಹೇಳಿರುವ ಕೆಲವರ ಹೇಳಿಕೆಯು.

೬೪. ಪ್ರಪಂಚವು ನಿತ್ಯ ಮತ್ತು ಅನಿತ್ಯ ಪದಾರ್ಥಗಳಿಂದ ಕೂಡಿರುವುದು. ಮೊದಲು ಅವ್ಯಕ್ತವಾಗಿ ಅಂದರೆ ಕಣ್ಣಿಗೆ ಕಾಣದ ಸೂಕ್ಷ್ಮರೀತಿಯಲ್ಲಿರುತ್ತದೆ. ಮತ್ತು ಹುಟ್ಟಿದ ಪದಾರ್ಥಗಳು ನಾಶವಾಗಿ ತಾವು ಹುಟ್ಟಿದ ಮೂಲ ಪದಾರ್ಥ ಗಳಲ್ಲಿಯೇ ಸೇರಿಕೊಳ್ಳುತ್ತವೆ. ಎಂದು ಕೆಲವರು ಹೇಳುತ್ತಾರೆ.

೬೫. ಆತ್ಮಗಳು ಅನೇಕವಾಗಿವೆ. ಮತ್ತು ಅವು ನಿತ್ಯವಾದುವು. ಎಲ್ಲದರಲ್ಲಿಯೂ ಇರುತ್ತವೆ. ಆತ್ಮಗಳಲ್ಲಿ ಕೆಲವು ಬುದ್ಧಿಯುಳ್ಳವರಲ್ಲಿ ಶ್ರೇಷ್ಠ ವಾದುವು. ಒಳ್ಳೆಯದನ್ನು ತಿಳಿಯುತ್ತಾ ತತ್ವಗಳನ್ನು ಚೆನ್ನಾಗಿ ತಿಳಿಯುತ್ತವೆ.

೬೬. ಶರೀರವಿರುವವರೆವಿಗೂ ಆತ್ಮನಿರುವನು. ಆನೆ ಹುಳು ಇವುಗಳ ದೇಹದಲ್ಲಿ ಅವವಕ್ಕೆ ಅನುಗುಣವಾದ ಆತ್ಮಗಳು ಇರುತ್ತವೆ.

ಯಥಾದ್ಯ ಜಗತೋ ವೃತ್ತಿಸ್ತಥಾ ಕಾಲಾಂತರೇಷ್ವಪಿ ।
ಪ್ರವಾಹೋ ನಿತ್ಯಮೇವೈಷ ಕಃ ಕರ್ತೇತಿ ಚ ಕೇಚನ　॥ ೬೭ ॥

ಯದ್ಯತ್ಪ್ರತ್ಯಕ್ಷವಿಷಯಂ ತಸ್ಮಾದತ್ರ ನ ವಿದ್ಯತೇ ।
ಕುತಸ್ಸ್ವರ್ಗಾದಯಸ್ಸನ್ತೀತ್ಯನ್ಯೇ ವಿಜಿತಮಾನಸಾಃ　॥ ೬೮ ॥

ನಿರೀಶ್ವರಮಿದಂ ಪ್ರಾಹುಃ ಸೇಶ್ವರಂ ಚ ತಥಾಪರೇ ।
ಅತ್ಯಂತಭಿನ್ನಮತಯಃ ಪರಮಾರ್ಥಪರಾಙ್ಮುಖಾಃ　॥ ೬೯ ॥

ಏವಮನ್ಯೇಽಪಿ ಕುಹಕಾ ಯಥಾಮತಿ ಯಥಾಶ್ರುತಂ ।
ವದಂತಿ ವಿವಿಧೈರ್ಭೇದೈಃ ಸ್ವಯುಕ್ತಿಸ್ಥಿತಿಕಾರಕಃ　॥ ೭೦ ॥

ತರ್ಕೇಷ್ವವಹಿತೋ ಭೂತ್ವಾ ಕಥಯಾಮಿ ತಪೋಧನ ।
ಪರಮಾರ್ಥಮಿಮಂ ಪುಣ್ಯಂ ಘೋರಸಂಸಾರನಾಶನಂ　॥ ೭೧ ॥

---

೬೭. ಈ ಜಗತ್ತು ಯಾವ ರೀತಿಯಲ್ಲಿದೆಯೋ ಬೇರೆಯ ಕಾಲಗಳಲ್ಲಿಯೂ ಹೀಗೆಯೇ ಇರುತ್ತದೆ. ಈ ಪ್ರವಾಹವು ನಿತ್ಯವಾದುದು. ಇದಕ್ಕೆ ಕರ್ತನೇ ಬೇಕಿರುವುದಿಲ್ಲ. ಎಂದು ಕೆಲವರು ಹೇಳುತ್ತಾರೆ.

೬೮. ಇಲ್ಲಿ ಯಾವು ಯಾವುದು ಕಾಣುತ್ತದೆಯೋ ಮತ್ತು ಇಂದ್ರಿಯ ಗೋಚರಗಳೋ ಇದಕ್ಕಿಂತಲೂ ಬೇರೆಯಾದುವು ಯಾವುವೂ ಇಲ್ಲವು. ಸ್ವರ್ಗ, ನರಕ, ಮೋಕ್ಷಗಳು ಇಲ್ಲವೆಂದು ಕೆಲವರು ಇಂದ್ರಿಯ ನಿಗ್ರಹಿಗಳು ಹೇಳುತ್ತಾರೆ.

೬೯. ಕೆಲವರು ಈಶ್ವರನೇ ಇಲ್ಲವೆಂದೂ ಮತ್ತೆ ಕೆಲವರು ಈಶ್ವರನಿರುವ ನೆಂದೂ ಹೇಳುತ್ತಾರೆ. ಅವರು ಪರರಿಗೋಸ್ಕರ ಬಹು ವ್ಯತ್ಯಾಸವಾದ ಬುದ್ಧಿ ಯುಳ್ಳವರು. ಮತ್ತು ಪರಮಾರ್ಥವನ್ನು ತಿಳಿಯದವರು.

೭೦. ಮತ್ತೆ ಕೆಲವರು ಇತರರನ್ನು ಹಾಸ್ಯಮಾಡುವುದೇ ಸ್ವಭಾವವಾಗಿ ಉಳ್ಳವರು ತಮ್ಮ ಮನಸ್ಸಿಗೆ ತಿಳಿದಂತೆಯೂ ತಾವು ಕೇಳಿದಂತೆಯೂ ಹೇಳು ತ್ತಾರೆ. ಅವರು ತಮ್ಮ ಯುಕ್ತಿಗಳನ್ನೇ ಪ್ರಧಾನವಾಗಿಟ್ಟುಕೊಂಡು ಅದರಂತೆ ನಾನಾರೀತಿಯಲ್ಲಿ ವಾದಿಸುತ್ತಾರೆ.

೭೧. ನಾನು ತರ್ಕವನ್ನೇ ಮುಖ್ಯವಾಗಿಟ್ಟುಕೊಂಡು ಹೇಳುತ್ತೇನೆ. ಕೇಳು. ಈಗ ನಾನು ಹೇಳುವುದು ಪುಣ್ಯವಾದುದು. ಸಂಸಾರನಾಶಕವಾದುದು.

ತನ್ಮೂಲಮನುಯಾತಂ ಚೇತ್ತತೋ ದೇವಾದಯೋ ನರಾಃ ।
ಪ್ರಮಾಣೇನೋಪಲಭ್ಯಂತೇ ನ ಪ್ರಮಾಣವಿಮೋಹಿತೈಃ ॥ ೭೨ ॥

ಅನಾಗತಮತೀತಂ ಚ ವಿಪ್ರಕೃಷ್ಟಮತೀವ ಯತ್ ।
ನ ಗೃಹೀತಂ ಯಥಾಶಕ್ತಿ ವರ್ತಮಾನಾರ್ಥನಿಷ್ಠಿತಂ ॥ ೭೩ ॥

ಆಗಮೋ ಮುನಿಭಿಃ ಪ್ರೋಕ್ತೋ ರೂಪಪೂರ್ವಕ್ರಮಾಗತಃ ।
ಪ್ರಮಾಣಂ ಸ ತು ವಿಜ್ಞೇಯಃ ಪರಮಾರ್ಥಪ್ರಸಾಧಕಃ ॥ ೭೪ ॥

ಯದಭ್ಯಾಸಬಲಾಜ್ಞಾನಂ ರಾಗದ್ವೇಷಮಲಾಪಹಂ ।
ಉತ್ಪದ್ಯತೇ ದ್ವಿಜಶ್ರೇಷ್ಠ ಸೋಽಯಮಾಗಮಸಂಜ್ಞಕಃ ॥ ೭೫ ॥

ಫಲಂ ಕರ್ಮ ಚ ಯತ್ತತ್ತ್ವಂ ವಿಜ್ಞಾನಂ ದರ್ಶನಂ ವಿಭು ।
ಜಾತ್ಯಾದಿಕಲ್ಪನಾಹೀನಂ ದ್ವಿತೀಯಾಗಮಲಕ್ಷಣಂ ॥ ೭೬ ॥

---

೭೨. ಅದನ್ನು ನೋಡಿ ಯೋಚಿಸಿದರೆ ದೇವಾದಿಗಳೂ ಮನುಷ್ಯರೂ ಸಕಾರಣರಾಗಿ ಸಿಕ್ಕುತ್ತಾರೆ. ಇವರು ಕಾರಣಕ್ಕೆ ಶರಣರು.

೭೩. ಪ್ರಮಾಣವನ್ನು ಅನುಸರಿಸಿದ ಕೆಲವರು ಈ ಸಂಸಾರವು ನಮಗೆ ಮುಂದೆ ಬರುವುದೂ ಇಲ್ಲ ಹಿಂದೆ ಬಂದೂ ಇಲ್ಲ. ಈಗಿರುವುದು ಹೀಗೆಯೇ, ಹಾಗೆಯೇ ಎಂದು ಈಗಿರುವುದನ್ನೇ ಹೇಳುತ್ತಾನೆ.

೭೪. ಕೆಲವು ಜನರು ರೂಪ ಗುಣಗಳು ಮೊದಲು ಉಂಟಾಗುತ್ತವೆಂದು ಹೇಳುತ್ತಾರೆ. ಅದನ್ನು ಪ್ರಮಾಣವಾಗಿಟ್ಟುಕೊಳ್ಳಬೇಕು. ಅದು ಪರಮಾರ್ಥವನ್ನು ಸಾಧಿಸಲು ಅನುಕೂಲಿಸುತ್ತದೆ.

೭೫. ಅದನ್ನು ತಿಳಿಯುವುದರಿಂದ ರಾಗ ದ್ವೇಷಗಳನ್ನು ಬಿಡತಕ್ಕ ಜ್ಞಾನವನ್ನು ಹೊಂದಬಹುದು. ಇದೇನೇ ಆಗಮವೆನಿಸಿಕೊಳ್ಳುತ್ತದೆ.

೭೬. ವಿಜ್ಞಾನವಾದಿಗಳು ಫಲವೇ ಕರ್ಮವೆಂದೆನ್ನುತ್ತಾರೆ. ಆತ್ಮನು ವಿಭುವು. ಜಾತಿಯಿಲ್ಲ. ಇದು ಇವರ ಮತ.

ಆತ್ಮಸಂವೇದನಂ ನಿತ್ಯಂ ಸನಾತನಮತೀಂದ್ರಿಯಂ ।
ಚಿನ್ಮಾತ್ರಮಮೃತಂ ಜ್ಞೇಯಮನನ್ತಮಜಮವ್ಯಯಂ ॥ ೭೭ ॥

ವ್ಯಕ್ತಾವ್ಯಕ್ತಸ್ವರೂಪೇಣ ವ್ಯಕ್ತಸ್ಥಿತಮನಂಜನಂ ।
ವ್ಯಾಪ್ತವಿಷ್ಣುರಿತಿ ಖ್ಯಾತಂ ಖ್ಯಾತಭಿನ್ನಮವಸ್ಥಿತಂ ॥ ೭೮ ॥

ಯೋಗಿಧ್ಯೇಯಮವಿಜ್ಞೇಯಂ ಪರಮಾರ್ಥಪರಾಙ್ಮುಖೈಃ ।
ಲಕ್ಷ್ಯತೇ ಬುದ್ಧಿಭಿರ್ಭಿನ್ನಮಪಿ ಭಿನ್ನಂ ನ ಚಾತ್ಮನಿ ॥ ೭೯ ॥

ಶೃಣುಷ್ವಾವಹಿತಸ್ತಾತ ಕಥಯಾಮಿ ತವಾನಘ ।
ಯತ್ಪ್ರೋಕ್ತಂ ಬ್ರಹ್ಮಣಾ ಪೂರ್ವಂ ಪೃಚ್ಛತೋ ಮಮ ಸುವ್ರತ ॥ ೮೦ ॥

ಕದಾಚಿದ್ಬ್ರಹ್ಮಲೋಕಸ್ಥಂ ಬ್ರಹ್ಮಾಣಂ ಚ ಪಿತಾಮಹಂ ।
ಪ್ರಣಿಪತ್ಯ ಯಥಾನ್ಯಾಯಮಪೃಚ್ಛಮಜಮವ್ಯಯಂ ॥ ೮೧ ॥

---

೭೭–೭೮. ಆತ್ಮನು ನಿತ್ಯನು. ಅದು ಸಂವೇದನಾಕಾರ ಎಂದರೆ ಪರಂಪರೆಯಾಗಿ ಇರುವುದು. ಚಿತ್ಸ್ವರೂಪವು ನಾಶರಹಿತವಾದುದು. ಅನಂತವಾದುದು. ಹುಟ್ಟುವುದಿಲ್ಲ. ನಾಶವಾಗುವುದು ಇಲ್ಲ. ವ್ಯಕ್ತಾವ್ಯಕ್ತ ಸ್ವರೂಪದಿಂದಿರುವುದು. ಇನ್ನೊಂದರ ಲೋಪವಿಲ್ಲ. ಸರ್ವವ್ಯಾಪಿಯು.

೭೯. ಆ ಆತ್ಮನು ಯೋಗಿಗಳಿಗೆ ಧ್ಯಾನಮಾಡಲು ಯೋಗ್ಯನು ಪರಮಾರ್ಥದಲ್ಲಿ ಬುದ್ಧಿ ಇಲ್ಲದವರು ಅವನನ್ನು ತಿಳಿಯಲಾರರು. ತಿಳಿವಳಿಕೆಯಿಲ್ಲದವರು ಆ ಆತ್ಮನನ್ನು ಭಿನ್ನಭಿನ್ನನಾಗಿರುವನೆಂದು ತಿಳಿಯುತ್ತಾರೆ. ಆದರೆ ಅವನು ಭಿನ್ನವಾಗಿಲ್ಲ. ಒಬ್ಬನೇ.

೮೦. ಎಲೈ ಪುಂಡರೀಕನೇ ! ಕೇಳು. ನಾನು ಬ್ರಹ್ಮನನ್ನು ಕೇಳಿದಾಗ ಆ ಬ್ರಹ್ಮನು ಹೇಳಿದುದನ್ನೇ ಹೇಳುತ್ತೇನೆ. ಮನಸ್ಸಿಟ್ಟು ಕೇಳು.

೮೧. ಒಂದುಸಾರಿ ಬ್ರಹ್ಮಲೋಕದಲ್ಲಿರುವ ಬ್ರಹ್ಮನನ್ನು ನಮಸ್ಕರಿಸಿ ಆತನನ್ನೇ ಹೇಗೆಂದು ಹೇಳಿದನು.

ಕಿಂಸ್ವಿಜ್ಞಾನಂ ಪರಂ ಪ್ರೋಕ್ತಂ ಕಶ್ಚ ಯೋಗಃ ಪರೋ ಮತಃ ।
ಏತನ್ಮೇ ತತ್ವತೋ ಬ್ರಹ್ಮನ್ ಸಮಾಚಕ್ಷ್ವ ಪಿತಾಮಹ ॥ ೮೨ ॥

॥ ಬ್ರಹ್ಮೋವಾಚ ॥

ಶೃಣುಷ್ವಾವಹಿತಸ್ತಾತ ಜ್ಞಾನಂ ಯೋಗಮನುತ್ತಮಂ ।
ಅಲ್ಪಗ್ರಂಥಂ ಪ್ರಭೂತಾರ್ಥಮದುಃಖೋಪಾಸನಕ್ರಿಯಂ ॥ ೮೩ ॥

ಯಃ ಪರಂಪರಯಾ ಪ್ರೋಕ್ತಃ ಪುರುಷಃ ಪಂಚವಿಂಶಕಃ ।
ಸ ಏವ ಸರ್ವಭೂತಾತ್ಮಾ ತೇನ ಇತ್ಯಭಿಧೀಯತೇ ॥ ೮೪ ॥

ನಾರಾಯಣೋ ಜಗದ್ಧಾಮ ಪರಮಾತ್ಮಾ ಸನಾತನಃ ।
ಜಗತಸ್ಸೃಷ್ಟಿಸಂಹಾರಪರಿಪಾಲನತತ್ಪರಃ ॥ ೮೫ ॥

ತ್ರಯಾಣಾಮಾತ್ಮನಾಂ ಚೈಕೋ ದೇವದೇವಸ್ಸನಾತನಃ ।
ಆರಾಧ್ಯಸ್ಸರ್ವದಾ ಬ್ರಹ್ಮನ್ ಪುರುಷೇಣ ಹಿತೈಷಿಣಾ ॥ ೮೬ ॥

---

೮೨. ಎಲೈ ಬ್ರಹ್ಮನೇ ! ಯಾವ ಜ್ಞಾನವು ಉತ್ತಮವು ? ಮತ್ತು ಯಾವ ಯೋಗವು ಉತ್ತಮವು ? ಇದನ್ನು ನನಗೆ ಸರಿಯಾಗಿ ಹೇಳು.

೮೩. ಬ್ರಹ್ಮನು ಹೇಳಿದನು–ಎಲೈ ನಾರದನೇ ! ಉತ್ತಮವಾದ ಜ್ಞಾನವನ್ನೂ ಉತ್ತಮವಾದ ಯೋಗವನ್ನೂ ಹೇಳುತ್ತೇನೆ. ಅದು ಮಾತು ಸ್ವಲ್ಪವಾಗಿದ್ದು ಅರ್ಥವು ಹೆಚ್ಚಾಗಿಯೂ ಇರುವಂತಹುದು. ಮತ್ತು ಸುಲಭದಿಂದ ಹೊಂದುವುದಕ್ಕೆ ಸಾಧ್ಯವಾದುದು. ಕೇಳು.

೮೪. ತತ್ವಗಳು ಇಪತ್ತನಾಲ್ಕೆಂದೂ ವಿಕಾರಕ್ಕೆ ಒಳಗಾಗದೆ ಇರತಕ್ಕ ಇಪ್ಪತ್ತೈದನೆಯವನು ಆತ್ಮವೆಂದೂ, ಯಾವುದನ್ನು ಹೇಳಿದ್ದೇನೆಯೋ ಅವನೇ ಸರ್ವಪ್ರಾಣಿಗಳಲ್ಲಿಯೂ ಇರುವ ಆತ್ಮವೆಂದೂ ಎಲ್ಲರೂ ಹೇಳುತ್ತಾರೆ.

೮೫ ಅವನೇ ನಾರಾಯಣನು. ಜಗತ್ತಿಗೆಲ್ಲಾ ಸ್ಥಾನನಾದವನು. ಪರಮಾತ್ಮನು. ಸನಾತನನು. ಜಗತ್ತಿನ ಸೃಷ್ಟಿ ಸ್ಥಿತಿ ಲಯಗಳನ್ನು ಮಾಡುವವನು.

೮೬. ಬ್ರಹ್ಮ ವಿಷ್ಣು ಶಿವಾತ್ಮಕನು. ಇವನೊಬ್ಬನೇ ದೇವತೆಗಳಿಗೆಲ್ಲಾ ದೇವನು. ಸನಾತನನು. ಹಿತವನ್ನು ಮಾಡಿಕೊಳ್ಳಬೇಕೆನ್ನುವವನು. ಇವನನ್ನು ಆರಾಧಿಸಬೇಕು.

ನಿಸ್ಸ್ಪೃಹಾ ನಿತ್ಯಸಂತುಷ್ಟಾ ಜ್ಞಾನಿನಸ್ತೇ ಜಿತೇಂದ್ರಿಯಾಃ ।
ನಿರ್ಮಮಾ ನಿರಹಂಕಾರಾ ರಾಗದ್ವೇಷವಿವರ್ಜಿತಾಃ || ೮೭ ||

ಅಕ್ಷಯಂ ಯಾನ್ತಿ ತೇ ಶಾನ್ತಾಃ ಸರ್ವಸಂಗವಿವರ್ಜಿತಾಃ ।
ಧ್ಯಾನಯೋಗಪರಾ ಬ್ರಹ್ಮ ತೇ ಪಶ್ಯಂತಿ ಜಗತ್ಪತಿಂ || ೮೮ ||

ಯಥಾ ಜಗದವಸ್ಥಾನಂ ಯಥಾ ಕಾಲಾಂತರೇ ಪುನಃ ।
ಭೂತಂ ಭವ್ಯಂ ಭವಿಷ್ಯಂ ಚ ವಿಪ್ರಕೃಷ್ಟಂ ತಥೈವ ಚ || ೮೯ ||

ಸ್ಥೂಲಂ ಸೂಕ್ಷ್ಮಂ ತಥಾ ಚಾನ್ಯತ್ಪಶ್ಯಂತಿ ಜ್ಞಾನಚಕ್ಷುಷಾ ।
ತಚ್ಚಿತ್ತಾಸ್ತದ್ಗತಪ್ರಾಣಾ ನಾರಾಯಣಪರಾಯಣಾಃ || ೯೦ ||

ಅನ್ಯಥಾ ಮಂದಬುದ್ಧೀನಾಂ ಪ್ರತಿಭಾತಿ ದುರಾತ್ಮನಾಂ ।
ಕುತರ್ಕಾಜ್ಞಾನದುಷ್ಟಾನಾಂ ವಿಭಕ್ತೇಂದ್ರಿಯವಾದಿನಾಂ || ೯೧ ||

---

೮೭–೮೮. ಆಸೆಯನ್ನು ಬಿಟ್ಟು ಸಂತೋಷಗೊಂಡು ಜಿತೇಂದ್ರಿಯರಾದ, ಜ್ಞಾನಿಗಳಾದ, ಮಮತೆ, ಅಹಂಕಾರಗಳಲ್ಲಿದ್ದ ರಾಗದ್ವೇಷಗಳನ್ನು ಬಿಟ್ಟ ಶಾಂತರಾದವರು ಧ್ಯಾನಯೋಗದಿಂದ ಈ ಸ್ವಾಮಿಯನ್ನು ನೋಡುತ್ತಾರೆ. ಅಕ್ಷಯ ಲೋಕವನ್ನೂ ಹೊಂದುತ್ತಾರೆ.

೮೯–೯೦. ಜಗತ್ತು ಈಗ ಹೇಗಿರುವುದೋ ಕಾಲಾಂತರದಲ್ಲಿಯೂ ಹಾಗೆಯೇ ಇತ್ತೆಂದೂ, ಮುಂದೆಯೂ ಇರುತ್ತದೆಂದೂ, ಭೂತ ಭವಿಷ್ಯದ್ವರ್ತಮಾನಗಳನ್ನು, ಸಮೀಪವಾದುವುಗಳನ್ನೂ, ಅಂತೆಯೇ ಅಣುಮಹತ್ತುಗಳನ್ನೂ, ಇನ್ನೂ ಯಾವ ಯಾವದಿರುವುದೋ ಅವೆಲ್ಲವನ್ನೂ ಆ ಸ್ವಾಮಿಯಲ್ಲಿಯೇ ಆಸಕ್ತರಾದ ಆ ಯೋಗಿಗಳು ತಿಳಿಯುತ್ತಾರೆ.

೯೧. ಮಂದಬುದ್ಧಿಗಳೂ, ದುಷ್ಟಬುದ್ಧಿಗಳೂ, ಸರಿಯಾದ ರೀತಿಯಲ್ಲಿ ಯೋಚಿಸದವರೂ, ಇಂದ್ರಿಯವಾದಿಗಳೂ ಈ ಮೇಲೆ ಹೇಳಿದ ರೀತಿಯಲ್ಲಿ ತಿಳಿಯಲಾರರು.

॥ ನಾರದ ಉವಾಚ ॥

ಶ್ರೂಯತಾಮನ್ಯದಪಿ ವೈ ಕಥ್ಯಮಾನಂ ಮಯಾನಘ ।
ಬ್ರಹ್ಮಣೈವ ಪುರಾ ಪ್ರೋಕ್ತಂ ಜಗತಃ ಕಾರಣಾತ್ಮನಾ ॥ ೯೨ ॥

ದೇವಾನಾಮಿಂದ್ರಮುಖ್ಯಾನಾಮೃಷೀಣಾಂ ಚೈವ ಸುವ್ರತಃ ।
ಹಿತಾನಿ ಕಥಯಾಮಾಸ ಪೃಷ್ಟತಾಂ ಕಮಲಾಸನಃ ॥ ೯೩ ॥

॥ ಬ್ರಹ್ಮೋವಾಚ ॥

ನಾರಾಯಣಪರೋ ಧರ್ಮಃ ತಥಾ ಲೋಕಾಶ್ಚ ಶಾಶ್ವತಾಃ ।
ನಾರಾಯಣಪರಾ ಯಜ್ಞಾಃ ಶಾಸ್ತ್ರಾಣಿ ವಿವಿಧಾನಿ ಚ ॥ ೯೪ ॥

ವೇದಾಸ್ಸಾಂಗಾಸ್ತಥಾ ಚಾನ್ಯೇ ವಿಷ್ಣುರ್ವಿಶ್ವೇಶ್ವರೋ ಹರಿಃ ।
ಪೃಥಿವ್ಯಾದೀನಿ ವಿಬುಧಾಃ ಪಂಚ ಭೂತಾನಿ ಸೋಽವ್ಯಯಃ ॥ ೯೫ ॥

---

೯೨. ನಾರದನು ಹೇಳಿದನು–ಇದೂ ಅಲ್ಲದೆ ಜಗತ್ಕಾರಣನಾದ ಬ್ರಹ್ಮನೇ ಪೂರ್ವದಲ್ಲಿ ಹೇಳಿರುವುದನ್ನು ಹೇಳುತ್ತೇನೆ. ಕೇಳು.

೯೩. ದೇವತೆಗಳೂ, ಇಂದ್ರನೂ, ಋಷಿಗಳೂ ತಮಗೆ ಹಿತವಾದುದನ್ನು ಹೇಳಬೇಕೆಂದು ಬ್ರಹ್ಮನನ್ನು ಕೇಳಿಕೊಳ್ಳಲು ಆತನು ಅವರಿಗೆ ಹೇಳಿದುದನ್ನೇ ಹೇಳುತ್ತೇನೆ. ಕೇಳು.

೯೪. ಬ್ರಹ್ಮನು ಹೇಳಿದನು–ಧರ್ಮಗಳೆಲ್ಲವೂ ನಾರಾಯಣನನ್ನೇ ಹೇಳುತ್ತವೆ. ಶಾಶ್ವತವಾದ ಲೋಕಗಳು ನಾರಾಯಣನಿಂದಲೇ ಸಿಕ್ಕುತ್ತವೆ. ಯಜ್ಞಗಳೆಲ್ಲವೂ ನಾರಾಯಣ ಪರವಾದುವುಗಳೇ. ನಾನಾ ಶಾಸ್ತ್ರಗಳೂ ಕೂಡ ನಾರಾಯಣನನ್ನೇ ಹೇಳುತ್ತವೆ.

೯೫. ವೇದಗಳೂ, ವೇದಾಂಗಗಳೂ, ಭೂಮಿ, ಅಪ್ಪು, ತೇಜಸ್ಸು, ವಾಯು, ಆಕಾಶ ರೂಪವಾದ ಪಂಚಭೂತಗಳೂ ಆ ವಿಷ್ಣುವೇನೇ. ಅವನು ನಾಶರಹಿತನು.

ಸರ್ವಂ ವಿಷ್ಣುಮಯಂ ಜ್ಞೇಯಂ ವಿಬುಧೈಸ್ಸಕಲಂ ಜಗತ್ ।
ತಥಾಪಿ ಮಾನುಷಾಃ ಪಾಪಾ ನ ಜಾನಂತಿ ವಿಮೋಹಿತಾಃ　　|| ೯೬ ||

ತಸ್ಯೈವ ಮಾಯಯಾ ವ್ಯಾಪ್ತಂ ಚರಾಚರಮಿದಂ ಜಗತ್ ।
ತನ್ಮನಾಸ್ತದ್ಗತಪ್ರಾಣೋ ಜಾನಾತಿ ಪರಮಾರ್ಥವಿತ್　　|| ೯೭ ||

ಈಶ್ವರಸ್ಸರ್ವಭೂತಾನಾಂ ವಿಷ್ಣುಸ್ತ್ರೈಲೋಕ್ಯಪಾಲಕಃ ।
ತಸ್ಮಿನ್ನೇತಜ್ಜಗತ್ಸರ್ವಂ ತಿಷ್ಠತಿ ಪ್ರಭವತ್ಯಪಿ　　|| ೯೮ ||

ಜಗತ್ಸಂಹರತೇ ರುದ್ರಃ ಪಾಲನೇ ವಿಷ್ಣುರುಚ್ಯತೇ ।
ಉತ್ಪತ್ತೌ ಚಾಹಮೇವಾತ್ರ ತಥಾನ್ಯೇ ಲೋಕಪಾಲಕಾಃ　　|| ೯೯ ||

ಸರ್ವಾಧಾರೋ ನಿರಾಧಾರಃ ಸಕಲೋ ನಿಷ್ಕಲಸ್ತಥಾ ।
ಅಣುರ್ಮಹಾಂಸ್ತಥಾಪ್ಯನ್ಯತ್ತಸ್ಮಾಚ್ಚ ಪರತಃ ಪರಃ　　|| ೧೦೦ ||

---

೯೬. ಜ್ಞಾನಿಗಳಾದವರು ಈ ಪ್ರಪಂಚವನ್ನೇ ವಿಷ್ಣುಮಯವಾದುದೆಂದು ತಿಳಿದುಕೊಳ್ಳಬೇಕು. ಆದರೂ ಪಾಪಿಗಳಾದವರು ಮೋಹಕ್ಕೆ ಒಳಗಾಗಿ ಅವನನ್ನು ತಿಳಿಯಲಾರರು.

೯೭. ಆದರೆ ಈ ಪ್ರಪಂಚವೆಲ್ಲವೂ ಮಾಯೆಯಿಂದ ಕೂಡಿರುತ್ತದೆ. ಆ ಸ್ವಾಮಿಯಲ್ಲಿಯೇ ಮನಸ್ಸುಳ್ಳವನು ಪರಮಾರ್ಥವನ್ನು ತಿಳಿದುಕೊಳ್ಳುತ್ತಾನೆ.

೯೮. ಆ ವಿಷ್ಣುವು ಎಲ್ಲಾ ಭೂತಗಳಿಗೂ ನಿಯಾಮಕನು. ಮೂರು ಲೋಕವನ್ನೂ ಕಾಪಾಡತಕ್ಕವನು. ಅವನಲ್ಲಿಯೇ ಪ್ರಪಂಚವೆಲ್ಲವೂ ಇರುತ್ತವೆ. ಮತ್ತು ಹುಟ್ಟುತ್ತವೆ.

೯೯. ರುದ್ರನು ಜಗತ್ತನ್ನು ಸಂಹರಿಸುತ್ತಾನೆ. ವಿಷ್ಣುವು ಕಾಪಾಡುತ್ತಾನೆ. ನಾನು ಉತ್ಪತ್ತಿ ಮಾಡುತ್ತೇನೆ. ಲೋಕಪಾಲಕರು ರಕ್ಷಿಸುತ್ತಾರೆ.

೧೦೦. ಅವನು ಸಕಲಕ್ಕೂ ಆಧಾರನು. ತಾನು ಮಾತ್ರ ಆಧಾರವಿಲ್ಲದವನು. ಎಲ್ಲದರಲ್ಲಿಯೂ ಕಲಾರೂಪದಿಂದಿದ್ದಾನೆ. ತಾನು ಮಾತ್ರ ನಿಷ್ಕಲ್ಮಷನು. ನಿರ್ಮಲನು. ಅಣುವು. ಮಹತ್ತು. ಯಾವುದು ಕೊನೆಯೋ ಅವೆಲ್ಲಕ್ಕೂ ಈತನು ಕೊನೆಯು.

ತಮೇವ ಶರಣಂ ಯಾತ ಸರ್ವಸಂಹಾರಕಾರಕಂ ।
ಸ ಪಿತಾ ಜನಿತಾಸ್ಮಾಕಂ ಕೀರ್ತಿತೋ ಮಧುಸೂದನಃ ॥ ೧೦೧ ॥

॥ ನಾರದ ಉವಾಚ ॥

ಏವಮುಕ್ತಾಃ ಸುರಾಃ ಸರ್ವೇ ಬ್ರಹ್ಮಣಾ ಪದ್ಮಯೋನಿನಾ ।
ಪ್ರಣೇಮುಸ್ಸರ್ವಲೋಕೇಶಂ ದೇವಂ ವಿಷ್ಣುಂ ಜನಾರ್ದನಂ ॥ ೧೦೨ ॥

ತಸ್ಮಾತ್ತ್ವಮಪಿ ವಿಪ್ರರ್ಷೇ ನಾರಾಯಣಪರೋ ಭವ ।
ತದನ್ಯಃ ಕೋ ಮಹೋದಾರಃ ಪ್ರಾರ್ಥಿತಂ ದಾತುಮರ್ಹತಿ ॥ ೧೦೩ ॥

ಪಿತರಂ ಮಾತರಂ ಚೈವ ತಮೇವ ಪುರುಷೋತ್ತಮಂ ।
ಪರಿಗೃಹ್ಣೀಷ್ವ ಲೋಕೇಶಂ ದೇವದೇವಂ ಜಗತ್ಪತಿಂ ॥ ೧೦೪ ॥

ಅಗ್ನಿಕಾರ್ಯೇಣ ಭೈಕ್ಷ್ಯೇಣ ತಪಸಾಧ್ಯಯನೇನ ವೈ ।
ತೋಷಯೇದ್ದೇವದೇವೇಶಂ ಗುರುಂ ನಿತ್ಯಮತಂದ್ರಿತಃ ॥ ೧೦೫ ॥

---

೧೦೧. ಸರ್ವವನ್ನೂ ನಾಶಮಾಡಬಲ್ಲ ಅವನನ್ನೇ ಶರಣು ಹೊಂದಿರಿ. ಅವನೇ ನನಗೂ ತಂದೆಯು. ನಾನು ಅವನಿಂದಲೇ ಉತ್ಪತ್ತಿಯಾದುದು.

೧೦೨. ನಾರದನು ಹೇಳಿದನು–ಈ ರೀತಿಯಾಗಿ ಬ್ರಹ್ಮನು ಹೇಳಿದನು. ಅದರಂತೆ ದೇವತೆಗಳೆಲ್ಲರೂ ಸರ್ವಲೋಕೇಶನಾದ ವಿಷ್ಣುವನ್ನು ನಮಸ್ಕರಿಸಿದರು.

೧೦೩. ಎಲೈ ಪುಂಡರೀಕನೇ ! ನೀನು ಆ ನಾರಾಯಣನಲ್ಲಿ ಆಸಕ್ತನಾಗಿ ಅವನನ್ನೇ ಮರೆಹೊಂದು. ಅವನಿಗಿಂತಲೂ ಉದಾರನು ಮತ್ತೊಬ್ಬನಿಲ್ಲ. ಕೇಳಿದುದನ್ನು ಕೊಡುವವನೂ ಮತ್ತೊಬ್ಬನಿಲ್ಲ.

೧೦೪. ಆ ಪುರುಷೋತ್ತಮನನ್ನು ನೀನೇ ತಂದೆ, ನೀನೇ ತಾಯಿ ಎಂದು ತಿಳಿ. ಆ ಜಗತ್ಪತಿಯಾದ ಸ್ವಾಮಿಯನ್ನೇ ನಂಬು.

೧೦೫. ಅಗ್ನಿಕಾರ್ಯ, ಭಿಕ್ಷಾಚರಣೆ, ತಪಸ್ಸು, ಅಧ್ಯಯನ ಇವುಗಳಿಂದ ದೇವದೇವನೂ ಗುರುವೂ ಆದ ಆ ಸ್ವಾಮಿಯನ್ನು ಸೋಮಾರಿತನವಿಲ್ಲದೆ ದಿನವೂ ಆಶ್ರಯಿಸು.

ಸ್ವರ್ಗೇಽಕ್ಷಯಂ ತಥಾ ಭೋಗಮನುಸ್ಮೇಯಂ ತಥೈವ ಚ ।
ಪರಿಗೃಹ್ಣೀಷ್ವ ವಿಪ್ರರ್ಷೇ ತನೋವ ಪುರುಷೋತ್ತಮಂ　　|| ೧೦೬ ||

ಕಿಂ ತೈಸ್ತು ಮಂತ್ರೈರ್ಬಹುಭಿಃ ಕಿಂ ತೈಸ್ತು ಬಹುಭಿರ್ವ್ರತೈಃ ।
ಓಂ ನಮೋ ನಾರಾಯಣಾಯೇತಿ ಮಂತ್ರಸ್ಸರ್ವಾರ್ಥಸಾಧಕಃ　　|| ೧೦೭ ||

ಚೀರವಾಸಾ ಜಟೀ ವಿಪ್ರೋ ದಂಡೀ ಮುಂಡೀ ತಥೈವ ಚ ।
ಭೂಷಿತೋ ವಾ ದ್ವಿಜಶ್ರೇಷ್ಠ ನ ಲಿಂಗಂ ಧರ್ಮಕಾರಣಂ　　|| ೧೦೮ ||

ಯೇ ನೃಶಂಸಾ ದುರಾತ್ಮಾನಃ ಪಾಪಾಚಾರಪರಾಸ್ಸದಾ ।
ತೇಽಪಿ ಯಾಂತಿ ಪರಂ ಸ್ಥಾನಂ ನಾರಾಯಣಪರಾಯಣಾಃ　　|| ೧೦೯ ||

ಲಿಪ್ಯಂತೇ ನ ಚ ಪಾಪೇನ ವೈಷ್ಣವಂ ವೀತಕಿಲ್ಬಿಷಾಃ ।
ಪುನಂತಿ ಸಕಲಂ ಲೋಕಮಹಿಂಸಾಜಿತಮಾನಸಾಃ　　|| ೧೧೦ ||

---

೧೦೬. ಎಲೈ ಪುಂಡರೀಕನೇ ! ಆತನನ್ನು ಆಶ್ರಯಿಸಿದರೆ ಸ್ವರ್ಗದಲ್ಲಿ ಅಕ್ಷಯ ಸುಖವೂ ಭೋಗವೂ ಸಿಕ್ಕುತ್ತವೆ.

೧೦೭. ಅನೇಕವಾದ ಮಂತ್ರಗಳಿಂದಲಾಗಲೀ, ವ್ರತಗಳಿಂದಲಾಗಲೀ ಪ್ರಯೋಜನವೇನು? "ಓಂ ನಮೋ ನಾರಾಯಣಾಯ" ಎಂಬ ಮಂತ್ರವೇ ಎಲ್ಲವನ್ನೂ ಕೊಡುತ್ತದೆ.

೧೦೮. ನಾರುಬಟ್ಟೆಯನ್ನುಡುವುದು, ದಂಡವನ್ನು ಹಿಡಿಯುವುದು, ತಲೆಯನ್ನು ಬೋಳಿಸಿಕೊಳ್ಳುವುದು, ಈ ರೀತಿಯ ಅಲಂಕಾರಗಳೊಂದೂ ಧರ್ಮಕ್ಕೆ ಕಾರಣವಲ್ಲ.

೧೦೯. ಘಾತುಕರೂ, ದುಷ್ಟರೂ, ಪಾಪಿಗಳೂ ಆದವರು ನಾರಾಯಣನನ್ನು ಭಜಿಸಿದರೆ ಅವರೂ ಕೂಡ ಮೋಕ್ಷವನ್ನು ಹೊಂದುತ್ತಾರೆ.

೧೧೦. ಹಿಂಸೆಯನ್ನು ಬಿಟ್ಟು ವಿಷ್ಣುವಿನಲ್ಲಿ ಆಸಕ್ತರಾದವರು ಪಾಪವನ್ನು ಕಳೆದುಕೊಂಡು ಸಕಲ ಲೋಕಗಳನ್ನೂ ಪವಿತ್ರವನ್ನಾಗಿ ಮಾಡುತ್ತಾರೆ.

ಕ್ಷತ್ರಬಂಧುರಿತಿ ಖ್ಯಾತೋ ರಾಜಾ ಪ್ರಾಣಿವಿಹಿಂಸಕಃ ।
ಪ್ರಾಪ್ತವಾನ್ಪರಮಂ ಧಾಮ ವೈಷ್ಣವಂ ಕೇಶವಾಶ್ರಯಾತ್ ॥ ೧೧೧ ॥

ಅಂಬರೀಷೋ ಮಹಾಸತ್ವಸ್ತಪ್ತೋತಪ್ಯತ್ಸುದಾರುಣಂ ।
ತೇನೈವ ತಪಸಾರಾಧ್ಯ ದೃಷ್ಟವಾನ್ಪುರುಷೋತ್ತಮಂ ॥ ೧೧೨ ॥

ಮಿತ್ರಾಸನಸ್ತಥಾ ರಾಜ್ಞಾಂ ರಾಜಾ ಪರಮತತ್ವವಿತ್ ।
ಹೃಷೀಕೇಶಂ ಸಮಾರಾಧ್ಯ ವೈಷ್ಣವಂ ಪದಮಾಪ್ತವಾನ್ ॥ ೧೧೩ ॥

ಅನ್ಯೇ ಬ್ರಹ್ಮರ್ಷಯಶ್ಶಾಂತಾ ಬಹವಸ್ಸಂಶಿತವ್ರತಾಃ ।
ಧ್ಯಾತ್ವಾ ಚ ಪರಮಾತ್ಮಾನಾಂ ಸಂಸಿದ್ಧಿಂ ಪರಮಾಂ ಗತಾಃ ॥ ೧೧೪ ॥

ಪ್ರಹ್ಲಾದಃ ಪರಮಾಹ್ಲಾದಃ ಪುರಾ ನಾರಾಯಣಂ ಹರಿಂ ।
ಸೇವಿತಾಭ್ಯರ್ಚಿತಾ ಧ್ಯಾತಾ ತೇನೈವ ಪರಿರಕ್ಷಿತಾಃ ॥ ೧೧೫ ॥

---

**೧೧೧** ಪ್ರಾಣಿಗಳನ್ನೆಲ್ಲಾ ಹಿಂಸಿಸುತ್ತಿದ್ದ ಕ್ಷತ್ರಬಂಧು ಎಂಬ ಅನ್ವರ್ಥ ನಾಮವನ್ನು ಹೊಂದಿದ್ದ (ಇವನ ಬಂಧುಗಳ ಪರಿಚಯದಿಂದ ಇವನನ್ನು ಕ್ಷತ್ರಿಯ ನೆಂದು ತಿಳಿಯಬೇಕು.) ಒಬ್ಬ ರಾಜನು ಕೇಶವನ ಸ್ಮರಣೆಯಿಂದ ಉತ್ತಮವಾದ ವೈಷ್ಣವಲೋಕವನ್ನು ಹೊಂದಿದನು.

೧೧೨. ಅಂಬರೀಷನೆಂಬ ರಾಜನು ಬಹುವಾಗಿ ಉಗ್ರ ತಪಸ್ಸನ್ನು ಮಾಡಿದನು. ಆ ತಪಸ್ಸಿನಿಂದ ವಿಷ್ಣುವನ್ನು ತೃಪ್ತಿಪಡಿಸಿ ಅವನನ್ನು ನೋಡಿದನು.

೧೧೩. ಮಿತ್ರಾಸನನೆಂಬ ರಾಜನು ಧರ್ಮವನ್ನು ತಿಳಿದು ಕೇಶವನನ್ನು ಆರಾಧಿಸಿ ವೈಕುಂಠವನ್ನು ಹೊಂದಿದನು.

೧೧೪. ಇನ್ನೂ ಅನೇಕರಾದ ಬ್ರಹ್ಮರ್ಷಿಗಳು ಶಾಂತಚಿತ್ತರಾಗಿ ಆ ವಿಷ್ಣು ಪರಮಾತ್ಮನನ್ನು ಧ್ಯಾನಮಾಡಿ ಉತ್ತಮಸಿದ್ಧಿಯನ್ನು ಹೊಂದಿದರು.

೧೧೫. ಉತ್ತಮಗುಣವುಳ್ಳ ಪ್ರಹ್ಲಾದನು ಪೂರ್ವದಲ್ಲಿ ನಾರಾಯಣನನ್ನು ಪೂಜಿಸಿ, ಧ್ಯಾನಿಸಿ, ಸೇವಿಸಿ ಅವನಿಂದಲೇ ಕಾಪಾಡಲ್ಪಟ್ಟನು.

ಭರತೋ ನಾಮ ತೇಜಸ್ವೀ ರಾಜಾ ಪರಮಧಾರ್ಮಿಕಃ |
ಉಪಾಸ್ಯೈನಂ ಚಿರಂ ಕಾಲಂ ಪರಾಂ ಮುಕ್ತಿಮವಾಪ್ತವಾನ್ || ೧೧೬ ||

ಬ್ರಹ್ಮಚಾರೀ ಗೃಹಸ್ಥೋ ವಾ ವಾನಪ್ರಸ್ಥೋಽಥ ಭಿಕ್ಷುಕಃ |
ಕೇಶವಾರಾಧನಂ ಹಿತ್ವಾ ನೈವ ಯಾತಿ ಪರಾಂ ಗತಿಂ || ೧೧೭ ||

ಜನ್ಮಾಂತರಸಹಸ್ರೇಷು ಯಸ್ಯ ಸ್ಯಾನ್ಮತಿರೀದೃಶೀ |
ದಾಸೋಽಹಂ ವಿಷ್ಣುಭಕ್ತಾನಾಮಿತಿ ಸರ್ವಾರ್ಥಸಾಧಕಃ || ೧೧೮ ||

ಸ ಯಾತಿ ವಿಷ್ಣುಸಾಲೋಕ್ಯಂ ಪುರುಷೋ ನಾತ್ರ ಸಂಶಯಃ |
ಕಿಂ ಪುನಸ್ತದ್ಗತಪ್ರಾಣಾಃ ಪುರುಷಾಃ ಸಂಶಿತವ್ರತಾಃ || ೧೧೯ ||

ಅನನ್ಯಮನಸಾ ನಿತ್ಯಂ ಧ್ಯಾತವ್ಯಸ್ತತ್ವಚಿಂತಕೈಃ |
ನಾರಾಯಣೋ ಜಗದ್ವ್ಯಾಪೀ ಪರಮಾತ್ಮಾ ಸನಾತನಃ || ೧೨೦ ||

---

೧೧೬. ಶಕ್ತಿವಂತನಾದ ಧರ್ಮಿಷ್ಠನಾದ ಭರತನೆಂಬ ಋಷಿಯು ಈ ನಾರಾಯಣನನ್ನು ಸೇವಿಸಿ ಉತ್ತಮವಾದ ಮುಕ್ತಿಯನ್ನು ಹೊಂದಿದನು.

೧೧೭. ಬ್ರಹ್ಮಚಾರಿಯಾಗಲೀ, ಗೃಹಸ್ಥನಾಗಲೀ, ವಾನಪ್ರಸ್ಥನಾಗಲೀ, ಸನ್ಯಾಸಿಯಾಗಲೀ ಕೇಶವನ ಸೇವೆಯನ್ನು ಮಾಡದಿದ್ದರೆ ಉತ್ತಮಗತಿಯನ್ನು ಹೊಂದುವುದೇ ಇಲ್ಲ.

೧೧೮. ಸಾವಿರಾರು ಜನ್ಮಗಳಿಂದ "ನಾನು ವಿಷ್ಣುಭಕ್ತರಿಗೆ ದಾಸನು" ಎಂಬ ಬುದ್ಧಿಯು ಯಾವನಿಗಿರುತ್ತದೆಯೋ ಅವನಿಗೆ ಸಕಲೇಷ್ಟಗಳೂ ಉಂಟಾಗುತ್ತವೆ.

೧೧೯. ಹಾಗೆ ದಾಸರಿಗೆ ದಾಸನೆಂಬುವನೇ ಸಾಲೋಕ್ಯವನ್ನು ಹೊಂದುತ್ತಾನೆ. ಎಂದಮೇಲೆ ಆ ಸ್ವಾಮಿಯಲ್ಲಿಯೇ ಆಸಕ್ತರಾಗಿರುವವರಲ್ಲಿ ಹೇಳತಕ್ಕದ್ದೇನಿದೆ!

೧೨೦. ತತ್ವವನ್ನು ಬಲ್ಲವರು ಒಂದೇ ಮನಸ್ಸಿನಿಂದ ಜಗದ್ವ್ಯಾಪಿಯಾದ ಪರಮಾತ್ಮನಾದ ಆ ನಾರಾಯಣನನ್ನು ಚಿಂತಿಸಬೇಕು.

|| ಭೀಷ್ಮ ಉವಾಚ ||

ಇತ್ಯೇವಮುಕ್ತ್ವಾ ದೇವರ್ಷಿಃ ತತ್ರೈವಾನ್ತರಧೀಯತ |
ಪರೋಪಕಾರನಿರತೋ ನಾರದಃ ಪರಮಾರ್ಥವಿತ್ || ೧೨೧ ||

ಪುಂಡರೀಕೋಽಪಿ ಧರ್ಮಾತ್ಮಾ ನಾರಾಯಣಪರಾಯಣಃ |
ಓಂ ನಮೋ ನಾರಾಯಣಾಯೇತಿ ಮಂತ್ರಮಷ್ಟಾಕ್ಷರಂ ಜಪನ್|| ೧೨೨ ||

ಪ್ರಸೀದ ಮಮ ವಿಶ್ವಾತ್ಮನ್ನಿತಿ ವಾಚಂ ವದನ್ಸದಾ |
ಹೃತ್ಪುಂಡರೀಕೇ ಗೋವಿಂದಂ ಪ್ರತಿಷ್ಠಾಪ್ಯಾಮೃತಾತ್ಮಕಂ || ೧೨೩ ||

ತಪಸ್ವೀ ವಿಮಲೇ ಸೌಮ್ಯೇ ಸಾಲಗ್ರಾಮೇ ತಪೋಧನಃ |
ಉವಾಸ ಚಿರಮೇಕಾಕೀ ನಿರ್ದ್ವಂದ್ವೋ ನಿಷ್ಪರಿಗ್ರಹಃ || ೧೨೪ ||

ಸ್ವಪ್ನೇಽಪಿ ಕೇಶವಾನ್ನಾನ್ಯತ್ಪಶ್ಯಾಮೀತಿ ಮಹಾಮತಿಃ |
ನಿದ್ರಾಪಿ ತಸ್ಯ ನೈವಾಸೀತ್ ಪುರುಷಾರ್ಥವಿರೋಧಿನೀ || ೧೨೫ ||

---

೧೨೧. ಭೀಷ್ಮನು ಹೇಳಿದನು–ಪರೋಪಕಾರದಲ್ಲಿ ನಿರತನಾದ ವಿಷಯಗಳನ್ನು ತಿಳಿದಿರುವ ಆ ನಾರದನು ಹೀಗೆಂದು ಹೇಳಿ ಹೊರಟು ಹೊದನು

೧೨೨–೧೨೩. ನಾರಾಯಣನಲ್ಲಿಯೇ ಆಸಕ್ತನಾದ ಪುಂಡರೀಕನು "ಓಂ ನಮೋ ನಾರಾಯಣಾಯ" ಎಂಬ ಎಂಟು ಅಕ್ಷರದ ನಾಮುವನ್ನು ಉಚ್ಚರಿಸುತ್ತಾ ಎಲೈ ವಿಶ್ವಾತ್ಮನೇ! ನನಗೆ ಪ್ರಸನ್ನನಾಗು. ಎಂದು ಯಾವಾಗಲೂ ಹೇಳುತ್ತಾ ಹೃದಯ ಪದ್ಮದಲ್ಲಿ ಗೋವಿಂದನನ್ನೇ ಇಟ್ಟುಕೊಂಡಿದ್ದನು.

೧೨೪-೧೨೫. ಆ ತಪಸ್ವಿಯು ಈ ರೀತಿಯಾಗಿ ನಿರ್ಮಲವಾದ ಬುದ್ಧಿಯುಳ್ಳವನಾಗಿ ಸುಖದುಃಖಗಳಿಗೊಳಗಾಗದೆ ಯಾರಿಂದಲೂ ಏನನ್ನೂ ತೆಗೆದುಕೊಳ್ಳದೆ ಸಾಲಗ್ರಾಮದಲ್ಲಿ ಮನಸ್ಸನ್ನಿಟ್ಟಿದ್ದನು. ಅವನು ಸ್ವಪ್ನದಲ್ಲಿಯೂ ಕೂಡ ಕೇಶವನನ್ನು ಬಿಟ್ಟು ಮತ್ತೊಂದನ್ನು ನೋಡುವುದಿಲ್ಲವೆಂದು ನಿಶ್ಚಯಿಸಿಕೊಂಡನು. ಧರ್ಮ ಕಾಮಾರ್ಥಗಳಿಗೆ ತೊಂದರೆಯನ್ನು ಕೊಡುವ ನಿದ್ದೆಯೂ ಕೂಡ ಆತನಿಗೆ ಬರಲೇ ಇಲ್ಲ.

ತಪಸಾ ಬ್ರಹ್ಮಚರ್ಯೇಣ ಶೌಚೇನ ಚ ವಿಶೇಷತಃ ।
ಜನ್ಮಜನ್ಮಾಂತರಾರೂಢೇ ಸಂಸ್ಕಾರೇ ಚ ಯಥಾ ತಥಾ　　|| ೧೨೬ ||

ಪ್ರಸಾದಾದ್ದೇವದ್ದೇವಸ್ಯ ಸರ್ವಲೋಕಸ್ಯ ಸಾಕ್ಷಿಣಃ ।
ಅವಾಪ ಪರಮಾಂ ಸಿದ್ಧಿಂ ವೈಷ್ಣವೀಂ ವೀತಕಿಲ್ಬಿಷಃ　　|| ೧೨೭ ||

ಶಂಖಚಕ್ರಗದಾಪಾಣಿಂ ಪೀತವಾಸಸಮುಚ್ಯತಂ ।
ಶ್ಯಾಮಲಂ ಪುಂಡರೀಕಾಕ್ಷಂ ಸ ದದರ್ಶ ಸದಾಕೃತಿಂ　　|| ೧೨೮ ||

ಸಿಂಹವ್ಯಾಘ್ರಾಸ್ತಥಾ ಚಾನ್ಯೇ ಮೃಗಪ್ರಾಣಿವಿಹಿಂಸಕಾಃ ।
ವಿರೋಧಂ ಸಹಜಂ ಹಿತ್ವಾ ಸಮೇತಾಸ್ತಸ್ಯ ಸನ್ನಿಧೌ　　|| ೧೨೯ ||

ವಿಚರಂತಿ ಯಥಾಕಾಮಂ ಪ್ರಸನ್ನೇಂದ್ರಿಯವೃತ್ತಯಃ ।
ಪರಸ್ಪರಹಿತಂ ರಮ್ಯಂ ಸಂಪ್ರಾಪ್ತಂ ಪಾಂಡುನಂದನ　　|| ೧೩೦ ||

---

೧೨೬-೧೨೭. ತಪಸ್ಸು ಬ್ರಹ್ಮಚರ್ಯ, ಶೌಚಗಳನ್ನು ಹೊಂದಿ ಜನ್ಮ ಜನ್ಮಾಂತರಗಳಿಂದಲೂ ಈ ಆಚಾರವು ಬಂದಿದೆಯೋ ಎಂಬಂತೆ ಆದರಿಸುತ್ತಿದ್ದನು. ಈ ರೀತಿಯಾಗಿ ಪಾಪವನ್ನು ಕಳೆದುಕೊಂಡು ಲೋಕಸಾಕ್ಷಿಯಾದ ಆ ದೇವ ದೇವನ ಅನುಗ್ರಹದಿಂದ ವೈಷ್ಣವೀ ಸಿದ್ಧಿಯನ್ನು ಹೊಂದಿದನು.

೧೨೮. ಅಂತು ಸಿದ್ಧಿಹೊಂದಿ ಕೊನೆಗೆ ಶಂಖ, ಚಕ್ರ, ಗದಾಪಾಣಿಯಾದ ಹೊಂಬಣ್ಣದ ಬಟ್ಟೆಯನ್ನುಟ್ಟ ನೀಲಮೇಘಶ್ಯಾಮನಾದ ಆ ಸ್ವಾಮಿಯ ಮೂರ್ತಿಯನ್ನು ಕಂಡನು.

೧೨೯. ಸಿಂಹ, ಹುಲಿ ಮುಂತಾದ ದುಷ್ಟಮೃಗಗಳು ತಮಗೆ ಸ್ವಭಾವ ವಾದ ವಿರೋಧವನ್ನು ಬಿಟ್ಟು ಅವನ ಬಳಿಯಲ್ಲಿ ಸೇರಿದುವು.

೧೩೦. ಅವೆಲ್ಲವೂ ಸ್ವಚ್ಛವಾದ ಮನಸ್ಸಿನಿಂದ ಬೇಕಾದ ಕಡೆಯಲ್ಲೆಲ್ಲಾ ಸಂಚರಿಸುತ್ತಿದ್ದುವು. ಈ ರೀತಿಯಲ್ಲಿ ಎಲೈ ಧರ್ಮರಾಜನೇ! ಆ ತಪೋವನವು ಒಂದೊಂದಕ್ಕೂ ಹಿತವಾಗಿಯೂ ರಮ್ಯವಾಗಿಯೂ ಇದ್ದಿತು.

ತಥಾ ಪ್ರಸನ್ನಸಲಿಲಾ ಹ್ರದಾಶ್ಚ ಸರಿತಸ್ತಥಾ ।
ಋತವಸ್ಸುಪ್ರಸನ್ನಾಶ್ಚ ವಿಮಲೇಂದ್ರಿಯಸಂಯುತಾಃ ॥ ೧೩೧ ॥

ಮಾರುತಾಶ್ಚ ಸುಖಸ್ಪರ್ಶಾ ವೃಕ್ಷಾಃ ಪುಷ್ಪಫಲಾನ್ವಿತಾಃ ।
ಆನುಕೂಲ್ಯಂ ಯಯುಸ್ಸರ್ವೇ ಪದಾರ್ಥಾಸ್ತಸ್ಯ ಧೀಮತಃ ॥ ೧೩೨ ॥

ಪ್ರಸನ್ನಮಭವತ್ತಸ್ಮೈ ಪ್ರಸನ್ನಂ ಸಚರಾಚರಂ ।
ಪ್ರಸನ್ನೇದೇವದೇವೇಶೇ ಗೋವಿಂದೇ ಭಕ್ತವತ್ಸಲೇ ॥ ೧೩೩ ॥

ತತಃ ಕದಾಚಿದ್ಭಗವಾನ್ ಪುಂಡರೀಕಸ್ಯ ಧೀಮತಃ ।
ಆವಿರಾಸೀಜ್ಜಗನ್ನಾಥಃ ಪುಂಡರೀಕಾಯತೇಕ್ಷಣಃ ॥ ೧೩೪ ॥

ಶಂಖಚಕ್ರಗದಾಪಾಣಿಃ ಪೀತವಾಸಾಸ್ಸಮುಜ್ಜ್ವಲಃ ।
ಪುಂಡರೀಕವಿಶಾಲಾಕ್ಷಃ ಚಂದ್ರಬಿಂಬನಿಭಾನನಃ ॥ ೧೩೫ ॥

---

೧೩೧-೧೩೨. ಆ ಆಶ್ರಮದಲ್ಲಿರುವ ನೀರುಗಳು, ಮಡುಗಳೂ, ನದಿಗಳೂ ನಿರ್ಮಲವಾದುವು. ಋತುಗಳು ಪ್ರಸನ್ನವಾದುವು. ಇಂದ್ರಿಯಗಳು ಪ್ರಸನ್ನವಾದುವು. ಗಾಳಿಯು ಹಿತವಾಗಿ ಬೀಸುತ್ತಿದ್ದಿತು. ಮರಗಳು ಹೂವಿಂದ ಕೂಡಿದ್ದುವು. ಈ ರೀತಿಯಲ್ಲಿ ಆ ಋಷಿಗಳಿಗೆ ಎಲ್ಲವೂ ಅನುಕೂಲವಾದುವು.

೧೩೩. ದೇವದೇವನಾದ ಆ ಗೋವಿಂದನು ಪ್ರಸನ್ನನಾಗಲು ಆ ಪುಂಡರೀಕನಿಗೆ ಚರಾಚರ ವಸ್ತುಗಳೆಲ್ಲವೂ ಪ್ರಸನ್ನವಾಗಿ ಅವನಲ್ಲಿ ಆನುಕೂಲ್ಯವನ್ನು ಹೊಂದಿದುವು.

೧೩೪. ಅನಂತರ ಸ್ವಾಮಿಯು ಆ ವ್ರತತತ್ಪರನಾದ ಪುಂಡರೀಕನಿಗೆ ಪ್ರತ್ಯಕ್ಷನಾದನು.

೧೩೫–೧೩೬. ಆ ಸ್ವಾಮಿಯು ಶಂಖ, ಚಕ್ರ, ಗದಾಪಾಣಿಯಾಗಿ ಹೊಂಬಣ್ಣದ ಬಟ್ಟೆಯನ್ನುಟ್ಟು ಚಂದ್ರನಂತೆ ಮುಖವನ್ನು ಹೊಂದಿ ಪುಂಡರೀಕದಂತೆ ಕಣ್ಣುಗಳನ್ನು ಹೊಂದಿದ್ದನು. ಕಿರುಗೆಜ್ಜೆಗಳನ್ನು ಕಟ್ಟಿಕೊಂಡು

ಕಿಂಕಿಣೀ ಕುಂಡಲೀ ಹಾರೀ ಕೇಯೂರೀ ಕಟಿಸೂತ್ರವಾನ್ ।
ಶ್ರೀವತ್ಸಾಂಕಃ ಪೀತವಾಸಾಃ ಕೌಸ್ತುಭೇನ ವಿಭೂಷಿತಃ ॥ ೧೩೬ ॥

ವನಮಾಲೀ ಪರೀತಾಂಗಃ ಸ್ಫುರನ್ಮಕರಕುಂಡಲಃ ।
ಸ್ಫುರತಾ ಬ್ರಹ್ಮಸೂತ್ರೇಣ ಮುಕ್ತಾದಾಮ್ನಾ ವಿಲಂಬಿನಾ ॥ ೧೩೭ ॥

ವಿರಾಜಮಾನೋ ದೇವೇಶಃ ಚಾಮರವ್ಯಜನಾದಿಭಿಃ ।
ದೇವೈಸ್ಸಿದ್ಧೈಸ್ಸದೇವೇಂದ್ರೈರ್ಗಂಧರ್ವೈರ್ಮುನಿಭಿರ್ವರೈಃ ॥ ೧೩೮ ॥

ಯಕ್ಷೈರ್ನಾಗವರೈಶ್ಚೈವ ಸೇವ್ಯಮಾನೋಪ್ಸರೋಗಣೈಃ ।
ತಂ ದೃಷ್ಟ್ವಾ ದೇವದೇವೇಶಂ ಪುಂಡರೀಕೋನಘಸ್ಸ್ವಯಂ ॥ ೧೩೯ ॥

ತತೋ ಬುದ್ಧ್ವಾ ಮಹಾತ್ಮಾನಂ ತುಷ್ಟಾವ ಚ ಜನಾರ್ದನಂ ।
ಪ್ರಾಂಜಲಿಃ ಪ್ರಣತೋ ಭೂತ್ವಾ ಪ್ರಹೃಷ್ಟೇನಾಂತರಾತ್ಮನಾ ॥ ೧೪೦ ॥

॥ ಪುಂಡರೀಕ ಉವಾಚ ॥

ನಮೋಸ್ತು ವಿಷ್ಣವೇ ತುಭ್ಯಂ ಸರ್ವಲೋಕೈಕಚಕ್ಷುಷೇ ।
ನಿರಂಜನಾಯ ನಿತ್ಯಾಯ ನಿರ್ಗುಣಾಯ ಮಹಾತ್ಮನೇ ॥ ೧೪೧ ॥

---

ಕಿವಿಗೆ ಕರ್ಣಾಭರಣಗಳನ್ನು ಹಾಕಿಕೊಂಡು ಭುಜಕೀರ್ತಿ ಉಡಿದಾರಗಳನ್ನೂ ಹಾಕಿಕೊಂಡು ಶ್ರೀವತ್ಸವನ್ನು ಹೊಂದಿ ಕೌಸ್ತುಭವೆಂಬ ರತ್ನವನ್ನೂ ಹೊಂದಿದ್ದನು.

೧೩೭. ವನಮಾಲೆಯೆಂಬ ಹಾರವನ್ನು ಹಾಕಿಕೊಂಡು ಮುತ್ತಿನ ಸರವನ್ನು ಹಾಕಿಕೊಂಡು ಚಾಮರ ಬೀಸಣಿಗೆಗಳಿಂದ ಬೀಸಿಸಿಕೊಳ್ಳುತ್ತಾ ಪ್ರಕಾಶಿಸುತ್ತಿದ್ದನು.

೧೩೮. ದೇವತೆಗಳು, ಸಿದ್ಧರು, ಗಂಧರ್ವರು, ಮುನಿಗಳು, ಯಕ್ಷರು, ನಾಗರು, ಅಪ್ಸರೋಗಣ ಇವುಗಳಿಂದಲೂ ಸೇವಿಸಲ್ಪಡುತ್ತಿದ್ದನು.

೧೩೯–೧೪೦. ಪುಂಡರೀಕನು ಆ ಸ್ವಾಮಿಯನ್ನು ನೋಡಿ ಆತನು ಸ್ವಾಮಿಯೆಂದು ತಿಳಿದು ಕೈಮುಗಿದುಕೊಂಡು ಸಂತೋಷದಿಂದ ಸ್ತೋತ್ರವನ್ನು ಮಾಡಿದನು.

೧೪೧-೧೪೨. ಪುಂಡರೀಕನು ಹೇಳಿದನು—ಎಲ್ಲಾ ಲೋಕಗಳಿಗೂ ಕಣ್ಣಾಗಿರುವ ವಿಷ್ಣುವೇ ! ನಿನಗೆ ನಮಸ್ಕಾರವು. ನಿರಂಜನನೂ, ಗುಣಶೂನ್ಯನೂ,

ತ್ವಮೀಶಸ್ಸರ್ವಭೂತಾನಾಂ ತಥೈವ ಚ ನಿರೀಶ್ವರಃ ।
ತಥಾ ಭಯಾರ್ತಿನಾಶಾಯ ಗೋವಿಂದ ಗರುಡಧ್ವಜ ॥ ೧೪೨ ॥

ಅನುಗ್ರಹೇಣ ಭೂತಾನಾಮನೇಕಾಧಾರಧಾರಿಣೇ ।
ತ್ವಯಿ ಸರ್ವಮಿದಂ ಪ್ರಾಹುಸ್ತ್ವನ್ಮಯಂ ಚೈವ ಕೇವಲಂ ॥ ೧೪೩ ॥

ತ್ವಮಸ್ಮಾಜ್ಜಗತೋ ಭಿನ್ನೋ ನಿರ್ಮಿತಂ ಚ ಜಗತ್ತ್ವಯಾ ।
ನಮೋಽಸ್ತು ನಾಭಿಪ್ರಸವನಲಿನಾಯ ನಮೋ ನಮಃ ॥ ೧೪೪ ॥

ನಮಸ್ಸಮಸ್ತವೇದಾಂತವಿಶ್ರುತಾತ್ಮವಿಭೂತಯೇ ।
ತ್ವಮೇವ ಸರ್ವದೇವೇಶಃ ಕಾರಣಂ ಕೈಟಭಾರ್ದನ ॥ ೧೪೫ ॥

ಪ್ರಸೀದ ಹೃದಯಾವಾಸ ಶಂಖಚಕ್ರಗದಾಧರ ।
ನಮಸ್ಸಮಸ್ತಭೂತಾನಾಮಾದಿಭೂತಾಯ ಭೂಭೃತೇ ॥ ೧೪೬ ॥

---

ನಿತ್ಯನೂ ಆದ ನಿನಗೆ ನಮಸ್ಕಾರವು. ನೀನೇ ಎಲ್ಲಾ ಪ್ರಾಣಿಗಳಿಗೂ ಒಡೆಯನು. ನಿನಗೆ ಒಡೆಯರು ಯಾರೂ ಇಲ್ಲ. ಸಂಸಾರದ ತೊಂದರೆಯನ್ನು ತಪ್ಪಿಸುವ ನಿನಗೆ ನಮಸ್ಕಾರವು.

೧೪೩. ಪ್ರಾಣಿಗಳಿಗೆ ಒಳ್ಳೆಯದನ್ನು ಮಾಡಬೇಕೆಂದು ಅನೇಕವಾದ ಆಧಾರಗಳನ್ನು ಹೊಂದಿದ್ದೀಯೆ. ನಿನ್ನಲ್ಲಿಯೇ ಎಲ್ಲವೂ ಇರುವುದು. ಈ ಪ್ರಪಂಚವೇ ನಿನ್ನ ರೂಪವಾದುದು.

೧೪೪. ಎಲೈ ವಿಷ್ಣುವೇ ! ನೀನು ಈ ಜಗತ್ತಿಗಿಂತಲೂ ಬೇರೆಯಾದವನು. ಆದರೆ ನೀನೇ ಈ ಜಗತ್ತನ್ನು ಸೃಷ್ಟಿಸಿದವನು. ಹೊಕ್ಕಳಿನಲ್ಲಿ ಕಮಲವುಳ್ಳ ನಿನಗೆ ನಮಸ್ಕಾರವು.

೧೪೫. ಎಲ್ಲಾ ವೇದಾಂತಗಳಲ್ಲಿಯೂ ನಿನ್ನ ಮಹಿಮೆಯೇ ಹೇಳಲ್ಪಟ್ಟಿದೆ. ಅಂತಹ ನಿನಗೆ ನಮಸ್ಕಾರವು. ನೀನೇ ಎಲ್ಲಾ ವೇದಗಳಿಗೂ ಒಡೆಯನು. ಎಲ್ಲಕ್ಕೂ ನೀನೇ ಕಾರಣನಾಗಿದ್ದೀಯೆ.

೧೪೬—೧೪೭. ಹೃದಯದಲ್ಲಿಯೇ ಯಾವಾಗಲೂ ಇರುವ ಶಂಖ, ಚಕ್ರ, ಗದೆಗಳುಳ್ಳವನು. ಪ್ರಸನ್ನನಾಗು. ಸಮಸ್ತ ಪ್ರಾಣಿಗಳಿಗೂ ಮೊದಲನೆಯವನೇ ! ಬೆಟ್ಟವನ್ನು ಧರಿಸಿರುವವನೇ ! ಬಹುರೂಪಗಳನ್ನು ಹೊಂದಿದವನೇ ! ಶಕ್ತನೂ,

ಅನೇಕರೂಪರೂಪಾಯ ವಿಷ್ಣವೇ ಪ್ರಭವಿಷ್ಣವೇ ।
ಯಸ್ಯ ಬ್ರಹ್ಮಾದಯೋ ದೇವಾ ನ ವಿಂದಂತಿ ಸುರೇಶ್ವರಾಃ ॥ ೧೪೭ ॥

ಮಹಿಮಾನಂ ತಪೋನೋಯಂ ತಸ್ಮಾತ್ತುಭ್ಯಂ ನಮಾಮ್ಯಹಂ ।
ವಾಚಾಮಗೋಚರೋ ಯಸ್ಯ ಮಹಿಮಾ ತವ ನಾಪ್ಯತೇ ॥ ೧೪೮ ॥

ಜಾತ್ಯಾದಿಭಿರಸಂಸ್ಪೃಷ್ಟಃ ಸದಾ ಧ್ಯೇಯೋಸಿ ತತ್ವತಃ ।
ತಥಾ ವಿಭೇದ ರೂಪೇಣ ಭಕ್ತಾನಾಮನುಕಂಪಯಾ ।
ಮತ್ಸ್ಯಕೂರ್ಮಾದಿರೂಪೇಣ ದೃಶ್ಯಸೇ ಪುರುಷೋತ್ತಮ ॥ ೧೪೯ ॥

॥ ಭೀಷ್ಮ ಉವಾಚ ॥

ಪುಂಡರೀಕೋ ಜಗನ್ನಾಥಂ ಸ್ತುತ್ವೈವಂ ಪುರುಷೋತ್ತಮಂ ।
ತಮೇವಾಲೋಕಯದ್ವೀರ ಚಿರಪ್ರಾರ್ಥಿತದರ್ಶನಂ ॥ ೧೫೦ ॥

ತಮಾಹಭಗವಾನ್ವಿಷ್ಣುಃ ಪದ್ಮನಾಭಸ್ತ್ರಿವಿಕ್ರಮಃ ।
ಪುಂಡರೀಕಂ ಮಹಾಭಾಗಂ ತಥಾ ಗಂಭೀರಯಾ ಗಿರಾ ॥ ೧೫೧ ॥

---

ವ್ಯಾಪಕನೂ ಆದ ವಿಷ್ಣುವೇ ! ನಿನಗೆ ನಮಸ್ಕಾರವು. ನಿನ್ನ ಮಹಿಮೆಯನ್ನು ಬ್ರಹ್ಮನೇ ಮುಂತಾದ ದೇವತೆಗಳೂ ಕೂಡ ತಿಳಿಯರು. ಇಂತಹ ನಿನಗ ನಮಸ್ಕಾರವು.

೧೪೮. ಬಹುವಾದ ಮಹಿಮೆಯುಳ್ಳವನು. ತಪಸ್ವಿಯು. ಅಳೆಯಲು ಅಸಾಧ್ಯನು. ಅಂತಹ ನಿನಗೆ ನಮಸ್ಕಾರವು. ನಿನ್ನ ಮಹಿಮೆಯನ್ನು ಹೇಳಲು ಸಾಧ್ಯವೇ ಇಲ್ಲ. ಅದರ ಕೊನೆಯು ಸಿಕ್ಕುವುದೂ ಇಲ್ಲ.

೧೪೯. ನಿನಗೆ ಜಾತಿ ಮೊದಲಾದ ಕಟ್ಟುಗಳಿಲ್ಲ. ನಿನ್ನನ್ನು ಸದಾ ಕಾಲ ದಲ್ಲಿಯೂ ಧ್ಯಾನ ಮಾಡುತ್ತಾರೆ. ನೀನೂ ಭಕ್ತರಲ್ಲಿರುವ ದಯೆಯಿಂದ ನಾನಾ ರೂಪವನ್ನು ಹೊಂದಿದ್ದೀಯೆ. ಆದ್ದರಿಂದಲೇ ಮತ್ಸ್ಯಕೂರ್ಮಾದಿ ಅವತಾರ ಗಳನ್ನು ಮಾಡಿದ್ದೀಯೆ.

೧೫೦. ಭೀಷ್ಮನು ಹೇಳಿದನು-ಪುಂಡರೀಕನು ಆ ಸ್ವಾಮಿಯನ್ನು ಹೀಗೆ ಸ್ತುತಿಸಲು ಆ ಸ್ವಾಮಿಯು ಪ್ರತ್ಯಕ್ಷನಾದನು. ಆಗ ಅವನ ದರ್ಶನ ಮಾಡಿದನು.

೧೫೧. ಪದ್ಮನಾಭನೂ, ತ್ರಿವಿಕ್ರಮನೂ ಆದ ವಿಷ್ಣುವು ಆ ಪುಂಡರೀಕ ನನ್ನು ಕುರಿತು ಗಂಭೀರವಾಣಿಯಿಂದ ಇಂತೆಂದನು.

|| ಶ್ರೀ ಭಗವಾನುವಾಚ ||

ಪ್ರೀತೋಽಸ್ಮಿ ವತ್ಸ ಭದ್ರಂ ತೇ ಪುಂಡರೀಕ ಮಹಾಮತೇ ।
ವರಂ ವೃಣೀಷ್ವ ದಾಸ್ಯಾಮಿ ಯತ್ತೇ ಮನಸಿ ವರ್ತತೇ || ೧೫೨ ||

|| ಭೀಷ್ಮ ಉವಾಚ ||

ಏತಚ್ಛ್ರುತ್ವಾ ತು ವಚನಂ ದೇವದೇವಸ್ಯ ಭಾಷಿತಂ ।
ಏವಂ ವಿಜ್ಞಾಪಯಾಮಾಸ ಪುಂಡರೀಕೋ ಮಹಾಮತಿಃ || ೧೫೩ ||

|| ಪುಂಡರೀಕ ಉವಾಚ ||

ಕ್ವಾಹಮತ್ಯಂತದುರ್ಬುದ್ಧಿಃ ಕ್ವ ಭವಂತೋ ಹಿತೈಷಿಣಃ ।
ಯದ್ಧಿತಂ ಮಮ ದೇವೇಶ ತದಾಜ್ಞಾಪಯ ಮಾಧವ || ೧೫೪ ||

||ಭೀಷ್ಮ ಉವಾಚ ||

ಏವಮುಕ್ತಸ್ಸಭಗವಾನ್ಸುಪ್ರೀತಶ್ಚ ತತೋಽಬ್ರವೀತ್ ।
ಪುಂಡರೀಕಂ ಮಹಾಭಾಗಂ ಕೃತಾಂಜಲಿಪುಟಸ್ಥಿತಂ || ೧೫೫ ||

---

೧೫೨. ಶ್ರೀ ಭಗವಂತನು ಹೇಳಿದನು–ಎಲೈ ವತ್ಸನೇ ! ನಿನ್ನಲ್ಲಿ ಪ್ರೀತಿಗೊಂಡಿದ್ದೇನೆ. ನಿನ್ನ ಮನಸ್ಸಿನಲ್ಲಿರುವುದನ್ನು ಕೇಳಿಕೋ. ಅಂತಹ ವರಗಳನ್ನೆಲ್ಲಾ ಕೊಡುತ್ತೇನೆ.

೧೫೩. ಭೀಷ್ಮನು ಹೇಳಿದನು–ಈ ರೀತಿ ಸ್ವಾಮಿಯು ಹೇಳಿದುದನ್ನು ಕೇಳಿ ಪುಂಡರೀಕನು ಇಂತೆಂದನು.

೧೫೪. ಪುಂಡರೀಕನು ಹೇಳಿದನು-ದುರ್ಬುದ್ಧಿಯುಳ್ಳ ನಾನೆಲ್ಲಿ ? ಹಿತೈಷಿಯಾದ ನೀನೆಲ್ಲಿ ? ನನಗೆ ಹಿತವಾದುದನ್ನು ಆಜ್ಞಾಪಿಸು.

೧೫೫. ಭೀಷ್ಮನು ಹೇಳಿದನು-ಪುಂಡರೀಕನು ಕೈಮುಗಿದುಕೊಂಡು ಹೀಗೆನ್ನಲು ಆ ಸ್ವಾಮಿಯು ಸುಪ್ರೀತನಾಗಿ ಇಂತೆಂದನು.

॥ ಭಗವಾನುವಾಚ ॥

ಆಗಚ್ಛ ಕುಶಲಂ ತೇಸ್ತು ಮಯ್ಯೈವ ಸಹ ಸುವ್ರತ ।
ಉಪಕಾರೀ ಚ ನಿತ್ಯಾತ್ಮಾ ಮಯಾ ತ್ವಂ ಸರ್ವದಾ ವಸ ॥ ೧೫೬ ॥

॥ ಭೀಷ್ಮ ಉವಾಚ ॥

ಏವಮುಕ್ತವತಿ ಪ್ರೀತ್ಯಾ ಶ್ರೀಧರೇ ಭಕ್ತವತ್ಸಲೇ ।
ದೇವದುಂದುಭಯೋ ನೇದುಃ ಪುಷ್ಪವರ್ಷಂ ಪಪಾತ ಹ ॥ ೧೫೭ ॥

ಬ್ರಹ್ಮಾದಯಸ್ತಥಾ ದೇವಾಃ ಸಾಧು ಸಾಧ್ವಿತಿ ಚಾಬ್ರುವನ್ ।
ಜಗುಸ್ಸಿದ್ಧಾಶ್ಚ ಗಂಧರ್ವಾಃ ಕಿನ್ನರಾಶ್ಚ ವಿಶೇಷತಃ ॥ ೧೫೮ ॥

ತತ್ರೈವ ತಮುಪಾದಾಯ ದೇವದೇವೋ ಜಗತ್ಪತಿಃ ।
ಜಗಾಮ ಗರುಡಾರೂಢಃ ಸರ್ವಲೋಕನಮಸ್ಕೃತಃ ॥ ೧೫೯ ॥

ತಸ್ಮಾತ್ತ್ವಮಪಿ ರಾಜೇಂದ್ರ ವಿಷ್ಣು ಭಕ್ತಿಸಮನ್ವಿತಃ ।
ತಚ್ಚಿತ್ತಸ್ತದ್ಗತಪ್ರಾಣಸ್ತದ್ಭಕ್ತಾನಾಂ ಹಿತೇ ರತಃ ॥ ೧೬೦ ॥

---

೧೫೬. ಭಗವಂತನು ಹೇಳಿದನು-ಎಲೈ ಪುಂಡರೀಕನೇ ! ನಿನಗೆ ಮಂಗಳವಾಗಲಿ. ನನ್ನೊಡನೆಯೇ ಬಾ. ಉಪಕಾರಿಯೂ ನಿತ್ಯನೂ ಆಗಿ ನೀನು ನನ್ನೊಡನೆಯೇ ಯಾವಾಗಲೂ ಇರು.

೧೫೭. ಭೀಷ್ಮನು ಹೇಳಿದನು-ಶ್ರೀಧರನು ಹೀಗೆ ಹೇಳುತ್ತಿರಲು ದೇವದುಂದುಭಿಗಳು ಸದ್ದುಮಾಡಿದುವು. ಪುಷ್ಪವೃಷ್ಟಿಯಾಯಿತು.

೧೫೮. ಬ್ರಹ್ಮನೇ ಮುಂತಾದ ದೇವತೆಗಳು ಇದನ್ನು ನೋಡಿ ಸಾಧು, ಸಾಧು ಎಂದು ಹೊಗಳಿದರು. ಸಿದ್ಧರು, ಗಂಧರ್ವರು, ಕಿನ್ನರರೂ ಕೂಡ ಹಾಡಿದರು.

೧೫೯. ಆಗ ವಿಷ್ಣುವು ಆ ಪುಂಡರೀಕನನ್ನು ಕರೆದುಕೊಂಡು ಗರುಡನ ಮೇಲೆ ಕುಳಿತುಕೊಂಡು ಎಲ್ಲರೂ ನಮಸ್ಕರಿಸುತ್ತಿರಲು ಹೊರಟುಹೋದನು.

೧೬೦. ಆದ್ದರಿಂದ ಎಲೈ ರಾಜನೇ ! ನೀನೂ ಕೂಡ ವಿಷ್ಣುವಿನಲ್ಲಿ ಭಕ್ತಿಯುಳ್ಳವನಾಗಿ ಅವನಲ್ಲಿಯೇ ಪ್ರಾಣಗಳನ್ನಿಟ್ಟುಕೊಂಡು ಪೂಜಿಸುತ್ತ ಆ ವಿಷ್ಣುಭಕ್ತರಲ್ಲಿ ಪ್ರೀತಿಯನ್ನು ಮಾಡು.

ಅರ್ಚಯಿತ್ವಾ ಯಥಾಯೋಗ್ಯಂ ಭಜಸ್ವ ಪುರುಷೋತ್ತಮಂ ।
ಶೃಣುಶ್ವ ತತ್ಕಥಾಂ ಪುಣ್ಯಾಂ ಸರ್ವಪಾಪಪ್ರಣಾಶಿನೀಂ ॥ ೧೬೧ ॥

ಯೇನೋಪಾಯೇನ ರಾಜೇಂದ್ರ ವಿಷ್ಣುರ್ಭಕ್ತ್ಯಾ ಸಮರ್ಚಿತಃ ।
ಪ್ರೀತೋ ಭವತಿ ವಿಶ್ವಾತ್ಮಾ ತತ್ಕುರುಷ್ವ ಸುವಿಸ್ತರಂ ॥ ೧೬೨ ॥

ಅಶ್ವಮೇಧಶತೈರಿಷ್ಟ್ವಾ ವಾಜಪೇಯಶತೈರಪಿ ।
ಪ್ರಾಪ್ನುವಂತಿ ನರಾ ನೈವ ನಾರಾಯಣಪರಾಙ್ಮುಖಾಃ ॥ ೧೬೩ ॥

ಸಕೃದುಚ್ಚರಿತಂ ಯೇನ ಹರಿರಿತ್ಯಕ್ಷರದ್ವಯಂ ।
ಬದ್ಧಃ ಪರಿಕರಸ್ತೇನ ಮೋಕ್ಷಾಯ ಗಮನಂ ಪ್ರತಿ ॥ ೧೬೪ ॥

ಲಾಭಸ್ತೇಷಾಂ ಜಯಸ್ತೇಷಾಂ ಕುತಸ್ತೇಷಾಂ ಪರಾಭವಃ ।
ಯೇಷಾಮಿಂದೀವರಶ್ಯಾಮೋ ಹೃದಯಸ್ಥೋ ಜನಾರ್ದನಃ ॥ ೧೬೫ ॥

---

೧೬೧. ಆ ವಿಷ್ಣುಭಕ್ತರನ್ನು ಪೂಜಿಸಿ ಹರಿಸೇವೆಯನ್ನುಮಾಡು. ಅವನ ಕಥೆಯನ್ನು ಕೇಳು. ಆ ಕಥೆಯು ಪಾಪಗಳೆಲ್ಲವನ್ನೂ ನಾಶಮಾಡುತ್ತದೆ.

೧೬೨. ಎಲೈ ರಾಜನೇ ! ಯಾವ ರೀತಿಯಾದ ಭಕ್ತಿಯಿಂದ ಪೂಜಿಸಿದರೆ ವಿಷ್ಣುವು ಪ್ರೀತನಾಗುತ್ತನೆಯೋ ಆ ರೀತಿಯಲ್ಲಿ ಪೂಜೆಯನ್ನು ಮಾಡು.

೧೬೩. ನಾರಾಯಣನಲ್ಲಿ ಭಕ್ತಿಯಿಲ್ಲದವರು ನೂರು ಅಶ್ವಮೇಧಯಾಗಗಳನ್ನು ಆಗಲಿ, ನೂರು ವಾಜಪೇಯಯಾಗಗಳನ್ನು ಆಗಲಿ, ಮಾಡಿದರೂ ಸದ್ಗತಿಯನ್ನು ಹೊಂದುವುದಿಲ್ಲ.

೧೬೪. ಯಾವನು ಹರಿಯೆಂಬ ಎರಡಕ್ಷರವನ್ನು ಉಚ್ಚರಿಸುತ್ತಾನೆಯೋ ಅವನು ಮೋಕ್ಷಕ್ಕೆ ಹೋಗಲು ಸೊಂಟಕ್ಕೆ ಕಟ್ಟಿಕೊಂಡು ಸಿದ್ಧನಾಗಿರುವನೆಂದು ತಿಳಿದುಕೋ.

೧೬೫. ಇಂದೀವರದಂತೆ ಮನೋಹರನಾದ ಜನಾರ್ದನನು ಯಾರ ಹೃದಯದಲ್ಲಿರುವನೋ ಅವರಿಗೆ ಲಾಭವೂ ಜಯವೂ ಉಂಟಾಗುತ್ತವೆ. ಅಪಜಯವೆಂಬುದು ಇಲ್ಲವೇ ಇಲ್ಲ.

ಯ ಇದಂ ಶೃಣುಯಾನ್ನಿತ್ಯಂ ಪಠೇದ್ವಾಪಿ ಸಮಾಹಿತಃ ।
ಸರ್ವಪಾಪವಿನಿರ್ಮುಕ್ತೋ ವಿಷ್ಣುಲೋಕಂ ಸ ಗಚ್ಛತಿ ॥ ೧೬೬ ॥

॥ ಈಶ್ವರ ಉವಾಚ ॥

ಏತದ್ವೈ ನಾಮಮಾಹಾತ್ಮ್ಯಂ ಶ್ರುತ್ವಾ ವೈ ನಗನಂದಿನಿ ।
ಧರ್ಮಾರ್ಥಕಾಮಮೋಕ್ಷಾಸ್ತೇ ಭವಂತಿ ಚ ನ ಸಂಶಯಃ ॥ ೧೬೭ ॥

ಶುಕ್ಲೇ ಕುಲೇಽವತೀರ್ಣೋ ಯೋ ಬ್ರಾಹ್ಮಣೋ ದೇವತತ್ಪರಃ ।
ವೈಷ್ಣವೋ ವಿಷ್ಣುರೂಪೋಽಸೌ ನಾನ್ಯೋ ವಿಪ್ರಸ್ತು ಕರ್ಹಿಚಿತ್ ॥ ೧೬೮ ॥

ಮುಖೇ ನಾಮೋಚ್ಚರನ್ವಿಷ್ಣೋಃ ಹೃದಯೆ ಧ್ಯಾನತತ್ಪರಃ ।
ಶಂಖಚಕ್ರಧರೋ ವಿದ್ವಾನ್ಮಾಲಾಂ ತುಲಸಿಜಾಂ ದಧತ್ ॥ ೧೬೯ ॥

ಜೀವನ್ಮುಕ್ತಸ್ಸ ವಿಜ್ಞೇಯೋ ಭುಕ್ತ್ವಾ ಭೋಗಾನ್ ಹ್ಯನೇಕಶಃ ।
ಏಕವಿಂಶತ್ಕುಲೈಸ್ಸಾರ್ಧಂ ವಿಷ್ಣುಲೋಕೇ ಸ ಮೋದತೇ ॥ ೧೭೦ ॥

---

೧೬೬. ಇದನ್ನು ಕೇಳಿದವನೂ, ಓದಿದವನೂ, ಪಾಪವನ್ನು ಕಳೆದು ಕೊಂಡು ವಿಷ್ಣುಲೋಕವನ್ನು ಹೊಂದುತ್ತಾರೆ.

೧೬೭. ಈಶ್ವರನು ಹೇಳಿದನು–ಎಲೈ ಪಾರ್ವತಿಯೇ ಈ ನಾಮಮಹಿಮೆ ಯನ್ನು ಕೇಳಿದರೆ ಅವನಿಗೆ ಧರ್ಮಾರ್ಥಮೋಕ್ಷಗಳು ಉಂಟಾಗುವುದರಲ್ಲಿ ಸಂಶಯವಿಲ್ಲ.

೧೬೮. ಒಳ್ಳೆಯಕುಲದಲ್ಲಿ ಹುಟ್ಟಿ ದೇವರಲ್ಲಿ ಆಸಕ್ತನಾಗಿರುವ, ಅದರ ಲ್ಲಿಯೂ ವೈಷ್ಣವನಾಗಿದ್ದರೆ ಅವನು ಬ್ರಾಹ್ಮಣರೂಪವಾದ ವಿಷ್ಣುವೆಂದೇ ತಿಳಿ ಬೇರೆಯವನಲ್ಲ.

೧೬೯–೧೭೦. ಯಾವನು ಹೃದಯದಲ್ಲಿ ವಿಷ್ಣುವನ್ನು ಧ್ಯಾನಿಸುತ್ತ ಬಾಯಲ್ಲಿ ಅವನ ಹೆಸರನ್ನು ಉಚ್ಚರಿಸುತ್ತಾ ಶಂಖ, ಚಕ್ರಗಳನ್ನೂ ತುಳಸಿಯ ಮಾಲೆಯನ್ನೂ ಧರಿಸಿರುತ್ತಾನೆಯೋ ಅವನು ಜೀವಿಸಿದ್ದರೂ ಮುಕ್ತಿಯನ್ನು ಹೊಂದಿದವನೆಂದು ತಿಳಿ. ಈ ಲೋಕದಲ್ಲಿ ಅನೇಕ ಭೋಗಗಳನ್ನು ಅನುಭವಿಸಿ ಕೊನೆಗೆ ಸತ್ತನಂತರ ಇಪ್ಪತ್ತೊಂದು ತಲೆಗಳೊಡನೆ ವೈಕುಂಠದಲ್ಲಿ ಸುಖಿಸುತ್ತಾನೆ.

ಪುಂಡರೀಕೋ ಯಥಾ ಭಕ್ತ್ಯಾ ಮುಕ್ತೋ ಹ್ಯತ್ರ ನ ಸಂಶಯಃ ।
ಭಕ್ತಿಭಾವೇನ ಗೋವಿಂದಸ್ತುಷ್ಟಿಂ ಪ್ರಾಪ್ನೋತಿ ಶಾಶ್ವತೀಂ ॥ ೧೭೧ ॥

ಕಲೌ ವೈ ಹರಿಗೀತಂ ತು ಸ್ವಗೃಹೇ ವಾ ವಿಶೇಷತಃ ।
ಸಾಮಗಾನಸಮಂ ಪ್ರೋಕ್ತಂ ದೇವಾರ್ಚನಸಮಾಧಿಷು ॥ ೧೭೨ ॥

**ಇತಿ ಶ್ರೀ ಮಹಾಪುರಾಣೇ ಪಾದ್ಮೇ ಉತ್ತರಖಂಡೇ ಪಾರ್ವತೀ ಮಹಾದೇವ ಸಂವಾದೇ ವಿಷ್ಣು ಮಹಿಮ ಕಥನಂ ನಾಮ ಏಕಾಶೀತಿತಮೋಽಧ್ಯಾಯಸ್ಸಮಾಪ್ತಃ**

---

೧೭೧. ಅದೇರೀತಿಯಲ್ಲಿದ್ದು ಪುಂಡರೀಕನು ಮುಕ್ತನಾದನು. ಸಂಶಯವಿಲ್ಲ. ಭಕ್ತಿಯಿಂದ ಗೋವಿಂದನು ಸಂತೋಷಗೊಳ್ಳುತ್ತಾನೆಂಬುದರಲ್ಲಿ ಸಂದೇಹವೇ ಇರುವುದಿಲ್ಲ.

೧೭೨. ಕಲಿಯುಗದಲ್ಲಿ ಹರಿಯ ಗಾನವು ವಿಶೇಷವಾದುದು. ಆದರಲ್ಲಿಯೂ ತಮ್ಮ ಮನೆಯಲ್ಲಿ ಆ ಹರಿಗಾನವನ್ನು ಮಾಡಿದರೆ ಬಹು ಉತ್ತಮವು. ಹೇವತಾರ್ಚನೆ ಮಾಡುವಾಗ ಆ ಹರಿನಾಮಸ್ಮರಣೆಯನ್ನು ಮಾಡಿದರೆ ಸಾಮವೇದವನ್ನು ಗಾನ ಮಾಡಿದಂತೆ ಆಗುತ್ತದೆ.

ಇಂತು ಶ್ರೀ ಪದ್ಮಮಹಾಪುರಾಣದ ಉತ್ತರಖಂಡದ ಪಾರ್ವತೀ ಮಹಾದೇವರ ಸಂವಾದದಲ್ಲಿ ವಿಷ್ಣುಮಹಿಮೆಯ ಕಥನ ಎಂಬ ಎಂಭತ್ತೊಂದನೆಯ ಅಧ್ಯಾಯವು ಮುಗಿದುದು.



॥ ಶ್ರೀಃ ॥

-x-

# ಅಥ ಶ್ರೀ ಮಹಾಪುರಾಣೇ ಪಾದ್ಮೇ ಉತ್ತರಖಂಡೇ

## ॥ ದ್ವ್ಯಶೀತಿತಮೋಽಧ್ಯಾಯಃ ॥



॥ ಪಾರ್ವತ್ಯು ವಾಚ ॥

ಶ್ರೀಗಂಗಾಯಾಶ್ಚ ಮಾಹಾತ್ಮ್ಯಂ ಪುನರ್ವದ ಮಹಾಮತೇ ।
ಯಚ್ಛ್ರುತ್ವಾ ಮುನಯಸ್ಸರ್ವೇ ವೀತರಾಗಾಃ ಪುನಃ ಪುನಃ ॥ ೧ ॥

ಮಾಹಾತ್ಮ್ಯಂ ಕೀದೃಶಂ ಚೈವ ತಸ್ಯಾಸ್ಸರ್ವೇಶ್ವರ ಪ್ರಭೋ ।
ಉತ್ಪತ್ತಿಶ್ಚ ಶ್ರುತಾ ಪೂರ್ವಂ ಮಹಿಮಾ ನ ಶ್ರುತೋ ಮಯಾ ।
ತ್ವಮಾದ್ಯಸ್ಸರ್ವಭೂತಾನಾಂ ತ್ವಂ ದೇವಶ್ಚ ಸನಾತನಃ ॥ ೨ ॥

---

## ಎಂಭತ್ತೆರಡನೆಯ ಅಧ್ಯಾಯವು



೧. ಪಾರ್ವತಿಯು ಹೇಳಿದಳು–ಎಲೈ ಮಹಾದೇವನೇ! ಶ್ರೀ ಗಂಗೆಯ ಮಹಿಮೆಯನ್ನು ಹೇಳು. ಅದನ್ನು ಕೇಳಿದುದರಿಂದ ಋಷಿಗಳು ಮತ್ತೆ ಮತ್ತೆ ರಾಗಾದಿಗಳನ್ನು ಬಿಡುತ್ತಾರೆ.

೨. ಎಲೈ ಸರ್ವೇಶ್ವರನೇ! ಆ ಗಂಗೆಯ ಮಹಿಮೆಯೆಂಥಾದ್ದು? ಹಿಂದೆ ಅದು ಹುಟ್ಟಿದ ವಿಷಯವನ್ನು ಕೇಳಿದ್ದೇವೆ. ಅದರ ಮಹಿಮೆಯನ್ನು ಕೇಳಲಿಲ್ಲವು. ನೀನು ಎಲ್ಲಾ ಪ್ರಾಣಿಗಳಿಗೂ ಮೊದಲನೆಯವನು ದೇವತೆಗಳಿಗೂ ಮೊದಲನೆಯವನು. ಮತ್ತು ಬಹು ಹಳಬನು.

॥ ಶ್ರೀಮಹಾದೇವ ಉವಾಚ ॥

ಬೃಹಸ್ಪತಿಸಮಂ ಬುದ್ಧ್ಯಾ ಶಕ್ರತುಲ್ಯಪರಾಕ್ರಮಂ ।
ಶರತಲ್ಪಗತಂ ಭೀಷ್ಮಮೃಷಯೋ ದ್ರಷ್ಟುಮಾಯಯುಃ ॥ ೩ ॥

ಅತ್ರಿರ್ವಸಿಷ್ಠಶ್ಚ ಭೃಗುಃ ಪುಲಸ್ತ್ಯಃ ಪುಲಹಃ ಕ್ರತುಃ ।
ಅಂಗಿರಾ ಗೌತಮೋಗಸ್ತ್ಯಃ ಸುಮತಿಸ್ತ್ವಾಯುರಾತ್ಮವಾನ್ ॥ ೪ ॥

ವಿಶ್ವಾಮಿತ್ರಃ ಸ್ಥೂಲಶಿರಾಃ ಸರ್ವತಃ ಪ್ರಮಥಾಧಿಪಃ ।
ರೈಭ್ಯೋ ಬೃಹಸ್ಪತಿರ್ವ್ಯಾಸೋ ಪಾವನಃ ಕಶ್ಯಪೋ ಧ್ರುವಃ ॥ ೫ ॥

ದೂರ್ವಾಸಾ ಜಮದಗ್ನಿಶ್ಚ ಮಾರ್ತಂಡೇಯೋಽಥ ಗಾಲವಃ ।
ಉಶನಾಥ ಭರಧ್ವಾಜಃ ಕ್ರತೋ ಹ್ಯಾಸ್ತೀಕ ಏವ ಚ ॥ ೬ ॥

ಸ್ಥೂಲಾಕ್ಷಸ್ಸ ಚ ಲೋಕಾಕ್ಷಃ ಕಣ್ವೋ ಮೇಧಾತಿಥಿಃ ಕುಣಃ ।
ನಾರದಃ ಪರ್ವತಶ್ಚೈವ ಸುಧನ್ವಾ ಚ್ಯವನೋ ದ್ವಿಜಃ ॥ ೭ ॥

ಮತಿರ್ಭೂರ್ಭುವನೋ ಧೌಮ್ಯಃ ಶತಾನಂದೋಽಕೃತವ್ರಣಃ ।
ಜಾಮದಗ್ನ್ಯೋಽಥ ರಾಮಶ್ಚ ಋಚೀಕಶ್ಚೈವಮಾದಯಃ ॥ ೮ ॥

---

೩. ಶ್ರೀ ಮಹಾದೇವನು ಹೇಳಿದನು–ಬುದ್ಧಿಯಲ್ಲಿ ಬೃಹಸ್ಪತಿಗೆ ಸಮನಾದ ಪರಾಕ್ರಮದಲ್ಲಿ ಇಂದ್ರನಿಗೆ ಸಮನಾದ, ಶರತಲ್ಪದಲ್ಲಿ ಮಲಗಿರುವ ಭೀಷ್ಮನನ್ನು ನೋಡಲು ಋಷಿಗಳೆಲ್ಲರೂ ಬಂದರು.

೪-೮. ಅತ್ರಿ, ವಸಿಷ್ಠ, ಭೃಗು, ಪುಲಸ್ತ್ಯ, ಪುಲಹ, ಕ್ರತು, ಅಂಗಿರಸ, ಗೌತಮ, ಅಗಸ್ತ್ಯ, ಸುಮತಿ, ಆಯು, ವಿಶ್ವಾಮಿತ್ರ, ಸ್ಥೂಲಶಿರ, ಪ್ರಮಥಾಧಿಪ, ರೈಭ್ಯ, ಬೃಹಸ್ಪತಿ, ವ್ಯಾಸ, ಕಶ್ಯಪ, ಧ್ರುವ, ದೂರ್ವಾಸ, ಜಮದಗ್ನಿ, ಮಾರ್ಕಂಡೇಯ, ಗಾಲವ, ಉಶನ, ಭರಧ್ವಾಜ, ಕ್ರುತು, ಆಸ್ತೀಕ, ಸ್ಥೂಲಾಕ್ಷ, ಲೋಕಾಕ್ಷ, ಕಣ್ವ, ಮೇಧಾತಿಥಿ, ಕುಣ, ನಾರದ, ಪರ್ವತ, ಸುಧನ್ವಾ, ಚ್ಯವನ, ಮಭೂರ್ಭುವನ, ಧೌಮ್ಯ, ಶತಾನಂತ, ಅಕೃತವ್ರಣ, ಪರಶುರಾಮ, ಋಚೀಕ ಇವರೇ ಮುಂತಾದವರು ಆ ಭೀಷ್ಮನನ್ನು ನೋಡಲು ಬಂದರು.

ತಾನ್ಪ್ರಣಮ್ಯ ಯಥಾನ್ಯಾಯಂ ಧರ್ಮಪುತ್ರಸ್ಸಹಾನುಜಃ ।
ಪೂಜಯಾಮಾಸ ವಿಧಿವಜ್ಜಗತ್ಪೂಜ್ಯಾನ್ಸುತೇಜಸಃ ॥ ೯ ॥

ಸಂಪೂಜಿತಾ ಮಹಾತ್ಮಾನಃ ಸುಖಾಸೀನಾಸ್ತಪೋಧನಾಃ ।
ಭೀಷ್ಮಾಶ್ರಿತಾಃ ಕಥಾಶ್ಚಕ್ರುಃ ದಿವ್ಯಧರ್ಮಾಶ್ರಿತಾಸ್ತಥಾ ॥ ೧೦ ॥

ಕಥಾಂತೇ ತು ತತಸ್ತೇಷಾಮೃಷೀಣಾಂ ಭಾವಿತಾತ್ಮನಾಂ ।
ಪ್ರಣಮ್ಯ ಶಿರಸಾ ಭೀಷ್ಮಂ ಪಪ್ರಚ್ಛೇದಂ ಯುಧಿಷ್ಠಿರಃ ॥ ೧೧ ॥

॥ ಯುಧಿಷ್ಠಿರ ಉವಾಚ ॥

ಕೇ ದೇಶಾಸ್ತು ಮಹಾಪುಣ್ಯಾಃ ಕೇ ಶೈಲಾಃ ಕೇಪಿ ಚಾಶ್ರಮಾಃ ।
ಸೇವ್ಯಾ ಧರ್ಮಾರ್ಥಿಭಿರ್ನಿತ್ಯಂ ತನ್ಮೇ ಬ್ರೂಹಿ ಪಿತಾಮಹ ॥ ೧೨ ॥

॥ ಭೀಷ್ಮ ಉವಾಚ ॥

ಅತ್ರೈವೋದಾಹರನ್ತೀಮಮಿತಿಹಾಸಂ ಪುರಾತನಂ ।
ಶಿಲೋಂಛವೃತ್ತೇಸ್ಸಂವಾದಂ ಸಿದ್ಧಸ್ಯ ಚ ಯುಧಿಷ್ಠಿರ ॥ ೧೩ ॥

---

೯. ಧರ್ಮರಾಜನು ತಮ್ಮಂದಿರೊಡನೆ ಕೂಡಿಕೊಂಡು ಅವರನ್ನು ಅವರ ಯೋಗ್ಯತೆಗನುಗುಣವಾಗಿ ನಮಸ್ಕರಿಸಿ ಪೂಜಿಸಿದನು.

೧೦. ಹಾಗೆ ಪೂಜೆಯನ್ನು ಹೊಂದಿದ ಆ ಮಹಾತ್ಮರು ಸುಖವಾಗಿ ಕುಳಿತುಕೊಂಡು ಭೀಷ್ಮನಿಗೆ ಸಂಬಂಧಪಟ್ಟ ಕಥೆಗಳನ್ನೇ ಮಾತನಾಡುತ್ತಿದ್ದರು.

೧೧. ಋಷಿಗಳು ಈ ರೀತಿ ಮಾತನಾಡಿಕೊಂಡು ಮುಗಿದ ಮೇಲೆ ಯುಧಿಷ್ಠಿರನು ಭೀಷ್ಮನನ್ನು ನಮಸ್ಕರಿಸಿ ಇಂತೆಂದು ಕೇಳಿದನು.

೧೨. ಯುಧಿಷ್ಠಿರನು ಹೇಳಿದನು–ಎಲೈ ತಾತನೇ ! ಯಾವ ದೇಶಗಳು ಪುಣ್ಯವಾದುವು ? ಯಾವ ಪರ್ವತಗಳು ಪುಣ್ಯವಾದುವು ? ಯಾವ ಆಶ್ರಮವು ಪುಣ್ಯವಾದುದು ? ಧರ್ಮವನ್ನು ಅಪೇಕ್ಷಿಸುವವರು ಯಾವುದನ್ನು ನಿತ್ಯವೂ ಸೇವಿಸಬೇಕು ? ಅವನ್ನು ನನಗೆ ಹೇಳು.

೧೩. ಭೀಷ್ಮನು ಹೇಳಿದನು–ಎಲೈ ಯುಧಿಷ್ಠಿರನೇ ! ಶಿಲೋಂಛವೃತ್ತಿ ಮತ್ತು ಸಿದ್ಧನ ಸಂವಾದ ರೂಪವಾದ ಒಂದು ಕಥೆಯನ್ನು ಹೇಳುತ್ತೇನೆ ಕೇಳು.

ಕಶ್ಚಿತ್ಸಿದ್ಧಃ ಪರಿಕ್ರಮ್ಯ ಸಮಸ್ತಾಂ ಪೃಥಿವೀಮಿಮಾಂ ।
ಉಂಛವೃತ್ತೇರ್ಗೃಹಸ್ಥಸ್ಯ ಗೃಹಂ ಪ್ರಾಪ್ತೋ ಮಹಾತ್ಮನಃ ॥ ೧೪ ॥

ಆತ್ಮವಿದ್ಯಾಸು ತತ್ವಜ್ಞಃ ಸರ್ವದಾ ಸುಜಿತೇಂದ್ರಿಯಃ ।
ರಾಗದ್ವೇಷಪರಿತ್ಯಕ್ತಃ ಕುಶಲೋ ಜ್ಞಾನಕರ್ಮಸು ॥ ೧೫ ॥

ವೈಷ್ಣವೇಷು ಸದಾ ಶ್ರೇಷ್ಠೋ ವಿಷ್ಣುಧರ್ಮಪರಾಯಣಃ ।
ಅನಿಂದಕೋ ವೈಷ್ಣವಾನಾಂ ಸದಾ ಧರ್ಮಪರಾಯಣಃ ॥ ೧೬ ॥

ಯೋಗಾಭ್ಯಾಸರತೋ ನಿತ್ಯಂ ಶಂಖಚಕ್ರಾದಿಧಾರಕಃ ।
ತ್ರಿಕಾಲಪೂಜಾತತ್ವಜ್ಞಃ ಶ್ರೀಕಂಠೇ ಸಂರತಃ ಸದಾ ॥ ೧೭ ॥

ವೇದವಿದ್ಯಾಸು ವಿಶದೋ ಧರ್ಮಾಧರ್ಮವಿಚಾರಕಃ ।
ವೇದಪಾಠವ್ರತೋ ನಿತ್ಯಂ ನಿತ್ಯಂ ಚಾತಿಥಿಪೂಜಕಃ ॥ ೧೮ ॥

---

೧೪. ಒಬ್ಬ ಸಿದ್ಧಪುರುಷನು ಪ್ರಪಂಚವನ್ನೆಲ್ಲಾ ಸುತ್ತಿಕೊಂಡು ಒಂದು ಸಾರಿ ಒಬ್ಬ ಉಂಛವೃತ್ತಿಯೆಂಬ ಗೃಹಸ್ಥನ ಮನೆಗೆ ಬಂದನು

೧೫. ಆ ಉಂಛವೃತ್ತಿಯುವನು ಪರಮಾತ್ಮ ವಿದ್ಯೆಯನ್ನು ಚೆನ್ನಾಗಿ ಬಲ್ಲವನು. ಜಿತೇಂದ್ರಿಯನು. ರಾಗ ದ್ವೇಷಗಳನ್ನು ಬಿಟ್ಟಿದ್ದನು. ಜ್ಞಾನಿಯು.

೧೬. ವಿಷ್ಣುಭಕ್ತರಲ್ಲಿ ಶ್ರೇಷ್ಠನು. ವಿಷ್ಣುಧರ್ಮವನ್ನೇ ಆಚರಿಸುತ್ತಿದ್ದನು. ವೈಷ್ಣವರನ್ನು ತಿರಸ್ಕರಿಸದೆ ಧರ್ಮದಲ್ಲಿ ಆಸಕ್ತನಾಗಿದ್ದನು.

೧೭-೧೮. ಅವನು ಯಾವಾಗಲೂ ಯೋಗಾಭ್ಯಾಸ ಮಾಡುತ್ತಿದ್ದನು. ಶಂಖಚಕ್ರಗಳನ್ನು ಧರಿಸಿದ್ದನು. ಮೂರುಕಾಲದಲ್ಲಿಯೂ ಪೂಜಿಸುತ್ತಿದ್ದನು. ಹರನಲ್ಲಿಯೂ ಆಸಕ್ತನಾಗಿದ್ದನು. ವೈದೀಕ ವಿದ್ಯೆಯಲ್ಲಿ ಗಟ್ಟಿಗನಾಗಿದ್ದನು. ಒಳ್ಳೆಯುವನ್ನು ಕೆಟ್ಟುದನ್ನು ವಿಚಾರಮಾಡುತ್ತಿದ್ದನು. ಯಾವಾಗಲೂ ವೇದವನ್ನು ಓದುತ್ತಿದ್ದನು. ಸದಾ ಅತಿಥಿಪೂಜೆಯನ್ನು ಮಾಡುತ್ತಿದ್ದನು.

ಸ ತೀರ್ಥಮತಿಯುಕ್ತಸ್ತು ಶಿಲೋಂಛೇಷು ಸ್ಥಿತಸ್ಸದಾ ।
ಚತುರ್ವೇದೇಷು ಯದ್ಧ್ಯಾನಂ ಗೀತಂ ಯದ್ಯತ್ಸ್ವಯಂಭುವಾ ॥ ೧೯ ॥

ತತ್ಸರ್ವಂ ಸ ಚ ಜಾನಾತಿ ದ್ವಿಜೋ ವಿಷ್ಣುಸ್ವರೂಪಧೃಕ್ ।
ನಾನಾಧರ್ಮಾರ್ಥವಿಶದೋ ಹ್ಯವ್ಯಯೇ ಸುಮತಿಸ್ಸದಾ ॥ ೨೦ ॥

ಏಕಸ್ಮಿನ್ನೇವ ಕಾಲೇ ತು ಗತೋಽಸೌ ವೈ ಶಿಬೇರ್ಗೃಹಂ ।
ತಂ ದೃಷ್ಟ್ವಾ ವಿಧಿವಚ್ಚೈವ ಕೃತ್ವಾತಿಥ್ಯಂ ಮಹಾತ್ಮನಃ ।
ತದಾ ತಂ ಪೃಚ್ಛಯಾಮಾಸ ದೇಶಾನಾಂ ಹಿತಕಾರಣಂ ॥ ೨೧ ॥

॥ ಉಂಛವೃತ್ತಿರುವಾಚ ॥

ಕೇ ದೇಶಾಃ ಕೇ ಜನಪದಾಃ ಕೇ ಶೈಲಾಃ ಕೇಽಪಿ ಚಾಶ್ರಮಾಃ ।
ಪುಣ್ಯಾ ದ್ವಿಜವರ ಪ್ರೀತ್ಯಾ ಮಹ್ಯಂ ನಿರ್ದೇಷ್ಟುಮರ್ಹಸಿ ॥ ೨೨ ॥

---

೧೯–೨೦. ಯಾವಾಗಲೂ ತೀರ್ಥಸ್ನಾನಗಳಲ್ಲಿಯೇ ಆಸಕ್ತನು. ಶಿಲೋಂಛ ವೃತ್ತಿಯಿಂದ ಆಹಾರವನ್ನು ತರುತ್ತಿದ್ದನು. ಚತುರ್ವೇದಗಳಲ್ಲಿ ಬ್ರಹ್ಮನು ಹೇಳಿರುವ ಜ್ಞಾನಗಳೆಲ್ಲವನ್ನೂ ಅವನು ಬಲ್ಲನು. ಆತನು ವಿಷ್ಣುವಿನ ರೂಪವೇ ಆಗಿದ್ದನು. ಎಲ್ಲಾ ಬಗೆಯ ಧರ್ಮಗಳನ್ನೂ ಬಲ್ಲನು. ಯಾವಾಗಲೂ ಪರಮಾತ್ಮನಲ್ಲಿಯೇ ಮನಸ್ಸುಳ್ಳವನು.

೨೧. ಹೀಗಿರಲು ಒಂದುಸಾರಿ ಶಿಬಿಯ ಮನೆಗೆ ಹೋದನು. ಶಿಬಿಯು ಆತನನ್ನು ನೋಡಿ ಕ್ರಮವಾಗಿ ಅತಿಥಿಸತ್ಕಾರವನ್ನು ಮಾಡಿ ಪ್ರಾಣಿಗಳ ಹಿತಕ್ಕೆ ಕಾರಣವನ್ನು ಕೇಳಿದನು.

೨೨. ಉಂಛವೃತ್ತಿಯು ಹೇಳಿದನು–ಎಲೈ ಬ್ರಾಹ್ಮಣಶ್ರೇಷ್ಠನೇ ! ಪುಣ್ಯವನ್ನು ಕೊಡುವ ದೇಶವಾವುದು ? ಜನಪದವಾವುದು ? ಬೆಟ್ಟಗಳಾವುವು ? ಆಶ್ರಮಗಳಾವುವು ? ಅವನ್ನು ನನಗೆ ಹೇಳು.

॥ ಸಿದ್ಧ ಉವಾಚ ॥

ತೇ ದೇಶಾಸ್ತೇ ಜನಪದಾಃ ತೇ ಶೈಲಾಸ್ತೇಽಪಿ ಚಾಶ್ರಮಾಃ ।
ಪುಣ್ಯಾಸ್ತ್ರಿಪಥಗಾ ಯೇಷಾಂ ಮಧ್ಯೇ ನಿತ್ಯಂ ಸರಿದ್ವರಾ ॥ ೨೩ ॥

ತಪಸಾ ಬ್ರಹ್ಮಚರ್ಯೇಣ ಯಜ್ಞೈಸ್ತ್ಯಾಗೇನ ವಾ ಪುನಃ ।
ಗತಿಂ ತಾಂ ನ ಲಭೇಜ್ಜಂತುಃ ಗಂಗಾಂ ಸಂಸೇವ್ಯ ಯಾಂ ಲಭೇತ್ ॥ ೨೪ ॥

ಸ್ನಾತಾನಾಂ ತತ್ರ ಪಯಸಿ ಗಾಂಗೇಯೇ ನಿಯತಾತ್ಮನಾಂ ।
ತುಷ್ಟಿರ್ಭವತಿ ಯಾ ಪುಂಸಾಂ ನ ಸಾ ಕ್ರತುಶತೈರಪಿ ॥ ೨೫ ॥

ಅಪಹೃತ್ಯತಮಸ್ತೀವ್ರಂ ಯಥಾ ಭಾತ್ಯುದಯೇ ರವಿಃ ।
ತಥಾಪಹೃತ್ಯ ಪಾಪ್ಮಾನಂ ಭಾತಿ ಗಂಗಾಜಲಾಪ್ಲುತಃ ॥ ೨೬ ॥

ಅಗ್ನಿಂ ಪ್ರಾಪ್ಯ ಯಥಾ ವಿಪ್ರ ತೂಲಶಾಶಿರ್ವಿನಶ್ಯತಿ ।
ತಥಾ ಗಂಗಾವಗಾಹಶ್ಚ ಸರ್ವಪಾಪಂ ವ್ಯಪೋಹತಿ ॥ ೨೭ ॥

---

೨೩. ಸಿದ್ಧನು ಹೇಳಿದನು–ಯಾವ ದೇಶದ ಮಧ್ಯದಲ್ಲಿ ಪುಣ್ಯಪ್ರದವಾದ ಗಂಗೆಯು ಹರಿಯುತ್ತಿದೆಯೋ ಅಂತಹ ದೇಶ, ಅಂತಹ ಜನಪದ, ಅಂತಹ ಶೈಲ, ಅಂತಹ ಆಶ್ರಮಗಳೆಲ್ಲವೂ ಪವಿತ್ರವಾದುವು. ಪುಣ್ಯವನ್ನು ಕೊಡುತ್ತವೆ.

೨೪. ಗಂಗೆಯನ್ನು ಸೇವಿಸಿದರೆ ಪ್ರಾಣಿಗಳಿಗೆ ಯಾವ ರೀತಿಯಾದ ಉತ್ತಮಗತಿಯು ಬರುತ್ತದೆಯೋ ಅಂತಹ ಗತಿಯನ್ನು ತಪಸ್ಸಿನಿಂದಾಗಲಿ, ಬ್ರಹ್ಮಚರ್ಯದಿಂದಾಗಲಿ ಹೊಂದಲಾರರು.

೨೫. ಜಿತೇಂದ್ರಿಯನಾಗಿ ಆ ಗಂಗೆಯ ನೀರಿನಲ್ಲಿ ಸ್ನಾನಮಾಡಿದರೆ ಯಾವ ರೀತಿಯಾದ ತೃಪ್ತಿಯುಂಟಾಗುತ್ತದೆಯೋ ಆ ತೃಪ್ತಿಯು ನೂರು ಯಾಗ ಗಳನ್ನು ಮಾಡಿದರೂ ಉಂಟಾಗುವುದಿಲ್ಲ.

೨೬. ಸೂರ್ಯನು ಉದಯವಾದಾಗ ಕಗ್ಗತ್ತಲೆಯನ್ನು ಹೇಗೆ ನಾಶಮಾಡಿ ಪ್ರಕಾಶಿಸುತ್ತಾನೆಯೋ ಆರೀತಿಯಾಗಿ ಗಂಗೆಯಲ್ಲಿ ಸ್ನಾನಮಾಡಿದವನು ಪಾಪ ಗಳನ್ನು ಕಳೆದುಕೊಂಡು ಪ್ರಕಾಶಿಸುತ್ತಾನೆ.

೨೭. ಅಗ್ನಿಯು ಹತ್ತಿಕೊಂಡರೆ ಹತ್ತಿಯು ರಾಶಿಯನ್ನೇ ನಾಶಮಾಡು ವಂತೆ ಗಂಗಾಸ್ನಾನವು ಎಲ್ಲಾ ಪಾಪಗಳನ್ನೂ ನಾಶಮಾಡುತ್ತದೆ.

ಯಸ್ತು ಸೂರ್ಯಾಂಶುಸಂತಪ್ತಃ ಗಾಂಗೇಯಂ ಸಲಿಲಂ ಪಿಬೇತ್ ।
ಸದ್ಯೋನೀಹಾರ ನಿರ್ಮುಕ್ತಃ ಪಾವಕಾದ್ಧಿ ವಿಶಿಷ್ಯತೇ ॥ ೨೮ ॥

ಚಾಂದ್ರಾಯಣಸಹಸ್ರಂ ತು ಪಾದೇನೈಕೇನ ಯಃ ಪುಮಾನ್ ।
ಸಂಪ್ಲುತಶ್ಚಾಪಿ ಗಂಗಾಯಾಂ ಯೋ ನರಸ್ಸ ವಿಶಿಷ್ಯತೇ ॥ ೨೯ ॥

ಲಂಬೇದಧಶ್ಶಿರಾ ಯಸ್ತು ವರ್ಷಾಣಾಮಯುತಂ ನರಃ ।
ಮಾಸಮೇಕಂ ತು ಗಂಗಾಂಭಃ ಸೇವತೇ ಯೋ ನರೋತ್ತಮಃ ॥ ೩೦ ॥

ಬ್ರಹ್ಮಹತ್ಯಾವಿನಿರ್ಮುಕ್ತೋ ಯಾತಿ ವಿಷ್ಣೋರ್ಹ್ಯನಾಮಯಂ ।
ಇಯಂ ವೇಣೀಸಮಾ ಪುಣ್ಯಾ ಪವಿತ್ರಾ ಪಾಪನಾಶಿನೀ ॥ ೩೧ ॥

ಯಸ್ಯಾಃ ಸ್ಮರಣಮಾತ್ರೇಣ ಬಾಲಹಾ ಮುಚ್ಯತೇ ಕ್ಷಣಾತ್ ।
ಸ ಪ್ರಯಾಗಃ ತೀರ್ಥರಾಜೋ ವೈಷ್ಣನಾಂ ಹಿ ದುರ್ಲಭಃ ॥ ೩೨ ॥

---

೨೮. ಯಾವನು ಬಿಸಿಲಿನಿಂದ ಬಾಯಾರಿದವನಾಗಿ ಗಂಗೆಯ ನೀರನ್ನು ಕುಡಿಯುತ್ತಾನೆಯೋ ಅವನು ಪಾಪಗಳೆನ್ನು ಕಳೆದುಕೊಂಡು ಅಗ್ನಿಗಿಂತಲೂ ಪವಿತ್ರನಾಗುತ್ತಾನೆ.

೨೯. ಸಾವಿರಚಾಂದ್ರಾಯಣವ್ರತಗಳನ್ನು ಮಾಡಿದವನೂ ಒಂದೇ ಕಾಲಿನಲ್ಲಿ ನಿಂತು ತಪಸ್ಸನ್ನು ಮಾಡಿದವನೂ ಗಂಗೆಯಲ್ಲಿ ಸ್ನಾನಮಾಡಿದವನೂ ಯಾರಿರುವರೋ ಇವರೊಳಗೆ ಗಂಗೆಯಲ್ಲಿ ಸ್ನಾನಮಾಡಿದವನು ಹೆಚ್ಚಿನವನಾಗುತ್ತಾನೆ.

೩೦. ಹತ್ತುಸಾವಿರ ವರ್ಷಗಳವರೆವಿಗೂ ತಲೆಯನ್ನು ಕೆಳಕ್ಕೆ ಮಾಡಿಕೊಂಡು ತಪಸ್ಸು ಮಾಡಿದವನು. ಒಂದು ತಿಂಗಳು ಗಂಗೆಯಲ್ಲಿ ಸ್ನಾನಮಾಡಿದವನ ಸಮಾನಾಗುವನು. ಆದರೂ ಇವನೇ ಶ್ರೇಷ್ಠನು.

೩೧–೩೨. ಆ ಗಂಗೆಯಲ್ಲಿ ಸ್ನಾನಮಾಡಿದವನು ಬ್ರಹ್ಮಹತ್ಯೆಯನ್ನು ಕಳೆದುಕೊಂಡು ವೈಕುಂಠವನ್ನು ಹೊಂದುತ್ತಾನೆ. ಈ ಗಂಗಾಸ್ನಾನವು ತ್ರಿವೇಣಿಯ ಸ್ನಾನಕ್ಕೆ ಸಮವಾದುದು. ಪವಿತ್ರವೂ ಪಾಪನಾಶಕವೂ ಆದುದು. ಇದನ್ನು ಸ್ಮರಿಸಿದರೆ ಬಾಲಹತ್ಯೆಯು ಹೋಗುವುದು. ಪ್ರಯಾಗವೆಂಬುದು ತೀರ್ಥರಾಜನು. ವೈಷ್ಣವರಿಗೆ ಸಿಕ್ಕುವುದು ಕಷ್ಟವು. ಅಲ್ಲಿ ಸ್ನಾನ ಮಾಡಿದರೆ ಜಾಗ್ರತೆ

ಸ್ನಾತ್ವಾ ಯತ್ರ ನರಶ್ರೇಷ್ಠ ವೈಕುಂಠೇ ಯಾತಿ ಸತ್ವರಂ ।
ಪ್ರಿಯಾಪ್ರಿಯಂ ನ ಜಾನಾತಿ ಧರ್ಮಾಧರ್ಮಂ ನ ವಿಂದತಿ ॥ ೩೩ ॥

ಸ್ನಾತ್ವಾ ವೈ ಸ ತು ಗಂಗಾಯಾಂ ಮಹಾಪಾಪಾತ್ಪ್ರಮುಚ್ಯತೇ ।
ಗಂಗಾ ಗಂಗೇತಿ ಯೋ ಬ್ರೂಯೋದ್ಯೋಜನಾನಾಂ ಶತೈರಪಿ ॥ ೩೪ ॥

ಮುಚ್ಯತೇ ಸರ್ವಪಾಪೇಭ್ಯೋ ವಿಷ್ಣುಲೋಕಂ ಸ ಗಚ್ಛತಿ ।
ಬ್ರಹ್ಮಹಾ ಚೈವ ಗೋಘ್ನೋ ವಾ ಸುರಾಪೀ ಬಾಲಘಾತಕಃ ॥ ೩೫ ॥

ಮುಚ್ಯತೇ ಸರ್ವಪಾಪೇಭ್ಯೋ ದಿವಂ ಯಾತಿ ಚ ಸತ್ವರಂ ।
ದರ್ಶನಂ ಮಾಧವಸ್ಯಾಥ ವರಸ್ಯ ದರ್ಶನಂ ತಥಾ ॥ ೩೬ ॥

ವೇಣ್ಯಾಂ ಸ್ನಾನಂ ಪ್ರಕುರ್ವಾಣೋ ವೈಕುಂಠಂ ಪ್ರತಿ ಗಚ್ಛತಿ ।
ಉದಿತೇ ಚ ಯಥಾ ಸೂರ್ಯೇ ವಿಲಯಂ ಯಾತಿ ವೈ ತಮಃ ॥ ೩೭ ॥

ತಥಾ ವೈ ತಸ್ಯ ಪಾಪಾನಿ ಗಚ್ಛಂತಿ ಸ್ನಾನಮಾತ್ರತಃ ।
ಗಂಗಾದ್ವಾರೇ ಕುಶಾವರ್ತೇ ಬಿಲ್ವಕೇ ನೀಲಪರ್ವತೇ ॥ ೩೮ ॥

---

ಯಾಗಿ ವೈಕುಂಠಕ್ಕೆ ಹೋಗುತ್ತಾನೆ. ಪ್ರಿಯ, ಅಪ್ರಿಯ, ಧರ್ಮ, ಅಧರ್ಮ ಗಳನ್ನು ತಿಳಿಯದವನೂ ಗಂಗೆಯಲ್ಲಿ ಸ್ನಾನಮಾಡಿದರೆ ಮಹಾ ಪಾಪಗಳೆಲ್ಲವೂ ಹೋಗುತ್ತವೆ. ನೂರಾರು ಯೋಜನಗಳ ದೂರದಲ್ಲಿದ್ದರೂ ಗಂಗೆ, ಗಂಗೆ ಎಂದು ಯಾವನು ಹೇಳುವನೋ ಅವನು ಪಾಪಗಳನ್ನು ಕಳೆದುಕೊಂಡು ವಿಷ್ಣುಲೋಕ ವನ್ನು ಹೊಂದುವನು. ಬ್ರಹ್ಮಹತ್ಯೆಯವನು, ಗೋಹತ್ಯೆಯವನು, ಸುರಾಪಾನ ಮಾಡಿದವನು, ಬಾಲರನ್ನು ಕೊಂದವನು ಇವರೆಲ್ಲರೂ ಗಂಗೆಯಲ್ಲಿ ಸ್ನಾನಮಾಡಿ ದೊಡನೆಯೇ ಸ್ವರ್ಗವನ್ನು ಹೊಂದವರು. ಮಾಧವನ ದರ್ಶನ ಮಾಡಿದರೆ ಬರುವ ಪುಣ್ಯವು ಈ ಗಂಗಾದರ್ಶನದಿಂದ ಬರುತ್ತದೆ. ವೇಣಿ ಎಂದರೆ ಗಂಗಾ ಪ್ರವಾಹವು. ಅದರಲ್ಲಿ ಸ್ನಾನಮಾಡಿದರೆ ವೈಕುಂಠವನ್ನು ಹೊಂದುತ್ತಾನೆ.

೩೭. ಸೂರ್ಯನು ಹುಟ್ಟಿದರೆ ಕತ್ತಲೆಯು ಹೋಗುವಂತೆ ಆ ಗಂಗೆಯಲ್ಲಿ ಸ್ನಾನಮಾಡಿದರೆ ಅವನ ಪಾಪಗಳೆಲ್ಲವೂ ಹೋಗುತ್ತವೆ.

೩೮. ಗಂಗಾದ್ವಾರ, ಕುಶಾವರ್ತ, ಬಿಲ್ವಕ, ನೀಲಪರ್ವತ, ಕನಖಲ ಇವುಗಳಲ್ಲಿ ಸ್ನಾನಮಾಡಿದರೆ ಮತ್ತೆ ಜನ್ಮವನ್ನು ಹೊಂದುವುದಿಲ್ಲ.

ಸ್ನಾತ್ವಾ ಕನಖಲೇ ತೀರ್ಥೇ ಪುನರ್ಜನ್ಮ ನ ವಿದ್ಯತೇ ।
ಏವಂ ಜ್ಞಾತ್ವಾ ನರಶ್ರೇಷ್ಠೋ ಗಂಗಾಸ್ನಾಯೀ ಪುನಃ ಪುನಃ ।
ಸ್ನಾನಮಾತ್ರೇಣ ಭೋ ರಾಜನ್ ಮುಚ್ಯತೇ ಕಿಲ್ಬಿಷಾದತಃ ॥ ೩೯ ॥

ದೇವಾನಾಂ ಪ್ರವರೋ ವಿಷ್ಣುರ್ಯಜ್ಞಾನಾಂ ಚಾಶ್ವಮೇಧಕಃ ।
ಅಶ್ವತ್ಥಸ್ಸರ್ವವೃಕ್ಷಾಣಾಂ ನದೀ ಭಾಗೀರಥೀ ಸದಾ ॥ ೪೦ ॥

ಇತಿ ಶ್ರೀ ಮಹಾಪುರಾಣೇ ಪಾದ್ಮೇ ಉತ್ತರಖಂಡೇ ಪಾರ್ವತೀ ಮಹಾದೇವ ಸಂವಾದೇ ಗಂಗಾ ಮಹಾತ್ಮ್ಯಂ ನಾಮ ದ್ವ್ಯಶೀತಿತಮೋಽಧ್ಯಾಯಸ್ಸಮಾಪ್ತಃ

---

೩೯. ಇದನ್ನು ತಿಳಿದು ಗಂಗಾನದಿಯಲ್ಲಿ ಬುದ್ಧಿವಂತನಾದವನು ಸ್ನಾನ ಮಾಡಬೇಕು. ಸ್ನಾನ ಮಾತ್ರದಿಂದಲೇ ಪಾಪಗಳೆಲ್ಲವೂ ಹೋಗುತ್ತವೆ.

೪೦. ದೇವತೆಗಳಲ್ಲಿ ವಿಷ್ಣುವು ಹೇಗೆ ಶ್ರೇಷ್ಠನೋ ಯಜ್ಞಗಳಲ್ಲಿ ಅಶ್ವಮೇಧವು ಹೇಗೆ ಶ್ರೇಷ್ಠವೋ ಮರಗಳಲ್ಲಿ ಅಶ್ವತ್ಥವು ಹೇಗೆ ಶ್ರೇಷ್ಠವೋ ಹಾಗೆ ನದಿಗಳಲ್ಲಿ ಭಾಗೀರಥಿಯು ಶ್ರೇಷ್ಠವು.

ಇಂತು ಶ್ರೀ ಪದ್ಮಮಹಾಪುರಾಣದ ಉತ್ತರಖಂಡದ ಪಾರ್ವತೀ ಮಹಾದೇವರ ಸಂವಾದದಲ್ಲಿ ಗಂಗಾ ಮಹಿಮೆ ಎಂಬ ಎಂಭತ್ತೆರಡನೆಯ ಅಧ್ಯಾಯವು ಮುಗಿದುದು.



॥ ಶ್ರೀಃ ॥

-X-

# ಅಥ ಶ್ರೀ ಮಹಾಪುರಾಣೇ ಪಾದ್ಮೇ ಉತ್ತರಖಂಡೇ

## ॥ ತ್ರ್ಯಶೀತಿತಮೋಽಧ್ಯಾಯಃ ॥



॥ ಪಾರ್ವತ್ಯುವಾಚ ॥

ವೈಷ್ಣವಾನಾಂ ಲಕ್ಷಣಂ ಚ ಕೀದೃಶಂ ಪ್ರತಿಪಾದಿತಂ ।
ಮಹಿಮಾ ಕೀದೃಶಶ್ಚೈವ ವದ ವಿಶ್ವೇಶ್ವರ ಪ್ರಭೋ ॥ ೧ ॥

॥ ಶ್ರೀ ಮಹಾದೇವ ಉವಾಚ ॥

ವಿಷ್ಣೋರಯಂ ಯತಃ ಪ್ರೋಕ್ತೋ ಹ್ಯತೋ ವೈ ವೈಷ್ಣವೋ ಮತಃ ।
ಸರ್ವಸ್ಯಾದಿಸ್ತು ವಿಜ್ಞೇಯೋ ಬ್ರಹ್ಮರೂಪಧರಸ್ತತಃ ॥ ೨ ॥

ಯತಸ್ಸಕಾಶಾತ್ಸಂಜಾತಾ ಬ್ರಾಹ್ಮಣಾ ವೇದಪಾರಗಾಃ ।
ತೇ ವೈಷ್ಣವಾಸ್ತು ವಿಜ್ಞೇಯಾ ನೈವಾನ್ಯೇ ತು ಕದಾಚನ ॥ ೩ ॥

---

## ಎಂಭತ್ತಮೂರನೆಯ ಅಧ್ಯಾಯವು



೧. ಪಾರ್ವತಿಯು ಹೇಳಿದಳು–ಎಲೈ ವಿಶ್ವೇಶ್ವರನೇ ! ವೈಷ್ಣವರ ಲಕ್ಷಣವು ಹೇಗೆ ಇರುವುದೆಂದು ಹೇಳಿದ್ದಾರೆ? ಅವರ ಮಹಿಮೆಗಳೇನು ? ಎಂಬುದನ್ನು ವಿಸ್ತರಿಸಿ ಹೇಳು.

೨. ಶ್ರೀ ಮಹಾದೇವನು ಹೇಳಿದನು–ಇವನು ವಿಷ್ಣುವಿನ ಸಂಬಂಧದವನಾದುದರಿಂದ ವೈಷ್ಣವನೆನಿಸಿಕೊಳ್ಳುತ್ತಾನೆ. ಅವನು ಎಲ್ಲರಿಗೂ ಮುಖ್ಯನು. ಬ್ರಹ್ಮರೂಪಧರನೇ ಆಗಿದ್ದಾನೆ.

೩. ಆ ವೈಷ್ಣವರ ಸಂಬಂಧದಿಂದಲೇ ವೇದಪಾರಗರಾದವರು ಹುಟ್ಟಿರುವುದು. ಅವರೇ ವೈಷ್ಣವರು. ಮಿಕ್ಕವರಲ್ಲ.

ಶೌಚಸತ್ಯಕ್ಷಾನ್ತಿಯುಕ್ತೋ ರಾಗದ್ವೇಷವಿವರ್ಜಿತಃ ।
ವೇದವಿದ್ಯಾವಿಚಾರಜ್ಞಃ ಸ ವೈ ವೈಷ್ಣವ ಉಚ್ಯತೇ ॥ ೪ ॥

ಅಗ್ನಿಹೋತ್ರರತೋ ನಿತ್ಯಂ ನಿತ್ಯಂ ಚಾತಿಥಿಪೂಜಕಃ ।
ಪಿತೃಭಕ್ತೋ ಮಾತೃಭಕ್ತಃ ಸ ವೈ ವೈಷ್ಣವ ಉಚ್ಯತೇ ॥ ೫ ॥

ದಯಾಧರ್ಮೇಣ ಸಂಯುಕ್ತಸ್ತಥಾ ಪಾಪಪರಾಙ್ಮುಖಃ ।
ಶಂಖಚಕ್ರಾಂಕಿತೋ ಯೋ ವೈ ಸ ವೈ ವೈಷ್ಣವ ಉಚ್ಯತೇ ॥ ೬ ॥

ಕಂಠೇ ಮಾಲಾ ಧೃತಾ ಯೇನ ಮುಖೇ ರಾಮಂ ಸದೋಚ್ಚರನ್ ।
ಗಾನಂ ಕುರ್ವನ್ಸದಾ ಭಕ್ತ್ಯಾ ಸ ನರೋ ವೈಷ್ಣವಸ್ಸ್ಮೃತಃ ॥ ೭ ॥

ಪುರಾಣೇಷು ರತಾ ನಿತ್ಯಂ ಯಜ್ಞೇಷು ಚ ರತಾಸ್ಸದಾ ।
ತೇ ನರಾ ವೈಷ್ಣವಾ ಜ್ಞೇಯಾಸ್ಸರ್ವಧರ್ಮೇಷು ಸಮ್ಮತಾಃ ॥ ೮ ॥

ತೇಷಾಂ ನಿಂದಾಂ ಪ್ರಕುರ್ವಂತಿ ಯೇ ನರಾಃ ಪಾಪಕಾರಿಣಃ ।
ತೇ ಮೃತಾಸ್ತು ಕುಯೋನಿಂ ವೈ ಗಚ್ಛಂತಿ ಚ ಪುನಃ ಪುನಃ ॥ ೯ ॥

---

೪. ಶೌಚ, ಸತ್ಯ, ಕ್ಷಾನ್ತಿಗಳಿಂದ ಕೂಡಿ ರಾಗ ದ್ವೇಷಗಳಿಂದ ಕೂಡಿರದ ವೇದವಿದ್ಯೆಯನ್ನು ಬಲ್ಲವನು ವೈಷ್ಣವನೆನಿಸಿಕೊಳ್ಳುತ್ತಾನೆ.

೫. ಅಗ್ನಿಹೋತ್ರ ಮಾಡುತ್ತಿರುವವನು ಅತಿಥಿಯನ್ನು ಪೂಜಿಸುತ್ತಿರುವನು. ಪಿತೃಭಕ್ತ ಮಾತೃಭಕ್ತನಾಗಿರುವನು. ಇಂತಹವನು ವೈಷ್ಣವನು.

೬. ದಯೆ, ಧರ್ಮಗಳಲ್ಲಿ ಆಸಕ್ತನಾಗಿದ್ದು ಪಾಪಮಾಡದೆ ಶಂಖ, ಚಕ್ರಗಳನ್ನು ಹಾಕಿಕೊಂಡಿರುವವನು ವೈಷ್ಣವನು.

೭. ಕತ್ತಿನಲ್ಲಿ ತುಲಸಿಮಾಲೆಯನ್ನು ಹಾಕಿಕೊಂಡು ಬಾಯಲ್ಲಿ ರಾಮನಾಮವನ್ನುಚ್ಚಾರ ಮಾಡುತ್ತಾ ಭಕ್ತಿಯಿಂದ ಗಾನಮಾಡುವವನೇ ವೈಷ್ಣವನು.

೮. ಯಾವಾಗಲೂ ಪುರಾಣ ಪಠಣ ಮಾಡುತ್ತ ಯಾವಾಗಲೂ ಯಾಗಗಳನ್ನು ಮಾಡುತ್ತ ಒಳ್ಳೆಯ ಧರ್ಮದಲ್ಲಿ ಆಸಕ್ತರಾದವರು ವೈಷ್ಣವರೆನಿಸಿಕೊಳ್ಳುತ್ತಾರೆ.

೯. ಆ ವೈಷ್ಣವರನ್ನು ನಿಂದಿಸುವವರು ಪಾಪಿಗಳು. ಅವರು ಸತ್ತಮೇಲೆ ನರಕವನ್ನು ಹೊಂದುತ್ತಾರೆ.

ಗೋಪಾಲನಾಮ್ನೀಂ ಮೂರ್ತಿಂ ಚ ಯೇರ್ಚಯಂತಿ ದ್ವಿಜಾಸ್ಸದಾ ।
ಧಾತುಜಾಂ ಮೃಣ್ಮಯೀಂ ಚೈವ ಚತುರ್ಹಸ್ತಾಂ ಸುಶೋಭಿತಾಂ ॥ ೧೦ ॥

ಪೂಜಾಂ ಕುರ್ವಂತಿ ಯೇ ವಿಪ್ರಾಃ ತೇ ನರಾಃ ಪುಣ್ಯಭಾಗಿನಃ ।
ಕೃತ್ವಾ ಪಾಷಾಣಜಾಂ ಮೂರ್ತಿಂ ಕೃಷ್ಣಾಖ್ಯಾಂ ರೂಪಸುಂದರಾಂ ॥ ೧೧ ॥

ಪೂಜಾಂ ಕುರ್ವಂತಿ ಯೇ ವಿಪ್ರಾಸ್ತೇ ನರಾಃ ಪುಣ್ಯಮೂರ್ತಯಃ ।
ಶಾಲಗ್ರಾಮಶಿಲಾ ಯತ್ರ ಯತ್ರ ದ್ವಾರವತೀ ಶಿಲಾ ॥ ೧೨ ॥

ಉಭಯೋಃ ಪೂಜನಂ ಯತ್ರ ಮುಕ್ತಿಸ್ತತ್ರ ನ ಸಂಶಯಃ ।
ಮೂರ್ತಿಂ ಮಂತ್ರೇಣ ಸಂಸ್ಥಾಪ್ಯ ಪೂಜನಂ ಕ್ರಿಯತೇ ಯದಿ ॥ ೧೩ ॥

ತದರ್ಚನಂ ಕೋಟಿಗುಣಂ ಧರ್ಮಕಾಮಾರ್ಥಮೋಕ್ಷದಂ ।
ನವಧಾ ತತ್ರ ವೈ ಭಕ್ತಿಃ ಕರ್ತವ್ಯಾ ಚ ಜನಾರ್ದನ ॥ ೧೪ ॥

ಅತಃ ಪಾಷಾಣಜಾಮೂರ್ತಿಸ್ತಥಾ ಧಾತುಮಯೀ ಚ ಯಾ ।
ತಸ್ಯಾಂ ಭಕ್ತ್ಯಾಃ ಪ್ರಕರ್ತವ್ಯಂ ಧ್ಯಾನಂ ಪೂಜನಮೇವ ಚ ॥ ೧೫ ॥

---

೧೦. ಧಾತುಗಳಿಂದಲಾಗಲಿ ಮಣ್ಣಿನಿಂದಲಾಗಲಿ ಮಾಡಿದ ನಾಲ್ಕು ಮೊಳವಿರುವ ಗೋಪಾಲಮೂರ್ತಿಯನ್ನು ಪೂಜಿಸುವವರು ವೈಷ್ಣವರು.

೧೧-೧೪. ಕಲ್ಲಿನಲ್ಲಿ ಮಾಡಿದ ಕೃಷ್ಣಮೂರ್ತಿಯನ್ನು ಪೂಜೆಮಾಡಿದವರೆಲ್ಲರೂ ಪುಣ್ಯಭಾಗಿಗಳು. ಪುಣ್ಯಮೂರ್ತಿಗಳು ಎಂದೆನಿಸಿಕೊಳ್ಳುತ್ತಾರೆ. ಸಾಲಗ್ರಾಮದ ಮತ್ತು ದ್ವಾರಕಾವತಿಯ ಸಾಲಗ್ರಾಮಗಳಿಗೆ ಪೂಜೆ ನಡೆಯುವ ಸ್ಥಳದಲ್ಲಿ ಮುಕ್ತಿಯೆಂಬುದು ಸಿದ್ಧವೆಂಬುದರಲ್ಲಿ ಸಂಶಯವಿಲ್ಲ. ಮೂರ್ತಿಯನ್ನು ಮಂತ್ರಹೇಳಿ ಆವಾಹಿಸಿ ಪೂಜೆಮಾಡಿದರೆ ಅದು ಕೋಟಿಯಷ್ಟು ಫಲ ಕೊಡುತ್ತದೆ. ಧರ್ಮ, ಕಾಮ, ಅರ್ಥಗಳನ್ನು ಕೊಡುತ್ತದೆ. ಆ ಸ್ವಾಮಿಯಾದ ಜನಾರ್ದನನಲ್ಲಿ ಒಂಬತ್ತು ಬಗೆಯಾಗಿ ಭಕ್ತಿಯನ್ನು ಮಾಡಬೇಕು.

೧೫. ಕಲ್ಲಿನ ಮೂರ್ತಿಯಲ್ಲಾಗಲೀ ಧಾತುವಿನ ಮೂರ್ತಿಯಲ್ಲಾಗಲಿ ಭಕ್ತರು ಪೂಜೆ ಆವಾಹನೆಗಳನ್ನು ಮಾಡಿ ಪೂಜಿಸಬೇಕು.

ರಾಜೋಪಚಾರಿಕಾಂ ಪೂಜಾಂ ಮೂರ್ತೌ ತತ್ರ ಪ್ರಕಲ್ಪಯೇತ್ ।
ಸರ್ವಾತ್ಮಾನಂ ಸ್ಮರೇನ್ನಿತ್ಯಂ ಭಗವಂತಮಧೋಕ್ಷಜಂ ॥ ೧೬ ॥

ದೀನಾನಾಥೈಕಶರಣಂ ಲೋಕಾನಾಂ ಹಿತಕಾರಕಂ ।
ಮೂರ್ತೌ ತತ್ರ ಸ್ಮರೇನ್ನಿತ್ಯಂ ಮಹಾಪಾತಕನಾಶನಂ ॥ ೧೭ ॥

ಗೋಪಾಲೋಯಂ ತಥಾ ಕೃಷ್ಣೋ ರಾಮೋಯಮಿತಿ ಚ ಬ್ರುವನ್ ।
ಪೂಜಾಂ ಕರೋತಿ ಯಸ್ಸಮ್ಯಕ್ಸ ವೈ ಭಾಗವತೋ ನರಃ ॥ ೧೮ ॥

ಗೋಕುಲೇ ಚ ಯಥಾ ರೂಪಂ ಧೃತಂ ವೈ ಕೇಶವೇನ ತು ।
ತಾದೃಗ್ರೂಪಂ ಪ್ರಕರ್ತವ್ಯಂ ವೈಷ್ಣವೈರ್ನರಸತ್ತಮೈಃ ॥ ೧೯ ॥

ಆತ್ಮಸಂತೋಷಣಾರ್ಥಾಯ ಸ್ವರೂಪಂ ಕಾರಯೇದ್ಬುಧಃ ।
ಯತೋ ಭಕ್ತಿಸ್ತು ಬಹುಲಾ ಜಾಯತೇ ನಾತ್ರ ಸಂಶಯಃ ॥ ೨೦ ॥

ಶಂಖಚಕ್ರಗದಾದೀನಿ ವಿಷ್ಣೋಃ ಶ್ಚೈವಾಯುಧಾನಿ ಚ ।
ತಸ್ಯಾಂ ಮೂರ್ತೌ ವಿಶೇಷೇಣ ಕರ್ತವ್ಯಾನಿ ಪ್ರಮಾಣತಃ ॥ ೨೧ ॥

---

೧೬. ಮೂರ್ತಿಯಲ್ಲಿ ರಾಜೋಪಚಾರವುಳ್ಳ ಪೂಜೆಯನ್ನು ಮಾಡಬೇಕು. ಅದರಲ್ಲಿ ಭಗವಂತನೂ, ಅಧೋಕ್ಷಜನೂ ಆದ ಸ್ವಾಮಿಯನ್ನು ಧ್ಯಾನಿಸಬೇಕು.

೧೭. ದೀನರಿಗೂ ಅನಾಥರಿಗೂ ಶರಣನಾದ ಲೋಕಹಿತಕಾರಿಯಾದ ಮಹಾಪಾಪಗಳನ್ನು ನಾಶಮಾಡುವ ಆ ಸ್ವಾಮಿಯನ್ನು ಮೂರ್ತಿಯಲ್ಲಿ ಧ್ಯಾನ ಮಾಡಬೇಕು.

೧೮. ಇವನೇ ಗೋಪಾಲನು. ಇವನೇ ಕೃಷ್ಣನು. ಇವನೇ ರಾಮನು. ಎಂದು ಹೇಳುತ್ತ ಪೂಜಿಸಿದರೆ ಅವನೇ ಭಾಗವತನು.

೧೯. ಕೇಶವನು ಗೋಕುಲದಲ್ಲಿ ತಾಳಿರುವ ರೂಪವನ್ನು ಮಾಡಿ ಅದನ್ನೇ ಭಕ್ತರು ಧ್ಯಾನಿಸುತ್ತ ಪೂಜಿಸಬೇಕು.

೨೦. ಭಕ್ತನು ತಾನು ತೃಪ್ತಿಪಡಲು ಆಕಾರವನ್ನು ಮಾಡಿಕೊಳ್ಳಬೇಕು. ಅದರಿಂದ ಭಕ್ತಿಯು ಹೆಚ್ಚುತ್ತದೆ. ಸಂಶಯವಿಲ್ಲ.

೨೧. ಶಂಖ, ಚಕ್ರ, ಗದೆಗಳನ್ನೂ, ವಿಷ್ಣುವಿನ ಆಯುಧಗಳನ್ನೂ ಅವುಗಳಿಗೆ ಹೇಳಿರುವ ರೀತಿಯಲ್ಲಿ ಆ ಮೂರ್ತಿಯಲ್ಲಿ ಮಾಡಬೇಕು.

ಚತುರ್ಭುಜಾಂ ದ್ವಿನೇತ್ರಾಂ ಚ ಶಂಖಚಕ್ರಗದಾಧರಾ ।
ಪೀತವಾಸಃಪರೀಧಾನಾಂ ಶೋಭಮಾನಾಂ ಗರೀಯಸೀಂ ॥ ೨೨ ॥

ವನಮಾಲಾಂ ದಧಾನಾಂ ತಾಂ ಲಸದ್ವೈಡೂರ್ಯಕುಂಡಲಾಂ ।
ಮುಕುಟೇನ ಸಮಾಯುಕ್ತಾಂ ಕೌಸ್ತುಭೋದ್ಭಾಸಿತಾಂ ಸದಾ ॥ ೨೩ ॥

ಸೌವರ್ಣೀಂ ಚಾಥ ರೌಪ್ಯಾಂ ವಾ ತಾಮ್ರಜಾಂ ಚಾಥಪೈತ್ತಲೀಂ ।
ಕಾರಯೇತ್ಪರಯಾ ಭಕ್ತ್ಯಾ ವೈಷ್ಣವೈರ್ದ್ವಿಜಸತ್ತಮೈಃ ॥ ೨೪ ॥

ಆಗಮೋಕ್ತೈರ್ವೇದಮಂತ್ರೈಃ ಪ್ರತಿಷ್ಠಾಪ್ಯ ವಿಶೇಷತಃ ।
ಪಶ್ಚಾದ್ವಾ ಅರ್ಚನಂ ಕಾರ್ಯಂ ಯಥಾಶಾಸ್ತ್ರಾನುಸಾರತಃ ॥ ೨೫ ॥

ಷೋಡಶೋಪಚಾರಮಂತ್ರಾದ್ಯೈಃ ಪೂಜನಂ ವಿಧಿಪೂರ್ವಕಂ ।
ಪೂಜಿತೇ ತು ಜಗನ್ನಾಥೇ ಸರ್ವೇ ದೇವಾಶ್ಚ ಪೂಜಿತಾಃ ॥ ೨೬ ॥

ಅತೋಽನೇನ ಪ್ರಕಾರೇಣ ಪೂಜನೀಯೋ ಮಹಾಪ್ರಭುಃ ।
ಅನಾದಿನಿಧನೋ ದೇವಃ ಶಂಖಚಕ್ರಗದಾಧರಃ ॥ ೨೭ ॥

---

೨೨–೨೩. ನಾಲ್ಕು ತೋಳು, ಎರಡು ಕಣ್ಣು, ಶಂಖ, ಚಕ್ರ, ಗದೆಗಳು, ಹೊಂಬಣ್ಣದ ಬಟ್ಟೆ, ವನಮಾಲೆ, ವೈಡೂರ್ಯದ ಕುಂಡಲ, ಕಿರೀಟ, ಕಾಸ್ತುಭಗಳಿಂದ ಕೂಡಿರುವ ಸ್ವಾಮಿಯನ್ನು ಮಾಡಬೇಕು.

೨೪. ಚಿನ್ನ, ಬೆಳ್ಳಿ, ತಾಮ್ರ, ಹಿತ್ತಾಳೆ ಇವುಗಳಲ್ಲಿ ಸೌಕರ್ಯವಿದ್ದಂತೆ ಪ್ರತಿಮೆಯನ್ನು ಮೇಲೆ ಹೇಳಿರುವ ಲಕ್ಷಣಗಳಿಂದ ಮಾಡಿಸಬೇಕು.

೨೫. ಆಗಮದಲ್ಲಿ ಹೇಳಿರುವ ವೇದ ಮಂತ್ರಗಳಿಂದ ಆ ಪ್ರತಿಮೆಯನ್ನು ಪ್ರತಿಷ್ಠಿಸಬೇಕು. ಅನಂತರ ಶಾಸ್ತ್ರೋಕ್ತವಾದ ಪೂಜೆಯನ್ನು ಮಾಡಬೇಕು.

೨೬. ಷೋಡಶೋಪಚಾರ (ಹದಿನಾರು ಉಪಚಾರ) ಮಂತ್ರಗಳಿಂದ ಪೂಜಿಸಬೇಕು. ಈ ರೀತಿ ಸ್ವಾಮಿಯನ್ನು ಪೂಜಿಸಿದರೆ ಎಲ್ಲಾ ದೇವತೆಗಳನ್ನೂ ಪೂಜಿಸಿದಂತಾಗುತ್ತದೆ.

೨೭-೨೮. ಈ ರೀತಿಯಾಗಿ ಆನಾದಿಯಾದ ಶಂಖ, ಚಕ್ರ, ಗದಾಧರನಾದ ಆ ಸ್ವಾಮಿಯನ್ನು ಪೂಜಿಸಬೇಕು. ಎಲ್ಲವನ್ನು ಕೊಡುತ್ತಾನೆ. ವೈಷ್ಣವರನ್ನು

**ಸರ್ವಂ ದದಾತಿ ಸರ್ವೇಶೋ ವೈಷ್ಣವಾನ್ಪುಣ್ಯರೂಪಿಣಃ ।**
**ಯಥಾ ವಿಷ್ಣುಸ್ತಥಾ ಸರ್ವೇ ನಾಂತರಂ ವಿದ್ಯತೇ ಕ್ವಚಿತ್ ॥ ೨೮ ॥**

**ಏವಂ ಜ್ಞಾತ್ವಾ ತು ಭೋ ದೇವಿ ಹ್ಯುಭಯೋರ್ಮೂರ್ತಿಕಲ್ಪನಂ ।**
**ಶಿವಪೂಜಾಮಕುರ್ವಾಣೋ ವಿಷ್ಣುನಿಂದಾಸು ತತ್ಪರಃ ॥ ೨೯ ॥**

**ರೌರವೇ ನರಕೇ ಚೈವ ವಸತೇ ನಾತ್ರ ಸಂಶಯಃ**
**ಅಹಂ ವಿಷ್ಣುರಹಂ ರುದ್ರೋ ಹ್ಯಹಂ ಬ್ರಹ್ಮಾ ಪಿತಾಮಹಃ ।**
**ಸರ್ವಭೂತೇಷು ಸತತಂ ವಸಾಮಿ ಚ ಪುನಃ ಪುನಃ ॥ ೩೦ ॥**

**ಇತಿ ಶ್ರೀ ಮಹಾಪುರಾಣೇ ಪಾದ್ಮೇ ಉತ್ತರಖಂಡೇ ಪಾರ್ವತೀ ಮಹಾದೇವ ಸಂವಾದೇ ವೈಷ್ಣವಾನಾಂ ಲಕ್ಷಣ ಕಥನಂ ನಾಮ ತ್ರ್ಯಶೀತಿತಮೋಽಧ್ಯಾಯಸ್ಸಮಾಪ್ತಃ**

---

ಪೂಜಿಸಬೇಕು. ಆ ವೈಷ್ಣವರೂ ವಿಷ್ಣುವಿನಂತಿರತಕ್ಕವರೇ. ಅವರಿಗೂ ಆ ದೇವರಿಗೂ ವ್ಯತ್ಯಾಸವೇ ಇರುವುದಿಲ್ಲ.

೨೯-೩೦. ಎಲೈ ದೇವಿಯೇ ! ಇದನ್ನು ತಿಳಿದುಕೊಂಡು ಮೂರ್ತಿಗಳನು ಮಾಡಿಕೊಳ್ಳಬೇಕು. ಶಿವಪೂಜೆಯನ್ನು ಮಾಡದೆ ವಿಷ್ಣುವನ್ನು ನಿಂದಿಸುತ್ತಿದ್ದರೆ ಅವನು ರೌರವನರಕದಲ್ಲಿ ಬೀಳುತ್ತಾನೆ. ನಾನೇ ವಿಷ್ಣುವು. ನಾನೇ ರುದ್ರನು. ನಾನೇ ಬ್ರಹ್ಮನು. ನಾನೇ ಎಲ್ಲಾ ಪ್ರಾಣಿಗಳಲ್ಲಿಯೂ ವಾಸವಾಗಿ ಇದ್ದೇನೆ.

ಇಂತು ಶ್ರೀ ಪದ್ಮಮಹಾಪುರಾಣದ ಉತ್ತರಖಂಡದ ಪಾರ್ವತೀ ಮಹಾದೇವರ ಸಂವಾದದಲ್ಲಿ ವೈಷ್ಣವ ಲಕ್ಷಣ ಕಥನ ಎಂಬ ಎಂಭತ್ತಮೂರನೆಯ ಅಧ್ಯಾಯವು ಮುಗಿದುದು.



॥ ಶ್ರೀಃ ॥

# ಅಥ ಶ್ರೀ ಮಹಾಪುರಾಣೇ ಪಾದ್ಮೇ ಉತ್ತರಖಂಡೇ

## ॥ ಚತುರಶೀತಿತಮೋಽಧ್ಯಾಯಃ ॥



॥ ಪಾರ್ವತ್ಯುವಾಚ ॥

**ಕೇ ದಾಸಾಃ ವೈಷ್ಣವಾಃ ಕೇ ತು ಕೇ ಭಕ್ತಾ ಭುವಿ ಕೀರ್ತಿತಾಃ ।**
**ತೇಷಾಂ ವೈ ಲಕ್ಷಣಂ ಬ್ರೂಹಿ ಯಥಾರ್ಥಂ ವೈ ಮಹೇಶ್ವರ ॥ ೧ ॥**

॥ ಶ್ರೀ ಮಹಾದೇವ ಉವಾಚ ॥

**ಶೂದ್ರಾ ಭವಂತಿ ವೈ ದಾಸಾ ವೈಷ್ಣವಾ ನಾರದಾದಯಃ ।**
**ಯೇ ಪ್ರಹ್ಲಾದಾಂಬರಿಷಾದ್ಯಾ ಭಕ್ತಾಸ್ತೇ ನಗನಂದಿನಿ ॥ ೨ ॥**

**ಬ್ರಹ್ಮಕ್ರಿಯಾ ರತೋ ನಿತ್ಯಂ ವೇದವೇದಾಂಗಪಾರಗಃ ।**
**ಶಂಖಚಕ್ರಾಂಕಿತೋ ಯಸ್ತು ಸ ವೈ ವೈಷ್ಣವ ಉಚ್ಯತೇ ॥ ೩ ॥**

---

## ಎಂಭತ್ತನಾಲ್ಕನೆಯ ಅಧ್ಯಾಯವು



೧ ಪಾರ್ವತಿಯು ಹೇಳಿದಳು–ಎಲೈ ಮಹೇಶ್ವರನೇ ! ದಾಸರಾರು ? ವೈಷ್ಣವರಾರು ? ಭಕ್ತರಾರು ? ಇವರುಗಳ ಸರಿಯಾದ ಲಕ್ಷಣಗಳನ್ನು ನನಗೆ ತಿಳಿಸು.

೨. ಶ್ರೀ ಮಹಾದೇವನು ಹೇಳಿದನು–ಶೂದ್ರರು ದಾಸರೆಂಬ ಹೆಸರನ್ನು ಹೊಂದುತ್ತಾರೆ. ನಾರದಾದಿಗಳು ವೈಷ್ಣವರು. ಪ್ರಹ್ಲಾದ ಅಂಬರೀಷ ಮುಂತಾದವರು ಭಕ್ತರೆಂಬುದಾಗಿ ತಿಳಿ.

೩. ಯಾವಾಗಲೂ ಬ್ರಾಹ್ಮಣನು ಕ್ರಿಯೆಯಲ್ಲಿ ಆಸಕ್ತನಾಗಿರಬೇಕು. ವೇದವೇದಾಂಗಗಳನ್ನು ತಿಳಿದಿರಬೇಕು. ಶಂಖ ಚಕ್ರಗಳಿಂದ ಗುರುತು ಮಾಡಿಸಿಕೊಂಡಿರಬೇಕು. ಆವನೇ ವೈಷ್ಣವನು.

ದ್ವಿಜಸೇವಾರತೋ ನಿತ್ಯಂ ವಿಷ್ಣುಪೂಜಾಪ್ರಪೂಜಕಃ ।
ಶೃಣೋತಿ ಬಹುಧಾ ಚೈವ ಪುರಾಣಂ ವೇದಸಮ್ಮಿತಂ ॥ ೪ ॥

ಸ ಶೂದ್ರೋ ಹರಿದಾಸಸ್ತು ಇತ್ಯುಕ್ತೋ ನಗನಂದಿನಿ ।
ಪಂಚವರ್ಷಾತ್ಸಮಾಶ್ರಿತ್ಯ ಕೃತಾ ಭಕ್ತಿರ್ಹ್ಯನೇಕಧಾ ॥ ೫ ॥

ಸ ವೈ ಭಕ್ತ ಇತಿ ಪ್ರೋಕ್ತಃ ಸರ್ವಸಾಧುಷು ಸಮ್ಮತಃ ।
ಧ್ರುವಾದಯಸ್ತೇ ವಿಜ್ಞೇಯಾ ಅಂಬರೀಷಾದಯಶ್ಚ ಯೇ ॥ ೬ ॥

ಭಕ್ತಾಶ್ಚ ಮುನಿಭಿಃ ಪ್ರೋಕ್ತಾಸ್ಸರ್ವಕಾಲೇಷು ಭಾಮಿನಿ ।
ಕಲೌ ಧನ್ಯತಮಾಶ್ಶೂದ್ರಾ ವಿಷ್ಣುಧ್ಯಾನಪರಾಯಣಾಃ ॥ ೭ ॥

ಇಹ ಲೋಕೇ ಸುಖಂ ಭುಕ್ತ್ವಾ ಯಾನ್ತಿ ವಿಷ್ಣೋಸ್ಸನಾತನಂ ।
ಶಂಖಚಕ್ರಾಂಕಿತೋ ಯಸ್ತು ವಿಷ್ಣುಭಕ್ತಿಪ್ರಕಾರಕಃ ॥ ೮ ॥

---

೪-೬. ಯಾವಾಗಲೂ ಬ್ರಾಹ್ಮಣರ ಸೇವೆ ಮಾಡುತ್ತಿರಬೇಕು. ವಿಷ್ಣುವನ್ನು ಪೂಜಿಸುವವರನ್ನು ಪೂಜಿಸಬೇಕು. ವೇದಕ್ಕೆ ಸಮವಾದ ಪುರಾಣಗಳನ್ನು ಕೇಳುತ್ತಿರಬೇಕು ಇಂತಹ ಶೂದ್ರನು ದಾಸನೆಂದೆನಿಸಿಕೊಳ್ಳುತ್ತಾನೆ. ಐದು ವರ್ಷದಿಂದಲೇ ಮೊದಲುಗೊಂಡು ವಿಷ್ಣುವಿನಲ್ಲಿ ಬಗೆಬಗೆಯಾಗಿ ಭಕ್ತಿಯನ್ನು ಮಾಡುವವನು ಭಕ್ತನೆಂದೆನಿಸಿಕೊಳ್ಳುತ್ತಾನೆ. ಅವನು ಸಾಧುಗಳಲ್ಲಿ ಸೇರಿದವನು. ಧ್ರುವ ಅಂಬರೀಷ ಮುಂತಾದವರು ಸರ್ವಕಾಲದ ಭಕ್ತರೆಂದು ತಿಳಿದುಕೋ.

೭. ವಿಷ್ಣು ಧ್ಯಾನಮಾಡುತ್ತಿರುವ ಶೂದ್ರರೇ ಕಲಿಯುಗದಲ್ಲಿ ಧನ್ಯರು. ಅವರು ಈ ಲೋಕದಲ್ಲಿ ಸುಖವನ್ನನುಭವಿಸಿ ವೈಕುಂಠವನ್ನು ಹೊಂದುತ್ತಾರೆ.

೮. ಶಂಖ ಚಕ್ರಗಳನ್ನು ಧರಿಸಿ ವಿಷ್ಣುಭಕ್ತಿಯನ್ನು ಮಾಡುತ್ತಾ ಇರಬೇಕು.

ಚತುರ್ವಿಧಮಹೋತ್ಸಾಹಂ ಕರ್ತಾ ಚೈವ ವಿಶೇಷತಃ ।
ಸ ಶೂದ್ರೋ ವಿಷ್ಣುದಾಸಸ್ತು ಪಾದ್ಮೇ ದೃಷ್ಟಂ ಯಥಾಶ್ರುತಂ ॥ ೯ ॥

ಇತಿ ಶ್ರೀ ಮಹಾಪುರಾಣೇ ಪಾದ್ಮೇ ಉತ್ತರಖಂಡೇ ಪಾರ್ವತೀ
ಮಹಾದೇವ ಸಂವಾದೇ ದಾಸ ವೈಷ್ಣವ ಭಕ್ತಾನಾಂ ಲಕ್ಷಣ ಕಥನಂ
ನಾಮ ಚತುರಶೀತಿತಮೋಽಧ್ಯಾಯಸ್ಸಮಾಪ್ತಃ

---

೯. ಹದಿನಾಲ್ಕು ಬಗೆಯಾದ ಪೂಜೆಯನ್ನು ಮಾಡುತ್ತ ಇರತಕ್ಕ ಶೂದ್ರನು ವಿಷ್ಣುದಾಸನೆಂದು ಪದ್ಮಪುರಾಣದ ಪ್ರಕಾರ ತಿಳಿಯಬರುತ್ತದೆ.

ಇಂತು ಶ್ರೀ ಪದ್ಮಮಹಾಪುರಾಣದ ಉತ್ತರಖಂಡದ ಪಾರ್ವತೀ
ಮಹಾದೇವರ ಸಂವಾದದಲ್ಲಿ ದಾಸ ವೈಷ್ಣವ ಭಕ್ತರ ಲಕ್ಷಣ ಕಥನ
ಎಂಬ ಎಂಭತ್ತನಾಲ್ಕನೆಯ ಅಧ್ಯಾಯವು ಮುಗಿದುದು.



|| ಶ್ರೀಃ ||

-X-

## ಅಥ ಶ್ರೀ ಮಹಾಪುರಾಣೇ ಪಾದ್ಮೇ ಉತ್ತರಖಂಡೇ

## || ಪಂಚಾಶೀತಿತಮೋಽಧ್ಯಾಯಃ ||



|| ಪಾರ್ವತ್ಯು ವಾಚ ||

ಸರ್ವೇಷಾಂ ಚೈವ ಮಾಸಾನಾಂ ವಿಧಿಂ ಬ್ರೂಹಿ ಮಹೇಶ್ವರ |
ಮಹೋತ್ಸವಾಃ ಪ್ರಕರ್ತವ್ಯಾಃ ಕೋವಿಧಿಸ್ತತ್ರ ಸಮ್ಮತಃ || ೧ ||

ಕೋ ದೇವಃ ಪೂಜನಂ ಕಸ್ಯ ಮಹಿಮಾ ಕೀದೃಶೋ ಭವೇತ್ |
ಕಸ್ಯಾಂ ತಿಥೌ ಪ್ರಕರ್ತವ್ಯಂ ತನ್ಮೇ ವದ ಸುರೇಶ್ವರ || ೨ ||

ಮಾಸಂ ಪ್ರತಿ ಕಿಮುಕ್ತಂ ಚ ವೈಷ್ಣವಾನ್ಪುಣ್ಯಕರ್ಮಣಃ |
ಧನ್ಯಾಹಂ ಕೃತಕೃತ್ಯಾಹಂ ಸೌಭಾಗ್ಯಾಹಂ ಧರಾತಲೇ |
ವಿಷ್ಣೋಃ ಕಥಾಂ ಶೃಣೋಮೀತಿ ದರ್ಶನಾತ್ಸ್ಪರ್ಶನಾತ್ತವ || ೩ ||

---

## ಎಂಭತ್ತೈದನೆಯ ಅಧ್ಯಾಯವು



೧. ಪಾರ್ವತಿಯು ಹೇಳಿದಳು–ಎಲೈ ಮಹೇಶ್ವರನೇ! ಎಲ್ಲಾ ತಿಂಗಳುಗಳ ವಿಧಿಯನ್ನೂ ಹೇಳು. ಯಾವಾಗ ಮಹೋತ್ಸವಗಳನ್ನು ಮಾಡಬೇಕು? ಅದರ ವಿಧಿಯೇನು?

೨. ಯಾವ ದೇವರಿಗೆ ಪೂಜೆಯನ್ನು ಮಾಡಬೇಕು? ಅದರ ಮಹಿಮೆಯೇನು? ಯಾವ ತಿಥಿಯಲ್ಲಿ ಪೂಜಿಸಬೇಕು? ಅದನ್ನು ನನಗೆ ದಯವಿಟ್ಟು ಹೇಳು

೩. ಪುಣ್ಯಕರ್ಮವುಳ್ಳ ವೈಷ್ಣವರನ್ನು ಕುರಿತು ಮಾಸಗಳ ಮಹಿಮೆಯು ಹೇಗೆ ಹೇಳಲ್ಪಟ್ಟಿದೆ? ಅದನ್ನು ದಯವಿಟ್ಟು ಹೇಳು. ನಿನ್ನ ದರ್ಶನವೂ ಸ್ಪರ್ಶನವೂ ಉಂಟಾಗುತ್ತಿರುವುದರಿಂದ ನಾನೇ ಧನ್ಯಳು. ಕೃತಕೃತ್ಯಳು. ಸೌಭಾಗ್ಯವಂತಳು. ನಿನ್ನಿಂದ ಈ ವಿಷ್ಣುಕಥೆಯನ್ನು ಕೇಳುತ್ತಿದ್ದೇನೆ.

॥ ಮಹಾದೇವ ಉವಾಚ ॥

ಉತ್ಸವಾನಾಂ ವಿಧಿಂ ಭ್ರೂಮೋ ಮಾಸಂ ಪ್ರತಿ ತವಾನಘೇ ।
ಯಾಂ ಶ್ರುತ್ವಾ ಚ ಪುನರ್ದೇವಿ ಗೀತವಾದಿತ್ರಹರ್ಷಿತಾ ॥ ೪ ॥

ತತ್ರಾದೌ ತು ಸಿತೇ ಪಕ್ಷೇ ಚೈತ್ರಮಾಸೇ ಸುಶೋಭನೇ ।
ಏಕಾದಶ್ಯಾಂ ವಿಶೇಷೇಣ ದೋಲಾರೂಢಂ ಪ್ರಪೂಜಯೇತ್ ॥ ೫ ॥

ಕುರ್ಯಾದ್ಭಕ್ತ್ಯಾ ಸದಾ ದೇವಿ ಉತ್ಸವಂ ವಿಧಿಪೂರ್ವಕಂ ।
ದೋಲಾರೂಢಂ ಪ್ರಪಶ್ಯಂತಿ ಕೃಷ್ಣಂ ಕಲಿಮಲಾಪಹಂ ॥ ೬ ॥

ಅಪರಾಧಸಹಸ್ರೈಸ್ತು ಮುಕ್ತಾಸ್ತೇ ನಗನಂದಿನಿ ।
ತಾವತ್ತಿಷ್ಠಂತಿ ಪಾಪಾನಿ ಕೋಟಿಜನ್ಮಕೃತಾನ್ಯಪಿ ॥ ೭ ॥

ಯಾವದಾಂದೋಳಯೇದ್ದೇವಂ ವಿಶ್ವೇಶಂ ವಿಶ್ವನಾಯಕಂ ।
ಕಲೌ ಯೇ ವೈ ಪ್ರಪಶ್ಯಂತಿ ದೋಲಾರೂಢಂ ಜನಾರ್ದನಂ ॥ ೮ ॥

---

೪. ಮಹಾದೇವನು ಹೇಳಿದನು–ಎಲೈ ಪಾರ್ವತಿಯೇ! ಮಾಸಮಾಸಗಳಲ್ಲಿಯೂ ನಡೆಯುವ ಉತ್ಸವವಿಧಿಯನ್ನು ಹೇಳುತ್ತೇನೆ. ಆ ವಿಧಿಯನ್ನೂ ಆ ಗೀತೆಗಳನ್ನೂ ನೀನು ಕೇಳಿ ಸಂತೋಷಗೊಳ್ಳುತ್ತೀಯೆ.

೫. ಚೈತ್ರಮಾಸದ ಶುಕ್ಲಪಕ್ಷದಲ್ಲಿ ಏಕಾದಶಿಯ ದಿವಸ ಶ್ರೀ ಕೃಷ್ಣನನ್ನು ತೊಟ್ಟಿಲಿನಲ್ಲಿ ಕೂರಿಸಿ ಪೂಜಿಸಬೇಕು.

೬. ಆಗ ಭಕ್ತಿಯಿಂದಲೂ ವಿಧಿಯಂತೆಯೂ ಆ ಉತ್ಸವವನ್ನು ಮಾಡಬೇಕು. ಆರೀತಿಮಾಡಿ ಕಲಿಯ ಕಲ್ಮಷವನ್ನು ನಾಶಮಾಡುವ ಸ್ವಾಮಿಯನ್ನು ದರ್ಶನಮಾಡಬೇಕು.

೭–೧೦. ಹಾಗೆ ಮಾಡಿದರೆ ಅವರ ಸಾವಿರಾರು ಅಪರಾಧಗಳು ಹೋಗುತ್ತವೆ. ಕೋಟಿಜನ್ಮಪಾಪಗಳಾದರೂ ವಿಶ್ವೇಶನಾದ ಸ್ವಾಮಿಯನ್ನು ತೂಗುವವರೆಗೆ ಇರುತ್ತವೆ. ತೂಗಿದ ಒಡನೆಯೇ ಹೊರಟುಹೋಗುತ್ತವೆ. ತೊಟ್ಟಿಲಲ್ಲಿರುವ ಜನಾರ್ದನನ್ನು ಕಲಿಯುಗದಲ್ಲಿ ನೋಡಿದರೆ ಅವರು ಗೋಹತ್ಯೆ ಬ್ರಹ್ಮಹತ್ಯೆಗಳನ್ನೂ

ಗೋಘ್ನಾದಿಕಾಃ ಪ್ರಮುಚ್ಯಂತೇ ಕಾ ಕಥಾ ಇತರೇಷ್ವಪಿ ।
ಡೋಲೋತ್ಸವ ಪ್ರಹೃಷ್ಟಾಸ್ತು ರುದ್ರೇಣ ಸಹಿತಾಸ್ಸುರಾಃ　　|| ೯ ||

ಆಲೀನಾಪ್ರಾಪ್ತರುದ್ರಸ್ತು ರುದ್ರೇಣ ಸಹಿತಾಸ್ಸುರಾಃ ।
ಡೋಲಾಯಾಂ ಚ ಸಮಾಯಾಂತಿ ವಿಷ್ಣುದರ್ಶನಲಾಲಸಾಃ　　|| ೧೦ ||

ಕುರ್ವಂತಿ ಪ್ರಾಂಗಣೇ ನೃತ್ಯಗೀತವಾದ್ಯಂ ಚ ಹರ್ಷಿತಾಃ ।
ಋಷಯೋ ಗಣಗಂಧರ್ವಾ ರಂಭಾದ್ಯಪ್ಸರಸಾಂ ಗಣಾಃ　　|| ೧೧ ||

ವಾಸುಕಿಪ್ರಮುಖಾ ನಾಗಾಸ್ತಥಾ ದೇವಾಸ್ಸುರೇಶ್ವರಾಃ ।
ಡೋಲಾಯಾತ್ರಾನಿಮಿತ್ತಂ ತು ಡೋಲಾಹೇ ಮಧುಮಾಧವೇ　　|| ೧೨ ||

ಭೂತಾನಿ ಸಂತಿ ಭೂಪೃಷ್ಠೇ ಯೇ ಕೇಚಿದ್ದೇವಯೋನಯಃ ।
ಸಮಾಯಾಂತಿ ಮಹಾದೇವಿ ಕೃಷ್ಣೇ ಡೋಲಾಸ್ಥಿತೇ ಧ್ರುವಂ　　|| ೧೩ ||

ವಿಷ್ಣುಂ ಡೋಲಾಸ್ಥಿತಂ ದೃಷ್ಟ್ವಾ ತ್ರೈಲೋಕ್ಯಸ್ಯೋತ್ಸವೋ ಭವೇತ್ ।
ತಸ್ಮಾತ್ಕಾರ್ಯಶತಂ ತ್ಯಕ್ತ್ವಾ ಡೋಲಾಹೇ ಉತ್ಸವಂ ಕುರು　　|| ೧೪ ||

---

ಮಾಡಿದ್ದರೂ ಆ ಪಾಪಗಳನ್ನೂ ಕಳೆದುಕೊಳ್ಳುವಾಗ ಇತರರ ವಿಷಯಗಳನ್ನು ಹೇಳತಕ್ಕದ್ದೇನಿದೆ! ಆ ಸ್ವಾಮಿಯ ಡೋಲೋತ್ಸವವನ್ನು ನೋಡುವುದಕ್ಕೋಸ್ಕರ ರುದ್ರನು ದೇವತೆಗಳೊಡನೆ ಆ ಉತ್ಸವ ನಡೆಯುವ ಜಾಗಕ್ಕೆ ಬಂದು ಒಬ್ಬರಿಗೂ ಕಾಣದಂತೆ ಇದ್ದುಕೊಂಡು ನೋಡುತ್ತಾನೆ.

೧೧-೧೩. ಆ ರುದ್ರನೂ ಅವನ ಗಣಗಳೂ ಸಂತೋಷದಿಂದ ಆ ಜಾಗದಲ್ಲಿ ಕುಣಿಯುತ್ತಿರುತ್ತಾರೆ. ಋಷಿಗಳು ಗಂಧರ್ವರು ರಂಭೆಯೇ ಮೊದಲಾದ ಅಪ್ಸರಸ್ತ್ರೀಯರು ವಾಸುಕಿ ಮುಂತಾದ ನಾಗರು ದೇವದೇವನಾದ ಇಂದ್ರ ಇವರೆಲ್ಲರೂ ವೈಶಾಖ ಮಾಸದಲ್ಲಿ ಈ ಡೋಲೋತ್ಸವ ಯಾತ್ರೆಗೆ ಬರುತ್ತಾರೆ. ಅಲ್ಲದೆ, ಮತ್ತೆ ಯಾರು ಯಾರು ದೇವತೆಗಳಿರುವರೋ ಅವರೆಲ್ಲರೂ ಈ ಡೋಲೋತ್ಸವಕ್ಕಾಗಿ ಬರುತ್ತಾರೆ.

೧೪. ವಿಷ್ಣುವು ಡೋಲೋತ್ಸವವನ್ನು ಮಾಡಿಕೊಳ್ಳುತ್ತಿರುವಾಗ ಮೂರು ಲೋಕಕ್ಕೂ ಉತ್ಸವವು ನಡೆಯುತ್ತದೆ. ಆದ್ದರಿಂದ ಎಷ್ಟೇ ಕೆಲಸವಿದ್ದರೂ ಬಿಟ್ಟು ಆದಿನ ಡೋಲೋತ್ಸವವನ್ನು ಮಾಡು.

ಪ್ರಹ್ಲಾದಸ್ತು ಸಮಾಯಾತಿ ವಿಷ್ಣೋರ್ಡೋಲಾಧಿರೋಹಣಂ ।
ಕುರುತೇ ಚ ಮಹಾದೇವಿ ವರದಂ ತಮನುಸ್ಮರನ್ ॥ ೧೫ ॥

ಡೋಲಾಸ್ಥಿತಸ್ಯ ಕೃಷ್ಣಸ್ಯ ಯೇ ಕುರ್ವಂತಿ ಪ್ರಜಾಗರಂ ।
ಸರ್ವಪುಣ್ಯಫಲಪ್ರಾಪ್ತಿರ್ನಿಮೇಷೈಕೇನ ಜಾಯತೇ ॥ ೧೬ ॥

ಡೋಲಾಯಾಂ ಸಂಸ್ಥಿತಂ ವಿಷ್ಣುಂ ಪಶ್ಯಂತಿ ಮಧುಮಾಧವೇ ।
ಕ್ರೀಡಂತಿ ವಿಷ್ಣುನಾ ಸಾರ್ಧಂ ದೇವದೇವೇನ ವಂದಿತಾಃ ॥ ೧೭ ॥

ದಕ್ಷಿಣಾಭಿಮುಖಂ ದೇವಂ ಡೋಲಾರೂಢಂ ಸುರೇಶ್ವರಿ ।
ಸಕೃದ್ದೃಷ್ಟ್ವಾತು ಗೋವಿಂದಂ ಮುಚ್ಯತೇ ಬ್ರಹ್ಮಹತ್ಯಯಾ ॥ ೧೮ ॥

ಓಂ ಡೋಲಾರೂಢಾಯ ವಿದ್ಮಹೇ ಮಾಧವಾಯ ಧೀಮಹಿ ।
ತನ್ನೋದೇವಃ ಪ್ರಚೋದಯಾತ್ ॥
ಇದಂ ಗಾಯತ್ರ್ಯಾ ಪೂಜನಂ ॥ ೧೯ ॥

---

೧೫. ವಿಷ್ಣುವಿಗೆ ಡೋಲಾಧಿ ರೋಹಣವಾಗುತ್ತಿರುವಾಗ ಪ್ರಹ್ಲಾದನು ತನಗೆ ವರಕೊಟ್ಟುದನ್ನು ಸ್ಮರಿಸಿಕೊಂಡು ತಾನೂ ಆ ಉತ್ಸವವನ್ನು ಮಾಡುವನು.

೧೬. ಕೃಷ್ಣನು ಡೋಲಾಧಿರೋಹಣ ಮಾಡಿರುವಾಗ ಜಾಗರಣೆಯನ್ನು ಮಾಡಿದರೆ ಅವರಿಗೆ ಕ್ಷಣಕಾಲದಲ್ಲಿಯೇ ಎಲ್ಲಾ ಪುಣ್ಯವೂ ಸಿಕ್ಕುತ್ತದೆ.

೧೭. ವಸಂತ ಋತುವಿನಲ್ಲಿ ನಡೆಯುವ ಡೋಲೋತ್ಸವದಲ್ಲಿ ಕೃಷ್ಣನನ್ನು ನೋಡಿದರೆ ಅವನು ಆ ಸ್ವಾಮಿಯಿಂದ ಗೌರವಿಸಲ್ಪಟ್ಟವನಾಗಿ ವಿಷ್ಣುವಿನೊಡನೆ ವಾಸಿಸುತ್ತಾನೆ.

೧೮. ಆ ಸ್ವಾಮಿಯು ತೊಟ್ಟಲಿನಲ್ಲಿ ದಕ್ಷಿಣಮುಖವಾಗಿ ಕುಳಿತಿರುವುದನ್ನು ನೋಡಿದರೆ ಬ್ರಹ್ಮಹತ್ಯೆಯು ಹೋಗುತ್ತದೆ.

೧೯. ತೊಟ್ಟಲಿನಲ್ಲಿ ಕೂತಿರುವ ಸ್ವಾಮಿಯನ್ನು ತಿಳಿದು ಅವನನ್ನು ನಮು ಸ್ಮರಿಸುತ್ತೇನೆ. ಆ ಸ್ವಾಮಿಯು ನನ್ನನ್ನು ಕಾಪಾಡಲಿ. ಈ ಗಾಯತ್ರಿಯಿಂದ ಪೂಜಿಸಬೇಕು.

ಮಾಧವಾಯ ಗೋವಿಂದಾಯ ಶ್ರೀಕಂಠಾಯ ನಮೋ ನಮಃ ।
ಪೂಜನಂ ಮಂತ್ರಪೂರ್ವಂ ಚ ಕರ್ತವ್ಯಂ ವಿಧಿಪೂರ್ವಕಂ　　|| ೨೦ ||

ಗುರವೇ ದಕ್ಷಿಣಾಂ ದದ್ಯಾದ್ಯಥಾಶಕ್ತ್ಯಾ ಸಮಾಹಿತಃ ।
ಗಾಯನ್ವಿಷ್ಣೋಸ್ಸದಾ ಭಕ್ತ್ಯಾ ಪರಿಪೂರ್ಣಂ ತತೋ ಭವೇತ್　　|| ೨೧ ||

ಕಿಮನ್ಯದ್ಬಹುನೋಕ್ತೇನ ಭೂಯೋ ಭೂಯೋ ವರಾನನೇ ।
ಡೋಲಾಯಾಂ ಸಂಸ್ಥಿತೋ ವಿಷ್ಣುಃ ಸರ್ವಪಾಪಾಪಹಾರಕಃ　　|| ೨೨ ||

ಪೂಜಿತೋ ಯೈರ್ನರೈಸ್ಸಮ್ಯಕ್ಸದಾ ಸರ್ವಂ ದದಾತಿ ಚ ।
ಯೇತ್ರ ದೇವಾಸ್ಸಗಂಧರ್ವಾಃ ಕಿನ್ನರಾ ಋಷಯಸ್ತಥಾ　　|| ೨೩ ||

ಆಯಾನ್ತಿ ಬಹುಧಾ ತತ್ರ ಡೋಲಾರೂಢೇ ನ ಸಂಶಯಃ ।
ಓಂ ನಮೋ ಭಗವತೇ ವಾಸುದೇವಾಯೇತಿ ಮಂತ್ರೇಣ
ಪೂಜನಂ ತತ್ರ ಕಾರಯೇತ್　　|| ೨೪ ||

---

೨೦. ಮಾಧವನೇ! ಗೋವಿಂದನೇ! ಶ್ರೀಕಂಠನೇ! ನಿನಗೆ ನಮಸ್ಕಾರವು. ಎಂದು ಹೇಳುತ್ತ ಈ ಮಂತ್ರಗಳನ್ನು ಹೇಳಿಕೊಂಡು ನಿಯಮದಂತೆ ಪೂಜೆ ಮಾಡಬೇಕು.

೨೧. ಅನಂತರ ಗುರುವಿಗೆ ಶಕ್ತಿಗನುಗುಣವಾಗಿ ದಕ್ಷಿಣೆಯನ್ನು ಕೊಡಬೇಕು. ಅನಂತರ ಭಕ್ತಿಯಿಂದ ವಿಷ್ಣುವಿನ ನಾಮವನ್ನು ಗಾನಮಾಡಬೇಕು. ಹೀಗೆ ಮಾಡಿದರೆ ವ್ರತವು ಪೂರ್ತಿಯಾಗುತ್ತದೆ.

೨೨. ಎಲೈ ಪಾರ್ವತಿಯೇ ! ಬಹು ಹೇಳಿದುದರಿಂದ ಪ್ರಯೋಜನವೇನು? ಡೋಲೆಯಲ್ಲಿರುವ ವಿಷ್ಣುವನ್ನು ನೋಡಿದರೆ ಎಲ್ಲಾ ಪಾಪಗಳೂ ಹೋಗುತ್ತವೆ.

೨೩–೨೪. ಜನರು ಪೂಜಿಸಿದರೆ ಆ ಸ್ವಾಮಿಯು ಎಲ್ಲವನ್ನೂ ಕೊಡುತ್ತಾನೆ. ಆ ಸ್ವಾಮಿಯು ತೊಟ್ಟಿಲಿನಲ್ಲಿ ಕುಳಿತಿರುವಾಗ ದೇವತೆಗಳು, ಗಂಧರ್ವರು, ಕಿನ್ನರರು, ಋಷಿಗಳು, ಎಲ್ಲರೂ ಅಲ್ಲಿಗೆ ಬರುತ್ತಾರೆ. ಸಂಶಯವಿಲ್ಲ. ಭಗವಂತನಾದ ವಾಸುದೇವನಿಗೆ ನಮಸ್ಕಾರವು ಎಂಬ ಮಂತ್ರದಿಂದ ಸ್ವಾಮಿಯನ್ನು ಪೂಜಿಸಬೇಕು.

ಷೋಡಶೋಪಚಾರೈಃ ಪೂಜಾ ಚ ಕರ್ತವ್ಯಾ ವಿಧಿಪೂರ್ವಕಂ ।
ಧರ್ಮಾರ್ಥಮುಖ್ಯಾ ಯೇ ಕಾಮಾಃ ತಾನ್ಸರ್ವಾನ್ಪ್ರಾಪ್ನುಯಾದ್ಧ್ರುವಂ ॥

ಅಂಗನ್ಯಾಸಂ ಕರನ್ಯಾಸಂ ನ್ಯಾಸಂ ಶಾರೀರಕಂ ಚ ಯತ್ ।
ತತ್ಸರ್ವಂ ಚ ಪ್ರಕರ್ತವ್ಯಂ ಮಂತ್ರೇಣಾನೇನ ಸುವ್ರತ ॥ ೨೬ ॥

ಆಗಮೋಕ್ತೇನ ಮಂತ್ರೇಣ ಕರ್ತವ್ಯೋ ಹಿ ಮಹೋತ್ಸವಃ ।
ಶ್ರೀ ಲಕ್ಷ್ಮ್ಯಾ ಸಹಿತಂ ದೇವಂ ಡೋಲಾಯಾಂ ಚ ಪ್ರಕಲ್ಪಯೇತ ॥ ೨೭ ॥

ದೇವಾಗ್ರೇ ವೈಷ್ಣವಾಃ ಸ್ಥಾಪ್ಯಾ ನಾರದಾದ್ಯಾಸ್ಸುರರ್ಷಯಃ ।
ವಿಷ್ವಕ್ಸೇನಾದಿಕಾ ಭಕ್ತಾಃ ಸ್ಥಾಪ್ಯಾಸ್ತೇ ಹ್ಯಗ್ರತಸ್ಸದಾ ॥ ೨೮ ॥

ಪಂಚವಾದಿತ್ರನಿರ್ಘೋಷೈಃ ಕುರ್ಯಾದಾರಾರ್ತಿಕಂ ಬುಧಃ ।
ಯಾಮೇ ಯಾಮೇ ತಥಾ ದೇವಿ ಪೂಜನೀಯಃ ಪ್ರಯತ್ನತಃ ॥ ೨೯ ॥

---

೨೫. ಷೋಡಶ (ಹದಿನಾರು) ಉಪಚಾರಗಳಿಂದ ವಿಧಿವತ್ತಾಗಿ ಪೂಜೆಯನ್ನು ಮಾಡಬೇಕು. ಹಾಗೆ ಮಾಡಿದರೆ ಧರ್ಮ, ಅರ್ಥ, ಕಾಮಗಳನ್ನು ಹೊಂದುವನು. ನಿಶ್ಚಯವು.

೨೬. ಅಂಗನ್ಯಾಸ, ಕರನ್ಯಾಸ, ಶರೀರನ್ಯಾಸಗಳನ್ನು ಈ ಮಂತ್ರದಿಂದಲೇ ಮಾಡಿಕೊಳ್ಳಬೇಕು.

೨೭. ವೇದದಲ್ಲಿ ಅಥವಾ ಶಾಸ್ತ್ರದಲ್ಲಿ ಹೇಳಿರುವ ರೀತಿಯಿಂದ ಈ ಉತ್ಸವವನ್ನು ಮಾಡಬೇಕು. ಲಕ್ಷ್ಮಿಯೊಡಗೂಡಿದ ವಿಷ್ಣುವನ್ನು ಡೋಲೆಯಲ್ಲಿ ಮಲಗಿಸಬೇಕು.

೨೮. ಆ ಸ್ವಾಮಿಯ ಎದುರಿನಲ್ಲಿ ವಿಷ್ಣುಭಕ್ತರನ್ನೂ ನಾರದನೇ ಮುಂತಾದ ದೇವರ್ಷಿಗಳನ್ನೂ ವಿಷ್ವಕ್ಸೇನನೇ ಮುಂತಾದ ಭಕ್ತರನ್ನೂ ಇಡಬೇಕು.

೨೯. ಪಂಚವಾದ್ಯಗಳನ್ನು ಧ್ವನಿಮಾಡಿಸುತ್ತ ಮಂಗಳಾರತಿಯನ್ನು ಮಾಡಬೇಕು. ಈ ರೀತಿಯಾಗಿ ಪ್ರತಿಯಾಮದಲ್ಲಿಯೂ ಪೂಜಿಸಬೇಕು.

ನಾರಿಕೇಳೈಸ್ತಥಾ ಶುಭ್ರೈಃ ಕದಲ್ಯೈರ್ವಾ ತಥಾ ಪುನಃ ।
ಅರ್ಘ್ಯಂ ದದ್ಯಾತ್ತತೋ ದೇವಿ ಪೂಜನೀಯಃ ಪ್ರಯತ್ನತಃ ॥ ೩೦ ॥

ದೇವದೇವ ಜಗನ್ನಾಥ ಶಂಖಚಕ್ರಗದಾಧರ ।
ಅರ್ಘ್ಯಂ ಗೃಹಾಣ ಮೇ ದೇವ ಕೃಪಾಂ ಕುರು ಮಮೋಪರಿ ॥ ೩೧ ॥

ತಚ್ಛೇಷಂ ವೈಷ್ಣವಾನಾಂ ತು ದದ್ಯಾತ್ಪಾದ್ಯಾದಿಕಂ ಪುನಃ ।
ವಾದನಂ ನರ್ತನಂ ತತ್ರ ಕರ್ತವ್ಯಂ ವೈಷ್ಣವೈರ್ನರೈಃ ॥ ೩೨ ॥

ಆಂದೋಳನಂ ತತಸ್ಸರ್ವೈಃ ಕರ್ತವ್ಯಂ ಚ ವಿಶೇಷತಃ ।
ಪೃಥಿವ್ಯಾಂ ಯಾನಿ ತೀರ್ಥಾನಿ ಕ್ಷೇತ್ರಾಣಿ ಚ ಸುರೇಶ್ವರಿ ॥ ೩೩ ॥

ಸರ್ವಾಣ್ಯೇತಾನಿ ವೈ ತತ್ರ ದ್ರಷ್ಟುಮಾಯಾಂತಿ ತದ್ದಿನೇ ।
ಏವಂ ಜ್ಞಾತ್ವಾ ಸದಾ ದೇವಿ ಕರ್ತವ್ಯಃ ಉತ್ಸವೋ ಮಹಾನ್ ॥ ೩೪ ॥

---

೩೦. ಒಳ್ಳೆಯ ತೆಂಗಿನಕಾಯಿ, ಬಾಳೆಹಣ್ಣುಗಳನ್ನು ನೈವೇದ್ಯ ಮಾಡಬೇಕು. ಅನಂತರ ಅರ್ಘ್ಯವನ್ನು ಕೊಡಬೇಕು. ಈರೀತಿಯಾಗಿ ಪೂಜಿಸಬೇಕು.

೩೧. ಎಲೈ ದೇವದೇವನೇ ! ಜಗನ್ನಾಥನೆ ! ಶಂಖ ಚಕ್ರ ಗದಾಧರನೇ ! ಈ ಅರ್ಘ್ಯವನ್ನು ಸ್ವೀಕರಿಸು. ನನ್ನ ಮೇಲೆ ದಯೆಯಿಡು ಎನ್ನಬೇಕು.

೩೨. ಆ ಸ್ವಾಮಿಯ ನೈವೇದ್ಯ ಶೇಷವನ್ನು ಎಲ್ಲರಿಗೂ ಕೊಡಬೇಕು ದೇವರಿಗೆ ಅನಂತರ ಪಾದ್ಯವನ್ನು ಸಮರ್ಪಿಸಬೇಕು. ಅನಂತರ ವೈಷ್ಣವರೊಡನೆ ವಾದ್ಯವನ್ನು ಮಾಡಿಸಿಕೊಂಡು ಕುಣಿಯಬೇಕು.

೩೩–೩೪. ಅನಂತರ ಎಲ್ಲರೂ ತೊಟ್ಟಿಲನ್ನು ತೂಗಬೇಕು. ಭೂಮಿಯಲ್ಲಿರುವ ತೀರ್ಥಗಳೂ, ಕ್ಷೇತ್ರಗಳೂ, ಎಲ್ಲವೂ ಆ ಸ್ವಾಮಿಯನ್ನು ನೋಡಲು ಅಲ್ಲಿಗೆ ಬರುತ್ತವೆ. ಇದನ್ನು ತಿಳಿದು ಎಲ್ಲರೂ ಈ ಉತ್ಸವವನ್ನು ಮಾಡಬೇಕು.

ಬ್ರಾಹ್ಮಣಾಃ ಕ್ಷತ್ರಿಯಾ ವೈಶ್ಯಾಶ್ಶೂದ್ರಾದ್ಯಾಶ್ಚಾನ್ಯಜಾತಯಃ ।
ಶಂಖಚಕ್ರಧರಾಸ್ಸರ್ವೇ ಜ್ಞಾತವ್ಯಾ ನಗನಂದಿನಿ ॥ ೩೫ ॥

ಇತಿ ಶ್ರೀ ಮಹಾಪುರಾಣೇ ಪಾದ್ಮೇ ಉತ್ತರಖಂಡೇ ಪಾರ್ವತೀ ಮಹಾದೇವ ಸಂವಾದೇ ಡೋಲೋತ್ಸವ ಕಥನಂ ನಾಮ ಪಂಚಾಶೀತಿತಮೋಽಧ್ಯಾಯಸ್ಸಮಾಪ್ತಃ

---

೩೫. ಬ್ರಾಹ್ಮಣರು, ಕ್ಷತ್ರಿಯರು, ವೈಶ್ಯರು, ಶೂದ್ರರು ಉಳಿದ ಜಾತಿಯವರೂ ಕೂಡ ಆ ಕಾಲದಲ್ಲಿ ಶಂಖಚಕ್ರಗಳನ್ನು ಧರಿಸಿರಬೇಕು.

ಇಂತು ಶ್ರೀ ಪದ್ಮಮಹಾಪುರಾಣದ ಉತ್ತರಖಂಡದ ಪಾರ್ವತೀ ಮಹಾದೇವರ ಸಂವಾದದಲ್ಲಿ ಡೋಲೋತ್ಸವ ಕಥನ ಎಂಬ ಎಂಭತ್ತೈದನೆಯ ಅಧ್ಯಾಯವು ಮುಗಿದುದು.



॥ ಶ್ರೀಃ ॥

-X-

# ಅಥ ಶ್ರೀ ಮಹಾಪುರಾಣೇ ಪಾದ್ಮೇ ಉತ್ತರಖಂಡೇ

## ॥ ಷಡಶೀತಿತಮೋಽಧ್ಯಾಯಃ ॥



॥ ಮಹಾದೇವ ಉವಾಚ ॥

ಅಸ್ಮಿನ್ನೈ ಚೈತ್ರಮಾಸೇ ತು ಕಾರ್ಯೋ ದಮನಕೋತ್ಸವಃ ।
ದ್ವಾದಶ್ಯಾಂ ತು ತಥಾ ಸಮ್ಯಗ್ವಿಧಿಃ ಕಾರ್ಯೋ ವಿಶೇಷತಃ ॥ ೧ ॥

ವೈಷ್ಣವೈಶ್ಶ್ರದ್ಧಯಾ ಪುಣ್ಯೋ ಜನತಾನಂದವರ್ಧನಃ ।
ದೇವಾನಂದಸಮುದ್ಭೂತಾ ದಿವ್ಯಾ ದಮನಮಂಜರೀ ॥ ೨ ॥

ನಿವೇದ್ಯಾ ವೈಷ್ಣವೈರ್ಭಕ್ತ್ಯೈಸ್ಸರ್ವಪೂಜಾಫಲೇಪ್ಸುಭಿಃ ।
ಚೈತ್ರೇ ಚ ಶುಕ್ಲಪಕ್ಷೇ ತು ದ್ವಾದಶ್ಯಾಂ ನಗನಂದಿನಿ ॥ ೩ ॥

ಕಾರಯೇತ್ಪರಯಾ ಭಕ್ತ್ಯಾ ಮಹೋತ್ಸವಮನಾಸ್ತಥಾ ।
ತತ್ರಾದೌ ಚ ಸ್ವಯಂ ಗತ್ವಾ ಆರಾಮಂ ಪ್ರತಿಚಾನಘೇ ॥ ೪ ॥

---

## ಎಂಭತ್ತಾರನೆಯ ಅಧ್ಯಾಯವು



೧. ಮಹಾದೇವನು ಹೇಳಿದನು–ಈ ಚೈತ್ರಮಾಸದಲ್ಲಿಯೇ ದಮನಕೋತ್ಸವವನ್ನೂ ಮಾಡಬೇಕು ಇದನ್ನು ಚೈತ್ರಮಾಸದ ದ್ವಾದಶಿಯ ದಿವಸ ಮಾಡಬೇಕು. ಅದು ಶಾಸ್ತ್ರಸಮ್ಮತವು.

೨. ಈ ಪುಣ್ಯಕೆಲಸವನ್ನು ವೈಷ್ಣವರು ಶ್ರದ್ಧೆಯಿಂದ ಮಾಡಬೇಕು. ಈ ದಮನ ಉತ್ಸವವು ದೇವತೆಗಳಿಗೂ ಆನಂದಕರವಾದುದು.

೩–೪. ಆ ದಮನೋತ್ಸವದಲ್ಲಿ ದಮನದ ಗೊಂಚಲನ್ನು ತಂದು ಸ್ವಾಮಿಗೆ ಒಪ್ಪಿಸಬೇಕು. ಚೈತ್ರ ಶುಕ್ಲ ದ್ವಾದಶಿಯ ದಿನ ಈ ಮಹೋತ್ಸವವನ್ನು ಮಾಡಬೇಕು. ಆಗತಾನೆ ತೋಟಕ್ಕೆ ಹೋಗಬೇಕು.

ಗುರ್ವಾಜ್ಞಯಾ ಪ್ರಕರ್ತವ್ಯಂ ಪೂಜನಂ ರತಿನಾ ಸಹ ।
ಕಾಮದೇವ ನಮಸ್ತೇಽಸ್ತು ವಿಶ್ವಮೋಹನಕಾರಕ ॥ ೫ ॥

ವಿಷ್ಣೋರರ್ಥೇ ವಿಚಿನ್ವಾಮಿ ಕೃಪಾಂ ಕುರು ಮಮೋಪರಿ ।
ಗೀತವಾದಿತ್ರನಿರ್ಘೋಷೈರಾನೇತವ್ಯೋ ಗೃಹಂ ಪ್ರತಿ ॥ ೬ ॥

ಏಕಾದಶ್ಯಾಂ ಸುರಶ್ರೇಷ್ಠೇ ಹ್ಯಧಿವಾಸನಪೂರ್ವಕಂ ।
ಕರ್ತವ್ಯಂ ಪೂಜನಂ ತತ್ರ ರಾತ್ರೌ ಭಕ್ತ್ಯಾ ತು ವೈಷ್ಣವೈಃ ॥ ೭ ॥

ಕರ್ತವ್ಯಮಗ್ರತಸ್ತಸ್ಯ ಸರ್ವತೋಭದ್ರಮಂಡಲಂ ।
ಸ್ಥಾಪಯಿತ್ವಾ ತು ದೇವೇಶಂ ರತಿನಾ ತತ್ರ ವೈ ಸಹ ॥ ೮ ॥

ಆಚ್ಛಾದ್ಯ ಚೈಕವಸ್ತ್ರೇಣ ದಮನಂ ಸ್ಥಾಪಯೇದ್ಬುಧಃ ।
ತತ್ರ ವೈ ಪೂಜನಂ ಕಾರ್ಯಂ ವೈಷ್ಣವೈರ್ದ್ವಿಜಸತ್ತಮೈಃ ॥ ೯ ॥

---

೫. ಗುರುವಿನ ಅಪ್ಪಣೆಯಂತೆ ರತಿಯೊಡನೆ ಕೂಡಿರುವ ಸ್ವಾಮಿಗೆ ಈ ದಮನನ ಪೂಜೆಯನ್ನು ಮಾಡಬೇಕು. ಎಲೈ ಕಾಮದೇವನೇ! ನಿನಗೆ ನಮಸ್ಕಾರವು. ವಿಶ್ವಮೋಹನನೇ! ನಿನಗೆ ನಮಸ್ಕಾರವು.

೬. ಎಲೈ ದಮನನೇ! ವಿಷ್ಣುವಿಗೋಸ್ಕರ ನಿನ್ನನ್ನು ಕುಯ್ಯುತ್ತೇನೆ. ನನ್ನ ಮೇಲೆ ಕೃಪೆಮಾಡು. ಎಂದು ಹೇಳಿ ಗೀತವಾದ್ಯಗಳೊಡನೆ ಮನೆಗೆ ತರಬೇಕು.

೭. ಏಕಾದಶಿಯ ದಿನ ಜಲಾಧಿವಾಸ ಧಾನ್ಯಾಧಿವಾಸಗಳನ್ನು ಮಾಡಿಸಿ ದ್ವಾದಶಿಯ ದಿವಸ ರಾತ್ರಿಯಲ್ಲಿ ಆವಾಹನಾದಿಗಳಿಂದ ಪೂಜಿಸಬೇಕು.

೮. ಒಂದು ಸರ್ವತೋ ಭದ್ರಮಂಡಲವನ್ನು ಬರೆದು ಅದರಲ್ಲಿ ರತಿಯೊಡಗೂಡಿದ ಕಾಮದೇವನನ್ನು ಸ್ಥಾಪಿಸಬೇಕು.

೯. ಅಲ್ಲಿ ಆ ದಮನ ಮೂರ್ತಿಯನ್ನು ಬಟ್ಟೆಯಿಂದ ಹೊದ್ದಿಸಿ ಭಕ್ತರಾದ ವರು ಪೂಜಿಸಬೇಕು.

ಕ್ಲೀಂ ಕಾಮದೇವಾಯ ನಮೋ ಹ್ರೀಂ ರತ್ಯೈ ತತ್ತಥಾ ನಮಃ ।
ಐಂದ್ರ್ಯಾಂ ಹ್ರೀಂ ದಿಶಿ ಸಂಸ್ಥಾಪ್ಯ ಕಂದರ್ಪಂ ಪೂಜಯೇದ್ಬುಧಃ ॥೧೦॥

ಗಂಧಪುಷ್ಪಂ ತಥಾ ಧೂಪಂ ದೀಪಮಾರಾರ್ತಿಕಂ ತಥಾ ।
ರಾತ್ರೌ ಚ ಭಕ್ತ್ಯಾ ಕರ್ತವ್ಯಂ ವಿಧಿನಾತ್ರ ಸುರೇಶ್ವರೀ ॥ ೧೧ ॥

ಮದನಾಯ ನಮ ಇತಿ ಪ್ರಾಚ್ಯಾಂ।ಮನ್ಮಥಾಯ ನಮ ಇತಿ ಆಗ್ನೇಯ್ಯಾಂ ।
ಕಂದರ್ಪಾಯ ನಮ ಇತಿ ಯಾಮ್ಯೇ । ಅನಂಗಾಯ ನಮ ಇತಿ ರಕ್ಷೋದಿಶಿ ।
ಭಸ್ಮಶರೀರಾಯ ನಮ ಇತಿ ವಾರುಣ್ಯಾಂ। ಸ್ಮರಾಯ ನಮ ಇತಿ ವಾಯುವ್ಯೇ।
ಈಶ್ವರಾಯ ನಮ ಇತಿ ಕೌಬೇರ್ಯಾಂ । ಪುಷ್ಪಬಾಣಾಯ
ನಮ ಇತಿ ಈಶಾನ್ಯಾಂ ॥ ೧೨ ॥

ಚತುರ್ದಿಕ್ಷು ಚ ಸರ್ವಾಸು ಪೂಜನಂ ತತ್ರ ಕಾರಯೇತ್ ।
ಪೂಜಿತೇ ಕೇಶವೇ ಚಾತ್ರ ಸರ್ವದೇವಾಸ್ಸುಪೂಜಿತಾಃ ॥ ೧೩ ॥

---

೧೦. ಕ್ಲೀಂ ಕಾಮದೇವನಿಗೆ ನಮಸ್ಕಾರವು. ಹ್ರೀಂ ರತಿಗೆ ನಮಸ್ಕಾರವು ಇಂದ್ರದಿಕ್ಕಿನಲ್ಲಿ ಪೂರ್ವಕ್ಕೆ ಆ ವಿಗ್ರಹವನ್ನು ಇಟ್ಟು ಇಂತೆಂದು ಪೂಜಿಸಬೇಕು.

೧೧. ಆ ರಾತ್ರಿಯಲ್ಲಿ ಗಂಧ, ಹೂ, ದೀಪ, ಧೂಪ, ಮಂಗಳಾರತಿಯಿಂದ ಆ ಸ್ವಾಮಿಯನ್ನು ಪೂಜಿಸಬೇಕು.

೧೨. ಮದನನಿಗೆ ನಮಸ್ಕಾರವೆಂದು ಪೂರ್ವದಿಕ್ಕಿನಲ್ಲಿಯೂ, ಮನ್ಮಥನಿಗೆ ನಮಸ್ಕಾರವೆಂದು ಆಗ್ನೇಯದಿಕ್ಕಿನಲ್ಲಿಯೂ, ಕಂದರ್ಪನಿಗೆ ನಮಸ್ಕಾರವೆಂದು ದಕ್ಷಿಣದಿಕ್ಕಿನಲ್ಲಿಯೂ, ಅನಂಗನಿಗೆ ನಮಸ್ಕಾರವೆಂದು ನೈಋತ್ಯದಿಕ್ಕಿನಲ್ಲಿಯೂ, ಭಸ್ಮಶರೀರದವನಿಗೆ ನಮಸ್ಕಾರವೆಂದು ಪಶ್ಚಿಮದಿಕ್ಕಿನಲ್ಲಿಯೂ, ಸ್ಮರನಿಗೆ ನಮಸ್ಕಾರವೆಂದು ಉತ್ತರದಿಕ್ಕಿನಲ್ಲಿಯೂ, ಪುಷ್ಪಬಾಣನನಿಗೆ ನಮಸ್ಕಾರವೆಂದು ಈಶಾನ್ಯದಿಕ್ಕಿನಲ್ಲಿಯೂ ಪೂಜಿಸಬೇಕು.

೧೩. ಈ ರೀತಿಯಾಗಿ ನಾಲ್ಕು ದಿಕ್ಕುಗಳಲ್ಲಿಯೂ, ಮತ್ತು ನಾಲ್ಕು ವಿದಿಕ್ಕುಗಳಲ್ಲಿಯೂ ಪೂಜಿಸಬೇಕು. ಈ ರೀತಿಯಾಗಿ ಕೇಶವನನ್ನು ಪೂಜಿಸಿದರೆ ಎಲ್ಲಾ ದೇವರನ್ನೂ ಸಹ ಪೂಜಿಸಿದಂತೆ ಆಗುತ್ತದೆ.

ಅಕ್ಷತಗಂಧಧೂಪನೈವೇದ್ಯೈಸ್ತಾಂಬೂಲೈಶ್ಚ
ದಮನಕಂಪೂಜಯಿತ್ವಾ ತು । ತತ್ಪುರುಷಾಯ ವಿದ್ಮಹೇ ।
ಕಾಮದೇವಾಯ ಧೀಮಹಿ । ತನ್ನೋಽನಂಗಃಪ್ರಚೋದಯಾತ್ ॥ ೧೪ ॥

ಇತಿ ವೈ ಕಾಮಗಾಯತ್ರ್ಯಾಽಷ್ಟೋತ್ತರಶತವಾರಂ ।
ತಂ ದಮನಕಮಭಿಮಂತ್ರ್ಯ ನಮಸ್ಕುರ್ಯಾತ್ ॥ ೧೫ ॥

ನಮೋಽಸ್ತು ಪುಷ್ಪಬಾಣಾಯ ಜಗದಾಹ್ಲಾದಕಾರಿಣೇ ।
ಮನ್ಮಥಾಯ ಜಗನ್ನೇತ್ರೇ ರತಿಪ್ರೀತಿಕರಾಯ ಚ ॥ ೧೬ ॥

ದೇವದೇವ ನಮಸ್ತೇಽಸ್ತು ಶ್ರೀ ವಿಶ್ವೇಶ ನಮೋಽಸ್ತು ತೇ ।
ರತಿಪತೇ ನಮಸ್ತೇಽಸ್ತು ನಮಸ್ತೇ ವಿಶ್ವಮಂಡನ ॥ ೧೭ ॥

ನಮಸ್ತೇಽಸ್ತು ಜಗನ್ನಾಥ ಸರ್ವಬೀಜ ನಮೋಽಸ್ತು ತೇ ।
ಏತೈರ್ನಾನಾವಿಧೈರ್ಮಂತ್ರೈರಾಗಮೋಕ್ತೈರ್ವಿಶೇಷತಃ ॥ ೧೮ ॥

---

೧೪. ಅಕ್ಷತೆ, ಗಂಧ, ಧೂಪ, ದೀಪ, ನೈವೇದ್ಯ, ತಾಂಬೂಲಗಳಿಂದ ಆದ ಮನಕನನ್ನು ಪೂಜಿಸಿ ಆ ಸ್ವಾಮಿಯು ನನ್ನ ಮನಸ್ಸಿನಲ್ಲಿರಲಿ. ಆ ಕಾಮದೇವ ನನ್ನು ಪೂಜಿಸುತ್ತೇನೆ. ಆ ಅನಂಗನು ನನ್ನನ್ನು ಕಾಪಾಡಲಿ ಎಂದೆನ್ನಬೇಕು.

೧೫. ಮೇಲೆ ಹೇಳಿದ ಕಾಮಗಾಯತ್ರಿ ಮಂತ್ರವನ್ನು ನೂರೆಂಟುಬಾರಿ ಜಪಮಾಡಿ ಆ ದಮನಕನನ್ನು ಮಂತ್ರಿಸಿ ನಮಸ್ಕರಿಸಬೇಕು.

೧೬. ಪುಷ್ಪಬಾಣನಿಗೆ ನಮಸ್ಕಾರವು. ಪ್ರಪಂಚಕ್ಕೆ ಆಹ್ಲಾದಕಾರಿಯಾ ದವನಿಗೆ ನಮಸ್ಕಾರವು. ಜಗನ್ನಾಥನೂ, ಜಗತ್ತಿಗೆ ಕಣ್ಣುಗಳಂತಿರುವವನೂ ಆದ ಆ ಸ್ವಾಮಿಗೆ ನಮಸ್ಕಾರವು. ರತಿಗೆ ಪ್ರೀತಿಯನ್ನುಂಟುಮಾಡುವವನಿಗೆ ನಮಸ್ಕಾರವು.

೧೭–೧೮. ದೇವದೇವನೇ ! ನಮಸ್ಕಾರವು. ಶ್ರೀ ವಿಶ್ವೇಶ್ವರನೇ ! ನಮಸ್ಕಾರವು. ರತಿಪತಿಯೇ ! ನಮಸ್ಕಾರವು. ಜಗನ್ನಾಥನೇ ! ನಿನಗೆ ನಮಸ್ಕಾರವು. ಪ್ರಪಂಚಕ್ಕೆ ಅಲಂಕಾರಪ್ರಾಯನೇ ! ನಿನಗೆ ನಮಸ್ಕಾರವು. ಎಲ್ಲದಕ್ಕೂ ಕಾರಣನೇ ! ನಿನಗೆ ನಮಸ್ಕಾರವು. ಇವೇ ಮುಂತಾದ ಮಂತ್ರಗಳಿಂದ ಪೂಜಿಸಬೇಕು.

ಪೂಜನೀಯಃ ಪ್ರಯತ್ನೇನ ರತ್ಯಾ ಸಹ ಜನಾರ್ದನಃ ।
ತತೋ ನಿವೇದ್ಯ ತತ್ಕರ್ಮ ಜಾಗರಂ ಕಾರಯೇದ್ಬುಧಃ ॥ ೧೯ ॥

ದೇವದೇವ ಜಗನ್ನಾಥ ವಾಂಛಿತಾರ್ಥಪ್ರದಾಯಕ ।
ಹೃತ್‌ಸ್ಥಾನ್ಪೂರಯ ಮೇ ವಿಷ್ಣೋ ಕಾಮಾನ್ಕಾಮೇಶ್ವರೀಪ್ರಿಯ ॥ ೨೦ ॥

ಇತ್ಯೇತ್ಯೈರ್ಬಹುಭಿರ್ಮಂತ್ರೈಃ ಪೂಜನೀಯಃ ಪ್ರಯತ್ನತಃ ।
ಶ್ರೀನಿವಾಸೋ ಜಗನ್ನಾಥೋ ಭಕ್ತಾನಾಂ ಶಮಭೀಷ್ಟಕೃ ॥ ೨೧ ॥

ತತೋ ದಮನಕಂ ಪುಷ್ಪೈಃ ಗೃಹೀತ್ವಾ ಮೂಲಮಂತ್ರೇಣ ।
ಶ್ರೀ ವಿಷ್ಣ್ವಾದಿದೇವೇಭ್ಯಃ ದಮನಕಂ ನಿವೇದಯೇತ್ ।
ತತೋ ಗಂಧಾದಿಭಿರ್ಮಹತೀ ಪೂಜಾ ।
ಗೀತವಾದ್ಯನೃತ್ಯೈಶ್ಚ ಮಹೋತ್ಸವಃ ಕಾರ್ಯಃ ।
ದೇವಾಗ್ರೇ ಸ್ಥಾಪಯಿತ್ವಾ ಕಲಶೋದಕಂ ದೇವಸ್ಯ ।
ಪಾದಯೋರ್ನಿಕ್ಷಿಪ್ಯ ಜಲಕ್ರೀಡಾ ತಸ್ಮಿನ್ದಿನೇ ಕರ್ತವ್ಯಾ ।
ತತಸ್ಸ್ವಗುರುಂ ವಸ್ತ್ರಾಲಂಕಾರದ್ರವಿಣೈಃ ಶ್ರದ್ಧಯಾ ಪೂಜಯೇತ್ ।
ತಸ್ಸ್ವಯಂ ಬಂಧುಭಿರ್ವೈಷ್ಣವೈಸ್ಸಹಾಶ್ನೀಯಾತ್ ॥ ೨೨ ॥

---

೧೯–೨೦. ರತಿಯೊಡನೆ ಆ ಜನಾರ್ದನನನ್ನು ಪೂಜಿಸಬೇಕು. ಆ ಪೂಜಾ ಕರ್ಮವನ್ನು ಆ ಸ್ವಾಮಿಗೆ ನಿವೇದಿಸಿ ಜಾಗರಣೆಮಾಡಬೇಕು. ದೇವದೇವನೇ! ಜಗನ್ನಾಥನೇ ! ಬೇಕಾದುದನ್ನು ಕೊಡುವವನೇ ! ಕಾಮೇಶ್ವರೀ ಪ್ರಿಯನಾದ ವಿಷ್ಣುವೇ ! ನನ್ನ ಮನಸ್ಸಿನಲ್ಲಿರುವುದನ್ನೆಲ್ಲಾ ಪೂರ್ತಿಗೊಳಿಸು.

೨೧. ಈ ರೀತಿಯಾದ ಅನೇಕ ಮಂತ್ರಗಳಿಂದ ಪ್ರಯತ್ನಪಟ್ಟು ಪೂಜಿಸಬೇಕು. ಹಾಗೆ ಪೂಜಿಸಿದರೆ ಜಗನ್ನಾಥನಾದ ಶ್ರೀನಿವಾಸನು ಭಕ್ತರಿಗೆ ಬೇಕಾದುದನ್ನು ಕೊಡುತ್ತಾನೆ. ಮತ್ತು ಸುಖವನ್ನು ಉಂಟುಮಾಡುತ್ತಾನೆ.

೨೨. ಅನಂತರ ದವನವನ್ನು ಹೂಗಳೊಡನೆ ತೆಗೆದುಕೊಂಡು ವಿಷ್ಣುವೇ ಮುಂತಾದ ದೇವರುಗಳಿಗೆ ಅದನ್ನು ಸಮರ್ಪಿಸಬೇಕು. ಅನಂತರ ಗಂಧವೇ ಮುಂತಾದುವುಗಳಿಂದ ಪೂಜೆಮಾಡಿ ಸಂಗೀತವಾದ್ಯ ಕುಣಿತಗಳಿಂದ ಉತ್ಸವವನ್ನು ಮಾಡಬೇಕು. ಅನಂತರ ಆ ಕಲಶೋದಕವನ್ನು ಸ್ವಾಮಿಯ ಪಾದಗಳಲ್ಲಿ ಸ್ವಲ್ಪ ಹಾಕಬೇಕು. ಆದಿನ ಜಲಕ್ರೀಡೆಯನ್ನಾಡಬೇಕು. (ಓಕುಳಿಯನ್ನು ಆಡಬೇಕು.) ಅನಂತರ ಗುರುವಿಗೆ ಬಟ್ಟೆಬರೆಗಳನ್ನೂ ಅಲಂಕಾರನನ್ನೂ ಹಣವನ್ನೂ ಕೊಟ್ಟು ಪೂಜಿಸಬೇಕು. ಬಂಧುಗಳೊಡನೆಯೂ ಭಕ್ತರೊಡನೆಯೂ ಊಟಮಾಡಬೇಕು.

॥ ಶ್ರೀ ಮಹಾದೇವ ಉವಾಚ ॥

ತತೋ ದಮನಮಂಜರ್ಯಾ ಯೋ ವೈ ವಿಷ್ಣುಂ ಪ್ರಪೂಜಯೇತ್ ।
ಪೂಜಿತೇ ವೈ ಜಗನ್ನಾಥೇ ಹ್ಯಹಂ ವೈ ಪೂಜಿತಸ್ಸದಾ ॥ ೨೩ ॥

ಬ್ರಹ್ಮಹಾ ಹೇಮಹಾರೀ ಚ ಮದ್ಯಪೋ ಮಾಂಸಭಕ್ಷಕಃ ।
ಮುಚ್ಯತೇ ಪಾತಕಾದ್ದೇವಿ ದೃಷ್ಟ್ವಾ ದಮನಕೋತ್ಸವಂ ॥ ೨೪ ॥

ಸದೈವಂ ದಮನಕೋ ದೇವಿ ಪೂಜಿತೋ ಯೈಸ್ತು ವೈಷ್ಣವೈಃ ।
ಸರ್ವಂ ತೀರ್ಥಂ ಕೃತಂ ತೈಸ್ತು ಸರ್ವದಾ ನಗನಂದಿನಿ ॥ ೨೫ ॥

ಭೂಮಿದಾನಂ ಚ ಗೋದಾನಂ ಮಹಾದಾನಂ ತು ಭೂರಿಶಃ ।
ಸರ್ವದಾನಂ ಕೃತಂ ತೈಸ್ತು ಮಂಜರ್ಯಾ ಪೂಜನೇ ಕೃತೇ ॥ ೨೬ ॥

ವೇದಾಧ್ಯಯನಂ ಕೃತಂ ತೇನ ಶಾಸ್ತ್ರಾಧ್ಯಯನಮೇವ ಚ ।
ಅಗ್ನಿಹೋತ್ರಂ ಕೃತಂ ತೇನ ಮಂಜರ್ಯಾ ಪೂಜಿತೋ ಹರಿಃ ॥ ೨೭ ॥

---

೨೩. ಶ್ರೀಮಹಾದೇವನು ಹೇಳಿದನು—ಅನಂತರ ದವನದ ಕುಡಿಗಳಿಂದ ವಿಷ್ಣುವನ್ನು ಪೂಜಿಸಬೇಕು. ಈ ರೀತಿ ಆ ಜಗನ್ನಾಥನನ್ನು ಪೂಜಿಸಿದರೆ ನನ್ನನ್ನೇ ಪೂಜಿಸಿದಂತಾಗುತ್ತದೆ.

೨೪. ಎಲೈ ದೇವಿಯೇ ! ಈ ದಮನಕೋತ್ಸವವನ್ನು ನೋಡಿದರೆ ಬ್ರಹ್ಮ ಹತ್ಯೆ, ಸುರಾಪಾನ, ಮಾಂಸ ಭಕ್ಷಣ ಮುಂತಾದುವನ್ನು ಮಾಡಿದ ಮಹಾ ಪಾಪಗಳು ಹೋಗುತ್ತವೆ.

೨೫. ಎಲೈ ಪಾರ್ವತಿಯೇ ! ಈರೀತಿ ಯಾವಾಗಲೂ ದವನದಿಂದ ಪೂಜಿಸುತ್ತಿದ್ದರೆ ಆ ಜಾಗವನ್ನು ಎಲ್ಲಾ ತೀರ್ಥಗಳಿಂದಲೂ ಕೂಡಿರುವಂತೆ ಮಾಡುತ್ತಾನೆ.

೨೬. ಈದವನಮಂಜರಿಯಿಂದ ವಿಷ್ಣುವನ್ನು ಪೂಜಿಸಿದರೆ ಅವನು ಭೂದಾನ, ಗೋದಾನ, ಮುಂತಾದ ಮಹಾದಾನಗಳೆಲ್ಲವನ್ನೂ ಮಾಡಿದಂತಾಗುತ್ತದೆ.

೨೭. ದವನ ಮಂಜರಿಯಿಂದ ಪೂಜಿಸಿದರೆ ಅವನು ವೇದಾಧ್ಯಯನವನ್ನು ಮಾಡಿದಂತಾಗುತ್ತದೆ. ಶಾಸ್ತ್ರಾಧ್ಯಯನವನ್ನು ಮಾಡಿದಂತಾಗುತ್ತದೆ. ಅಗ್ನಿಹೋತ್ರವನ್ನು ಮಾಡಿದಂತಾಗುತ್ತದೆ.

ತತ್ಕುಲಂ ತು ಮಹತ್ ಜ್ಞೇಯಂ ಬ್ರಾಹ್ಮಂ ವಾ ಚಾಥ ಕ್ಷತ್ರಿಯಂ ।
ಶೌದ್ರಂ ವೈಶ್ಯಂ ಚ ಯಚ್ಚಾನ್ಯದ್ಧನ್ಯಂ ಧನ್ಯತರಂ ಸ್ಮೃತಂ ॥ ೨೮ ॥

ಯಸ್ಮಿನ್ಕುಲೇಽವತೀರ್ಯಾಥೋತ್ಸವೋ ದಾಮನಕಃ ಕೃತಃ ।
ಸ ಚ ಧನ್ಯಸ್ತು ಧನ್ಯೋ ವೈ ಯೇನ ವಿಷ್ಣುಃ ಪ್ರಪೂಜಿತಃ ॥ ೨೯ ॥

ದಮನಕೇನ ತು ದೇವಿ ಸಂಪ್ರಾಪ್ತೇ ಮಧುಮಾಧವೇ ।
ಸಂಪೂಜ್ಯ ಗೋಸಹಸ್ರಸ್ಯ ದೇವಿ ಸಂಲ್ಲಭತೇ ಫಲಂ ॥ ೩೦ ॥

ಮಲ್ಲಿಕಾಕುಸುಮೈರ್ದೇವಂ ವಸನ್ತೇ ಗರುಡಧ್ವಜಂ ।
ಯೋಽರ್ಚಯೇತ್ಪರಯಾ ಭಕ್ತ್ಯಾ ಮುಕ್ತಿಭಾಗೀ ಭವೇತ್ತು ಸಃ ॥ ೩೧ ॥

ಮರುಕೋ ದಮನಕಶ್ಚೈವ ಸದ್ಯಃ ಪುಷ್ಟಿಕರೋ ಹರೇಃ ।
ಅತಃ ಪೂಜಾ ಪ್ರಕರ್ತವ್ಯಾವೈಷ್ಣವೈರ್ನರಸತ್ತಮೈಃ ॥ ೩೨ ॥

---

೨೮. ಬ್ರಹ್ಮ ಕ್ಷತ್ರಿಯ ವೈಶ್ಯ ಶೂದ್ರ ಜಾತಿಗಳೂ ಮತ್ತಾವುದೇ ಆದರೂ ಆ ಜಾತಿಯು ಹೀಗೆ ದಮನಕ ಪೂಜೆಮಾಡಿದರೆ ಅತಿಪವಿತ್ರವೆಂದು ತಿಳಿಯಬೇಕು.

೨೯. ದಮನಕೋತ್ಸವವನ್ನು ಮಾಡಿದವನು ಯಾವ ಕುಲದಲ್ಲಿ ಹುಟ್ಟಿರುವನೋ ಆ ಕುಲವೇ ಬಹು ಧನ್ಯವಾದುದೆಂದು ತಿಳಿದುಕೋ.

೩೦. ಚೈತ್ರದಲ್ಲಿ ಈ ದಮನಕೋತ್ಸವವನ್ನು ಮಾಡಿದರೆ ಸಾವಿರ ಗೋವುಗಳನ್ನು ಪೂಜೆಮಾಡಿದ ಫಲವು ಬರುತ್ತದೆ.

೩೧. ವಸಂತಋತುವಿನಲ್ಲಿ ಗರುಡಧ್ವಜನನ್ನು ಪೂಜಿಸಿದರೆ ಅವನಿಗೆ ಮುಕ್ತಿಯು ಬರುತ್ತದೆ.

೩೨. ಮರುಗ ದವನಗಳು ಹರಿಗೆ ಪುಷ್ಟಿಯನ್ನು ಕೊಡುತ್ತವೆ. ಆದ್ದರಿಂದ ವೈಷ್ಣವರು ಅವುಗಳಿಂದ ಪೂಜಿಸಬೇಕು.

ಗೋಸಹಸ್ರಂ ಕೃತಂ ತೇನ ಕನ್ಯಾದಾನಂ ತಥೈವ ಚ ।
ಪೃಥ್ವೀದಾನಂ ಕೃತಂ ತೇನ ವಿಷ್ಣೋರ್ವೈ ಪೂಜನೇ ಕೃತೇ ॥ ೩೩ ॥

ಏಕಾಮೇಕಾಂ ಗೃಹೀತ್ವಾ ತು ಮಂಜರೀಂ ದಮನಸ್ಯ ತು ।
ಯಃ ಪೂಜಯತಿ ದೇವೇಶಂ ಸಂಪ್ರಾಪ್ತೇ ಮಧುಮಾಧವೇ ॥ ೩೪ ॥

ಪುಣ್ಯಸಂಖ್ಯಾಂ ನ ಜಾನೇ ವೈ ತಸ್ಯಾಹಂ ನಗನಂದಿನಿ ।
ಸ ವೈ ಚತುರ್ಭುಜೋ ಭೂತ್ವಾ ಇಹ ಲೋಕೇ ಪರತ್ರ ಚ ।
ಧರ್ಮಾನರ್ಥಾಂಶ್ಚ ಕಾಮಾಂಶ್ಚ ಪ್ರಭುಂಕ್ತೇ ವೈಷ್ಣವಂ ಪದಂ ॥ ೩೫ ॥

ಇತಿ ಶ್ರೀ ಮಹಾಪುರಾಣೇ ಪಾದ್ಮೇ ಉತ್ತರಖಂಡೇ ಪಾರ್ವತೀ ಮಹಾದೇವ ಸಂವಾದೇ ದಮನಕ ಮಹೋತ್ಸವ ವರ್ಣನಂ ನಾಮ ಷಡಶೀತಿತಮೋಽಧ್ಯಾಯಸ್ಸಮಾಪ್ತಃ

---

೩೩. ಈ ರೀತಿಯಾಗಿ ವಿಷ್ಣುವನ್ನು ಪೂಜಿಸಿದರೆ ಸಾವಿರ ಗೋದಾನ ಮಾಡಿದ ಫಲವೂ ಕನ್ಯಾದಾನಮಾಡಿದ ಫಲವೂ ಭೂದಾನಮಾಡಿದ ಫಲವೂ ಬರುತ್ತವೆ.

೩೪–೩೫. ದಮನದ ಒಂದೊಂದೇ ಕುಡಿಯನ್ನು ತೆಗೆದುಕೊಂಡು ಪೂಜೆಮಾಡಿದರೆ ಅದರ ಪುಣ್ಯವನ್ನು ಹೇಳುವುದಕ್ಕೇ ಆಗುವಂತಿಲ್ಲ. ನನಗೆ ಗೊತ್ತಾಗುವುದೂ ಇಲ್ಲ. ಅವನು ಚತುರ್ಭುಜ (ನಾಲ್ಕು ತೋಳು) ಗಳನ್ನು ಹೊಂದಿ ಈಲೋಕ ಪರಲೋಕಗಳಲ್ಲಿ ಧರ್ಮ, ಅರ್ಥ, ಕಾಮುಗಳನ್ನು ಅನುಭವಿಸಿ ಅನಂತರ ವೈಕುಂಠವನ್ನು ಹೊಂದುತ್ತಾನೆ.

ಇಂತು ಶ್ರೀ ಪದ್ಮಮಹಾಪುರಾಣದ ಉತ್ತರಖಂಡದ ಪಾರ್ವತೀ ಮಹಾದೇವರ ಸಂವಾದದಲ್ಲಿ ದಮನಕ ಮಹೋತ್ಸವ ವರ್ಣನ ಎಂಬ ಎಂಭತ್ತಾರನೆಯ ಅಧ್ಯಾಯವು ಮುಗಿದುದು.



|| ಶ್ರೀಃ ||

-X-

# ಅಥ ಶ್ರೀ ಮಹಾಪುರಾಣೇ ಪಾದ್ಮೇ ಉತ್ತರಖಂಡೇ

## || ಸಪ್ತಾಶೀತಿತಮೋಽಧ್ಯಾಯಃ ||



|| ಶ್ರೀ ಮಹಾದೇವ ಉವಾಚ ||

ವೈಶಾಖ್ಯಾಂ ಪೌರ್ಣಮಾಸ್ಯಾಂ ವೈ ಜಲಸ್ಥಂ ಜಗದೀಶ್ವರಂ ।
ಪೂಜಯೇದ್ವೈಷ್ಣವೋ ಭಕ್ತ್ಯಾ ಕೃತೋತ್ಸಾಹೋ ಮುದಾನ್ವಿತಃ || ೧ ||

ಗೀತಂ ವಾದ್ಯಂ ತಥಾ ನೃತ್ಯಂ ಕೃತ್ವಾ ಪುಣ್ಯಂ ಮಹೋತ್ಸವಂ ।
ಏಕಾದಶ್ಯಾಂ ಸುರಶ್ರೇಷ್ಠೇ ಪಶ್ಯೇದ್ವಾಥ ಪ್ರಹರ್ಷಿತಃ || ೨ ||

ಗೀತಂ ಗಾಯೇತ್ ಹರೇರ್ಭಕ್ತ್ಯಾ ಕರ್ತವ್ಯ ಉತ್ಸವಶ್ಶುಭಃ ।
ಶಯನಂ ಕುರು ದೇವೇಶ ಜಲೇಸ್ಮಿನ್ವೈ ಸುರೇಶ್ವರ || ೩ ||

---

## ಎಂಭತ್ತೇಳನೆಯ ಅಧ್ಯಾಯವು



೧. ಶ್ರೀ ಮಹಾದೇವನು ಹೇಳಿದನು—ವೈಶಾಖಮಾಸದ ಹುಣ್ಣಿಮೆಯ ದಿನ ನೀರಿನಲ್ಲಿ ವಿಷ್ಣುವನ್ನು ಭಕ್ತಿಯಿಂದ ಪೂಜಿಸಬೇಕು.

೨. ಆ ಸಮಯದಲ್ಲಿ ಗೀತ, ವಾದ್ಯ, ನೃತ್ಯಗಳನ್ನು ಮಾಡುತ್ತ ಉತ್ಸವವನ್ನು ಆಚರಿಸಬೇಕು. ಅದಿಲ್ಲದಿದ್ದರೆ ಏಕಾದಶಿಯ ದಿವಸ ಬೇಕಾದರೂ ಜಲೋತ್ಸವವನ್ನು ಮಾಡಬಹುದು.

೩. ಗೀತಾದಿಗಳನ್ನು ಆಚರಿಸುತ್ತ ಭಕ್ತಿಯಿಂದ ಉತ್ಸವವನ್ನು ಮಾಡಬೇಕು. ಎಲೈ ಸುರೇಶ್ವರನೇ ! ನೀನು ಈ ನೀರಿನಲ್ಲಿ ಮಲಗಿಕೋ ಎಂದೆನ್ನಬೇಕು.

ತ್ವಯಿ ಸುಪ್ತೇ ಜಗತ್ಸುಪ್ತಂ ಭವತೇ ನಾತ್ರ ಸಂಶಯಃ ।
ಘನಾಗಮೇ ವೈ ಪ್ರಕುರ್ವಂತಿ ಜಲಸ್ಥಂ ವೈ ಜನಾರ್ದನಂ ॥ ೪ ॥

ಯೇ ಜನಾಸ್ತು ಸುರಶ್ರೇಷ್ಠೇ ನ ದಾಹೋ ನಾರಕೋ ಭವೇತ್ ।
ಸ್ವರ್ಣಪಾತ್ರೇ ತಥಾ ರೌಪ್ಯೇ ತಾಮ್ರೇ ವಾ ಚ ಸುರೇಶ್ವರಿ ॥ ೫ ॥

ಮೃಣ್ಮಯೇ ವಾಥ ಕರ್ತವ್ಯಂ ಶಯನಂ ವಿಷ್ಣುಸಂಜ್ಞಕಂ ।
ತತ್ರ ತೋಯಂ ತು ಸಂಸ್ಥಾಪ್ಯ ಶೀತಳಂ ಗಂಧವಾಸಿತಂ ॥ ೬ ॥

ತಸ್ಮಿಂಸ್ತೋಯೇ ತತೋ ವಿಷ್ಣೋಃ ಸ್ಥಾಪನಂ ಕಾರಯೇದ್ಬುಧಃ ।
ಗೋಪಾಲನಾಮ್ನೀ ಮೂರ್ತಿಶ್ಚ ರಾಮನಾಮ್ನೀ ತಥಾಪಿ ವಾ ॥ ೭ ॥

ಶಾಲಗ್ರಾಮಶಿಲಾ ವಾಪಿ ಸ್ಥಾಪನೀಯಾ ವಿಶೇಷತಃ ।
ಪ್ರತಿಮಾ ವಾ ಮಹಾಭಾಗ ತಸ್ಯ ಪುಣ್ಯಮನಂತಕಂ ॥ ೮ ॥

ಯಾವದ್ಧರಾಧರಾ ಲೋಕಾ ಯಾವದ್ರವಿಕರಾ ಭುವಿ ।
ತಾವತ್ತಸ್ಯ ಕುಲೇ ಕಶ್ಚಿನ್ನ ಭವೇದ್ದೇವಿ ನಾರಕೀ ॥ ೯ ॥

---

೪–೮. ನೀನು ಮಲಗಲಾಗಿ ಪ್ರಪಂಚವೇ ಮಲಗಿದಂತಾಗುತ್ತದೆ ಇದರಲ್ಲಿ ಸಂಶಯವಿಲ್ಲ. ಎಂದು ಹೇಳಬೇಕು. ಮುಂಗಾರು ಮೋಡಗಳು ಬರುವಾಗ ನೀರಿನಲ್ಲಿ ಮಲಗಿಸುವ ಉತ್ಸವವನ್ನು ಮಾಡಬೇಕು. ಹೀಗೆ ಮಾಡುವವರಿಗೆ ನರಕದ ತೊಂದರೆಯಿಲ್ಲ. ಚಿನ್ನದ ಅಥವಾ ಬೆಳ್ಳಿಯ ಇಲ್ಲವೇ ತಾಮ್ರದ ಕೊನೆಗೆ ಮಣ್ಣಿನ ಪಾತ್ರೆಯಲ್ಲಿ ವಿಷ್ಣುವಿಗೆ ಜಲಶಯನ ಮಾಡಿಸಬೇಕು. ಆ ಪಾತ್ರೆಯಲ್ಲಿ ಗಂಧ ಮೊದಲಾದುವುಗಳಿಂದ ವಾಸನೆಯನ್ನು ಕಟ್ಟಿರುವ ನೀರನ್ನು ತುಂಬಿ ಅಲ್ಲಿ ವಿಷ್ಣುವನ್ನು ಮಲಗಿಸಬೇಕು. ಗೋಪಾಲ ಮೂರ್ತಿಯನ್ನಾಗಲೀ, ರಾಮ ಮೂರ್ತಿಯನ್ನಾಗಲೀ, ಸಾಲಗ್ರಾಮ ಶಿಲೆಯನ್ನಾಗಲೀ, ಅದರಲ್ಲಿ ಇಡಬೇಕು. ಹಾಗೆ ಆ ಪ್ರತಿಮೆಯನ್ನು ಮಲಗಿಸಿ ಪೂಜೆ ಮಾಡಿದರೆ ಬಹುವಾದ ಪುಣ್ಯವು ಬರುತ್ತದೆ.

೯. ಎಲ್ಲಿಯವರೆಗೂ ಈ ಲೋಕಗಳು ಇರುತ್ತವೆಯೋ ಎಲ್ಲಿಯವರೆವಿಗೆ ಸೂರ್ಯನಿರುವನೋ ಅಲ್ಲಿಯವರೆವಿಗೂ ಇವನ ಕುಲದಲ್ಲಿ ಒಬ್ಬನೂ ನರಕಭಾಗಿಯಾಗುವುದಿಲ್ಲ.

ತಸ್ಮಾಜ್ಜ್ಯೇಷ್ಠೇ ಮಹಾದೇವಿ ತೋಯಸ್ಥಂ ಪೂಜಯೇದ್ಧರಿಂ ।
ವೀತತಾಪೋ ನರಸ್ತಿಷ್ಠೇದ್ಯಾವದಾಭೂತಸಂಪ್ಲವಂ ॥ ೧೦ ॥

ಸುಶೀತಲೇ ತಥಾ ತೋಯೇ ತುಳಸೀದಳವಾಸಿತೇ ।
ಶುಚಿಶುಕ್ರಗತೇ ಕಾಲೇ ಪೂಜಯೇದ್ಧರಣೀಧರಂ ॥ ೧೧ ॥

ಶುಚಿಶುಕ್ರಗತೇ ಕಾಲೇ ಯೇಽರ್ಚಯಿಷ್ಯಂತಿ ಕೇಶವಂ ।
ಜಲಸ್ಥಂ ವಿವಿಧೈಃ ಪುಷ್ಪೈಃ ಮುಚ್ಯಂತೇ ಯಮಯಾತನಾತ್ ॥ ೧೨ ॥

ಜಲಪ್ರೇಷ್ಠೋ ಯತೋ ವಿಷ್ಣುಃ ಜಲಶಾಯೀ ಜಲಪ್ರಿಯಃ ।
ತಸ್ಮಾದ್ಗ್ರೀಷ್ಮೇ ವಿಶೇಷೇಣ ಜಲಸ್ಥಂ ಪೂಜಯೇದ್ಧರಿಂ ॥ ೧೩ ॥

ನೀರಮಧ್ಯೇ ಸ್ಥಿತಂ ಕೃತ್ವಾ ಶಾಲಗ್ರಾಮಸಮುದ್ಭವಂ ।
ಯೇನಾರ್ಚಿತಂ ಮಹಾಭಕ್ತ್ಯಾ ಸ ಭವೇತ್ಕುಲಪಾವನಃ ॥ ೧೪ ॥

ಕರ್ಕರಾಶಿಗತೇ ಸೂರ್ಯೇ ಮಿಥುನಸ್ಥೇ ವಿಶೇಷತಃ ।
ಯೇನಾರ್ಚಿತೋ ಹರಿರ್ಭಕ್ತ್ಯಾ ಜಲಮಧ್ಯೇ ತು ಸುಂದರಿ ॥ ೧೫ ॥

---

೧೦. ಆದ್ದರಿಂದ ಜ್ಯೇಷ್ಠಮಾಸದಲ್ಲಿ ಹರಿಯನ್ನು ನೀರಿನಲ್ಲಿ ಮಲಗಿಸಿ ಪೂಜಿಸಿದರೆ ಆತನಿಗೆ ತಾಪವೆಂಬುದೇ ಉಂಟಾಗುವುದಿಲ್ಲ.

೧೧. ಶುಕ್ರನು ಜ್ಯೇಷ್ಠಾನಕ್ಷತ್ರವನ್ನು ಹೊಂದಿರುವಾಗ ಶೀತಳವಾದ ತುಳಸಿಯ ದಳವನ್ನು ಹಾಕಿರುವ ನೀರಿನಲ್ಲಿ ಆ ಸ್ವಾಮಿಯನ್ನು ಪೂಜಿಸಬೇಕು.

೧೨. ಶುಕ್ರನು ಜ್ಯೇಷ್ಠೆಯನ್ನು ಹೊಂದಿರುವಾಗ ನೀರಿನಲ್ಲಿ ಮಲಗಿರುವ ಕೇಶವನನ್ನು ಪೂಜಿಸಿದರೆ ಅವರಿಗೆ ಯಮಯಾತನೆಗಳಾವುದಿಲ್ಲ

೧೩. ವಿಷ್ಣುವು ನೀರೇ ಇಷ್ಟವಾಗಿ ಉಳ್ಳವನು. ನೀರಿನಲ್ಲೇ ಮಲಗಿರತಕ್ಕವನು. ಆದ್ದರಿಂದ ಗ್ರೀಷ್ಮಕಾಲದಲ್ಲಿ ನೀರಿನಲ್ಲಿರುವ ವಿಷ್ಣುವನ್ನು ಪೂಜಿಸಬೇಕು.

೧೪. ಸಾಲಗ್ರಾಮ ಸ್ವರೂಪಿಯಾದ ವಿಷ್ಣುವನ್ನು ನೀರಿನ ಮಧ್ಯವಲ್ಲಿಟ್ಟು ಭಕ್ತಿಯಿಂದ ಪೂಜೆಮಾಡಿದವನು ಕುಲವನ್ನೆಲ್ಲಾ ಪವಿತ್ರವನ್ನಾಗಿ ಮಾಡುತ್ತಾನೆ.

೧೫–೧೬. ಸೂರ್ಯನು ಕರ್ಕಾಟಕ ರಾಶಿಯನ್ನಾಗಲಿ ಮಿಥುನರಾಶಿಯನ್ನಾಗಲಿ ಹೊಂದಿರುವಾಗ ನೀರಿನಲ್ಲಿ ಮಲಗಿರುವ ಸ್ವಾಮಿಯನ್ನು ಪೂಜಸಬೇಕು.

ದ್ವಾದಶ್ಯಾಂ ತು ವಿಶೇಷೇಣ ಜಲಸ್ಥ ಜಲಶಾಯಿನಃ ।
ಯೇನಾರ್ಚನಂ ಕೃತಂ ತೇನ ಕೋಟಿಯಜ್ಞ ಶತಂ ಕೃತಂ ॥ ೧೬ ॥

ನಿಕ್ಷಿಪ್ಯ ಜಲಪಾತ್ರೇ ತು ಮಾಸೇ ಮಾಧವಸಂಜ್ಞಕೇ ।
ಮಾಧವಂ ಯೇಽರ್ಚಯಿಷ್ಯಂತಿ ದೇವಾಸ್ತೇ ನ ನರಾ ಭುವಿ ॥ ೧೭ ॥

ಪಾತ್ರೇ ಗಂಧಾದಿಕಂ ಕೃತ್ವಾ ಯಃ ಕ್ಷಿಪೇದ್ಗರುಡಧ್ವಜಂ ।
ದ್ವಾದಶ್ಯಾಂ ಪೂಜಯೇದ್ರಾತ್ರೌ ಮುಕ್ತಿಭಾಗೀ ಭವೇದ್ಧಿ ಸಃ ॥ ೧೮ ॥

ಅಶ್ರದ್ಧಧಾನಃ ಪಾಪಾತ್ಮಾ ನಾಸ್ತಿಕೋಽಚ್ಛಿನ್ನಸಂಶಯಃ ।
ಹೇತುನಿಷ್ಠಶ್ಚ ಪಂಚೈತೇ ನ ಪೂಜಾಫಲಭಾಗಿನಃ ॥ ೧೯ ॥

ತಥಾ ಮಹೇಶ್ವರಂ ದೇವಂ ಜಲಸ್ಥಂ ಜಗದೀಶ್ವರಂ ।
ಪೂಜಯೇದ್ಯೋ ನರೋ ನಿತ್ಯಂ ಮಹಾಪಾಪೈಃ ಪ್ರಮುಚ್ಯತೇ ॥ ೨೦ ॥

---

ಅದರಲ್ಲಿಯೂ ದ್ವಾದಶಿಯದಿನ ಪೂಜಿಸಿದರೆ ಅವನು ನೂರು ಕೋಟಿ ಯಜ್ಞಗಳನ್ನು ಮಾಡಿದ ಫಲವನ್ನು ಹೊಂದುತ್ತಾನೆ.

೧೭. ವೈಶಾಖ ಮಾಸದಲ್ಲಿ ನೀರಿನಲ್ಲಿ ಸ್ವಾಮಿಯನ್ನು ಮಲಗಿಸಿ ಪೂಜಿಸಿದರೆ ಅವರು ಭೂಮಿಯಲ್ಲಿ ಓಡಾಡುವ ದೇವತೆಗಳೇ ಹೊರತು ಮನುಷ್ಯರಲ್ಲ.

೧೮. ಪಾತ್ರೆಯಲ್ಲಿ ಗಂಧ ಹೂ ಮುಂತಾದುವುಗಳಿಂದ ನೀರನ್ನು ಹಾಕಿ ಶ್ರೀ ವಿಷ್ಣುವನ್ನು ಮಲಗಿಸಿ ದ್ವಾದಶಿಯ ದಿವಸ ಪೂಜಿಸಿದರೆ ಅವನಿಗೆ ಮುಕ್ತಿಯು ಬರುತ್ತದೆ.

೧೯. ಶ್ರದ್ಧೆಯಿಲ್ಲದವನು, ಪಾಪಿ ನಾಸ್ತಿಕ, ಸಂಶಯವುಳ್ಳವನು, ಕಾರಣವಾದೀ, ಈ ಐದು ಜನರೂ ಪೂಜೆಯ ಫಲವನ್ನು ಹೊಂದುವುದಿಲ್ಲ.

೨೦. ಅದೇ ರೀತಿಯಲ್ಲಿ ಮಹೇಶ್ವರನಾದ ರುದ್ರನನ್ನು ನೀರಿನಲ್ಲಿಟ್ಟು ಪೂಜಿಸಿದರೆ ಮಹಾಪಾಪಗಳೆಲ್ಲವೂ ಹೋಗುತ್ತವೆ.

ಓಂ ಹ್ರಾಂ ಹ್ರೀಂ ರಾಮಾಯನಮಃ ।
ಇತಿ ಮಂತ್ರೇಣ ದೇವೇಶಿ ಪೂಜನಂ ತತ್ರ ವೈ ಸ್ಮೃತಂ ॥ ೨೧ ॥

ಓಂ ಕ್ಲೀಂ ಕೃಷ್ಣಾಯ ಗೋವಿಂದಾಯ ಗೋಪೀವಲ್ಲಭಾಯ ನಮಃ ।
ಇತಿ ಮಂತ್ರೇಣ ಗಿರಿಜೇ ಉದಕಂ ಚಾಭಿಮಂತ್ರಯೇತ್ ॥ ೨೨ ॥

ದೇವದೇವ ಮಹಾಭಾಗ ಶ್ರೀವತ್ಸಕೃತಲಾಂಛನ ।
ಮಹಾದೇವ ನಮಸ್ತೇಽಸ್ತು ನಮಸ್ತೇ ವಿಶ್ವಭಾವನ ॥ ೨೩ ॥

ಅರ್ಘ್ಯಂ ಗೃಹಾಣ ಭೋ ದೇವ ಮುಕ್ತಿಂ ಮೇ ದೇಹಿ ಸರ್ವದಾ ।
ನಾನಾವಿಧೈಸ್ತು ಪುಷ್ಪೈಶ್ಚ ಪೂಜಯೇದ್ಗರುಡಾಸನಂ ॥ ೨೪ ॥

ಸರ್ವಭಾಧಾವಿನಿರ್ಮುಕ್ತೋ ವಿಷ್ಣೋಃಸಾಯುಜ್ಯತಾಮಿಯಾತ್ ।
ರಾತ್ರೌ ಜಾಗರಣಂ ಕೃತ್ವಾ ದ್ವಾದಶ್ಯಾಂ ಸುಸಮಾಹಿತಃ ॥ ೨೫ ॥

---

೨೧. ಓಂ ಹ್ರಾಂ ಹ್ರೀಂ ರಾಮನಿಗೆ ನಮಸ್ಕಾರವು. ಎಂಬ ಮಂತ್ರದಿಂದ ಆಗ ಪೂಜೆಯನ್ನು ಮಾಡಬೇಕು. (ಎಂದರೆ ಪೂಜೆಮಾಡಿ ಈ ಮಂತ್ರಗಳನ್ನು ಜಪಮಾಡಬೇಕು.)

೨೨. ಓಂ ಕ್ಲೀಂ ಕೃಷ್ಣನಿಗೆ, ಗೋವಿಂದನಿಗೆ, ಗೋಪೀಜನವಲ್ಲಭನಿಗೆ ನಮಸ್ಕಾರವು. ಎಂಬ ಮಂತ್ರದಿಂದ ನೀರನ್ನು ಮಂತ್ರಿಸಬೇಕು.

೨೩. ದೇವದೇವನೇ! ಮಹಾಭಾಗನೇ! ಶ್ರೀವತ್ಸವೇ ಗುರುತಾಗಿ ಉಳ್ಳವನೇ! ಮಹಾದೇವನೇ! ವಿಶ್ವಾತ್ಮನೇ! ನಿನಗೆ ನಮಸ್ಕಾರವು.

೨೪. ಎಲೈ ಸ್ವಾಮಿಯೇ! ಅರ್ಘ್ಯವನ್ನು ಸ್ವೀಕರಿಸು. ನನಗೆ ಮುಕ್ತಿಯನ್ನು ಕೊಡು. ಎಂದು ಅರ್ಘ್ಯವನ್ನು ಕೊಡಬೇಕು. ಅನೇಕ ಬಗೆಯಾದ ಪುಷ್ಪಗಳಿಂದ ಆ ಗರುಡಧ್ವಜನನ್ನು ಪೂಜಿಸಬೇಕು.

೨೫. ಹೀಗೆ ಮಾಡಿದರೆ ಕಷ್ಟಗಳೆಲ್ಲವನ್ನೂ ಕಳೆದುಕೊಂಡು ವಿಷ್ಣುವಿನ ಸಾಯುಜ್ಯವನ್ನು ಹೊಂದುತ್ತಾನೆ. ಏಕಾದಶಿಯ ದಿನ ಪೂಜೆಮಾಡಿದರೆ ಆ ಅವ್ಯಯ ಸ್ವರೂಪನಾದ ವಿಷ್ಣುವು ಮುಕ್ತಿಯನ್ನು ಕೊಡುವನು.

ಭಕ್ತಿಪೂರ್ವಂ ಭಜೇದ್ದೇವಂ ವಿಷ್ಣುಮವ್ಯಯಮಕ್ಷಯಂ ।
ಏವಂ ವೈಶಾಖಸಂಬಂಧೀ ಭಕ್ತಿಭಾವೇನ ತತ್ಪರೈಃ ॥ ೨೬ ॥

ಉತ್ಸವೋ ವಿಷ್ಣುಸಂಜ್ಞಸ್ತು ಕರ್ತವ್ಯೋ ಭಕ್ತಿಮಿಚ್ಛುಭಿಃ ।
ಆಗಮೋಕ್ತೇನ ಮಂತ್ರೇಣ ವಿಧಿಂ ತತ್ರ ಪ್ರಕಾರಯೇತ್ ॥ ೨೭ ॥

ಕೃತೇ ಸತಿ ಮಹಾದೇವಿ ಕೋಟಿಯಜ್ಞಸಮಂ ಫಲಂ ।
ರಾಗದ್ವೇಷವಿನಿರ್ಮುಕ್ತೋ ಮಹಾಮೋಹನಿವರ್ತಕಃ ॥ ೨೮ ॥

ಇಹಲೋಕೇ ಸುಖಂ ಭುಕ್ತ್ವಾ ಯಾತಿ ವಿಷ್ಣೋಸ್ಸನಾತನಂ ।
ಬ್ರಾಹ್ಮಣೋ ಭಕ್ತಿಭಾವೇನ ಯಃ ಕರೋತ್ಯುತ್ಸವಂ ಭುವಿ ॥ ೨೯ ॥

ಸರ್ವಪಾಪವಿನಿರ್ಮುಕ್ತೋ ವೈಕುಂಠಂ ಗಚ್ಛತೇ ಧ್ರುವಂ ।
ವೇದಾಧ್ಯಯನಹೀನೋಽಪಿ ಶಾಸ್ತ್ರಾಧ್ಯಯನವರ್ಜಿತಃ ॥ ೩೦ ॥

---

೨೬.–೨೭. ಈ ರೀತಿಯಾಗಿ ವೈಶಾಖದಲ್ಲಿ ಭಕ್ತಿಯಿಂದ ಪೂಜೆಮಾಡಿ ವಿಷ್ಣುವಿನ ಉತ್ಸವವನ್ನು ಮಾಡಿದರೆ ಮುಕ್ತಿಯು ಬರುತ್ತದೆ. ವೇದೋಕ್ತವಾದ ರೀತಿಯಿಂದ ವಿಧಿಯಂತೆ ಪೂಜೆಯನ್ನು ಮಾಡಬೇಕು.

೨೮. ಈ ರೀತಿ ಪೂಜಿಸಿದರೆ ಕೋಟಿ ಯಜ್ಞಗಳನ್ನು ಮಾಡಿದ ಫಲವು ಬರುತ್ತದೆ. ಅವನು ರಾಗದ್ವೇಷಗಳನ್ನು ಬಿಟ್ಟು ಅಜ್ಞಾನವನ್ನು ತೊಡೆದು ಈ ಲೋಕದಲ್ಲಿ ಸುಖವನ್ನು ಅನುಭವಿಸಿ ಅನಂತರ ವಿಷ್ಣುವಿನ ಬಳಿಗೆ ಹೋಗುತ್ತಾನೆ.

೨೯ ಬ್ರಾಹ್ಮಣನು ಭಕ್ತಿಯಿಂದ ಈ ಉತ್ಸವವನ್ನು ಮಾಡಿದರೆ ಪಾಪಗಳನ್ನು ಕಳೆದುಕೊಂಡು ವೈಕುಂಠಕ್ಕೆ ಹೋಗುತ್ತಾನೆ.

೩೦. ವೇದಾಧ್ಯಯನ ಮಾಡದಿದ್ದರೂ ಶಾಸ್ತ್ರಗಳನ್ನು ಓದದಿದ್ದರೂ ಅವನು ಹರಿಭಕ್ತಿಯನ್ನು ಹೊಂದಿದ್ದರೆ ವೈಕುಂಠವನ್ನು ಹೊಂದುತ್ತಾನೆ.

**ಹರಿಭಕ್ತಿಂ ತು ಸಂಪ್ರಾಪ್ಯ ಲಭತೇ ವೈಷ್ಣವಂ ಪದಂ ।**
**ಆತ್ಮಾರಾಮಸ್ಸದಾ ಮುಕ್ತೋ ವಿಜಿತಾತ್ಮಾ ಭವೇತ್ತು ಸಃ ॥ ೩೧ ॥**

**ಸ ವೈ ವಿಷ್ಣುಪದಂ ಯಾತಿ ಯಾವಚ್ಚಂದ್ರದಿವಾಕರೌ ॥ ೩೨ ॥**

**ಇತಿ ಶ್ರೀ ಮಹಾಪುರಾಣೇ ಪಾದ್ಮೇ ಉತ್ತರಖಂಡೇ ಪಾರ್ವತೀ ಮಹಾದೇವ ಸಂವಾದೇ ದೇವಶಯನೀ ಮಹೋತ್ಸವೋ ನಾಮ ಸಪ್ತಾಶೀತಿತಮೋಽಧ್ಯಾಯಸ್ಸಮಾಪ್ತಃ**

---

೩೧–೩೨. ಅವನು ತನ್ನಲ್ಲಿಯೇ ಸುಖಪಡುತ್ತಾ ಇಂದ್ರಿಯಗಳನ್ನು ನಿಗ್ರಹಿಸಿಕೊಂಡು ಕೊನೆಗೆ ಸೂರ್ಯ ಚಂದ್ರರಿರುವವರೆಗೆ ವೈಕುಂಠವನ್ನು ಹೊಂದಿ ಸುಖಿಸುತ್ತಾನೆ.

ಇಂತು ಶ್ರೀ ಪದ್ಮಮಹಾಪುರಾಣದ ಉತ್ತರಖಂಡದ ಪಾರ್ವತೀ ಮಹಾದೇವರ ಸಂವಾದದಲ್ಲಿ ದೇವಶಯನೀ ಮಹೋತ್ಸವ ಎಂಬ ಎಂಭತ್ತೇಳನೆಯ ಅಧ್ಯಾಯವು ಮುಗಿದುದು.



॥ ಶ್ರೀಃ ॥

–x–

# ಅಥ ಶ್ರೀ ಮಹಾಪುರಾಣೇ ಪಾದ್ಮೇ ಉತ್ತರಖಂಡೇ

## ॥ ಅಷ್ಟಾಶೀತಿತಮೋಽಧ್ಯಾಯಃ ॥



॥ ಶ್ರೀಮಹಾದೇವ ಉವಾಚ ॥

ಶ್ರಾವಣೇ ಮಾಸಿ ಸಂಪ್ರಾಪ್ತೇ ಪವಿತ್ರಾರೋಪಣೋ ವಿಧಿಃ ।
ಯಸ್ಮಿನ್ಕೃತೇ ತು ದೇವೇಶಿ ದಿವ್ಯಭಕ್ತಿಃ ಪ್ರಜಾಯತೇ ॥ ೧ ॥

ಪವಿತ್ರಾರೋಪಣಂ ವಿಷ್ಣೋಃ ಕರ್ತವ್ಯಂ ಶ್ರದ್ಧಯಾ ಬುಧೈಃ ।
ಸಂಪೂರ್ಣಾ ಜಾಯತೇ ತಸ್ಯ ಪೂಜಾ ಪಾರ್ವತಿ ವಾರ್ಷಿಕೀ ॥ ೨ ॥

ಪವಿತ್ರಾರೋಪಣೇ ವಿಷ್ಣೋಃ ಜಾಯತೇ ಸುಖಮಾತ್ಮನಃ ।
ಸಂಪೂಜಿತೇ ಸದಾ ವಿಷ್ಣೌ ನಾನಾಸುಖಮವಾಪ್ನುಯಾತ್ ॥ ೩ ॥

---

## ಎಂಭತ್ತೆಂಟನೆಯ ಅಧ್ಯಾಯವು



೧. ಶ್ರೀ ಮಹಾದೇವನು ಹೇಳಿದನು–ಎಲ್ಲೈ ಪಾರ್ವತಿಯೇ ! ಶ್ರಾವಣ ಮಾಸದಲ್ಲಿ ಪವಿತ್ರಾರೋಪಣವೆಂಬ ಉತ್ಸವವನ್ನು ಮಾಡಬೇಕು. ಅದನ್ನು ವಿಷ್ಣುವಿಗೆ ಮಾಡಿದರೆ ಬಹುವಾದ ಭಕ್ತಿ ಉಂಟಾಗುತ್ತದೆ.

೨. ವಿಷ್ಣುವಿಗೆ ಈ ಪವಿತ್ರಾರೋಪಣವನ್ನು ಶ್ರದ್ಧೆಯಿಂದ ಮಾಡಬೇಕು. ಹಾಗೆ ಮಾಡಿದರೆ ವರ್ಷಕಾಲವೂ ಮಾಡುವ ವಿಧಿಗಳು ಸಂಪೂರ್ಣವಾಗುತ್ತವೆ.

೩. ವಿಷ್ಣುವಿಗೆ ಪವಿತ್ರಾರೋಪಣವನ್ನು ಮಾಡಿದರೆ ತನಗೆ ಸುಖವುಂಟಾಗುತ್ತದೆ. ಆರೀತಿ ಪೂಜಿಸಿದರೆ ನಾನಾ ಬಗೆಯ ಸುಖಗಳು ಬರುತ್ತವೆ.

ಸೂತ್ರಂ ವಾಸಸಮಾನೀಯ ಬ್ರಾಹ್ಮಣ್ಯಾ ಕರ್ತಿತಂ ತಥಾ ।
ಸ್ವೇನೈವಕರ್ತಿತಂ ಸೂತ್ರಂ ತೇನೈವ ಚ ಪ್ರಕಾರಯೇತ್ ॥ ೪ ॥

ಸಚ್ಛೂದ್ರಾಕರ್ತಿತಂ ಸೂತ್ರಂ ತದ್ಗ್ರಾಹ್ಯಂ ವಾ ತಥೈವ ಚ ।
ಅನ್ಯಥಾ ವಿಕ್ರಯೇಣಾಪಿ ಗ್ರಾಹ್ಯಂ ಚಾಪಿ ಯಥಾ ತಥಾ ॥ ೫ ॥

ಕ್ಷೌಮೇಣೈವ ಪ್ರಕರ್ತವ್ಯಃ ಪವಿತ್ರಾರೋಪಣೋ ವಿಧಿಃ ।
ರೌಪ್ಯೇಣ ವಾ ತಥಾ ಕಾರ್ಯಂ ಪವಿತ್ರಂ ವಿಷ್ಣುದೈವತಂ ॥ ೬ ॥

ಸೌವರ್ಣೇನಾಪಿ ದೇವೇಶಿ ಕರ್ತವ್ಯಂ ವಿಧಿಪೂರ್ವಕಂ ।
ಅಭಾವೇ ಸರ್ವಧಾತೂನಾಂ ಗ್ರಾಹ್ಯಂ ಸೂತ್ರಂ ತಥಾ ಬುಧೈಃ ॥ ೭ ॥

ಕೃತ್ವಾ ತು ತ್ರಿವೃತಂ ಸೂತ್ರಂ ಪ್ರಕ್ಷಾಳ್ಯಮುದಕೇನ ತು ।
ಲಿಂಗೇ ಲಿಂಗಪ್ರಮಾಣಂ ಚ ಪ್ರತಿಮಾಯಾಂ ಯಥಾವಿಧಿ ॥ ೮ ॥

---

೪. ಬಟ್ಟೆಯ ನೂಲನ್ನು ತಂದು ಅದನ್ನು ಬ್ರಾಹ್ಮಣನ ಹೆಂಡತಿಯಾದವಳು ಕತ್ತರಿಸಬೇಕು. ಅಲ್ಲದಿದ್ದರೆ ತಾನೇನೇ ಬೇಕಾದರೂ ಕತ್ತರಿಸಬಹುದು.

೫. ಒಳ್ಳೆಯ ಶೂದ್ರರು ಮಾಡಿ ಕತ್ತರಿಸಿರುವ ಬಟ್ಟೆಯ ನೂಲಾದರೂ ಆಗಬಹುದು. ಆ ರೀತಿಯಾಗಿ ಸಿಕ್ಕದಿದ್ದಲ್ಲಿ ಯಾರು ಬೇಕಾದರೂ ಕತ್ತರಿಸಿ ತಂದಿರಲಿ ತೆಗೆದುಕೊಳ್ಳಬಹುದು.

೬. ಈ ಪವಿತ್ರಾರೋಪಣ ವಿಧಿಯನ್ನು ರೇಷ್ಮೆಯ ನೂಲಿನಿಂದಲಾದರೂ ಮಾಡಬಹುದು. ಬೆಳ್ಳಿಯ ತಂತಿಯಿಂದ ಬೇಕಾದರೂ ಮಾಡಬಹುದು.

೭. ನಿಯಮವನ್ನು ಅನುಸರಿಸಿ ಅನ್ನದಿಂದ ಬೇಕಾದರೂ ಮಾಡಿಸಬಹುದು. ಇವು ಒಂದೂ ಸಿಕ್ಕದಿದ್ದಲ್ಲಿ ಎಲ್ಲಾ ಬಗೆಯ ಲೋಹಗಳನ್ನು ಸೇರಿಸಿ ಅದರಿಂದ ತಂತಿಯನ್ನು ತೆಗೆಯಿಸಿ ಮಾಡಿಸಬಹುದು.

೮. ಆ ನೂಲನ್ನಾಗಲೀ ತಂತಿಯನ್ನಾಗಲೀ ನೀರಿನಿಂದ ತೊಳೆಯಬೇಕು. ಮೂರು ಎಳೆಯಾಗಿ ಸೇರಿಸಬೇಕು. ಲಿಂಗಕ್ಕೆ ಬೇಕಾದರೆ ಅದರಷ್ಟು ಅಳತೆಯಿರುವಂತೆಯೂ ಪ್ರತಿಮೆಗಳಿಗಾದರೆ ಅದಕ್ಕೆ ಅನುಸಾರವಾಗಿಯೂ ಮಾಡಬೇಕು.

ಪಾದಾನ್ತಂ ಜಾನುಪರ್ಯಂತಂ ತಥಾ ನಾಭಿಸಮಂ ಸ್ಮೃತಂ ।
ಜ್ಯೇಷ್ಠಂ ಮಧ್ಯಂ ಕನಿಷ್ಠಂ ಚ ಪವಿತ್ರಂ ಕಾರಯೇದ್ಬುಧಃ ॥ ೯ ॥

ಸಂವತ್ಸರದಿನೈರ್ಯದ್ವಾ ತದರ್ಧಾರ್ಧೇನ ಸಂಖ್ಯಯಾ ।
ಸೂತ್ರೇಣೈವ ಪ್ರಕರ್ತವ್ಯಂ ಗ್ರಂಥಿಮಷ್ಟೋತ್ತರೇಣತು ॥ ೧೦ ॥

ತದರ್ಧಸಂಖ್ಯಕೇನಾಪಿ ಯುಕ್ತಂ ವಾ ತತ್ರ ಪಾರ್ವತಿ ।
ಲಿಂಗೇ ವೈ ಲಿಂಗಸಂಜ್ಞಂ ತು ಗಂಗಾನಾಗೈಶ್ಚ ಸಂಯುತಂ ॥ ೧೧ ॥

ಪ್ರತಿಮಾಯಾಂ ತಥಾ ದೇವಿ ಪವಿತ್ರಂ ವನಮಾಲಕಂ ।
ಯಥಾ ಶೋಭಾ ತಥಾ ಕಾರ್ಯಂ ಯೇನ ವಿಷ್ಣುಃ ಪ್ರಸೀದತಿ ॥ ೧೨ ॥

ಏಕಂ ವೈ ಸುಪವಿತ್ರಂ ತು ಗಂಧಾಖ್ಯಂ ಕಾರಯೇತ್ಸದಾ ।
ತಂತೂನಾಮವಸಂಯುಕ್ತಂ ಕರ್ತವ್ಯಂ ವೈಷ್ಣವೈರ್ನರೈಃ ॥ ೧೩ ॥

---

೯. ತಲೆಯಿಂದ ಹಿಡಿದು ಹೆಜ್ಜೆಯವರೆಗೂ ಬರುವಂತೆ ಆ ನೂಲನ್ನು ಸೇರಿಸಬೇಕು. ಇದು ಉತ್ತಮವು. ಮಂಡಿಯವರೆವಿಗೂ ಬರುವಂತೆ ಮಾಡಿದರೆ ಮಧ್ಯಮವು. ಹೊಕ್ಕಳಿನವರೆಗೂ ಬರುವಂತೆ ಮಾಡಿದರೆ ಕನಿಷ್ಠವು.

೧೦. ಆ ನೂಲಿಗೆ ಹಾಕುವ ಗಂಟುಗಳನ್ನು ಆ ಸಂವತ್ಸರದಲ್ಲಿ ಎಷ್ಟು ದಿನ ಗಳಿವೆಯೋ ಅಷ್ಟನ್ನು ಹಾಕಬೇಕು. ಅದು ಸಾಧ್ಯವಿಲ್ಲದಿದ್ದರೆ ಆ ದಿನಗಳ ಅರ್ಧದಷ್ಟನ್ನು ಹಾಕಬಹುದು. ಅದೂ ಇಲ್ಲದಿದ್ದರೆ ಆ ಸಂವತ್ಸರದ ಕಾಲು ಭಾಗದ ದಿನದಷ್ಟು ಗಂಟನ್ನಾದರೂ ಹಾಕಬೇಕು. ಇಲ್ಲದಿದ್ದರೆ ನೂರೆಂಟು ಗಂಟನ್ನು ಹಾಕಬಹುದು.

೧೧. ವರ್ಷದ ದಿನಗಳ ಸಂಖ್ಯೆಯ ಅರ್ಧದಷ್ಟು ಗಂಟುಗಳೇ ಉತ್ತಮವು. ಲಿಂಗಕ್ಕೆ ಹಾಕಿದ ಗಂಟು ಲಿಂಗಸಂಜ್ಞೆಯುಳ್ಳದ್ದಾಗಿರಬೇಕು. ಅಥವಾ ನಾಗ ಗಂಗಾ ಸಂಜ್ಞೆಯುಳ್ಳವಾದರೂ ಆಗಿರಬೇಕು.

೧೨. ಪ್ರತಿಮೆಗಳಲ್ಲಿ ಈ ಸೂತ್ರವು ತಲೆಯಿಂದ ಕಾಲಿನವರೆಗೂ ಇರಬೇಕು. ಆ ವಿಷ್ಣುವಿಗೆ ಹಾಕಬೇಕಾದರೆ ಹೇಗೆ ಹಾಕಿದರೆ ಸೌಂದರ್ಯ ತೋರುತ್ತದೆಯೋ ಹಾಗೆ ಮಾಡಬೇಕು.

೧೩–೧೪. ಈರೀತಿ ಮಾಡಿದ ಪವಿತ್ರಕ್ಕೆ ಗಂಧಪವಿತ್ರವೆಂದು ಹೆಸರು. ಅದನ್ನು ಮಾಡುವಾಗ ಗಂಟಿನಿಂದ ಹೊರಕ್ಕೆ ತಂತುಗಳು ಕಾಣಬಾರದ ಹಾಗಿರ

ದೇವಾನಾಂ ಚ ತಥಾ ಪ್ರೋಕ್ತಂ ಪವಿತ್ರಂ ವಿಷ್ಣುದೈವತಂ ।
ಅಂಬರೀಷಾದಿಭಕ್ತಾಶ್ಚ ಅನ್ಯೇ ಯೇ ಚ ಧ್ರುವಾದಯಃ ॥ ೧೪ ॥

ಪವಿತ್ರಾಣಿ ತತಃ ಪಶ್ಚಾದ್ದಾತವ್ಯಾನೀಹ ಪಾರ್ವತಿ ।
ಪ್ರತಿಪದ್ಧನದಸ್ಯೋಕ್ತಾ ಪವಿತ್ರಾರೋಪಣೋ ತಿಥಿಃ ॥ ೧೫ ॥

ಲಕ್ಷ್ಮ್ಯಾ ದೇವ್ಯಾ ದ್ವಿತೀಯಾ ಚ ತಿಥೀನಾಮುತ್ತಮಾ ತಿಥಿಃ ।
ತೃತೀಯಾ ತು ತವ ಪ್ರೋಕ್ತಾ ಚತುರ್ಥೀ ಗಣಪಸ್ಯ ತು ॥ ೧೬ ॥

ಪಂಚಮೀ ಚಂದ್ರಮಸಶ್ಚ ಷಷ್ಠೀ ವೈ ಕಾರ್ತಿಕಸ್ಯ ಚ ।
ಸಪ್ತಮೀ ಚ ರವೇಃ ಪ್ರೋಕ್ತಾ ದುರ್ಗಾಯಾಶ್ಚಾಷ್ಟಮೀ ಸ್ಮೃತಾ ॥ ೧೭ ॥

ನವಮೀ ಚೈವ ಮಾತೃಣಾಂ ಯಮಸ್ಯ ದಶಮೀ ತಥಾ ।
ಏಕಾದಶೀ ತು ಸರ್ವೇಷಾಂ ದ್ವಾದಶೀ ಮಾಧವಸ್ಯ ಚ ॥ ೧೮ ॥

ತ್ರಯೋದಶೀ ತು ಕಾಮಸ್ಯ ಶರ್ವಸ್ಯೋಕ್ತಾ ಚತುರ್ದಶೀ ।
ತದ್ವತ್ಪಂಚದಶೀ ಖ್ಯಾತಾ ಧಾತುರ್ವೈ ಹ್ಯರ್ಚನೇ ಪುನಃ ॥ ೧೯ ॥

---

ಬೇಕು. ಆ ರೀತಿಯಲ್ಲಿ ಮಾಡಬೇಕು. ದೇವತೆಗಳಿಗೆ ಹಾಕುವ ಈ ಪವಿತ್ರಗಳಿಗೆ ವಿಷ್ಣುವೇ ದೈವತವು. ಅಂಬರೀಷ ಧ್ರುವ ಇವರೇ ಮುಂತಾದವರು ಈ ಬಗೆಯಾದುದನ್ನು ಆಚರಿಸಿದರು.

೧೫. ಅನಂತರ ಆ ಪವಿತ್ರಗಳನ್ನು ದಾನಮಾಡಬೇಕು. ಕುಬೇರನಿಗೆ ಪವಿತ್ರಾರೋಪಣವನ್ನು ಮಾಡಬೇಕಾದರೆ ಪಾಡ್ಯವು ಶ್ರೇಷ್ಠವಾದುದು.

೧೬–೧೮. ಬಿದಿಗೆಯು ಲಕ್ಷ್ಮಿಗೂ, ತದಿಗೆಯು ಪಾರ್ವತಿಗೂ, ಚೌತಿಯು ಗಣೇಶನಿಗೂ, ಪಂಚಮಿಯು ಚಂದ್ರನಿಗೂ, ಷಷ್ಠಿಯು ಷಣ್ಮುಖನಿಗೂ. ಸಪ್ತಮಿಯು ಸೂರ್ಯನಿಗೂ, ಅಷ್ಟಮಿಯು ದುರ್ಗೆಗೂ, ನವಮಿಯು ಮಾತೃಗಳಿಗೂ, ದಶಮಿಯು ಯಮನಿಗೂ, ಏಕಾದಶಿಯು ಎಲ್ಲಾ ದೇವತೆಗಳಿಗೂ. ದ್ವಾದಶಿಯು ಮಾಧವನಿಗೂ ಪವಿತ್ರಾರೋಪಣದಲ್ಲಿ ಯೋಗ್ಯವಾದುವು.

೧೯. ತ್ರಯೋದಶಿಯು ಕಾಮನಿಗೂ, ಚತುರ್ದಶಿಯು ಶಿವನಿಗೂ. ಪೂರ್ಣಿಮೆಯು ಬ್ರಹ್ಮನಿಗೂ ಪವಿತ್ರಾರೋಪಣದಲ್ಲಿ ಯುಕ್ತವಾದುವು.

ಏತಾ ವೈ ತಿಥಯಃ ಪ್ರೋಕ್ತಾಃ ಪವಿತ್ರರೋಪಣೋಚಿತಾಃ ।
ಕನಿಷ್ಠೋ ದ್ವಾದಶ ಪ್ರೋಕ್ತಾ ಮಧ್ಯಮೋ ದ್ವಿಗುಣಾಃ ಸ್ಮೃತಾಃ ॥ ೨೦ ॥

ತ್ರಿಗುಣಾಶ್ಚೋತ್ತಮೋ ಚೈವ ಗ್ರಂಥಯಶ್ಚ ಪವಿತ್ರಕೇ ।
ಕರ್ಪೂರಕೇಶರಾಭ್ಯಾಂ ವಾ ಚಂದನೇನ ಹರಿದ್ರಯಾ ॥ ೨೧ ॥

ರಂಜಯಿತ್ವಾ ತು ತತ್ಸರ್ವಂ ಸ್ಥಾಪ್ಯಂ ನವಕರಂಡಕೇ ।
ದೇವಸ್ಯ ಯಜನಂ ಯತ್ರ ಸ್ಥಾಪ್ಯಾನಿ ದೇವವತ್ತದಾ ॥ ೨೨ ॥

ಆದೌ ದೇವಾರ್ಚನಂ ಕೃತ್ವಾ ವಾಸನಂ ಸಪವಿತ್ರಕಂ ।
ಅಧಿವಾಸಿತೇ ಪವಿತ್ರೇ ತು ತತೋ ವೈ ಪೂಜನಂ ಸ್ಮೃತಂ ॥ ೨೩ ॥

ಪವಿತ್ರೇಷು ಚ ಯೋ ದೇವಾಸ್ತೇಷಾಂ ನಿಕಟಮಾಚರೇತ್ ।
ಬ್ರಹ್ಮಾ ವಿಷ್ಣುಸ್ತಥಾ ರುದ್ರಸ್ತ್ರಯೋ ವೈ ಸೂತ್ರದೇವತಾಃ ॥ ೨೪ ॥

ಕ್ರಿಯಾ ಚ ಪೌರುಷೀ ವೀರಾ ಚತುರ್ಥೀ ಚಾಪರಾಜಿತಾ ।
ಜಯಾ ಚ ವಿಜಯಾ ಚೈವ ಮುಕ್ತಿದಾ ಚ ಸದಾಶಿವಾ ॥ ೨೫ ॥

ಮನೋನ್ಮನೀ ತು ನವಮೀ ದಶಮೀ ಸರ್ವತೋ ಮುಖೀ ।
ಗ್ರಂಥೀನಾಂ ದೇವತಾಶ್ಚೈತಾಃ ಸೂತ್ರೇಷು ವಿನಿವೇಶಯೇತ್ ॥ ೨೬ ॥

---

೨೦–೨೨ ಪವಿತ್ರಾರೋಪಣದಲ್ಲಿ ಈ ತಿಥಿಗಳು ಯೋಗ್ಯಗಳೆಂದು ಹೇಳಲ್ಪಟ್ಟಿವೆ. ಪವಿತ್ರಕ್ಕೆ ಹನ್ನೆರಡು ಗಂಟುಗಳಿದ್ದರೆ ಅದು ಕನಿಷ್ಠವು. ಇಪ್ಪತ್ತನಾಲ್ಕಿದ್ದರೆ ಅದು ಮಧ್ಯಮವು. ಮೂವತ್ತಾರು ಗಂಟುಗಳಿದ್ದರೆ ಅದು ಉತ್ತಮವು. ಪಚ್ಚಕರ್ಪೂರ ಕುಂಕುಮಕೇಸರಿ ಚಂದನ ಅರಶಿನಗಳನ್ನೂ ಅದಕ್ಕೆ ತೊಡೆದು ಬಣ್ಣವಾಗಿ ಮಾಡಬೇಕು. ಅನಂತರ ಅದನ್ನು ಹೊಸ ಭರಣಿಯಲ್ಲಿಟ್ಟು ಯಾವ ದೇವರನ್ನು ಪೂಜಿಸುತ್ತೇವೆಯೋ ಆ ದೇವರ ಮುಂದೆ ಇಡಬೇಕು.

೨೩–೨೬. ಮೊದಲು ದೇವರನ್ನು ಪೂಜಿಸಬೇಕು. ಅನಂತರ ಆ ಪವಿತ್ರವನ್ನು ವಾಸನೆ ಬಣ್ಣಗಳುಳ್ಳದನ್ನಾಗಿ ಮಾಡಬೇಕು. ಆ ಪವಿತ್ರಕ್ಕೆ ವಾಸನೆ ಕಟ್ಟಿದನಂತರ ಪೂಜೆಮಾಡಬೇಕು. ಪವಿತ್ರಕ್ಕೆ ಉಕ್ತವಾದ ದೇವತೆಗಳನ್ನೂ ಅದರಲ್ಲಿ ಆವಾಹಿಸಬೇಕು. ಬ್ರಹ್ಮ ವಿಷ್ಣು ರುದ್ರ ಈ ಮೂವರೂ ಆ ಸೂತ್ರಕ್ಕೆ ದೇವತೆಗಳು. ಕ್ರಿಯೆ, ಪೌರುಷಿ, ವೀರೆ, ಅಪರಾಜಿತೆ, ಜಯೆ, ವಿಜಯೆ, ಸದಾಶಿವೆ, ಮುಕ್ತಿದೆ, ಮನೋನ್ಮನೀ, ಸರ್ವತೋಮುಖೀ ಈ ಹತ್ತು ಜನ ದೇವತೆಗಳೂ ಸೂತ್ರದೇವತೆಗಳು. ಇವರನ್ನೂ ಅದರಲ್ಲಿ ಆವಾಹಿಸಬೇಕು. ಮುದ್ರೆಗಳನ್ನು

ಆವಾಹನಂ ಮುದ್ರಯಾ ವೈ ಶಾಸ್ತ್ರೋಕ್ತವಿಧಿನಾ ತತಃ ।
ಆವಾಹ್ಯ ತತ್ರ ತಾಸ್ಸರ್ವಾಃ ಸನ್ನಿಧೀಕರಣಂ ಸ್ಮೃತಂ ॥ ೨೭ ॥

ಸನ್ನಿಧೀಕರಣಂ ಮುದ್ರಯಾ ಸನ್ನಿಧೀಕರಣಂ ॥
ರಕ್ಷಾಮುದ್ರಯಾ ಸಂರಕ್ಷ್ಯ ಧೇನುಮುದ್ರಯಾ ।
ಅಮೃತೀಕೃತ್ಯ ಪ್ರಾಗೇವ ದೇವಸ್ಯಾಗ್ರೇ ಕಲಶೋದಕಂ ।
ಗೃಹೀತ್ವಾ ಆಗಮೋಕ್ತೇನ ಮಂತ್ರೇಣ ನಿಧಾಯ
ಕ್ಲೀಂ ಕೃಷ್ಣಾಯೇತಿ ಮಂತ್ರೇಣ ಪ್ರೋಕ್ಷಣಂ ॥
ಗಂಧಧೂಪದೀಪನೈವೇದ್ಯಕಂ ದತ್ವಾ ತಾಂಬೂಲಾದಿಕಂ ದತ್ವಾ
ಷೋಡಶೋಪಚಾರಾದಿನಾ ಪವಿತ್ರದೇವತಾಮಭ್ಯರ್ಚ್ಯ ಗಂಧಪವಿತ್ರಂ
ದೇವಸ್ಯ ಧೂಪಿತಂ ಕೃತ್ವಾ ದೇವಾಭಿಮುಖಃಸನ್ನಮಸ್ಕಾರಮುದ್ರಯಾ
ದೇವಮಭಿಮಂತ್ರಯೀತ ॥ ೨೮ ॥

ಆಮಂತ್ರಿತೋ ಮಹಾದೇವ ಸಾರ್ಥಂ ದೇವ್ಯಾ ಗಣಾದಿಭಿಃ ।
ಮಂತ್ರೈರ್ವಾ ಲೋಕಪಾಲೈಶ್ಚ ಸಹಿತಃ ಪರಿಚಾರಕೈ ॥ ೨೯ ॥

---

ತೋರಿಸಿ ಆವಾಹನೆಗಳನ್ನು ಶಾಸ್ತ್ರರೀತಿಯಿಂದ ಮಾಡಬೇಕು. ಹೀಗೆ ಆವಾಹಿಸಿದರೆ ಅಲ್ಲಿ ಆ ದೇವತೆಗಳೆಲ್ಲರೂ ಇರುವರೆಂದು ಹೇಳಲ್ಪಟ್ಟಿದೆ.

೨೮. ದೇವತೆಗಳ ಮುದ್ರೆಯನ್ನು ತೋರಿಸಿ ಆ ಪವಿತ್ರದಲ್ಲಿ ಬರುವಂತೆ ಮಾಡುವುದಕ್ಕೆ ಸನ್ನಿಧೀಕರಣವೆಂದು ಹೆಸರು. ರಕ್ಷಾಮುದ್ರೆಯಿಂದ ರಕ್ಷಿಸಿ ಧೇನುಮುದ್ರೆಯಿಂದ ಅಮೃತವಾಗುವಂತೆ ಮಾಡಿ ಮೊದಲೇನೇ ಸ್ವಾಮಿಯ ಬಳಿಯಿರುವ ಕಲಶೋದಕವನ್ನು ತೆಗೆದುಕೊಂಡು ಶಾಸ್ತ್ರೋಕ್ತವಾದ ಮಂತ್ರಗಳಿಂದ ಪ್ರೋಕ್ಷಿಸಬೇಕು. " ಕ್ಲೀಂ ಕೃಷ್ಣಾಯ ನಮಃ " ಎಂದು ಪ್ರೋಕ್ಷಿಸಬೇಕು. ಗಂಧ ಧೂಪ ದೀಪ ನೈವೇದ್ಯಗಳನ್ನು ಅರ್ಪಿಸಿ ತಾಂಬೂಲವನ್ನು ಒಪ್ಪಿಸಿ ಷೋಡಶೋಪಚಾರಗಳಿಂದ ಪವಿತ್ರದ ದೇವತೆಗಳನ್ನು ಪೂಜಿಸಿ ಗಂಧದಿಂದ ಬಳಿದ ಸೂತ್ರವನ್ನು ಧೂಪದಿಂದ ವಾಸನೆ ಬರುವಂತೆ ಮಾಡಿ ದೇವರಿಗೆ ಎದುರಾಗಿ ನಮಸ್ಕಾರ ಮುದ್ರೆಯಿಂದ ದೇವರನ್ನು ಅಭಿಮಂತ್ರಿಸಬೇಕು.

೨೯. ಎಲೈ ಮಹಾದೇವನೇ! ದೇವಿಯನ್ನೂ, ಗಣಗಳನ್ನೂ, ಪರಿಚಾರಕರನ್ನೂ, ನಿನ್ನನ್ನೂ, ಲೋಕಪಾಲಕರನ್ನೂ ಮಂತ್ರಗಳಿಂದ ಕರೆದಿದ್ದೇವೆ.

ಆಗಚ್ಛ ಭಗವನ್ವಿಷ್ಣೋ ವಿಧೇಸ್ಸಂಪೂರ್ಣಹೇತವೇ ।
ಪ್ರಾತಸ್ತ್ವತ್ಪೂಜನಂ ಕುರ್ಮಸ್ಸಾನ್ನಿಧ್ಯಂ ನಿಯತಂ ಕುರು ॥ ೩೦ ॥

ತದ್ಗಂಧಂ ಚ ಪವಿತ್ರಂ ಚ ದೇವಸ್ಯ ರಾಘವಸ್ಯ ಚ ।
ಶ್ರೀ ವಿಷ್ಣೋಶ್ಚರಣೇ ತಸ್ಮಿನ್ನಿಕ್ಷಿಪ್ಯ ಪ್ರಾತಃ ಸ್ವಕ್ರಿಯಾಂ ।
ವಿಧಾಯ ಪುಣ್ಯಾಹಂ ಸ್ವಸ್ತಿವಾಚನಂ ಜಯಶಬ್ದೈಃ ।
ಘಂಟಾದಿವಾದಿತ್ರನಿರ್ಘೋಷತೂರ್ಯಾದಿಶಬ್ದೈಃ ।
ಪವಿತ್ರೈಃ ಪೂಜಾಂ ಕುರ್ಯಾತ್ ॥ ೩೧ ॥

ತತಃ ಪ್ರಥಮಂ ಜ್ಯೇಷ್ಠಂ ತತೋ ಮಧ್ಯಮಂ ಕನಿಷ್ಠಂ ಚೈಭಿಃ ।
ಸರ್ವೈರ್ಯಥಾಕ್ರಮೇಣ ಪೂಜಾಂ ಕುರ್ಯಾತ್ ॥ ೩೨ ॥

ಓಂ ವಾಸುದೇವಾಯ ವಿದ್ಮಹೇ ವಿಷ್ಣುದೇವಾಯಧೀಮಹಿ ।
ತನ್ನೋ ದೇವಃ ಪ್ರಚೋದಯಾತ್ ॥
ಇತಿ ಪವಿತ್ರದಾನಂ ಅಥವಾ ಸ್ವಮಂತ್ರೈಃ ॥ ೩೩ ॥

---

೩೦. ಎಲೈ ಭಗವಂತನಾದ ವಿಷ್ಣುವೇ! ನೀನು ಬಾ. ಈ ವ್ರತವನ್ನು ಪೂರ್ತಿಗೊಳಿಸು. ಬೆಳಗ್ಗೆ ನಿನ್ನ ಪೂಜೆಯನ್ನು ಮಾಡುತ್ತೇವೆ. ಖಂಡಿತವಾಗಿ ನೀನು ಇದರ ಬಳಿಯಲ್ಲಿರು.

೩೧. ಗಂಧವನ್ನೂ ಪವಿತ್ರವನ್ನೂ ಆ ಸ್ವಾಮಿಯ ಪಾದದ ಬಳಿಯಲ್ಲಿಟ್ಟು ಬೆಳಗಾಗುತ್ತಲೂ ಪುಣ್ಯಾವರ್ಚನೆಯನ್ನು ಮಾಡಿ ಸ್ವಸ್ತಿವಾರ್ಚನವನ್ನು ಹೇಳಿಸಿ ಘಂಡೆ ಮುಂತಾದ ವಾದ್ಯಗಳ ಸದ್ದುಗಳನ್ನೂ ಮಾಡಿಸುತ್ತ ಪವಿತ್ರದೊಡನೆ ಪೂಜೆಮಾಡಬೇಕು.

೩೨. ಆ ಮೇಲೆ ಮೊದಲು ಉತ್ತಮವಾದುದು, ಆಮೇಲೆ ಮಧ್ಯಮ ವಾದುದು, ಆಮೇಲೆ ಕನಿಷ್ಠವಾದುದು, ಈ ರೀತಿಯಿಂದ ಕ್ರಮವಾಗಿ ಪೂಜೆಮಾಡಬೇಕು.

೩೩. ವಾಸುದೇವನನ್ನು ಜ್ಞಾನಕ್ಕೆ ತಂದುಕೊಂಡು ಆ ಸ್ವಾಮಿಯಾದ ವಿಷ್ಣುವನ್ನು ನಮಸ್ಕರಿಸುತ್ತೇನೆ. ಆ ದೇವನು ನನ್ನನ್ನು ಕಾಪಾಡಲಿ. ಎಂದು ಹೇಳಿ ಇದರಿಂದ ಪವಿತ್ರವನ್ನು ಹಾಕಬೇಕು. ಅದಿಲ್ಲದ್ದರೆ ಆಯಾ ದೇವತೆಗಳಿಗೆ ಹೇಳಿರುವ ಮಂತ್ರಗಳಿಂದ ಬೇಕಾದರೂ ಹಾಕಬಹುದು.

ತತೋ ವೈ ಮಹತೀಂ ಪೂಜಾಂ ವಿಷ್ಣೋಃ ಕುರ್ಯಾತ್ಪ್ರಸಾದಿನೀಂ ।
ಯಥಾ ವೈ ಕೃತಯಾ ದೇವಿ ವಿಷ್ಣುರಾತ್ಮಾ ಪ್ರಸೀದತಿ ॥ ೩೪ ॥

ಸಮನ್ತಾದ್ದೀಪಮಾಲಾ ಚ ಕರ್ತವ್ಯಾ ಚ ವಿಧಾನತಃ ।
ಚತುರ್ವಿಧಂ ತಥಾ ಚಾನ್ನಂ ನೈವೇದ್ಯಂ ಕಾರಯೇದ್ಬುಧಃ ॥ ೩೫ ॥

ಪವಿತ್ರಾಣಿ ತತೋ ದದ್ಯಾತ್ಪೂಜಿತಾನಿ ತು ಶೋಭನೇ ।
ಭಕ್ತ್ಯಾ ವೈ ತು ವಿಶೇಷೇಣ ಶ್ರೀಗುರುಂ ಪೂಜಯೇತ್ತತಃ ॥ ೩೬ ॥

ವಸ್ತ್ರಾಲಂಕಾರವಿಧಿನಾ ಪೂಜನೀಯೋ ಗುರುರ್ಮಹಾನ್ ।
ಪೂಜಯಿತ್ವಾ ಗುರುಂ ತತ್ರ ಪವಿತ್ರಂ ಧಾರಯೇತ್ತತಃ ॥ ೩೭ ॥

ಅಥ ಯೇ ವೈಷ್ಣವಾಸ್ಸಂತಿ ತೇಭ್ಯಸ್ತಾಂಬೂಲಾದಿಕಂ ದತ್ವಾ
ಪೂರ್ಣಾಹುತಿಮಗ್ನಯೇ ದತ್ವಾ ಶ್ರೀನಿವಾಸಾಯ
ಶ್ರೀಕೃಷ್ಣಾಯ ಕರ್ಮ ನಿವೇದಯೇತ್ ॥ ೩೮ ॥

---

೩೪. ಅನಂತರ ವಿಷ್ಣುವಿಗೆ ಚೆನ್ನಾಗಿ ಪೂಜೆಮಾಡಬೇಕು. ಅದರಿಂದ ಆ ಸ್ವಾಮಿಯೂ ನಮ್ಮ ಮನಸ್ಸೂ ನಿರ್ಮಲವಾಗಿರುವಂತೆ ಮಾಡಬೇಕು.

೩೫. ಎಲ್ಲಾ ಕಡೆಯಲ್ಲಿಯೂ ದೀಪವನ್ನು ಸಾಲುಸಾಲಾಗಿ ಹಚ್ಚಿಸಬೇಕು. ನಾಲ್ಕು ಬಗೆಯ ಅನ್ನವನ್ನು ಮಾಡಿ ನೈವೇದ್ಯವನ್ನು ಮಾಡಬೇಕು.

೩೬. ಪವಿತ್ರಗಳಿಗೂ ಪೂಜೆಯನ್ನು ಮಾಡಿ ಅನಂತರ ಆ ಪವಿತ್ರವನ್ನು ಸ್ವಾಮಿಗೆ ಹಾಕಬೇಕು. ಅನಂತರ ಸ್ವಶಕ್ತಿಯಿಂದ ಗುರುವನ್ನು ಪೂಜಿಸಬೇಕು

೩೭. ಬಟ್ಟೆ ಅಲಂಕಾರ ಮುಂತಾದುವುಗಳಿಂದ ಗುರುವನ್ನು ಪೂಜಿಸಿ ಅನಂತರ ಪವಿತ್ರವನ್ನು ತಾನು ತೆಗೆದುಕೊಂಡು ಧರಿಸಿಕೊಳ್ಳಬೇಕು.

೩೮. ಅನಂತರ ಅಲ್ಲಿರುವ ವೈಷ್ಣವರಿಗೆಲ್ಲಾ ತಾಂಬೂಲಾದಿಗಳನ್ನು ಕೊಟ್ಟು ಅಗ್ನಿಯಲ್ಲಿ ಪೂರ್ಣಾಹುತಿಯನ್ನು ಕೊಟ್ಟು ಶ್ರೀನಿವಾಸನಾದ ಶ್ರೀ ಕೃಷ್ಣನಿಗೆ ಆ ಕರ್ಮವನ್ನು ನಿವೇದಿಸಬೇಕು.

ಮಂತ್ರಹೀನಂ ಕ್ರಿಯಾಹೀನಂ ಭಕ್ತಿಹೀನಂ ತು ಕೇಶವ ।
ಯತ್ಪೂಜಿತಂ ಮಯಾ ಸಮ್ಯಕ್ಸಂಪೂರ್ಣಂ ಯಾತು ಮೇ ಧ್ರುವಂ ॥೩೯॥

ತತ ಉದ್ವಾಸ್ಯೇಷ್ಟಬಂಧುಭಿಸ್ತಥಾ ವೈಷ್ಣವೈರ್ವಿಪ್ರೈರ್ವಾ
ಸಹಿತಃ ಸನ್ಮೃಷ್ಟಮನ್ನಂ ಸ್ವಯಂ ಭುಂಜೀತ ॥ ೪೦ ॥

ಏತತ್ಪೂಜನಕಂ ದಿವ್ಯಂ ಯೇ ಶೃಣ್ವನ್ತಿ ದ್ವಿಜೋತ್ತಮಾಃ ।
ಸರ್ವಪಾಪವಿನಿರ್ಮುಕ್ತಾ ಯಾನ್ತಿ ವಿಷ್ಣೋಃ ಪರಂ ಪದಂ ॥ ೪೧ ॥

ಯಾವತ್ತಪತಿ ವೈ ಚಂದ್ರೋ ಯಾವತ್ತಪತಿ ವೈ ರವಿಃ ।
ಪವಿತ್ರಾರೋಪಕಸ್ತಾವತ್ತಪತೇ ನಾತ್ರ ಸಂಶಯಃ ॥ ೪೨ ॥

ಪೃಥಿವ್ಯಾಂ ಯಾನಿ ದಾನಾನಿ ನಿಯಮಾಶ್ಚ ತಥಾ ಪುನಃ ।
ಸರ್ವಂ ಸಂಪೂರ್ಣತಾಂ ಯಾತಿ ಪವಿತ್ರಾರೋಪಣೇ ಕೃತೇ ॥ ೪೩ ॥

ಉತ್ಸವಾನಾಂ ರಾಜರಾಜಃ ಪವಿತ್ರಾರೋಪಣೋ ವಿಧಿಃ ।
ಬ್ರಹ್ಮಹಾ ಶುದ್ಧ್ಯತೇ ತತ್ರ ನಾತ್ರ ಕಾರ್ಯಾ ವಿಚಾರಣಾ ॥ ೪೪ ॥

---

೩೯. ಎಲೈ ಕೇಶವನೇ! ಮಂತ್ರತಂತ್ರಗಳೆಷ್ಟನ್ನೋ ಬಿಟ್ಟಿದ್ದೇನೆ. ಆದರೆ ನಾನು ಮಾಡಿದ ಪೂಜೆಯಲ್ಲಿ ಒಳ್ಳೆಯದನ್ನು ಪರಿಗ್ರಹಿಸಿ ಈ ವ್ರತವನ್ನು ಸಂಪೂರ್ಣವಾಗುವಂತೆ ಮಾಡು.

೪೦. ಅನಂತರ ಆ ಸ್ವಾಮಿಯನ್ನು ವಿಸರ್ಜನೆ ಮಾಡಿ ತೆಗೆಯಬೇಕು. ಇಷ್ಟರೊಡನೆಯೂ ಬಂಧುಗಳೊಡನೆಯೂ ವೈಷ್ಣವರೊಡನೆಯೂ ಕೂಡಿಕೊಂಡು ಒಳ್ಳೆಯ ಮೃಷ್ಟಾನ್ನವನ್ನು ಊಟಮಾಡಬೇಕು.

೪೧. ಈ ಉತ್ತಮವಾದ ಪೂಜೆಯನ್ನು ಕೇಳಿದವರು ಪಾಪವನ್ನು ಕಳೆದುಕೊಂಡು ವಿಷ್ಣುವಿನ ಪದವನ್ನು ಹೊಂದುತ್ತಾರೆ.

೪೨. ಸೂರ್ಯಚಂದ್ರರು ಇರುವವರೆಗೂ ಈ ಪವಿತ್ರಾರೋಪಕನು ವಿಷ್ಣುಲೋಕವನ್ನು ಹೊಂದಿ ವೈಕುಂಠದಲ್ಲಿ ಸುಖವಾಗಿರುತ್ತಾನೆ. ಸಂಶಯವಿಲ್ಲ.

೪೩. ಈ ಪವಿತ್ರಾರೋಪಣ ವ್ರತವನ್ನು ಮಾಡಿದರೆ ಭೂಮಿಯಲ್ಲಿರುವ ತೀರ್ಥಗಳು ವ್ರತಗಳು ನಿಯಮಗಳು ಎಲ್ಲವನ್ನೂ ಮಾಡಿದಂತಾಗುತ್ತದೆ.

೪೪. ಈ ಪವಿತ್ರಾರೊಪಣ ವಿಧಿಯು ಉತ್ಸವಗಳಿಗೆ ರಾಜನು. ಇದನ್ನು ಮಾಡಿದರೆ ಬ್ರಹ್ಮಹತ್ಯೆಯೂ ಹೋಗುತ್ತದೆ. ಸಂಶಯವಿಲ್ಲ.

ಸತ್ಯಂ ಸತ್ಯಂ ಪುನಸ್ಸತ್ಯಂ ಯದುಕ್ತಂ ನಗನಂದಿನಿ ।
ಪವಿತ್ರಾರೋಪಣೇ ಪುಣ್ಯಂ ದರ್ಶನೇ ತು ತಥಾ ಸ್ಮೃತೇ　　|| ೪೫ ||

ಶೂದ್ರೈರ್ವಾಥ ಮಹಾಭಾಗೇ ಪವಿತ್ರಾರೋಪಣೋ ವಿಧಿಃ ।
ಕೃತೇ ವೈ ಭಕ್ತಿಭಾವೇನ ತೇ ವೈ ಧನ್ಯತಮಾ ಸ್ಮೃತಾಃ　　|| ೪೬ ||

ಧನ್ಯಾಹಂ ಕೃತಕೃತ್ಯಾಹಂ ಸೌಭಾಗ್ಯಾ ಧರಣೀತಳೇ ।
ಮಯಾ ತು ಯಾ ಕೃತಾ ಭಕ್ತಿರ್ವೈಷ್ಣವೀ ಮುಕ್ತಿದಾಯಿನೀ　　|| ೪೭ ||

ಇತಿ ಶ್ರೀ ಮಹಾಪುರಾಣೇ ಪಾದ್ಮೇ ಉತ್ತರಖಂಡೇ ಪಾರ್ವತೀ ಮಹಾದೇವ ಸಂವಾದೇ ಪವಿತ್ರಾರೋಪಣಂ ನಾಮ ಅಷ್ಟಾಶೀತಿತಮೋಽಧ್ಯಾಯಸ್ಸಮಾಪ್ತಃ

---

೪೫. ಎಲೈ ಪಾರ್ವತಿಯೇ ! ಇದು ಸತ್ಯವು. ಮೂರುಬಾರಿಗೂ ಸತ್ಯವು ಈ ಪವಿತ್ರಾರೋಪಣವನ್ನು ಮಾಡಿದರೆ ಎಷ್ಟು ಪುಣ್ಯವೋ ನೋಡಿದರೂ ಅಷ್ಟೇ ಪುಣ್ಯವುಂಟು. ಸ್ಮರಿಸಿದರೂ ಪುಣ್ಯವುಂಟು.

೪೬. ಪ್ರಪಂಚದಲ್ಲಿ ಶೂದ್ರರಾದರೂ ಸರಿಯೆ. ಈ ಪವಿತ್ರಾರೋಪಣ ವ್ರತವನ್ನು ಮಾಡಿದರೆ ಅವರೇ ಧನ್ಯರು.

೪೭. ನಾನು ವಿಷ್ಣುವಿನಲ್ಲಿ ಭಕ್ತಿಯನ್ನಿಟ್ಟಿರುವುದರಿಂದಲೇ ಧನ್ಯಳೂ. ಕೃತಕೃತ್ಯಳೂ, ಸೌಭಾಗ್ಯವಂತಳೂ ಆಗಿದ್ದೇನೆ.

ಇಂತು ಶ್ರೀ ಪದ್ಮಮಹಾಪುರಾಣದ ಉತ್ತರಖಂಡದ ಪಾರ್ವತೀ ಮಹಾದೇವರ ಸಂವಾದದಲ್ಲಿ ಪವಿತ್ರಾರೋಪಣ ಎಂಬ ಎಂಭತ್ತೆಂಟನೆಯ ಅಧ್ಯಾಯವು ಮುಗಿದುದು.



॥ ಶ್ರೀಃ ॥

-X-

## ಅಥ ಶ್ರೀ ಮಹಾಪುರಾಣೇ ಪಾದ್ಮೇ ಉತ್ತರಖಂಡೇ

## ॥ ಊನನವತಿತಮೋಽಧ್ಯಾಯಃ ॥



॥ ಪಾರ್ವತ್ಯುವಾಚ ॥

ಕಾನಿ ಕಾನಿ ಚ ಪುಷ್ಪಾಣಿ ಕಸ್ಮಿನ್ಮಾಸೇ ಪ್ರಕಲ್ಪಯೇತ್ ।
ತನ್ಮೇ ವದ ಸುರೇಶ ತ್ವಂ ವಿಸ್ತರಾಜ್ಜಗತಃಪ್ರಭೋ ॥ ೧ ॥

॥ ಶ್ರೀಮಹಾದೇವ ಉವಾಚ ॥

ಚೈತ್ರೇ ತು ಚಂಪಕೇನೈವ ಜಾತೀಪುಷ್ಪೇಣ ವಾ ಪುನಃ ।
ಪೂಜನೀಯಃ ಪ್ರಯತ್ನೇನ ಕೇಶವಃ ಕ್ಲೇಶನಾಶನಃ ॥ ೨ ॥

ದಮನಕೈರ್ಮರುವಕೈರ್ಬಲಪುಷ್ಪೈಸ್ತಥಾಪಿ ವಾ ।
ಪೂಜಯೇಜ್ಜಗತಾಮೀಶಂ ವಿಷ್ಣುಂ ಸರ್ವೇಶ್ವರೇಶ್ವರಂ ॥ ೩ ॥

---

## ಎಂಭತ್ತೊಂಭತ್ತನೆಯ ಅಧ್ಯಾಯವು



೧. ಪಾರ್ವತಿಯು ಹೇಳಿದಳು—ಎಲೈ ಸ್ವಾಮಿಯೇ! ಯಾವ ಯಾವ ತಿಂಗಳುಗಳಲ್ಲಿ ಯಾವಯಾವ ಹೂಗಳನ್ನು ಪೂಜೆಮಾಡಬೇಕೆಂಬುದನ್ನು ನನಗೆ ವಿಸ್ತಾರವಾಗಿ ಹೇಳು.

೨. ಶ್ರೀ ಮಹಾದೇವನು ಹೇಳಿದನು—ಚೈತ್ರಮಾಸದಲ್ಲಿ ಸಂಪಿಗೆಯ ಹೂವಿನಿಂದಾಗಲೀ ಜಾಜಿಯ ಹೂವಿಂದಾಗಲೀ ಪೂಜೆಮಾಡಬೇಕು. ಕ್ಲೇಶಗಳು ಹೋಗುತ್ತವೆ.

೩. ದವನ, ಮರುಗ, ಸೇವಂತಿಗೆಗಳಿಂದ ಆ ಸ್ವಾಮಿಯನ್ನು ಚೈತ್ರದಲ್ಲಿ ಪೂಜಿಸಬೇಕು.

ಶತಪತ್ರೈಸ್ತಥಾ ದಿವ್ಯೈರಕ್ತೈರ್ವಾ ಸುಸಮಾಹಿತಃ ।
ಪೂಜಯತಿ ನರೋ ನಿತ್ಯಂ ಚೈತ್ರಮಾಸೇ ಸುರೇಶ್ವರಿ ॥ ೪ ॥

ವೈಶಾಖೇ ತು ಸದಾ ದೇವಿ ಹ್ಯರ್ಚನೀಯೋ ಮಹಾಪ್ರಭುಃ ।
ಕೇತಕೀಪತ್ರಮಾದಾಯ ವೃಷಭಸ್ಥೇ ದಿವಾಕರೇ ॥ ೫ ॥

ಯೇನಾರ್ಚಿತೋ ಹರಿರ್ಭಕ್ತ್ಯಾ ಪ್ರೀತೋ ಮನ್ವಂತರಂ ಶತಂ ।
ಜೇಷ್ಠೇ ಮಾಸೇ ತು ಸಂಪ್ರಾಪ್ತೇ ನಾನಾಪುಷ್ಪೈಃ ಪ್ರಪೂಜಯೇತ್ ॥ ೬ ॥

ಪೂಜಿತೇ ದೇವದೇವೇಶೇ ಸರ್ವೇ ದೇವಾಃ ಸುಪೂಜಿತಾಃ ।
ಕೃತ್ವಾ ಪಾಪಸಹಸ್ರಾಣಿ ಮಹಾಪಾಪಶತಾನಿ ಚ ॥ ೭ ॥

ತೇಪಿ ಯಾಸ್ಯಂತಿ ಭೋ ದೇವಿ ಯತ್ರ ವಿಷ್ಣುಶ್ಶ್ರಿಯಾ ಸಹ ।
ಆಷಾಢೇ ಮಾಸಿ ಸಂಪ್ರಾಪ್ತೇ ಪೂಜಾಂ ಕುರ್ಯಾದ್ವಿಶೇಷತಃ ॥ ೮ ॥

ಕರವೀರೈರಕ್ತಪುಷ್ಪೈಸ್ತಥಾಬ್ಜೈರ್ವಾ ಸದಾ ನರಾಃ ।
ಪೂಜಾಂ ಕುರ್ವಂತಿ ಯೇ ವಿಷ್ಣೋಸ್ತೇ ನರಾಃ ಪುಣ್ಯಭಾಗಿನಃ ॥ ೯ ॥

---

೪. ಕೆಂಪು ಅಥವಾ ಬಿಳಿಯ ಕಮಲಗಳಿಂದಲೂ ಚೈತ್ರಮಾಸದಲ್ಲಿ ದೇವರನ್ನು ಪೂಜಿಸಬೇಕು.

೫. ವೃಷಭಮಾಸ ಬಂದು ವೈಶಾಖವೂ ಬಂದಿರುವಾಗ ತಾಳೆಯ ಹೂವನ್ನು ತಂದು ವಿಷ್ಣುವನ್ನು ಪೂಜಿಸಬೇಕು.

೬ ಈರೀತಿ ಯಾವನು ಪೂಜಿಸುತ್ತಾನೆಯೋ ಅವನ ವಿಷಯದಲ್ಲಿ ನೂರು ಮನ್ವಂತರಗಳವರೆವಿಗೂ ಸ್ವಾಮಿಯು ಸಂತೋಷಪಡುತ್ತಾನೆ. ಜೇಷ್ಠಮಾಸದಲ್ಲಿ ಎಲ್ಲಾ ಹೂಗಳಿಂದಲೂ ದೇವರನ್ನು ಪೂಜಿಸಬೇಕು.

೭-೯. ಹಾಗೆ ವಿಷ್ಣುವನ್ನು ಪೂಜಿಸಿದರೆ ಎಲ್ಲಾ ದೇವರನ್ನೂ ಪೂಜೆಮಾಡಿದಂತಾಗುತ್ತದೆ. ಅನೇಕಸಾವಿರ ಪಾಪಗಳನ್ನು ಮಾಡಿದ್ದರೂ ನೂರಾರು ಮಹಾಪಾಪಗಳನ್ನು ಮಾಡಿದ್ದರೂ ಅವನ್ನೆಲ್ಲಾ ಕಳೆದುಕೊಂಡು ವಿಷ್ಣುವು ಲಕ್ಷ್ಮಿಯೊಡನೆ ವಾಸಿಸುವ ವೈಕುಂಠವನ್ನು ಹೊಂದುತ್ತಾರೆ. ಆಷಾಢಮಾಸದಲ್ಲಿ ಕಣಿಗಲೆ ಹೂ ಕೆಂದಾವರೆಗಳು ಇವುಗಳಿಂದ ಪೂಜಿಸಬೇಕು. ಹಾಗೆ ಪೂಜೆಮಾಡಿದರೆ ಬಹುವಾದ ಪುಣ್ಯವು ಬರುತ್ತದೆ.

ಜಾತರೂಪನಿಭೈರ್ನಿಷ್ಣಂ ಕದಂಬಕುಸುಮೈಸ್ತಥಾ ।
ಯೇಽರ್ಚಯಿಷ್ಯಂತಿ ಗೋವಿದಂ ನ ತೇಷಾಂ ಸೌರಿಜಂ ಭಯಂ ॥ ೧೦ ॥

ಘನಾಗಮೇ ಘನಶ್ಯಾಮಃ ಕದಂಬಕುಸುಮಾರ್ಚಿತಃ ।
ದದಾತಿ ವಾಂಛಿತಾನ್ಕಾಮಾನ್ ಯಾವದಿಂದ್ರಾಶ್ಚತುರ್ದಶ ॥ ೧೧ ॥

ಯಥಾ ಪದ್ಮಾಲಯಾಂ ಪ್ರಾಪ್ಯ ಪ್ರೀತೋ ಭವತಿ ಮಾಧವಃ ।
ಕದಂಬಕುಸುಮಂ ಲಬ್ಧ್ವಾ ಪ್ರಿತೋ ಭವತಿ ಲೋಕಕೃತ್ ॥ ೧೨ ॥

ತುಳಸೀಕೃಷ್ಣತುಳಸೀವಂಜುಲೈರ್ವಾ ಸುರೇಶ್ವರಿ ।
ಸರ್ವದಾ ಪೂಜಿತೋ ವಿಷ್ಣುಃ ಕಷ್ಟಂ ಹರತಿ ನಿತ್ಯಶಃ ॥ ೧೩ ॥

ಶ್ರಾವಣೇ ಮಾಸಿ ಸಂಪ್ರಾಪ್ತೇ ಯೇಽರ್ಚಯಂತಿ ಜನಾರ್ದನಂ ।
ಅತಸೀಪುಷ್ಪಮಾದಾಯ ತಥಾ ದೂರ್ವಾದಳೇನ ತು ॥ ೧೪ ॥

---

೧೦. ಚಿನ್ನದ ಬಣ್ಣಕ್ಕಿರುವ ಹೊಂಬಣ್ಣದ ಹೂಗಳಿಂದಲೂ ಕಡಹದ ಹೂಗಳಿಂದಲೂ ಪೂಜಿಸಬೇಕು. ಅಂಥಹವರಿಗೆ ಯಮನ ಭಯವಿರುವುದಿಲ್ಲ.

೧೧ ಮಳೆಗಾಲದ ಮೊದಲಿನಲ್ಲಿ ಮೇಘಶ್ಯಾಮನಾದ ಆ ಸ್ವಾಮಿಯನ್ನು ಕಡಹದ ಹೂಗಳಿಂದ ಪೂಜಿಸಿದರೆ ಹದಿನಾಲ್ಕುಜನ ಇಂದ್ರರುಗಳಿರುವವರೆಗೂ ಇಷ್ಟವಾದುವನ್ನು ಆ ಸ್ವಾಮಿಯು ಕೊಡುತ್ತಾನೆ.

೧೨ ವಿಷ್ಣುವು ಲಕ್ಷ್ಮಿಯನ್ನು ಹೊಂದಿ ಸಂತೋಷಪಡುವಂತೆ ಕಡಹದ ಹೂವನ್ನು ಹೊಂದಿದರೆ ಹಾಗೆಯೇ ಸಂತೋಷಪಡುತ್ತಾನೆ.

೧೩. ಶ್ರೀತುಳಸಿ ಕೃಷ್ಣತುಳಸಿಗಳಿಂದಲೂ, ಅಶೋಕದ ಹೂಗಳಿಂದಲೂ ಯಾವಾಗಲೂ ವಿಷ್ಣುವನ್ನು ಪೂಜಿಸಬೇಕು. ಹಾಗೆ ಪೂಜಿಸಿದರೆ ಅವನು ಕಷ್ಟಗಳನ್ನು ನಾಶಮಾಡುತ್ತಾನೆ.

೧೪–೧೫. ಈ ಜನಾರ್ದನನನ್ನು ಶ್ರಾವಣಮಾಸದಲ್ಲಿ ಅಗಸೆಯ ಹೂವಿನಿಂದಲೂ, ಗರಿಕೆಯಿಂದಲೂ, ಇನ್ನೂ ಬಗೆಬಗೆಯಾದ ಹೂಗಳಿಂದಲೂ

ನಾನಾಪುಷ್ಪೈರ್ವಿಶೇಷೇಣ ಪೂಜನೀಯಃ ಪ್ರಯತ್ನತಃ ।
ದದಾತಿ ವಿಪುಲಾನ್ಕಾಮಾನ್ಯಾವದಾಭೂತಸಂಪ್ಲವಂ || ೧೫ ||

ಭಾದ್ರಮಾಸೇ ತು ಸಂಪ್ರಾಪ್ತೇ ಶೃಣು ತ್ವಂ ನಗನಂದಿನಿ ।
ಚಂಪಕೈರ್ವಾ ಶ್ವೇತಪುಷ್ಪೈಃ ರಕ್ತಸಿಂಧೂರಕೈಸ್ತಥಾ || ೧೬ ||

ಕಹ್ಲಾರೈರ್ವಾ ಮಹಾದೇವಿ ಸರ್ವಕಾಮಫಲಂ ಲಭೇತ್ ।
ಆಶ್ವಿನೇ ವೈ ಶುಭೇ ಮಾಸಿ ಕರ್ತವ್ಯಂ ವಿಷ್ಣುಪೂಜನಂ || ೧೭ ||

ಯೂಥಿಕಾನವಜಾತೀಭಿಃ ತಥಾ ನಾನಾವಿಧೈಃ ಶುಭೈಃ ।
ಪೂಜನೀಯಃ ಪ್ರಯತ್ನೇನ ಭಕ್ತಿಪೂರ್ವಂ ಸದಾ ಜನೈಃ || ೧೮ ||

ಪದ್ಮಾನ್ಯೇವ ಸಮಾನೀಯ ಯೇಽರ್ಚಯಂತಿ ಜನಾರ್ದನಂ ।
ಧರ್ಮಾರ್ಥಕಾಮಮೋಕ್ಷಾಂಶ್ಚ ಲಭಂತೇ ಮಾನವಾ ಭುವಿ || ೧೯ ||

ಕಾರ್ತಿಕೇ ಮಾಸಿ ಸಂಪ್ರಾಪ್ತೇ ಪೂಜನೀಯೋ ಮಹೇಶ್ವರಃ ।
ಯಾವಂತಿ ಋತುಪುಷ್ಪಾಣಿ ದೇಯಾನಿ ಮಾಧವಸ್ಯ ಚ || ೨೦ ||

---

ಪೂಜಿಸಬೇಕು. ಹಾಗೆ ಪೂಜಿಸಿದರೆ ಪ್ರಪಂಚವು ಇರುವವರೆವಿಗೂ ಆ ಸ್ವಾಮಿಯು ಅನೇಕ ಭೋಗಗಳನ್ನು ಕೊಡುತ್ತಾನೆ.

೧೬–೧೮. ಎಲೈ ಪಾರ್ವತಿಯೇ! ಭಾದ್ರಪದ ಮಾಸದಲ್ಲಿ ಸಂಪಿಗೆ ಮತ್ತು ಬಿಳಿಯಹೂವು, ಕೆಂಪು ಚಂದ್ರವರ್ಣದ ಹೂಗಳು ಇವುಗಳಿಂದಲೂ, ಕಹ್ಲಾರಗಳಿಂದಲೂ ಪೂಜಿಸಬೇಕು. ಹಾಗೆ ಮಾಡಿದರೆ ಎಲ್ಲಾ ಇಷ್ಟವೂ ಸಿದ್ಧಿಸುತ್ತವೆ ಅಶ್ವೀಜ ಮಾಸದಲ್ಲಿ ಗರುಗ, ಜಾಜಿ ಮೊದಲಾದ ಒಳ್ಳೆಯ ಹೂಗಳಿಂದ ಭಕ್ತಿಯಿಂದ ಪೂಜಿಸಬೇಕು.

೧೯. ಪದ್ಮಗಳನ್ನೇ ತಂದು ಜನಾರ್ದನನನ್ನು ಪೂಜಿಸಿದರೆ ಧರ್ಮಾರ್ಥಕಾಮಮೋಕ್ಷಗಳನ್ನು ಹೊಂದುತ್ತಾರೆ.

೨೦. ಕಾರ್ತಿಕಮಾಸದಲ್ಲಿ ಆ ಋತುವಿನ ಹೂಗಳೆಷ್ಟಿರುವುವೋ ಅವೆಲ್ಲವನ್ನೂ ತಂದು ಮಾಧವನನ್ನು ಪೂಜಿಸಬೇಕು.

ತಿಲಾನಿ ತಿಲಪುಷ್ಪಾಣಿ ತೈರ್ಲ್ಯಾ ಹ್ಯರ್ಚನಕಂ ಚರೇತ್ ।
ಪೂಜಿತೇ ಸತಿ ದೇವೇಶೇ ಅನಂತಫಲಮಶ್ನುತೇ ॥ ೨೧ ॥

ಪುನ್ನಾಗೈರ್ವಕುಳೈಃ ಪುಷ್ಪೈಶ್ಚಂಪಕೈರ್ವಾ ಜನಾರ್ದನಂ ।
ಕಾರ್ತಿಕೇ ಪೂಜಯಿಷ್ಯಂತಿ ತೇ ದೇವಾ ನ ಹಿ ಮಾನವಾಃ ॥ ೨೨ ॥

ಮಾರ್ಗಶೀರ್ಷೇ ಪ್ರಯತ್ನೇನ ಪೂಜನೀಯಸ್ಸದಾ ಪ್ರಭುಃ ।
ನಾನಾಪುಷ್ಪೈಸ್ಸನೇವೇದ್ಯೈರ್ಧೂಪೈರ್ನೀರಾಜನೈಸ್ತಥಾ ॥ ೨೩ ॥

ಮಾರ್ಗಶೀರ್ಷೇ ವಿಶೇಷೇಣ ದಿವ್ಯೈಃ ಪುಷ್ಪೈಃ ಪ್ರಪೂಜಯೇತ್ ।
ಪೌಷಮಾಸೇ ಮಹಾದೇವಿ ಹ್ಯರ್ಚನಂ ಶುಭದಂ ಸ್ಮೃತಂ ॥ ೨೪ ॥

ನಾನಾತುಳಸೀಪತ್ರೈಶ್ಚ ಮೃಗನಾಭಿಜಲೈಸ್ತಥಾ ।
ಮಾಘಮಾಸೇ ತು ಸಂಪ್ರಾಪ್ತೇ ನಾನಾಪುಷ್ಪೈಃ ಪ್ರಪೂಜಯೇತ್ ॥ ೨೫ ॥

---

೨೧. ಎಳ್ಳು ಎಳ್ಳಿನ ಹೂಗಳನ್ನು ತಂದು ವಿಷ್ಣುವನ್ನು ಪೂಜಿಸಿದರೆ ಬಹುವಾದ ಫಲಗಳನ್ನು ಸ್ವಾಮಿಯು ಕೊಡುತ್ತಾನೆ

೨೨. ಹೊನ್ನೆ ಪಗಡೆ ಸಂಪಿಗೆ ಹೂಗಳಿಂದ ಕಾರ್ತಿಕಮಾಸದಲ್ಲಿ ಸ್ವಾಮಿಯನ್ನು ಪೂಜಿಸಬೇಕು. ಹಾಗೆ ಪೂಜಿಸಿದರೆ ಅವರು ದೇವತೆಗಳೇ ಹೊರತು ಮನುಷ್ಯರಲ್ಲ.

೨೩. ಮಾರ್ಗಶೀರ್ಷ ಮಾಸದಲ್ಲಿ ನಾನಾಬಗೆಯ ಹೂಗಳನ್ನು ತಂದು ಪೂಜಿಸಬೇಕು. ಧೂಪ ದೀಪ ನೈವೇದ್ಯ ಮಂಗಳಾರತಿಗಳಿಂದಲೂ ಪೂಜಿಸಬೇಕು.

೨೪–೨೮. ಮಾರ್ಗಶೀರ್ಷಮಾಸದಲ್ಲಿ ಉತ್ತಮವಾದ ಹೂಗಳಿಂದ ಸ್ವಾಮಿಯನ್ನು ಪೂಜಿಸಬೇಕು. ಪುಷ್ಯಮಾಸದಲ್ಲಿ ಬಗೆಬಗೆಯ ಪತ್ರಗಳಿಂದಲೂ ತುಳಸಿಗಳಿಂದಲೂ ಪೂಜಿಸಬೇಕು. ಕಸ್ತೂರಿಯ ನೀರಿನಿಂದ ಅಭಿಷೇಕ ಮಾಡಬೇಕು. ಮಾಘಮಾಸದಲ್ಲಿ ಬಗೆಬಗೆಯ ಹೂಗಳನ್ನು ತಂದು ಸ್ವಾಮಿಯನ್ನು

**ಪೂಜಿತೇ ದೇವದೇವೇಶೇ ವಾಂಛಿತಂ ಲಭತೇ ಧ್ರುವಂ ।**
**ಕರ್ಪೂರಜಾ ತಥಾ ಪೂಜಾ ನಾನಾನ್ನೈವೇದ್ಯವೋಪಕ್ಯೈಃ ॥ ೨೬ ॥**

**ಫಾಲ್ಗುನೇ ಚೈವ ಸಂಪ್ರಾಪ್ತೇ ಹ್ಯರ್ಚನಂ ಮಾಧವಸ್ಯ ಚ ।**
**ಕೃತ್ವಾ ವಾಸಂತಿಕೀಂ ಪೂಜಾಂ ಪುಷ್ಪಾಣ್ಯಾದಾಯ ಸರ್ವಶಃ ॥ ೨೭ ॥**

**ನವೀನೈರ್ವಾಥ ದೇವೇಶ ಸರ್ವೈರ್ವಾ ಪೂಜಯೇತ್ತತಃ ।**
**ಪೂಜಿತೇ ತು ಜಗನ್ನಾಥೇ ವೈಕುಂಠಪದಮವ್ಯಯಂ ।**
**ಪ್ರಾಪ್ನೋತಿ ಪುರುಷೋ ನಿತ್ಯಂ ಶ್ರೀ ವಿಷ್ಣೋಃ ಪ್ರಸಾದತಃ ॥ ೨೮ ॥**

**ಇತಿ ಶ್ರೀ ಮಹಾಪುರಾಣೇ ಪಾದ್ಮೇ ಉತ್ತರಖಂಡೇ ಪಾರ್ವತೀ ಮಹಾದೇವ ಸಂವಾದೇ ಮಾಸ ಪುಷ್ಪ ಕಥನಂ ನಾಮ ಏಕೋನನವತಿತಮೋಽಧ್ಯಾಯಸ್ಸಮಾಪ್ತಃ**

---

ಪೂಜಿಸಬೇಕು. ಹಾಗೆ ಪೂಜಿಸಿದರೆ ಆ ಸ್ವಾಮಿಯು ನಾವು ಕೇಳಿದುದನ್ನು ಕೊಡುತ್ತಾನೆ. ಕರ್ಪೂರದಿಂದಲೂ ಕಡುಬೇ ಮುಂತಾದ ನೈವೇದ್ಯಗಳಿಂದಲೂ ಫಾಲ್ಗುನಮಾಸದಲ್ಲಿ ಮಾಧವನನ್ನು ಪೂಜಿಸಬೇಕು. ಕಾಡುಮಲ್ಲಿಗೆಯ ಹೂವಿನಿಂದಲೂ ಹೊಸದಾದ ಯಾವ ಹೂವೇ ಇದ್ದರೂ ಅದರಿಂದಲೂ ಆ ಸ್ವಾಮಿಯನ್ನು ಪೂಜಿಸಬೇಕು. ಹಾಗೆ ಪೂಜಿಸಿದರೆ ಮನುಷ್ಯನು ವಿಷ್ಣುವಿನ ಅನುಗ್ರಹದಿಂದ ನಾಶರಹಿತವಾದ ವೈಕುಂಠವನ್ನು ಹೊಂದುತ್ತಾನೆ.

ಇಂತು ಶ್ರೀ ಪದ್ಮಮಹಾಪುರಾಣದ ಉತ್ತರಖಂಡದ ಪಾರ್ವತೀ ಮಹಾದೇವರ ಸಂವಾದದಲ್ಲಿ ಮಾಸ ಪುಷ್ಪ ಕಥನ ಎಂಬ ಎಂಭತ್ತೊಂಭತ್ತನೆಯ ಅಧ್ಯಾಯವು ಮುಗಿದುದು.



|| ಶ್ರೀಃ ||

–X–

# ಅಥ ಶ್ರೀ ಮಹಾಪುರಾಣೇ ಪಾದ್ಮೇ ಉತ್ತರಖಂಡೇ

## || ನವತಿತಮೋಽಧ್ಯಾಯಃ ||



|| ಸೂತ ಉವಾಚ ||

ಏಕದಾ ದ್ವಾರಕಾಮಾಗಾದೃಷಿಃ ಕೃಷ್ಣದಿದೃಕ್ಷಯಾ |
ಪುಷ್ಪಾಣ್ಯಾದಾಯ ದಿವ್ಯಾನಿ ಕಲ್ಪವೃಕ್ಷೋತ್ಥಿತಾನಿ ಚ || ೧ ||

ನಾರದಂ ಸ್ವಾಗತೇನಾಸೌ ಕೃಷ್ಣಸ್ಸತ್ಕಾರಮಾಚರನ್ |
ಇದಮರ್ಘ್ಯಮಿದಂ ಪಾದ್ಯಮಿತ್ಯುವಾಚಾಸನಂ ದದತ್ || ೨ ||

ನಾರದಸ್ತಾನಿ ಪುಷ್ಪಾಣಿ ಕೃಷ್ಣಾಯೋಪಾಜಹಾರ ಹ |
ಕೃಷ್ಣಷ್ಷೋಡಶಸಹಸ್ರಸ್ತ್ರೀಭ್ಯಸ್ತಾನಿ ವ್ಯಬೀಭಜತ್ || ೩ ||

---

## ತೊಂಭತ್ತನೆಯ ಅಧ್ಯಾಯವು



೧. ಸೂತನು ಹೇಳಿದನು–ಒಂದುಸಾರಿ ನಾರದ ಋಷಿಯು ಕೃಷ್ಣನನ್ನು ನೋಡಲು ಕಲ್ಪವೃಕ್ಷದ ಹೂಗಳನ್ನು ಕೈಯಲ್ಲಿ ತೆಗೆದುಕೊಂಡು ದ್ವಾರಕೆಗೆ ಹೋದನು.

೨. ಕೃಷ್ಣನು ನಾರದನಿಗೆ ಸತ್ಕಾರವನ್ನು ಮಾಡುತ್ತ ಅರ್ಘ್ಯಪಾದ್ಯಗಳನ್ನು ಕೊಟ್ಟು ಆಸನವನ್ನು ಕೊಟ್ಟನು.

೩. ನಾರದನು ಆ ಹೂಗಳನ್ನು ಕೃಷ್ಣನಿಗೆ ಕಾಣಿಕೆಯಾಗಿ ಕೊಟ್ಟನು. ಕೃಷ್ಣನು ಆ ಹೂಗಳನ್ನು ತನ್ನ ಹೆಂಡತಿಯರಿಗೆ ಹದಿನಾರು ಸಾವಿರ ಜನಕ್ಕೂ ಹಂಚಿದನು.

ವಿಸ್ಮೃತ್ಯ ಸತ್ಯಭಾಮಾಂ ತು ಸರ್ವಾಭ್ಯಸ್ತಾನ್ಯದಾತ್ಪ್ರಭುಃ ।
ಸತ್ಯಭಾಮಾ ತತಃ ಕ್ರುದ್ಧಾ ಕ್ರೋಧಾಗಾರಂ ಸಮಾವಿಶತ್ ॥ ೪ ॥

ಪ್ರೇಷ್ಯಾಮಿವ ಸ್ಥಿತಾಂ ಕೋಪಾನ್ನಿಶ್ಶ್ವಸಂತೀಂ ಮುಹುರ್ಮುಹುಃ ।
ಕರಜಾಗ್ರಾವಲೀಢಂ ತು ಪಂಕಜಂ ಮುಖಪಂಕಜೇ ॥ ೫ ॥

ಸಂಶ್ಲೇಷಯಿತ್ವಾ ನಿಶ್ವಸ್ಯ ವಿರಹನ್ತೀಂ ಪುನಃ ಪುನಃ ।
ಕರಪದ್ಮೇ ಪುನಶ್ಶಂಖಂ ಮುಖಪದ್ಮಂ ನಿವೇಶ್ಯ ಚ ॥ ೬ ॥

ವಿನೀತಾಂ ಚಾರುಸರ್ವಾಂಗೀಂ ಧ್ಯಾಯನ್ತೀಂ ಕಮಲೇಕ್ಷಣಂ ।
ಸರಸಂ ಚಂದನಂ ಗೃಹ್ಯ ಪ್ರೇಷ್ಯಾಹಸ್ತಾತ್ಸ್ವನಂದಿತಾಂ ॥ ೭ ॥

ಪ್ರಹ್ಲಾದಯಿತ್ವಾ ಹೃದಯಂ ಕ್ಷಿಪಂತೀಂ ನಿರ್ದಯಂ ಪುನಃ ।
ಪುನರುಚ್ಛ್ವಸ್ಯ ಶಯನಾತ್ ಪತಂತೀಂ ಚ ಪುನಃ ಪುನಃ ॥ ೮ ॥

---

೪. ಅವರಲ್ಲಿ ಸತ್ಯಭಾಮೆಗೆ ಕೊಡುವುದನ್ನು ಮರೆತುಬಿಟ್ಟು ಮಿಕ್ಕ ಹೆಂಡತಿಯರಿಗೆ ಅದನ್ನು ಹಂಚಿದನು. ಅನಂತರ ಸತ್ಯಭಾಮೆಯು ಇದರಿಂದ ಕೋಪಗೊಂಡು ಕೋಪದ ಮನೆಗೆ ಹೋದಳು.

೫–೮. ಕೋಪದಿಂದ ತನ್ನ ವೇಷಗಳನ್ನು ಬಿಸುಟು ನೋಡುವುದಕ್ಕೆ ಆಳಿನಂತೆ ಬಟ್ಟೆಗಳನ್ನು ಹಾಕಿಕೊಂಡಿದ್ದಳು. ಬಾರಿಬಾರಿಗೂ ನಿಟ್ಟುಸಿರು ಬಿಡುತ್ತಿದ್ದಳು. ತಾವರೆ ಹೂಗಳನ್ನು ಬೆರಳುಗಳಿಂದ ಬಿಡಿಸಿ ಮುಖಕ್ಕೆ ಒತ್ತಿಕೊಳ್ಳುತ್ತಾ ವಿರಹದಿಂದ ಬಾರಿಬಾರಿಗೂ ನಿಟ್ಟುಸಿರು ಬಿಡುತ್ತಿದ್ದಳು. ಕೈಯ್ಯಲ್ಲಿ ಶಂಖವನ್ನು ಹಿಡಿದುಕೊಂಡು ಅದರಲ್ಲಿ ತಣ್ಣಗಾಗಲೆಂದು ಮುಖವನ್ನು ಇಟ್ಟುಕೊಳ್ಳುತ್ತಿದ್ದಳು. ವಿನಯದಿಂದಿರುತ್ತ ಈ ಕೋಮಲಾಂಗಿಯು ಕೃಷ್ಣನನ್ನು ಧ್ಯಾನಮಾಡುತ್ತಿದ್ದಳು. ಸಖಿಯ ಕೈಯ್ಯಿಂದ ತಣ್ಣಗಿರುವ ನೀರಾದ ಗಂಧವನ್ನು ತೆಗೆದುಕೊಂಡು ಎದೆಗೆಲ್ಲವೂ ಬಳಿದುಕೊಳ್ಳುತ್ತ ನಿರ್ದಯನಾದ ಆ ಕೃಷ್ಣನನ್ನು ನಿಂದಿಸುತ್ತಿದ್ದಳು. ಹಾಸಿಗೆಯ ಮೇಲೆ ಮಲಗಿಕೊಳ್ಳಲಾರದೆ ಬಾರಿಬಾರಿಗೂ ಎದ್ದು ಎದ್ದು ಆ ಹಾಸಿಗೆಯ ಮೇಲೆಯೇ ಬೀಳುತ್ತಿದ್ದಳು.

ಸಮಾಜ್ಞಾಯ ತತಃ ಕೃಷ್ಣಃ ತತ್ರ ಗತ್ವಾ ಸಮಾಹಿತಃ ।
ಅವಗುಹ್ಯ ಯದಾ ವಕ್ತ್ರಮುಪಧಾನೇ ನ್ಯವೇಶಯತ್ ॥ ೯ ॥

ಇದಮಂತರಿಕಂ ಜ್ಞಾತ್ವಾ ತದಾ ಗತ್ವಾ ಜನಾರ್ದನಃ ॥
ಪ್ರೇಷ್ಯಾಜನಂ ಸ ಸಜ್ಞಾಯಾನಾಖ್ಯೇಯೋಽಸ್ಮೀತಿ ಸಂಜ್ಞಯಾ ॥ ೧೦ ॥

ಜಗ್ರಾಹ ವ್ಯಜನಂ ಚೈವ ಸ್ಥಿತ್ವಾ ಸ ಪರಿಪಾರ್ಶ್ವತಃ ।
ಶನೈರಿವಾಸೃಜದ್ವಾತಂ ಜಹಾಸ ಶನಕೈರಿವ ॥ ೧೧ ॥

ತದುದ್ಭವಮುದ್ಗೃಷ್ಟೈವ ಹ್ಯವೋಚತ್ವಾ ತು ಭಾಮಿನೀ ।
ಕೇಷ್ವನೋಽಕತರಸ್ಸಖ್ಯಾ ಗಂಧೋಽಯಮಿತಿ ತಂ ಖಲು ॥ ೧೨ ॥

ದದರ್ಶ ಕೇಶವಂ ದೇವಿ ಸಹಸಾ ಲೋಕಭಾವನಂ ।
ಯುಜ್ಯತೀತಿ ತತೋ ವಾಜಾಸ್ರಂ ಸುಸ್ರಾವಾವಿಲೇಕ್ಷಣಾ ॥ ೧೩ ॥

---

೯-೧೧. ಕೃಷ್ಣನು ಇವನ್ನು ತಿಳಿದು ಅಲ್ಲಿಗೆ ಹೋಗಿ ಜಾಗರೂಕತೆಯಿಂದ ಆ ಸತ್ಯಭಾಮೆಯ ಮುಖವನ್ನು ಆ ಕೋಪ ಮತ್ತು ವಿರಹಾವಸ್ಥೆಯಿಂದ ತಲೆದಿಂಬಿನ ಮೇಲೆ ಹಾಕಿ ಮುಚ್ಚಿಕೊಂಡಾಗ "ಈಗ ಆಕೆಗೆ ನಾನು ಬಂದಿರುವುದು ತಿಳಿಯುವುದಿಲ್ಲ. ಇದೇ ಸಮಯ" ಎಂದು ತಿಳಿದು ಆಕೆಯ ಬಳಿಗೆ ಹೋದನು. ಆಗ ಕೃಷ್ಣನು ಸಂಜ್ಞೆಯಿಂದ ಆ ಸಖಿಯರಿಗೆ ತಾನು ಬಂದಿರುವುದನ್ನು ಆಕೆಗೆ ಹೇಳಬೇಡಿರೆಂದು ತಿಳಿಸಿ ಪಕ್ಕದಲ್ಲಿ ಕುಳಿತುಕೊಂಡು ಬೀಸಣಿಗೆಯನ್ನು ತೆಗೆದು ಕೊಂಡು ಮೆಲ್ಲಗೆ ಗಾಳಿಯನ್ನು ಬೀಸುತ್ತಲಿದ್ದು ಹಾಗೆಯೇ ಕೊಂಚ ಹೊತ್ತಿನ ಮೇಲೆ ಹುಸಿನಗು ನಕ್ಕನು.

೧೨. ಆ ಕೃಷ್ಣನು ಬಂದುದನ್ನು ತಿಳಿಯದೇನೇ ಇದೇನು? ಈ ಸಖಿಯ ರಲ್ಲಿ ಒಬ್ಬಳಲ್ಲಿ ಹೂವಿನ ವಾಸನೆಯಿರುವುದಲ್ಲ! ಕಾರಣವೇನು? ಎಂದಳು.

೧೩. ಅನಂತರ ಆ ಲೋಕನಾಥನಾದ ಸ್ವಾಮಿಯನ್ನು ನೋಡಿದಳು. ಆಗ ಈ ವಾಸನೆ ಬರುವುದಕ್ಕೆ ಕಾರಣವಿದೆ ಎಂದೆನ್ನುತ್ತಾ ಕಣ್ಣೀರು ಬಿಡುತ್ತಾ ಮುಖವನ್ನು ಕೊಳೆಮಾಡಿಕೊಂಡಳು.

ಅವಸಿಕ್ತಾ ಚ ರೋಷೇಣ ಬಭೂವ ಪ್ರಣಯಾನ್ವಿತಾ ।
ಸಾ ರೋಷಸ್ಫುರಮಾಣೋಷ್ಠೀ ತಿಷ್ಠಂತ್ಯಧೋ ಮುಖೀ ತದಾ ॥ ೧೪ ॥

ಮುಹೂರ್ತಮಸಿತಾಪಾಂಗೀ ತಸ್ಥಾವನ್ಯಮುಖೀ ತದಾ ।
ತಸ್ಯಾಸ್ಸುಸ್ರಾವ ನೇತ್ರಾಭ್ಯಾಂ ವಾರಿ ಪ್ರಣಯಕೋಪಜಂ ॥ ೧೫ ॥

ಕುಶೇಶಯಪಲಾಶಾಭ್ಯಾಮವಶ್ಯಾಯಜಲಂ ಯಥಾ ।
ಸಮುತ್ಪತ್ಯ ಜಲಂ ಯತ್ರ ಪತಿತಂ ವದನಾಂಬುಜಾತ್ ॥ ೧೬ ॥

ಪ್ರತಿಜಗ್ರಾಹ ಪದ್ಮಾಕ್ಷಃ ಕರಾಭ್ಯಾಮೇವ ಸತ್ವರಃ ।
ಅಥೋರಸಿ ಚ ತತ್ತೋಯಂ ಶ್ರೀವತ್ಸಾಂಕೋಂಬುಜೇಕ್ಷಣಃ ।
ಪ್ರಿಯಾನಯನಜಂ ದೇವಃ ಪರಿಮೃಜ್ಯೈವಮಬ್ರವೀತ್ ॥ ೧೭ ॥

॥ ಶ್ರೀ ಕೃಷ್ಣ ಉವಾಚ ॥

ಸ್ರವತ್ಯಸಿತಪತ್ರಾಕ್ಷಿ ಕಿಮರ್ಥಂ ತವ ಭಾಮಿನಿ ॥ ೧೮ ॥

---

೧೪. ಆಗ ಪ್ರಣಯದಿಂದ ಕೂಡಿರುವ ಕೋಪವನ್ನು ಹೊಂದಿದಳು. ಕೋಪದಿಂದ ತುಟಿಗಳು ಅಲ್ಲಾಡುತ್ತಿರಲು ತಲೆಯನ್ನು ಬಗ್ಗಿಸಿಕೊಂಡು ಕುಳಿತಳು.

೧೫. ಒಂದು ಮುಹೂರ್ತಕಾಲ ಆಕೆಯು ಮಾತನಾಡದೆ ಹಾಗೆಯೇ ತಲೆ ತಗ್ಗಿಸಿಕೊಂಡು ಕುಳಿತಿದ್ದಳು. ಪ್ರಣಯಕೋಪದಿಂದ ಬಂದ ಕಣ್ಣೀರು ಆ ಕಣ್ಣುಗಳಿಂದ ಹಾಗೆಯೇ ಸುರಿಯುತ್ತಿದ್ದಿತು.

೧೬. ಕಮಲದ ದಂಟಿನಿಂದ ಹಿಮದ ನೀರು ಕೆಳಗೆ ತೊಟ್ಟಿಡುವಂತೆ ತೊಟ್ಟಿಡುತ್ತಿದ್ದಿತು. ಹಾಗೆ ಕಣ್ಣಿನಿಂದ ತೊಟ್ಟಾಗಿ ಬೀಳುತ್ತಿದ್ದ ನೀರು ಹಾರುತ್ತ ಅತ್ತಿತ್ತಲಾಗಿ ಬೀಳುತ್ತಿದ್ದಿತು.

೧೭. ಹಾಗೆ ಕಣ್ಣಿನಿಂದ ಬೀಳುತ್ತಿದ್ದ ನೀರನ್ನು ಶ್ರೀ ಕೃಷ್ಣನು ಕೈಯ್ಯಿಂದ ಆತುಕೊಳ್ಳುತ್ತಿದ್ದನು. ಅನಂತರ ಆ ಕೃಷ್ಣನು ಆಕೆಯ ಕಣ್ಣುಗಳ ನೀರನ್ನೂ ಎದೆಯಮೇಲೆ ಬಿದ್ದಿದ್ದ ಆ ನೀರನ್ನೂ ಒರೆಸಿ ಇಂತೆಂದನು.

೧೮. ಶ್ರೀ ಕೃಷ್ಣನು ಹೇಳಿದನು–ಎಲೈ ಕನ್ನೈದಿಲೆಯಂತಿರುವ ಕಣ್ಣುಳ್ಳ ಸತ್ಯಭಾಮೆಯೇ ! ನಿನ್ನ ಕಣ್ಣಿನಿಂದ ನೀರು ಬೀಳಲು ಕಾರಣವೇನು. ?

|| ಸೂತ ಉವಾಚ ||

ಶನೈರುವಾಚ ನೇತ್ರಾಭ್ಯಾಂ ಪ್ರಮೃಜ್ಯ ಸುಭಗಾಜಲಂ || ೧೯ ||

|| ಸತ್ಯಭಾಮೋವಾಚ ||

ಮದೀಯಸ್ತ್ವಮಿತಿ ಹ್ಯಾಸೀನ್ಮತಿರ್ನಿತ್ಯಂ ಮಮ ಪ್ರಭೋ ।
ಅದ್ಯ ಸಾಧಾರಣಸ್ನೇಹಸ್ತ್ವಮಿತ್ಯವಗತಾಸ್ಮ್ಯಹಂ || ೨೦ ||

|| ಸೂತಉವಾಚ ||

ತಚ್ಛ್ರುತ್ವಾ ವಚನಂ ತಸ್ಯಾಃ ಪ್ರತ್ಯುವಾಚ ಜನಾರ್ದನಃ । || ೨೧ ||

|| ಶ್ರೀ ಕೃಷ್ಣ ಉವಾಚ ||

ದಹತೀವ ಮಮಾಂಗಾನಿ ಶೋಕಃ ಕಮಲಲೋಚನೇ ।
ಕಿಮು ತತ್ಕಾರಣಂ ಯೇನ ತ್ವಮೇವಂ ಸತಿ ವಿಪ್ಲುತಾ || ೨೨ ||

|| ಸೂತಉವಾಚ ||

ತತಃ ಪ್ರೋವಾಚ ಭರ್ತಾರಂ ಸತ್ಯಾ ಸತ್ಯವ್ರತೇ ಸ್ಥಿತಂ || ೨೩ ||

---

೧೯. ಸೂತನು ಹೇಳಿದನು—ಆಗ ಆಕೆಯು ಮೆಲ್ಲಗೆ ಕಣ್ಣೀರನ್ನು ಒರಸಿಕೊಳ್ಳುತ್ತ ನಿದಾನವಾಗಿ ಇಂತೆಂದಳು.

೨೦. ಸತ್ಯಭಾಮೆಯು ಹೇಳಿದಳು—ಎಲೈ ಪ್ರಭುವೇ ! ನೀನು ನನ್ನ ಕಡೆಯಲ್ಲಿಯೇ ಹೆಚ್ಚು ಪ್ರೀತಿಯುಳ್ಳವನೆಂದು ನನ್ನ ಬುದ್ಧಿಯಿದ್ದಿತು. ಈಗ ಎಲ್ಲರಂತೆಯೂ ನಾನೂ ಒಬ್ಬಳು. ನೀನು ಎಲ್ಲರಲ್ಲಿಯೂ ಸಾಧಾರಣವಾಗಿ ಪ್ರೀತಿಯನ್ನಿಟ್ಟಿರುವಂತೆ ನನ್ನಲ್ಲಿಯೂ ಇಟ್ಟಿದ್ದೀಯೆ ಎಂದು ತಿಳಿದೆನು.

೨೧. ಸೂತನು ಹೇಳಿದನು—ಆಕೆಯ ಆ ಮಾತನ್ನು ಕೇಳಿ ಜನಾರ್ದನನು ಇಂತೆಂದನು.

೨೨. ಶ್ರೀ ಕೃಷ್ಣನು ಹೇಳಿದನು—ಎಲೈ ಕಮಲಾಕ್ಷಿಯೇ ! ನೀನು ದುಃಖಿಸುತ್ತಿರುವ ಆ ದುಃಖವು ನನ್ನ ಮೈಯನ್ನೆಲ್ಲಾ ಸುಡುತ್ತಲಿದೆ. ಈ ರೀತಿ ದುಃಖ ಬರುವುದಕ್ಕೆ ಕಾರಣವೇನು ? ಅದನ್ನು ಹೇಳು.

೨೩. ಸೂತನು ಹೇಳಿದನು—ಅನಂತರ ಸತ್ಯಭಾಮೆಯು ಸತ್ಯಕ್ಕೆ ಮನೆಯಾದ ಆ ಸ್ವಾಮಿಯನ್ನು ಕುರಿತು ಇಂತೆಂದಳು.

॥ ಸತ್ಯಭಾಮೋವಾಚ ॥

ಯತ್ಪಾರಿಜಾತಕುಸುಮಂ ದತ್ತವಾನ್ನಾರದಸ್ತ್ವವ ।
ತತ್ತ್ವ ಸ್ವೇಷ್ಟಜನೇ ದತ್ವಾ ತ್ವಯಾಹಂ ಪರಿವಂಚಿತಾ ॥ ೨೪ ॥

॥ ಸೂತ ಉವಾಚ ॥

ವಿಹಸ್ಯ ಭಗವಾನ್ ಕೃಷ್ಣಃ ಸುವಿಚಾರ್ಯ ತತಸ್ಸ್ವಯಂ ।
ಸತ್ಯಭಾಮಾಂ ಮಾನಯಿತ್ವಾ ಗರುಡಂ ಮನಸಾಸ್ಮರತ್ ॥ ೨೫ ॥

ಸ್ಮೃತಮಾತ್ರಸ್ತು ಗರುಡಸ್ತದಾಗತ್ಯಾಗ್ರತಸ್ಸ್ಥಿತಃ ।
ಆರುಹ್ಯ ವೇಗಾತ್ಪತ್ರಂ ತಮಿತ್ಯುವಾಚ ಪ್ರಿಯಾಂ ಪ್ರಭುಃ ॥ ೨೬ ॥

॥ ಶ್ರೀ ಕೃಷ್ಣ ಉವಾಚ ॥

ಸತ್ಯೇ ತ್ವಂ ಮಾ ಕೃಥಾಃ ಕ್ರೋಧಂ ತ್ವತ್ಕೃತೇ ದೈವತೈಸ್ಸಹ ।
ವಿರುಧ್ಯ ದೇವರಾಜಾನಂ ರೋಪಯಿಷ್ಯೇ ತವಾಂಗಣೇ ।
ಕಲ್ಪದ್ರುಮಂ ಮಹಾಭಾಗೇಽಪರಾಧಂ ಮೇ ಕ್ಷಮಾಂ ಕುರು ॥ ೨೭ ॥

---

೨೪. ಸತ್ಯಭಾಮೆಯು ಹೇಳಿದಳು–ನಾರದನು ನಿನಗೆ ಕೊಟ್ಟ ಪಾರಿಜಾತದ ಹೂವನ್ನು ನೀನು ನಿನಗೆ ಬೇಕಾದವರಿಗೆ ಕೊಟ್ಟುಕೊಂಡು ನನ್ನನ್ನು ಮೋಸ ಪಡಿಸಿದ್ದೀಯೆ.

೨೫. ಸೂತನು ಹೇಳಿದನು–ಒಡನೆಯೇ ಕೃಷ್ಣನು ನಕ್ಕು ತನ್ನಲ್ಲಿ ತಾನೇ ವಿಚಾರಮಾಡಿ ಸತ್ಯಭಾಮೆಯನ್ನು ಸಮಾಧಾನಪಡಿಸಿ ಗರುಡನನ್ನು ಸ್ಮರಿಸಿದನು.

೨೬. ಸ್ಮರಿಸಿದೊಡನೆಯೇ ಗರುಡನು ಬಂದು ಎದುರಿಗೆ ನಿಂತುಕೊಂಡನು ಕೃಷ್ಣನು ಆ ಗರುಡನನ್ನು ಹತ್ತಿ ಹೆಂಡತಿಯನ್ನು ಕುರಿತು ಇಂತೆಂದನು.

೨೭. ಶ್ರೀ ಕೃಷ್ಣನು ಹೇಳಿದನು–ಎಲೈ ಸತ್ಯಭಾಮೆಯೇ ! ನೀನು ಕೋಪ ಮಾಡಬೇಡ. ನಿನಗೋಸ್ಕರ ದೇವತೆಗಳೊಡನೆ ವಿರೋಧ ಮಾಡಿಕೊಂಡು ಅವರನ್ನೂ ದೇವರಾಜನನ್ನೂ ಜಯಿಸಿ ನಿನ್ನ ಮನೆಯ ಅಂಗಳದಲ್ಲಿ ಆ ಕಲ್ಪವೃಕ್ಷವಾದ ಪಾರಿಜಾತ ಮರವನ್ನು ತಂದು ನೆಡುತ್ತೇನೆ. ನನ್ನ ಅಪರಾಧವನ್ನು ಕ್ಷಮಿಸು.

॥ ಸೂತ ಉವಾಚ ॥

ಇತಿ ಕೃತ್ವಾ ಪ್ರತಿಜ್ಞಾಂ ತು ಶ್ರೀಕೃಷ್ಣಃ ಸತ್ಯಭಾಮಯಾ ।
ದೇವಲೋಕಮಗಾತ್ತೂರ್ಣಂ ಯತ್ರ ದೇವಸ್ಸ ವೃತ್ರಹಾ ।
ಯಾಚಿತಃ ಕಲ್ಪವೃಕ್ಷಾರ್ಥಮುತ್ತರಂ ದತ್ತವಾನ್ಪ್ರಭುಂ ॥ ೨೮ ॥

॥ ಇಂದ್ರ ಉವಾಚ ॥

ನಾಯಂ ದೇವದ್ರುಮೋ ಭೂಮ್ಯಾಂ ಪ್ರಾಪ್ತುಂ ಯೋಗ್ಯಸ್ತ್ವಯಾ
ಪ್ರಭೋ ॥ ೨೯ ॥

॥ ಸೂತ ಉವಾಚ ॥

ತದಾ ಕ್ರುದ್ಧೋ ಮಹಾಬಾಹುರ್ವೃಕ್ಷಮುತ್ಪಾಟ್ಯ ಮೂಲತಃ ।
ವಾಹಮಾರೋಪಯಾಮಾಸ ವೇಗೇನ ಬಲವತ್ತರಃ ॥ ೩೦ ॥

ತದಾ ವಜ್ರಧರೋ ವೇಗಾದ್ವಜ್ರಮುದ್ಯಮ್ಯ ವೀರ್ಯವಾನ್ ।
ಗರುಡಂ ತಾಡಯಾಮಾಸ ಕಲ್ಪವೃಕ್ಷಂ ತ್ಯಜೇದಿತಿ ॥ ೩೧ ॥

---

೨೮. ಸೂತನು ಹೇಳಿದನು–ಶ್ರೀ ಕೃಷ್ಣನು ಸತ್ಯಭಾಮೆಗೆ ಈರೀತಿ ಪ್ರತಿಜ್ಞೆಯನ್ನು ಮಾಡಿ ದೇವಲೋಕಕ್ಕೆ ಹೋಗಿ ಇಂದ್ರನಿರುವಲ್ಲಿಗೂ ಹೋದನು. ಆತನನ್ನು ಕುರಿತು ಕಲ್ಪವೃಕ್ಷವಾದ ಪಾರಿಜಾತ ಮರವನ್ನು ಕೇಳಲು ಆ ಇಂದ್ರನು ಇಂತೆಂದನು.

೨೯. ಇಂದ್ರನು ಹೇಳಿದನು–ಎಲೈ ಸ್ವಾಮಿಯೇ ! ನೀನು ಈ ಕಲ್ಪವೃಕ್ಷವನ್ನು ಭೂಲೋಕದಲ್ಲಿ ಹೊಂದಲು ಸಾಧ್ಯವಿಲ್ಲ. (ಭೂಲೋಕಕ್ಕೆ ಕೊಡುವುದಿಲ್ಲ.)

೩೦. ಸೂತನು ಹೇಳಿದನು–ಆಗ ಆ ಕೃಷ್ಣನು ಕೋಪಗೊಂಡು ಆ ಪಾರಿಜಾತ ಮರವನ್ನು ಬೇರು ಸಹಿತವಾಗಿ ಕಿತ್ತು ಗರುಡನ ಮೇಲಿಟ್ಟುಕೊಂಡು ವೇಗವಾಗಿ ಹೊರಟನು.

೩೧. ಆಗ ಇಂದ್ರನು ವಜ್ರಾಯುಧವನ್ನು ಹಿಡಿದು ಬಂದು ಗರುಡನಿಗೆ ಹೊಡೆದರೆ ಈ ಮರವನ್ನು ಬಿಟ್ಟುಬಿಡುವನೆಂದು ತಿಳಿದು ಆ ಆಯುಧವನ್ನು ಮೇಲಕ್ಕೆ ಎತ್ತಿ ಗರುಡನನ್ನು ಹೊಡೆದನು.

ತದಾ ಪತ್ರರಥಃ ಪತ್ರಂ ಕುಲಿಶಸ್ಯಾಪಿ ಗೌರವಾತ್ ।
ಏಕಂ ವಿಸರ್ಜಯಾಮಾಸ ತ್ವರಯಾ ಪ್ರಜಗಾಮ ಚ ॥ ೩೨ ॥

ತೇನ ವಜ್ರಪ್ರಹಾರೇಣ ತ್ರಯೋಽಭೂವನ್ಪತತ್ರಿಣಃ ।
ಮಯೂರೋ ನಕುಲಶ್ಚಾಷಃ ಕೃಷ್ಣೋ ದ್ವಾರವತೀಮಗಾತ್ ॥ ೩೩ ॥

ಆಗತ್ಯ ಸತ್ಯಭಾಮಾಯಾ ಗೃಹೇ ಚೈನಮರೋಪಯತ್ ।
ತದೈವ ನಾರದೋಽಭ್ಯಾಗಾತ್ಸತ್ಯಯಾ ಮಾನಿತೋ ಬಹು ॥ ೩೪ ॥

॥ ಸತ್ಯಭಾಮೋವಾಚ ॥

ಈದೃಶಃ ಕಲ್ಪವೃಕ್ಷೋಽಯಂ ಪತಿರೇತಾದೃಶಃ ಪ್ರಭುಃ ।
ಭವೇ ಭವೇ ಕಥಂ ಪ್ರಾಪ್ಯಃ ತದಾಖ್ಯಾತು ಭವಾನ್ಮಮ ॥ ೩೫ ॥

॥ ಸೂತ ಉವಾಚ ॥

ಇತಿ ಪೃಷ್ಟಸ್ತದಾ ಪ್ರಾಹ ನಾರದೋ ಮುನಿಸತ್ತಮಃ ॥ ೩೬ ॥

---

೩೨. ಆಗ ಆ ಗರುಡನು ವಜ್ರಾಯುಧದ ಗೌರವಕ್ಕೋಸ್ಕರ ಒಂದು ಗರಿಯನ್ನು ಕಿತ್ತು ಬಿಸುಟು ವೇಗದಿಂದ ಮುಂದೆ ಹೊರಟನು.

೩೩. ಆ ವಜ್ರಾಯುಧದ ಏಟಿನಿಂದ ನವಿಲು, ನಕುಲ, ಹಾಲಕ್ಕಿ ಎಂಬ ಮೂರು ಬಗೆಯ ಹಕ್ಕಿಗಳು ಹುಟ್ಟಿದುವು. ಕೃಷ್ಣನು ವೇಗದಿಂದ ದ್ವಾರಕೆಗೆ ಬಂದನು.

೩೪. ಅಲ್ಲಿಂದ ತಂದು ಆ ಮರವನ್ನು ಸತ್ಯಭಾಮೆಯ ಮನೆಯಲ್ಲಿ ನೆಟ್ಟನು. ಆಗಲೇನೇ ನಾರದನೂ ಅಲ್ಲಿಗೆ ಬರಲು ಸತ್ಯಭಾಮೆಯು ಅವನನ್ನು ಬಹುವಾಗಿ ಗೌರವಿಸಿದಳು.

೩೫. ಸತ್ಯಭಾಮೆಯು ಹೇಳಿದಳು–ಎಲೈ ನಾರದನೇ! ಈರೀತಿಯಾದ ಕಲ್ಪವೃಕ್ಷವೂ ಈರೀತಿಯಾದ ಗಂಡನೂ ಜನ್ಮಜನ್ಮಾಂತರಗಳಲ್ಲಿಯೂ ನನಗೆ ಸಿಕ್ಕಬೇಕಾದರೆ ಏನುಮಾಡಬೇಕು? ಎಂಬುದನ್ನು ಹೇಳು.

೩೬. ಸೂತನು ಹೇಳಿದನು–ಹೀಗೆ ಕೇಳುತ್ತಲೂ ನಾರದನು ಆಕೆಯನ್ನು ಕುರಿತು ಹೀಗೆ ಹೇಳಿದನು.

|| ನಾರದ ಉವಾಚ ||

ಪ್ರಾಪ್ಸ್ಯತೇ ಸತ್ಯಭಾಮೇಯಂ ತುಲಾ ಪುರುಷದಾನತಃ || ೩೭ ||

|| ಸೂತ ಉವಾಚ ||

ಸತ್ಯಭಾಮಾ ತದಾ ಕೃಷ್ಣಂ ಕಲ್ಪವೃಕ್ಷಸಮನ್ವಿತಂ |
ನಾರದಾಯೈವ ಸಾ ಪ್ರಾದಾತ್ತೋಲಯಿತ್ವಾ ವಿಧಾನತಃ || ೩೮ ||

ಸರ್ವೋಪಸ್ಕರಮಾದಾಯ ನಾರದಸ್ತ್ರಿದಿವಂ ಯಯೌ |
ಪ್ರಿಯಃ ಪತಿಮಥಾಮಂತ್ರ್ಯ ಗತೇ ದೇವರ್ಷಿಸತ್ತಮೇ |
ಹರ್ಷೋತ್ಫುಲ್ಲಾನನಾ ಸತ್ಯಾ ವಾಸುದೇವಮಥಾಬ್ರವೀತ್ || ೩೯ ||

|| ಸತ್ಯಭಾಮೋವಾಚ ||

ಧನ್ಯಾಸ್ಮಿ ಕೃತಕೃತ್ಯಾಸ್ಮಿ ಸಫಲಂ ಜೀವಿತಂ ಚ ಮೇ |
ಮಜ್ಜನ್ಮನಿ ನಿದಾನೇ ಚ ಧನ್ಯೌ ತೌ ಪಿತರೌ ಮಮ || ೪೦ ||

---

೩೭. ನಾರದನು ಹೇಳಿದನು-ಎಲೈ ಸತ್ಯಭಾಮೆಯೇ ! ತುಲಾಪುರುಷ ನನ್ನು ದಾನಮಾಡಿದರೆ ಇಷ್ಟಾರ್ಥಗಳು ಸಿದ್ಧಿಸುತ್ತವೆ.

೩೮. ಸೂತನು ಹೇಳಿದನು-ಆಗ ಸತ್ಯಭಾಮೆಯು ಕಲ್ಪವೃಕ್ಷದೊಡನಿರುವ ಶ್ರೀಕೃಷ್ಣನ ಪ್ರತಿಮೆಯನ್ನು ಮಾಡಿಸಿ ಅದನ್ನು ಕೃಷ್ಣ ಕಲ್ಪವೃಕ್ಷಗಳೊಡನೆ ತೂಗಿಸಿ ನಾರದನಿಗೆ ಕೊಟ್ಟಳು.

೩೯. ನಾರದನು ಆ ಎಲ್ಲಾ ಪದಾರ್ಥಗಳನ್ನು ತೆಗೆದುಕೊಂಡು ದೇವ ಲೋಕಕ್ಕೆ ಹೋದನು. ಈ ರೀತಿಯಾಗಿ ನಾರದನು ಶ್ರೀಕೃಷ್ಣನಿಗೆ ಹೇಳಿ ಹೋಗಲು ಸತ್ಯಭಾಮೆಯು ಸಂತೋಷಗೊಂಡು ವಾಸುದೇವನಿಗಿಂತೆಂದಳು.

೪೦. ಸತ್ಯಭಾಮೆಯು ಹೇಳಿದಳು-ನಾನು ಧನ್ಯಳಾದೆನು. ಕೃತಕೃತ್ಯಳಾ ದೆನು. ನನ್ನ ಜೀವಿತವು ಸಫಲವಾಯಿತು. ನನ್ನನ್ನು ಹೆತ್ತ ತಾಯಿತಂದೆಗಳೂ ಕೂಡ ಧನ್ಯರಾದರು.

**ಯೌ ಮಾಂ ತ್ರೈಲೋಕ್ಯಸುಭಗಾಂ ಜನಯಾಮಾಸತುರ್ಧ್ರುವಂ ।**
**ಷೋಡಶಸ್ತ್ರೀಸಹಸ್ರಾಣಾಂ ವಲ್ಲಭಾಹಂ ಯತಸ್ತವ ॥ ೪೧ ॥**

**ಯಸ್ಮಾನ್ಮಯಾದಿಪುರುಷಃ ಕಲ್ಪವೃಕ್ಷಸಮನ್ವಿತಃ ।**
**ಯಥೋಕ್ತವಿಧಿನಾ ಸಮ್ಯಕ್ ನಾರದಾಯ ಸಮರ್ಪಿತಃ ॥ ೪೨ ॥**

**ಯದ್ವಾರ್ತಾಮಪಿ ಜಾನಂತಿ ಭೂಮಿಸಂಸ್ಥಾ ನ ಜಂತವಃ ।**
**ಸೋಽಯಂ ಕಲ್ಪದ್ರುಮೋ ಗೇಹೇ ಮಮ ತಿಷ್ಠತಿ ಸಾಂಪ್ರತಂ ॥ ೪೩ ॥**

**ತ್ರೈಲೋಕ್ಯಾಧಿಪತೇಶ್ಚಾಹಂ ಶ್ರೀಪತೇರತಿವಲ್ಲಭಾ ।**
**ಅತೋಽಹಂ ಪ್ರಷ್ಟುಮಿಚ್ಛಾಮಿ ಕಿಂಚಿತ್ತ್ವಾಂ ಮಧುಸೂದನ ॥ ೪೪ ॥**

**ಯದಿ ತ್ವಂ ಮತ್ಪ್ರಿಯಕರಃ ಕಥಯಸ್ವಾತ್ರ ವಿಸ್ತರಾತ್ ।**
**ಶ್ರುತ್ವಾ ತಚ್ಚ ಪುನಶ್ಚಾಹಂ ಕರೋಮಿ ಹಿತಮಾತ್ಮನಃ ।**
**ಯಥಾ ಕಲ್ಪಂ ತ್ವಯಾ ದೇವ ವಿಯುಕ್ತಾ ಸ್ಯಾಂ ನ ಕರ್ಹಿಚಿತ್ ॥ ೪೫ ॥**

---

೪೧. ಮೂರು ಲೋಕದಲ್ಲಿಯೂ ಸುಂದರಿಯಾದ ನನ್ನನ್ನು ಆ ತಾಯಿ ತಂದೆಗಳು ಹೆತ್ತಿರುವರು. ಇದೂ ಅಲ್ಲದೆ ನಾನು ಹದಿನಾರು ಸಾವಿರ ಜನ ಗೋಪಿಯರಿಗಿಂತಲೂ ಪ್ರೀತಿಪಾತ್ರಳಾಗಿದ್ದೇನೆ. ಆದ್ದರಿಂದ ನಾನೂ ನನ್ನ ತಾಯಿತಂದೆಗಳೂ ಧನ್ಯರು.

೪೨. ಅಲ್ಲದೆ ಆದಿಪುರುಷನಾದ ಸ್ವಾಮಿಯನ್ನೂ ಕಲ್ಪವೃಕ್ಷವನ್ನೂ ಶಾಸ್ತ್ರೋಕ್ತರೀತಿಯಿಂದ ತುಲಾಪುರುಷ ದಾನವನ್ನು ನಾರದನಿಗೆ ಕೊಡಿಸಿದ್ದೀಯೆ.

೪೩. ಭೂಮಿಯಲ್ಲಿರುವ ಜನರು ಯಾವ ಪಾರಿಜಾತದ ಮಾತನ್ನೇ ಕೇಳಿರಲಿಲ್ಲವೋ ಅಂತಹ ಪಾರಿಜಾತದ ಮರವು ಈಗ ನನ್ನ ಮನೆಯಲ್ಲಿರುವುದಲ್ಲ! ಇದಕ್ಕಿಂತಲೂ ಧನ್ಯತೆಯು ಏನು ಬೇಕು?

೪೪. ತ್ರೈಲೋಕ್ಯಾಧಿಪತಿಯಾದ ಶ್ರೀಪತಿಗೆ ನಾನು ಬಹು ಪ್ರಿಯಳಾಗಿರುವೆನಷ್ಟೆ! ಆದ್ದರಿಂದ ನಾನು ಒಂದು ವಿಷಯವನ್ನು ಕೇಳಬೇಕೆಂದಿದ್ದೇನೆ.

೪೫. ನೀನು ನನಗೆ ಒಳ್ಳೆಯದನ್ನು ಮಾಡಬೇಕೆಂದಿದ್ದರೆ ನಾನು ಕೇಳುವುದನ್ನು ವಿಸ್ತಾರವಾಗಿ ಹೇಳು. ಅದನ್ನು ಕೇಳಿ ತಿಳಿದುಕೊಂಡು ನನಗೆ ಯಾವ ರೀತಿಯಾದರೆ ಹಿತವೋ ಅದನ್ನು ಮಾಡಿಕೊಳ್ಳುತ್ತೇನೆ. ಎಲೈ ಸ್ವಾಮಿಯೇ! ಕಲ್ಪಕಾಲದವರೆಗೂ ನಾನು ನಿನ್ನನ್ನು ಯಾವಾಗಲೂ ಅಗಲದೆ ಇರಬೇಕು.

|| ಸೂತ ಉವಾಚ ||

ಇತಿ ಪ್ರಿಯಾವಚಶ್ಶ್ರುತ್ವಾ ಸ್ಮೇರಾಸ್ಯಸ್ಸಗದಾಧರಃ ।
ಸತ್ಯಾಕರಂ ಕರೇ ಕೃತ್ವಾಽಗಮತ್ಕಲ್ಪತರೋಸ್ತಲಂ || ೪೬ ||

ನಿಷಿಧ್ಯಾನುಚರಂ ಲೋಕಂ ಸವಿಲಾಸಂ ಪ್ರಿಯಾನ್ವಿತಃ ।
ಪ್ರಹಸ್ಯ ಸತ್ಯಾ ಮಾಮಂತ್ರ್ಯ ಪ್ರೋವಾಚ ಜಗತಾಂ ಪತಿಃ ।
ತತ್ಪ್ರೀತಿಪರಿತೋಷಾರ್ಥಂ ವಿಲಸತ್ಪುಲಕಾಂಗಕಃ || ೪೭ ||

|| ಶ್ರೀ ಕೃಷ್ಣ ಉವಾಚ ||

ನ ಮೇ ತ್ವತ್ತಃ ಪ್ರಿಯತಮಾ ಕಾಚಿದನ್ಯಾ ನಿತಂಬಿನೀ ।
ಷೋಡಶಸ್ತ್ರೀಸಹಸ್ರಾಣಾಂ ಪ್ರಿಯೇ ಪ್ರಾಣಸಮಾ ಹ್ಯಸಿ || ೪೮ ||

ತ್ವದರ್ಥಂ ದೇವರಾಜೇನ ವಿರೋಧೋ ದೈವತೈಸ್ಸಹ ।
ತ್ವಯಾ ಯತ್ಪ್ರಾರ್ಥಿತಂ ಕಾನ್ತೇ ಶೃಣು ಯಜ್ಞ ಮಹದ್ಭವೇತ್ || ೪೯ ||

---

೪೬. ಸೂತನು ಹೇಳಿದನು–ಈ ರೀತಿಯಾದ ಪ್ರಿಯೆಯ ಮಾತನ್ನು ಕೇಳಿ ಶ್ರೀ ಕೃಷ್ಣನು ಸತ್ಯಭಾಮೆಯ ಕೈಯನ್ನು ಹಿಡಿದುಕೊಂಡು ಕಲ್ಪವೃಕ್ಷದ ತಳಕ್ಕೆ ಹೋದನು.

೪೭. ತಮ್ಮನ್ನು ಹಿಂಬಾಲಿಸುವವರನ್ನು ಬರಬೇಡಿರೆಂದು ತಡೆದು ಸಂತೋಷದಿಂದ ಹೆಂಡತಿಯೊಡನೆ ಹೊರಟು ನಗುತ್ತಾ ಆ ಸತ್ಯಭಾಮೆಯನ್ನು ಕುರಿತು ಸಂತೋಷದಿಂದ ಮೈ ನಿಮಿರಿದವನಾಗಿ ಅವಳ ಸಂತೋಷಕ್ಕೋಸ್ಕರ ಇಂತೆಂದನು.

೪೮. ಶ್ರೀ ಕೃಷ್ಣನು ಹೇಳಿದನು–ಎಲೈ ಪ್ರಿಯಳೆ! ನನಗಿರುವ ಹದಿನಾರು ಸಾವಿರ ಹೆಂಡತಿಯರೊಳಗೆ ನಿನಗಿಂತಲೂ ಪ್ರೀತಿಪಾತ್ರಳು ನನಗೆ ಮತ್ತೊಬ್ಬಳಿಲ್ಲ. ಪ್ರಾಣಕ್ಕೆ ಸಮವಾದವಳಾಗಿದ್ದೀಯೆ.

೪೯. ನಿನಗೋಸ್ಕರಲೇ ದೇವತೆಗಳೊಡನೆಯೂ ಇಂದ್ರನೊಡನೆಯೂ ವಿರೋಧವನ್ನು ತಂದುಕೊಂಡೆನು. ನೀನು ಯಾವುದನ್ನಾದರೂ ಕೇಳಿದರೆ ಅದೇ ನನಗೆ ಬಹು ದೊಡ್ಡದಾಗುತ್ತದೆ.

ಅದೇಯಮಥವಾಕಾರ್ಯಮಕಥ್ಯಮಪಿ ಯತ್ಪ್ರನಃ ।
ತತ್ಕರೋಮಿ ಕಥಂ ಪ್ರಶ್ನಂ ಕಥಯಾಮಿ ನ ತು ಪ್ರಿಯೇ ।
ಪೃಚ್ಛಸ್ವ ಸರ್ವಂ ಕಥಯೇ ಯತ್ತೇ ಮನಸಿ ವರ್ತತೇ || ೫೦ ||

|| ಸತ್ಯಭಾಮೋವಾಚ ||

ದಾನಂ ತಪ್ರೋ ವ್ರತಂ ವಾಪಿ ಕಿಂ ತು ಪೂರ್ವಂ ಕೃತಂ ಮಯಾ ।
ಯೇನಾಹಂ ಮರ್ತ್ಯಜಾ ಮರ್ತ್ಯಭಾವಾತೀತಾಽಭವಂ ಕಿಲ || ೫೧ ||

ತವಾಂಗಾರ್ಧಹರಾ ನಿತ್ಯಂ ಗರುಡೋಪರಿಗಾಮಿನೀ ।
ಇಂದ್ರಾದಿದೇವತಾವಾಸಮಗಮಂ ಚ ತ್ವಯಾ ಸಹ || ೫೨ ||

ಅತಸ್ತ್ವಾಂ ಪ್ರಷ್ಟುಮಿಚ್ಛಾಮಿ ಕಿಂ ಕೃತಂ ತು ಮಯಾ ಶುಭಂ ।
ಭವಾಂತರೇ ಚ ಕಿಂಶೀಲಾ ಕಾ ವಾಹಂ ಕಸ್ಯ ಕನ್ಯಕಾ || ೫೩ ||

---

೫೦. ಎಲೈ ಪ್ರಿಯಳೆ! ಕೊಡಬಾರದ್ದಾಗಲಿ, ಮಾಡಬಾರದ್ದಾಗಲಿ, ಹೇಳಬಾರದ್ದಾಗಲಿ ಹೇಗೇ ಇರಲಿ ಅದೆಲ್ಲವನ್ನೂ ನಿನ್ನ ಇಷ್ಟದಂತೆ ಮಾಡುತ್ತೇನೆ. ಪ್ರಶ್ನೆ ಮಾಡುವುದೇ ಇಲ್ಲ. ನಿನ್ನ ಮನಸ್ಸಿನಲ್ಲಿ ಏನಿದೆಯೋ ಅವೆಲ್ಲವನ್ನೂ ಕೇಳು ಹೇಳುತ್ತೇನೆ.

೫೧. ಸತ್ಯಭಾಮೆಯು ಹೇಳಿದಳು–ನಾನು ಪೂರ್ವದಲ್ಲಿಯೇ ದಾನ, ತಪಸ್ಸು, ವ್ರತಗಳನ್ನು ಮಾಡಿದ್ದೇನೆ. ನಾನು ಮನುಷ್ಯರಲ್ಲಿ ಹುಟ್ಟಿದರೂ ಆ ಮನುಷ್ಯನ ರೀತಿಯನ್ನೂ ಮೀರಿದ್ದೇನೆ. ಇದರಿಂದಲೇ ಹಿಂದೆ ಅವೆಲ್ಲವನ್ನೂ ಮಾಡಿದಂತೆ ವ್ಯಕ್ತವಾಗುತ್ತದೆ.

೫೨. ನಾನು ನಿತ್ಯವೂ ನಿನ್ನ ಪಕ್ಕದಲ್ಲಿಯೇ ಇದ್ದುಕೊಂಡಿರುವೆನಲ್ಲದೆ ಗರುಡನ ಮೇಲೆ ನಿನ್ನೊಡನೆ ಸುತ್ತುತ್ತಲೇ ಇದ್ದೇನೆ. ನಿನ್ನೊಡನೆ ಇಂದ್ರನೇ ಮುಂತಾದ ದೇವತೆಗಳ ಮನೆಗೂ ಹೋಗಿದ್ದೆನು.

೫೩. ಆದ್ದರಿಂದ ನಿನ್ನನ್ನು ಒಂದು ವಿಷಯವನ್ನು ಕೇಳಬೇಕೆಂದಿದ್ದೇನೆ. ನಾನು ಪೂರ್ವದಲ್ಲಿ ಯಾವ ಪುಣ್ಯವನ್ನು ಮಾಡಿದ್ದೆನು? ಹಿಂದಿನ ಜನ್ಮದಲ್ಲಿ ನನ್ನ ಸ್ವಭಾವವು ಹೇಗಿದ್ದಿತು? ನಾನು ಯಾರಾಗಿದ್ದೆ? ಯಾರ ಮಗಳಾಗಿದ್ದೆನು?

|| ಶ್ರೀ ಕೃಷ್ಣ ಉವಾಚ ||

ಶೃಣುಷ್ವೈಕಮನಾಃ ಕಾನ್ತೇ ಯತ್ತ್ವಾಂ ವೈ ಪೂರ್ವಜನ್ಮನಿ ।
ಪುಣ್ಯವ್ರತಂ ಕೃತವತೀ ತತ್ಸರ್ವಂ ಕಥಯಾಮಿ ತೇ || ೫೪ ||

ಆಸೀತ್ಕೃತಯುಗಸ್ಯಾಂತೇ ಮಾಯಾಪುರ್ಯಾಂ ದ್ವಿಜೋತ್ತಮಃ ।
ಆತ್ರೇಯೋ ದೇವಶರ್ಮೇತಿ ವೇದವೇದಾಂಗಪಾರಗಃ || ೫೫ ||

ಆತಿಥೇಯೋಗ್ನಿಶುಶ್ರೂಷೀ ಸೌರವ್ರತಪರಾಯಣಃ ।
ಸೂರ್ಯಮಾರಾಧಯನ್ನಿತ್ಯಂ ಸಾಕ್ಷಾತ್ಸೂರ್ಯ ಇವಾಪರಃ || ೫೬ ||

ತಸ್ಯಾತಿವಯಸಸ್ತ್ವಾಸೀನ್ನಾಮ್ನಾ ಗುಣವತೀ ಸುತಾ ।
ಅಪುತ್ರಸ್ಸ ಸ್ವಶಿಷ್ಯಾಯ ಚಂದ್ರನಾಮ್ನೇ ದದೌ ಸುತಾಂ || ೫೭ ||

---

೫೪. ಶ್ರೀಕೃಷ್ಣನು ಹೇಳಿದನು–ಎಲೈ ಕಾಂತೆಯೇ! ಮನಸ್ಸಿಟ್ಟು ಕೇಳು. ನೀನು ಹಿಂದಿನ ಜನ್ಮದಲ್ಲಿ ಯಾರಾಗಿದ್ದೆ ? ಯಾವ ಪುಣ್ಯ ವ್ರತವನ್ನು ಮಾಡಿದ್ದೆ ? ಎಂಬುದೆಲ್ಲವನ್ನೂ ಹೇಳುತ್ತೇನೆ.

೫೫. ಕೃತಯುಗದ ಕೊನೆಯಲ್ಲಿ ಮಾಯಾಪುರಿಯಲ್ಲಿ ದೇವಶರ್ಮನೆಂಬ ಒಬ್ಬ ಬ್ರಾಹ್ಮಣನಿದ್ದನು. ಆತ್ರೇಯ ಗೋತ್ರದವನು. ವೇದವೇದಾಂಗಗಳನ್ನು ಅಧ್ಯಯನ ಮಾಡಿದ್ದನು.

೫೬. ಆತನು ಅತಿಥಿಗಳನ್ನು ಶುಶ್ರೂಷೆ ಮಾಡಿಕೊಂಡಿದ್ದನು. ಸೂರ್ಯನ ವ್ರತಗಳನ್ನು ಮಾಡುತ್ತಿದ್ದನು. ನಿತ್ಯವೂ ಸೂರ್ಯನನ್ನು ಪೂಜಿಸುತ್ತ ಪ್ರತ್ಯಕ್ಷ ಸೂರ್ಯನಂತೆಯೇ ಇದ್ದನು.

೫೭. ಆತನಿಗೆ ವಯಸ್ಸಾದ ಮೇಲೆ ಒಬ್ಬಳು ಮಗಳಾದಳು. ಅವಳ ಹೆಸರು ಗುಣವತಿ. ಅವನಿಗೆ ಗಂಡುಮಕ್ಕಳಾಗಲಿಲ್ಲ. ಈಕೆಯನ್ನು ಚಂದ್ರನೆಂಬ ತನ್ನ ಶಿಷ್ಯನಿಗೆ ಮದುವೆಮಾಡಿಕೊಟ್ಟನು.

ತಮೇವ ಪುತ್ರವನ್ಮೇನೇ ಸ ಚ ತಂ ಪಿತೃವದ್ವಶೀ ।
ತೌ ಕದಾಚಿದ್ವನಂ ಯಾತೌ ಕುಶೇಧ್ಮಾಹರಣಾರ್ಥಿನೌ || ೫೮ ||

ಹಿಮಾದ್ರಿಪಾದಪವನೇ ಚೇರತುಸ್ತೌ ಯತಸ್ತತಃ ।
ತೌ ತತೋ ರಾಕ್ಷಸಂ ಘೋರಮಾಯಾಂತಂ ಸಮಪಶ್ಯತಾಂ || ೫೯ ||

ಭಯವಿಹ್ವಲಸರ್ವಾಂಗಾವಸಮರ್ಥೌ ಪಲಾಯಿತುಂ ।
ನಿಹತೌ ರಕ್ಷಸಾ ತೇನ ಕೃತಾಂತಸಮರೂಪಿಣಾ || ೬೦ ||

ತೌ ತತ್ಕ್ಷೇತ್ರಪ್ರಭಾವೇನ ಧರ್ಮಶೀಲತಯಾ ಪುನಃ ।
ವೈಕುಂಠಭವನಂ ನೀತೌ ಮದ್ಗಣೈರ್ಮತ್ಸಮೀಪಗೈಃ || ೬೧ ||

ಯಾವಜ್ಜೀವಂ ತು ಯತ್ತಾಭ್ಯಾಂ ಸೂರ್ಯಪೂಜಾದಿಕಂ ಕೃತಂ ।
ತೇನಾಹಂ ಕರ್ಮಣಾ ತಾಭ್ಯಾಂ ಸುಪ್ರೀತೋ ಹ್ಯಭವಂ ಕಿಲ || ೬೨ ||

---

೫೮. ಆದ್ದರಿಂದ ಆ ದೇವಶರ್ಮನು ಅ ಅಳಿಯನಾದ ಚಂದ್ರಶರ್ಮನನ್ನು ಮಗನಂತೆ ಭಾವಿಸಿದ್ದನು. ಚಂದ್ರಶರ್ಮನೂ ಕೂಡ ಮಾವನನ್ನು ತಂದೆಯಂತೆ ತಿಳಿದುಕೊಂಡಿದ್ದನು. ಹೀಗಿರಲು ಅವರಿಬ್ಬರೂ ಧರ್ಬೆ ಸಮಿತ್ತುಗಳನ್ನು ತರಲು ಒಂದುಸಾರಿ ಕಾಡಿಗೆ ಹೋದರು.

೫೯. ಹಿಮವತ್ಪರ್ವತದ ಕಾಡಿನಲ್ಲಿ ಅವರು ಸುತ್ತಿಯಾಡುತ್ತಿರಲು ಒಬ್ಬ ಘೋರನಾದ ರಾಕ್ಷಸನು ಬರುತ್ತಿರುವುದನ್ನು ಕಡರು.

೬೦. ಆಗ ಅವರು ಭಯಗೊಂಡು ಓಡುವುದಕ್ಕೂ ಅಸಮರ್ಥರಾದರು. ಆಗ ಆ ಯಮನಂತಿದ್ದ ರಾಕ್ಷಸನು ಅವರನ್ನು ಕೊಂದನು.

೬೧. ಅವರು ತಾವು ಸತ್ತ ಕ್ಷೇತ್ರದ ಮಹಿಮೆಯಿಂದಲೂ, ತಮ್ಮ ಧರ್ಮದ ಸ್ವಭಾವದಿಂದಲೂ ವೈಕುಂಠವನ್ನು ಹೊಂದಿದರು. ಅವರನ್ನು ನನ್ನ ದೂತರೇ ಕರೆತಂದರು.

೬೨. ಅವರು ತಾವು ಪ್ರಾಣವಿರುವವರೆವಿಗೂ ಮಾಡಿದ್ದ ಸೂರ್ಯಪೂಜೆಯ ಮಹಿಮೆಯಿಂದ ಅವರಿಗೆ ನಾನು ಸಂತೋಷಗೊಂಡೆನು.

ಸೌರಾಶ್ಚ ಶೈವಾ ಗಾಣೇಶಾ ವೈಷ್ಣವಾಶ್ಯಕ್ತಿಪೂಜಕಾಃ ।
ಮಾಮೇವ ಪ್ರಾಪ್ನುವಂತೀಹ ವರ್ಷಾಪಸ್ಸಾಗರಂ ಯಥಾ ॥ ೬೩ ॥

ಏಕೋಽಹಂ ಪಂಚಧಾ ಜಾತಃ ಕ್ರೀಡರ್ಯ ನಾಮಭಿಃ ಕಿಲ ।
ದೇವದತ್ತೋ ಯಥಾ ಕಶ್ಚಿತ್ಪುತ್ರಾದ್ಯಾಹ್ವಾನನಾಮಭಿಃ ॥ ೬೪ ॥

ತತಶ್ಚ ತೌ ಮಧ್ಭುವನಾಧಿವಾಸಿನೌ ವಿಮಾನಯಾಸೌ ರವಿವರ್ಚಸಾವುಭೌ ।
ಮತ್ತುಲ್ಯರೂಪೌ ಮಮ ಸನ್ನಿಧಾನಗೌ ದಿವ್ಯಾಂಗನಾಚಂದನಭೋಗ
ಭಾಜನೌ ॥ ೬೫ ॥

ಇತಿ ಶ್ರೀ ಮಹಾಪುರಾಣೇ ಪಾದ್ಮೇ ಉತ್ತರಖಂಡೇ ಶ್ರೀ ಕೃಷ್ಣ ಸತ್ಯಭಾಮಾ ಸಂವಾದೇ ಕಾರ್ತಿಕ ಮಾಹಾತ್ಮ್ಯೇ ಪಾರಿಜಾತ ವೃಕ್ಷಾನಯನಂ ನಾಮ ನವತಿತಮೋಽಧ್ಯಾಯಸ್ಸಮಾಪ್ತಃ

---

೬೩. ಸೂರ್ಯಪೂಜೆ ಮಾಡುವವರು, ಶಿವಪೂಜೆ ಮಾಡುವವರು, ಗಣೇಶ ಪೂಜೆಮಾಡುವವರು, ವಿಷ್ಣು ಪೂಜಕರು, ಶಕ್ತಿ ಪೂಜಕರು ಇವರೆಲ್ಲರೂ ವರ್ಷಾ ಕಾಲದ ಮಳೆಯು ಸಮುದ್ರವನ್ನು ಹೊಂದುವಂತೆ ನನ್ನನ್ನೇ ಹೊಂದುತ್ತಾರೆ.

೬೪. ದೇವದತ್ತನೆಂಬ ಒಬ್ಬ ಮನುಷ್ಯನನ್ನು ತಂದೆಯು ಮಗನೆಂದೂ, ಮಾವನು ಅಳಿಯನೆಂದೂ, ತಮ್ಮನು ಅಣ್ಣನೆಂದೂ, ಮೈದುನನು ಭಾವನೆಂದೂ, ಬೇರೆ ಬೇರೆ ಹೆಸರಿನಿಂದ ಹೇಗೆ ಕರೆಯುತ್ತಾರೆಯೋ ಹಾಗೆ ನನ್ನನ್ನು ನನ್ನ ಕ್ರೀಡೆಗಳಿಂದ ಆಯಾಯ ಹೆಸರಿನಿಂದ ಕರೆಯುತ್ತಾರೆ. ನಾನೊಬ್ಬನೇ ಐದು ಬಗೆಯಾಗಿ ಆಗಿದ್ದೇನೆ.

೬೫. ಅನಂತರ ಅವರಿಬ್ಬರೂ ಸೂರ್ಯನಂತೆ ಕಾಂತಿಯನ್ನು ಹೊಂದಿ ನನ್ನ ಮನೆಯಲ್ಲಿಯೇ ವಾಸಮಾಡುತ್ತ, ವಿಮಾನಗಳಲ್ಲಿ ಸಂಚರಿಸುತ್ತ ನನ್ನಂತೆಯೇ ಆಕಾರವನ್ನು ಹೊಂದಿ ನನ್ನ ಬಳಿಯಲ್ಲಿಯೇ ಇದ್ದುಕೊಂಡು ಉತ್ತಮರಾದ ಸ್ತ್ರೀಯರ ಭೋಗವನ್ನು ಹೊಂದಿ ಇರುತ್ತಿದ್ದರು.

ಇಂತು ಶ್ರೀ ಪದ್ಮಮಹಾಪುರಾಣದ ಉತ್ತರಖಂಡದ ಶ್ರೀ ಕೃಷ್ಣ ಸತ್ಯಭಾಮೆಯರ ಸಂವಾದದ ಕಾರ್ತಿಕ ಮಹಿಮೆಯಲ್ಲಿ ಪಾರಿಜಾತ ವೃಕ್ಷವನ್ನು ತಂದುದು ಎಂಬ ತೊಂಭತ್ತನೆಯ ಅಧ್ಯಾಯವು ಮುಗಿದುದು.



|| ಶ್ರೀಃ ||

-X-

## ಅಥ ಶ್ರೀ ಮಹಾಪುರಾಣೇ ಪಾದ್ಮೇ ಉತ್ತರಖಂಡೇ

## || ಏಕನವತಿತಮೋಽಧ್ಯಾಯಃ ||



|| ಶ್ರೀ ಕೃಷ್ಣ ಉವಾಚ ||

**ತತೋ ಗುಣವತೀ ಶ್ರುತ್ವಾ ರಕ್ಷಸಾ ನಿಹತಾವುಭೌ ।**
**ಪಿತೃಭರ್ತೃಜದುಃಖಾರ್ತಾ ಕರುಣಂ ಪರ್ಯದೇವಯತ್ ॥ ೧ ॥**

|| ಗುಣವತ್ಯುವಾಚ ||

**ಹಾ ನಾಥ ಹಾ ಪಿತಸ್ತ್ಯಕ್ತ್ವಾಽಗಚ್ಛತಂ ಕ್ವ ಚ ಮಾಂ ವಿನಾ ।**
**ಬಾಲಾಹಂ ಕಿಂ ಕರೋಮ್ಯದ್ಯ ಅನಾಥಾಭವತೋರ್ವಿನಾ ॥ ೨ ॥**

**ಕೋ ನು ಮಾಮಾಸ್ಥಿತಾಂ ಗೇಹೇ ಭೋಜನಾಚ್ಛಾದನಾದಿಭಿಃ ।**
**ಅಕಿಂಚಿತ್ಕುಶಲಾಂ ಸ್ನೇಹಾತ್ಪಾಲಯಿಷ್ಯತಿ ದುಃಖಿತಾಂ ॥ ೩ ॥**

---

## ತೊಂಭತ್ತೊಂದನೆಯ ಅಧ್ಯಾಯವು



೧. ಶ್ರೀ ಕೃಷ್ಣನು ಹೇಳಿದನು-ಅನಂತರ ಈ ಗುಣವತಿಯು ತನ್ನ ಗಂಡ ತಂದೆಯರು ರಾಕ್ಷಸನಿಂದ ಸತ್ತರೆಂಬುದನ್ನು ಕೇಳಿ ಅವರ ವಿಷಯವಾದ ದುಃಖ ದಿಂದ ಬಹುವಾಗಿ ಅತ್ತಳು.

೨. ಗುಣವತಿಯು ಹೇಳಿದಳು-ಅಯ್ಯೋ ನಾಥನೆ! ಅಯ್ಯೋ ತಂದೆಯೇ! ನನ್ನನ್ನು ಬಿಟ್ಟು ನೀವಿಬ್ಬರೂ ಎಲ್ಲಿ ಹೋದಿರಿ? ನೀವಿಬ್ಬರೂ ಇಲ್ಲದಿದ್ದ ಮೇಲೆ ಬಾಲೆಯಾದ ನಾನು ಏನು ಮಾಡಬಲ್ಲೆ?

೩. ನೀವಿಬ್ಬರೂ ಇಲ್ಲದಿದ್ದಮೇಲೆ ಊಟಕ್ಕೂ ಹೊದೆಯುವುದಕ್ಕೂ ಇಲ್ಲದೆ ಕಷ್ಟಪಡುವ ನನ್ನನ್ನು ಈ ಮನೆಯಲ್ಲಿ ಯಾರು ಕಾಪಾಡುತ್ತಾರೆ?

ಹತಭಾಗ್ಯಾ ಹತಸುಖಾ ಹತಾಶಾ ಹತಜೀವಿತಾ ।
ಶರಣಂ ಕಂ ಪ್ರಯಾಸ್ಯೇದ್ಯ ಯೋ ಮದ್ದುಃಖಂ ಪ್ರಮಾರ್ಜಯೇತ್ ॥೪॥

ಕ್ವ ಯಾಸ್ಯಾಮಿ ಕ್ವ ತಿಷ್ಠಾಮಿ ಕಿಂ ಕರೋಮಿ ಯಥಾಽಘೃಣಂ ।
ವಿಧಾತ್ರಾ ಹಾ ಹತಾಸ್ಮ್ಯದ್ಯ ಹ್ಯನಾಥಾ ಬತ ಬಾಲಿಶಾ ॥ ೫ ॥

॥ ಶ್ರೀ ಕೃಷ್ಣ ಉವಾಚ ॥

ಏವಂ ಬಹುವಿಲಪ್ಯಾಥ ಕುರರೀವ ಭೃಶಾತುರಾ ।
ಪಪಾತ ಭೂಮೌ ವಿಕಲಾ ರಂಭಾ ವಾತಹತಾ ಯಥಾ ॥ ೬ ॥

ಚಿರಾದಾಶ್ವಾಸ್ಯ ಸಾ ಭೂಯೋ ವಿಲಪ್ಯ ಕರುಣಂ ಬಹು ।
ನಿಮಗ್ನಾ ದುಃಖಜಲಧೌ ಶೋಕಾರ್ತಾ ಸಮವರ್ತತ ॥ ೭ ॥

ಸಾ ಗೃಹೋಪಸ್ಕರಾನ್ಸರ್ವಾನ್ವಿಕ್ರೀಯ ಶುಭಕರ್ಮಕೃತ್ ।
ತಯೋಶ್ಚಕ್ರೇ ಯಥಾಶಕ್ತಿ ಪಾರಲೌಕಿಕಸತ್ಕ್ರಿಯಾಂ ॥ ೮ ॥

---

೪. ನನ್ನ ಭಾಗ್ಯವು ಹೋಯಿತು. ಸುಖವೂ ಹೋಯಿತು. ಆಶೆಯೂ ಬದುಕುವಿಕೆಯೂ ಹೋದುವು. ಯಾರು ನನ್ನನ್ನು ಕಾಪಾಡುವರು? ನನ್ನ ದುಃಖವನ್ನು ಯಾರು ತಾನೆ ನಿವಾರಿಸುವರು?

೫. ಎಲ್ಲಿ ಹೋಗಲಿ! ಎಲ್ಲಿ ನಿಲ್ಲಲಿ? ಏನು ಮಾಡಲಿ? ನಾಚಿಕೆಯಿಲ್ಲದೆ ನಾನು ಮಾಡತಕ್ಕದ್ದೇನು? ದೇವರು ನನ್ನನ್ನು ಈಗ ಕೆಡಸಿದನಲ್ಲ! ಅಯ್ಯೋ! ನಾಥನೆ! ನಾನು ಇನ್ನೂ ಚಿಕ್ಕವಳಲ್ಲ!

೬. ಶ್ರೀ ಕೃಷ್ಣನು ಹೇಳಿದನು–ಈ ರೀತಿಯಾಗಿ ಕಾಡುಗುಬ್ಬಚ್ಚಿಯಂತೆ ಬಹುವಾಗಿ ದುಃಖಿಸಿ ಗಾಳಿಯಿಂದ ಬೀಳುವ ಬಾಳೆಯ ಮರದಂತೆ ಕೆಳಕ್ಕೆ ಧೊಪ್ಪನೆ ಬಿದ್ದುಬಿಟ್ಟಳು.

೭. ಬಹುಕಾಲದ ಮೇಲೆ ಸಮಾಧಾನ ತಂದುಕೊಂಡರೂ ಮತ್ತೆಯೂ ಅತ್ತಳು. ಈರೀತಿ ದುಃಖಸಾಗರದಲ್ಲಿ ಮುಳುಗಿದಳು.

೮. ಅನಂತರ ಆಕೆಯು ಮನೆಯ ಸಂಸಾರದ ಪದಾರ್ಥಗಳನ್ನು ಮಾರಿ ಆ ತಂದೆಗೂ ಗಂಡನಿಗೂ ಶಕ್ತಿಗನುಗುಣವಾಗಿ ಉತ್ತರ ಕ್ರಿಯೆಗಳನ್ನು ಮಾಡಿದಳು.

ತಸ್ಮಿನ್ನೇವ ಪುರೇ ವಾಸಂ ಚಕ್ರೇ ಪ್ರಭೃತಿಜೀವಿನೀ ।
ವಿಷ್ಣುಭಕ್ತಿಪರಾ ಶಾನ್ತಾ ಸತ್ಯಶೌಚಾದಿತತ್ಪರಾ ॥ ೯ ॥

ವ್ರತದ್ವಯಂ ತಯಾ ಸಮ್ಯಗಾಜನ್ಮಮರಣಾತ್ಕೃತಂ ।
ಏಕಾದಶೀವ್ರತಂ ಸಮ್ಯಕ್ಸೇವನಂ ಕಾರ್ತಿಕಸ್ಯ ಚ ॥ ೧೦ ॥

ಏತದ್ವ್ರತದ್ವಯಂ ಕಾನ್ತೇ ಮಮಾತೀವ ಪ್ರಿಯಂಕರಂ ।
ಭುಕ್ತಿಮುಕ್ತಿಕರಂ ಪುಣ್ಯಂ ಪುತ್ರಸಂಪತ್ತಿದಾಯಕಂ ॥ ೧೧ ॥

ಕಾರ್ತಿಕೇ ಮಾಸಿ ಯೋನಿತ್ಯಂ ತುಲಾಸಂಸ್ಥೇ ದಿವಾಕರೇ ।
ಪ್ರಾತಃ ಸ್ನಾಸ್ಯಂತಿ ತೇ ಮುಕ್ತಾ ಮಹಾಪಾತಕಿನೋಽಪಿ ಚ ॥ ೧೨ ॥

ಸ್ನಾನಂ ಜಾಗರಣಂ ದೀಪಂ ತುಲಸೀವನಪಾಲನಂ ।
ಕಾರ್ತಿಕೇ ಯೇ ಪ್ರಕುರ್ವಂತಿ ತೇ ನರಾ ವಿಷ್ಣುಮೂರ್ತಯಃ ॥ ೧೩ ॥

---

೯. ಆಕೆಯು ಅದೇ ಊರಿನಲ್ಲಿಯೇ ಸಂಬಳಕ್ಕಿದ್ದು ಜೀವನವನ್ನು ಮಾಡಿಕೊಳ್ಳುತ್ತಿದ್ದಳು. ಮತ್ತು ವಿಷ್ಣುಭಕ್ತಳಾಗಿಯೂ ಶಾನ್ತಳಾಗಿಯೂ ಸತ್ಯ ಶೌಚಾದಿಗಳನ್ನು ಬಿಡದೆಯೂ ಇರುತ್ತಿದ್ದಳು.

೧೦. ಈಕೆಯು ಹುಟ್ಟಿದ ಮೊದಲು ಸಾಯುವವರೆಗೂ ಏಕಾದಶೀ ವ್ರತವನ್ನೂ ಕಾರ್ತೀಕ ಸೇವೆಯನ್ನೂ ಬಿಡದೆ ಮಾಡಿದಳು. ಇವೆರಡೂ ಕ್ರಮವಾಗಿ ಆಚರಿಸಲ್ಪಟ್ಟುವು.

೧೧. ಎಲೈ ಕಾನ್ತೆಯೇ! ಈ ಎರಡು ವ್ರತಗಳೂ ನನಗೆ ಅತಿ ಪ್ರಿಯವಾದುವು. ಊಟಕ್ಕೂ ಕೊಡುತ್ತದೆ. ಮೋಕ್ಷವನ್ನೂ ಉಂಟುಮಾಡುತ್ತದೆ. ಪುಣ್ಯ ರೂಪವಾದುದು. ಮಕ್ಕಳನ್ನೂ ಐಶ್ವರ್ಯವನ್ನೂ ಕೊಡುತ್ತದೆ.

೧೨. ತುಲಾಮಾಸವೂ ಕಾರ್ತಿಕವೂ ಕೂಡಿರುವಾಗ ಯಾವನು ದಿನವೂ ಪ್ರಾತಃಸ್ನಾನವನ್ನು ಮಾಡುತ್ತಾನೆಯೋ ಅವನು ಮಹಾಪಾತಕಿಯಾಗಿದ್ದರೂ ಶುದ್ಧನಾಗುತ್ತಾನೆ.

೧೩. ಸ್ನಾನ, ಜಾಗರಣೆ, ದೀಪ ಹಚ್ಚುವುದು, ತುಳಸಿಯ ಗಿಡಗಳನ್ನು ಬೆಳೆಸುವುದು ಇವನ್ನು ಕಾರ್ತಿಕದಲ್ಲಿ ಮಾಡುವವರು ವಿಷ್ಣುವಿನ ಮೂರ್ತಿಗಳೇ ಆಗಿರುವರು.

**ಸಮ್ಮಾರ್ಜನಂ ಗೃಹೇ ವಿಷ್ಣೋಃ ಸ್ವಸ್ತಿಕಾದಿನಿವೇದನಂ ।**
**ವಿಷ್ಣೋಃ ಪೂಜಾಂ ಚ ಯೇ ಕುರ್ಯುಃ ಜೀವನ್ಮುಕ್ತಾಶ್ಚ ತೇ ನರಾಃ ॥ ೧೪ ॥**

**ಇತ್ಥಂ ದಿನತ್ರಯಮಪಿ ಕಾರ್ತಿಕೇ ಯೋ ಪ್ರಕುರ್ವತೇ ।**
**ದೇವಾನಾಮಪಿ ತೇ ವಂದ್ಯಾಃ ಕಿಂ ಯೈರಾಜನ್ಮ ತತ್ಕೃತಂ ॥ ೧೫ ॥**

**ಇತ್ಥಂ ಗುಣವತೀ ಸಮ್ಯಕ್ಪ್ರತ್ಯಬ್ದಂ ವ್ರತಿನೀ ಹ್ಯಭೂತ್ ।**
**ನಿತ್ಯಂ ವಿಷ್ಣೋಃ ಪರಿಕರೇ ಭಕ್ತ್ಯಾ ತತ್ಪರಮಾನಸಾ ॥ ೧೬ ॥**

**ಕಥಾಚಿಜ್ಜ್ವರಯಾ ಸಾರ್ಥಂ ಕೃಶಾಂಗೀ ಜ್ವರಪೀಡಿತಾ ।**
**ಸ್ನಾತುಂ ಗಂಗಾಂ ಗತಾ ಕಾನ್ತೇ ಕಥಂ ಚಿಚ್ಛನಕೈಸ್ತದಾ ॥ ೧೭ ॥**

**ಯಾವಜ್ಜಲಾಂತರಗತಾ ಕಂಪಂತೀ ಶೀತಪೀಡಿತಾ ।**
**ತಾವತ್ಸಾ ವಿಹ್ವಲಾಪಶ್ಯದ್ವಿಮಾನಂ ಯಾತಮಂಬರಾತ್ ॥ ೧೮ ॥**

---

೧೪. ವಿಷ್ಣುವಿನ ದೇವಸ್ಥಾನದಲ್ಲಿ ಗುಡಿಸುವುದು, ಹಸೆಗಳನ್ನು ಬರೆಯುವುದು, ವಿಷ್ಣುವಿನ ಪೂಜೆ ಮಾಡುವುದು ಇವುಗಳನ್ನು ಕಾರ್ತಿಕದಲ್ಲಿ ಮಾಡುವ ಮನುಷ್ಯರು ಜೀವದಿಂದಿದ್ದರೂ ಅವರು ಮುಕ್ತಿಯನ್ನು ಹೊಂದಿದವರಾಗಿಯೇ ಇರುತ್ತಾರೆ.

೧೫ ಈ ರೀತಿಯಾಗಿ ಕಾರ್ತಿಕ ಮಾಸದಲ್ಲಿ ಮೂರು ದಿವಸ ಮಾಡಿದರೂ ಸಾಕು. ಅವರು ದೇವತೆಗಳಿಗೂ ಪೂಜ್ಯರಾಗುತ್ತಾರೆ. ಎಂದಮೇಲೆ ಜೀವವಿರುವವರೆಗೂ ಮಾಡಿದರೆ ಹೇಳತಕ್ಕದ್ದೇನಿದೆ!

೧೬. ಈ ರೀತಿಯಾಗಿ ಗುಣವತಿಯು ಪ್ರತಿವರ್ಷವೂ ವಿಷ್ಣುವಿನ ಶುಶ್ರೂಷೆಯಲ್ಲಿಯೇ ಮನಸ್ಸುಳ್ಳವಳಾಗಿ ಕಾರ್ತಿಕ ವ್ರತದಲ್ಲಿ ಆಸಕ್ತಳಾಗಿದ್ದಳು.

೧೭–೧೮. ಹೀಗಿರುತ್ತಿರಲು ಆಕೆಯು ಮುದುಕಿಯಾದಳು. ಮುಪ್ಪಿನಿಂದ ಕೃಶಳಾಗಿ ಒಂದುಸಾರಿ ಜ್ವರ ಬಂದಿದ್ದಾಗ ಗಂಗೆಗೆ ಸ್ನಾನಕ್ಕೆ ಹೋದಳು. ಸ್ನಾನಕ್ಕೆ ನೀರಿನೊಳಕ್ಕೆ ಇಳಿಯಲು ಶೀತವು ಹೆಚ್ಚಿ ನಡುಗುವುದಕ್ಕೆ ಮೊದಲಾಯಿತು. ಆಗ ಆಕಾಶದಲ್ಲಿ ವಿಮಾನವು ಬಂದಿರುವುದನ್ನು ನೋಡಿದಳು.

ಶಂಖಚಕ್ರಗದಾಪದ್ಮಹಸ್ತೈರಾಸನ್ನಮಂಬರಾತ್ ।
ವಿಷ್ಣುರೂಪಧರೈಸ್ಸಮ್ಯಗ್ಸೈನತೇಯಧ್ವಜಾಂಕಿತಂ ॥ ೧೯ ॥

ಆರೋಹಯದ್ವಿಮಾನಂ ಸಾ ಹ್ಯಪ್ಸರೋಗಣಸೇವಿತಂ ।
ಚಾಮರೈರ್ವೀಜ್ಯಮಾನಾಂ ತಾಂ ವೈಕುಂಠಮನಯನ್ಗಣಾಃ ॥ ೨೦ ॥

ಅಥ ಸಾ ತದ್ವಿಮಾನಸ್ಥಾ ಜ್ವಲದಗ್ನಿಶಿಖೋಪಮಾ ।
ಕಾರ್ತಿಕವ್ರತಪುಣ್ಯೇನ ಮತ್ಸಾನ್ನಿಧ್ಯಗತಾಭವತ್ ॥ ೨೧ ॥

ಅಥ ಬ್ರಹ್ಮಾದಿದೇವಾನಾಂ ಯದಾ ಪ್ರಾರ್ಥನಯಾ ಭುವಂ ।
ಆಗತೋಽಹಂ ಗಣಾಸ್ಸರ್ವೇ ಯಾತಾಸ್ತೇಽಪಿ ಮಯಾ ಸಹ ॥ ೨೨ ॥

ಏತೇಹಿ ಯಾದವಾಸ್ಸರ್ವೇ ಮದ್ಗಣಾ ಏವ ಭಾಮಿನಿ ।
ಸರ್ವದಾ ಮತ್ಪ್ರಿಯಾ ದೇವಿ ಮತ್ತುಲ್ಯಗುಣಶಾಲಿನಃ ॥ ೨೩ ॥

---

೧೯. ಅದರಲ್ಲಿ ಶಂಖ, ಚಕ್ರ, ಗದೆ, ಪದ್ಮಗಳನ್ನು ಧರಿಸಿದ್ದ ವಿಷ್ಣುವಿನ ವೇಷದವರು ಇದ್ದರು. ಅದರಮೇಲೆ ಗರುಡನ ಚಿತ್ರವೂ ಇರುವ ಪತಾಕೆಯು ಹಾರಾಡುತ್ತಲಿದ್ದಿತು.

೨೦. ಆ ವಿಮಾನವನ್ನು ಆಕೆಯು ಹತ್ತಿದಳು. ಅಲ್ಲಿ ಅಪ್ಸರಸ್ತ್ರೀಯರು ಈಕೆಯನ್ನು ಚಾಮರದಿಂದ ಬೀಸುತ್ತ ಸೇವಿಸುತ್ತಿದ್ದರು. ಆ ವಿಮಾನದಲ್ಲಿ ಈಕೆಯನ್ನು ವೈಕುಂಠಕ್ಕೆ ಕರೆತಂದರು.

೨೧. ಈ ರೀತಿಯಾಗಿ ಆಕೆಯು ಆ ವಿಮಾನವಲ್ಲಿ ಅಗ್ನಿಯಂತೆ ಪ್ರಕಾಶಿಸುತ್ತಾ ಕಾರ್ತಿಕವ್ರತದ ಆ ಪುಣ್ಯದ ಮಹಿಮೆಯಿಂದ ನನ್ನಲ್ಲಿಗೆ ಬಂದಳು.

೨೨-೨೩. ಅನಂತರ ಬ್ರಹ್ಮಾದಿದೇವತೆಗಳ ಪ್ರಾರ್ಥನೆಯಂತೆ ನಾನು ಭೂಮಿಯಲ್ಲಿ ಅವತರಿಸಲು ನನ್ನ ಗಣಗಳೆಲ್ಲವೂ ನನ್ನೊಡನೆಯೇ ಬಂದುವು. ಈ ಯಾದವರೆಲ್ಲರೂ ನನ್ನ ಗಣಗಳೇ. ಇವರೆಲ್ಲರೂ ಯಾವಾಗಲೂ ನನಗೆ ಪ್ರಿಯವನ್ನೇ ಮಾಡುತ್ತಾರೆ. ನನ್ನ ಗುಣದಂತೆಯೇ ಇವರ ಗುಣಗಳೂ ಇವೆ.

ಪಿತಾ ತೇ ದೇವಶರ್ಮಾಭೂತ್ಸತ್ರಾಜಿದಭಿಧೋ ಹ್ಯಯಂ ।
ಯಶ್ಚಂದ್ರಶರ್ಮಾ ಸೋಽಕ್ರೂರಃ ತ್ವಂ ಸಾ ಗುಣವತೀ ಶುಭೇ ॥ ೨೪ ॥

ಕಾರ್ತಿಕವ್ರತಪುಣ್ಯೇನ ಬಹುಮತ್ಪ್ರೀತಿವರ್ಧಿನೀ ।
ಮದ್ದ್ವಾರಿ ಯತ್ತ್ವಯಾ ಪೂರ್ವಂ ತುಳಸೀವಾಟಿಕಾ ಕೃತಾ ॥ ೨೫ ॥

ತಸ್ಮಾದಯಂ ಕಲ್ಪವೃಕ್ಷಃ ತವಾಂಗಣಗತಶ್ಶುಭೇ ।
ಕಾರ್ತಿಕೇ ದೀಪದಾನಂ ಚ ತ್ವಯಾ ಯತ್ತು ಕೃತಂ ಪುರಾ ॥ ೨೬ ॥

ತ್ವದ್ದೇಹಗೇಹಸಂಸ್ಥೇಯಂ ತಸ್ಮಾಲ್ಲಕ್ಷ್ಮೀಃ ಸ್ಥಿರಾಭವತ್ ।
ಯಚ್ಚ ವ್ರತಾದಿಕಂ ಸರ್ವಂ ವಿಷ್ಣವೇ ಭರ್ತೃರೂಪಿಣೇ ॥ ೨೭ ॥

ನಿವೇದಿತವತೀ ತಸ್ಮಾನ್ಮಮ ಭಾರ್ಯಾತ್ವಮಾಗತಾನ್ ।
ಆಜನ್ಮಮರಣಾತ್ಪೂರ್ವಂ ಯತ್ಕಾರ್ತಿಕವ್ರತಂ ಕೃತಂ ॥ ೨೮ ॥

ಕದಾಚಿದಪಿ ತೇನ ತ್ವಂ ಮದ್ವಿಯೋಗಂ ನ ಯಾಸ್ಯಸಿ ।
ಏವಂ ಯೇ ಕಾರ್ತಿಕೇ ಮಾಸಿ ನರಾ ವ್ರತಪರಾಯಣಾಃ ॥ ೨೯ ॥

---

೨೪. ಆ ದೇವಶರ್ಮನೇ ನಿನ್ನ ತಂದೆಯಾದ ಸತ್ರಾಜಿತನು. ಚಂದ್ರ ಶರ್ಮನೇ ಅಕ್ರೂರನಾಗಿ ಹುಟ್ಟಿರುವನು. ನೀನೇ ಆ ಗುಣವತಿಯು.

೨೫–೩೦. ಕಾರ್ತಿಕದ ವ್ರತದ ಪುಣ್ಯದಿಂದ ನನಗೆ ಪ್ರೀತಿಕರಳಾದೆ. ವಿಷ್ಣು ದೇವಸ್ಥಾನದ ಎದುರಿಗೆ ನೀನು ತುಳಸಿಯ ವನವನ್ನು ಎಬ್ಬಿಸಿದುದರಿಂದ ನಿನ್ನ ಮನೆಯ ಅಂಗಳಕ್ಕೆ ಕಲ್ಪವೃಕ್ಷವು ಬಂದಿತು. ಕಾರ್ತಿಕದಲ್ಲಿ ನೀನು ದೀಪದಾನಮಾಡಿದುದರಿಂದ ನಿನ್ನ ದೇಹದಲ್ಲಿಯೂ ಮನೆಯಲ್ಲಿಯೂ ಲಕ್ಷ್ಮಿಯು ಸ್ಥಿರಳಾದಳು. ಎಲ್ಲಾ ವ್ರತಗಳನ್ನೂ ಭರ್ತೃರೂಪನಾದ ವಿಷ್ಣುವಿಗೆ ನೀನು ಮಾಡಿದುದರಿಂದ ನೀನು ನನಗೆ ಹೆಂಡತಿಯಾದೆ. ಹುಟ್ಟಿದ ಮೊದಲುಗೊಂಡು ಸಾಯುವವರೆಗೂ ನೀನು ಆ ಕಾರ್ತಿಕ ವ್ರತವನ್ನು ಮಾಡಿದುದರಿಂದ ನನಗೂ ನಿನಗೂ ಅಗಲುವಿಕೆಯೇ ಇರುವುದಿಲ್ಲ. ಕಾರ್ತಿಕ ಮಾಸದಲ್ಲಿ ವ್ರತಮಾಡತಕ್ಕವರು ನನ್ನ ಸಮೀಪವನ್ನು ಹೊಂದುತ್ತಾರೆ. ಅಲ್ಲದೆ ನೀನು ಯಾವ ರೀತಿಯಾಗಿ ನನಗೆ

ಮತ್ಸಾನ್ನಿಧ್ಯಗತಾಸ್ತೇಽಪಿ ಪ್ರೀತಿದಾ ತ್ವಂ ಯಥಾ ಮಮ ।
ಯಜ್ಞದಾನವ್ರತತಪಃಕಾರಿಣೋ ಮಾನವಾಃ ಖಲು ।
ಕಾರ್ತಿಕವ್ರತಪುಣ್ಯಸ್ಯ ನಾಪ್ನುವಂತಿ ಕಲಾಮಪಿ || ೩೦ ||

|| ಸೂತ ಉವಾಚ ||

ಇತ್ಥಂ ನಿಶಮ್ಯ ಭುವನಾಧಿಪತೇಸ್ತ್ರದಾನೀಂ
ಪ್ರಾಗ್ಜನ್ಮಪುಣ್ಯಭವನೈಭವಜಾತಹರ್ಷಾ ।
ವಿಶ್ವೇಶ್ವರಂ ತ್ರಿಭುವನೈಕನಿದಾನಭೂತಂ
ಕೃಷ್ಣಂ ಪ್ರಣಮ್ಯ ವಚನಂ ನಿಜಗಾದ ಸತ್ಯಾ || ೩೧ ||

ಇತಿ ಶ್ರೀ ಮಹಾಪುರಾಣೇ ಪಾದ್ಮೇ ಉತ್ತರಖಂಡೇ ಶ್ರೀ ಕೃಷ್ಣ ಸತ್ಯಭಾಮಾ ಸಂವಾದೇ ಕಾರ್ತಿಕ ಮಹಾತ್ಮ್ಯೇ ಸತ್ಯಾ ಪೂರ್ವಜನ್ಮ ವರ್ಣನಂ ನಾಮ ಏಕನವತಿತಮೋಽಧ್ಯಾಯಸ್ಸಮಾಪ್ತಃ

---

ಪ್ರೀತಿಯನ್ನುಂಟುಮಾಡುತ್ತೀಯೋ ಅವರೂ ಅದೇ ರೀತಿಯಾಗಿ ಪ್ರೀತಿಯನ್ನುಂಟು ಮಾಡುತ್ತಾರೆ. ಯಜ್ಞ, ದಾನ, ವ್ರತ, ತಪಸ್ಸುಗಳನ್ನು ಮಾಡಿದ ಮನುಷ್ಯರು ಕಾರ್ತಿಕ ವ್ರತವನ್ನು ಮಾಡಿದವನ ಹದಿನಾರನೇ ಒಂದು ಭಾಗವನ್ನು ಹೋಲಲಾರರು.

೩೧. ಸೂತನು ಹೇಳಿದನು–ಕೃಷ್ಣನು ಹೇಳಿದ ಪೂರ್ವಜನ್ಮದ ತನ್ನ ಪುಣ್ಯವನ್ನು ಕೇಳಿ ಸತ್ಯಭಾಮೆಯು ಸಂತೋಷಗೊಂಡವಳಾಗಿ ಆ ಸ್ವಾಮಿಯನ್ನು ನಮಸ್ಕರಿಸಿ ಇಂತೆಂದಳು.

ಇಂತು ಶ್ರೀ ಪದ್ಮಮಹಾಪುರಾಣದ ಉತ್ತರಖಂಡದ ಶ್ರೀ ಕೃಷ್ಣ ಸತ್ಯಭಾಮೆಯರ ಸಂವಾದದ ಕಾರ್ತಿಕ ಮಹಿಮೆಯಲ್ಲಿ ಪೂರ್ವಜನ್ಮ ವರ್ಣನ ಎಂಬ ತೊಂಭತ್ತೊಂದನೆಯ ಅಧ್ಯಾಯವು ಮುಗಿದುದು.



॥ ಶ್ರೀಃ ॥

-X-

# ಅಥ ಶ್ರೀ ಮಹಾಪುರಾಣೇ ಪಾದ್ಮೇ ಉತ್ತರಖಂಡೇ

## ॥ ದ್ವಿನವತಿತಮೋಽಧ್ಯಾಯಃ ॥



॥ ಸತ್ಯೋವಾಚ ॥

**ಸರ್ವೇಪಿ ಕಾಲಾವಯವಾಃ ತವ ಕಾಲ ಸ್ವರೂಪಿಣಃ ।**
**ಮಾಸಾನಾಂ ತು ಕಥಂ ನಾಥ ಸ ಮಾಸಃ ಕಾರ್ತಿಕೋ ವರಃ ॥ ೧ ॥**

**ಏಕಾದಶೀ ತಿಥೀನಾಂ ಚ ಮಾಸಾನಾಂ ಕಾರ್ತಿಕಃ ಪ್ರಿಯಃ ।**
**ಕಥಂ ತೇ ದೇವದೇವೇಶ ಕಾರಣಂ ಕಿಂ ಚ ಕಥ್ಯತಾಂ ॥ ೨ ॥**

॥ ಶ್ರೀ ಕೃಷ್ಣ ಉವಾಚ ॥

**ಸಾಧು ಪೃಷ್ಟಂ ತ್ವಯಾ ಸತ್ಯೇ ಶೃಣುಷ್ವೇಕಾಗ್ರಮಾನಸಾ ।**
**ಪೃಥೋರ್ವೈನ್ಯಸ್ಯ ಸಂವಾದಃ ದೇವರ್ಷೇರ್ನಾರದಸ್ಯ ಚ ॥ ೩ ॥**

---

## ತೊಂಭತ್ತೆರಡನೆಯ ಅಧ್ಯಾಯವು



೧. ಸತ್ಯಭಾಮೆಯು ಹೇಳಿದಳು–ಎಲೈ ಸ್ವಾಮಿಯೇ! ನೀನು ಕಾಲ ಸ್ವರೂಪಿಯು. ಈ ಮಾಸಗಳೆಲ್ಲವೂ ಕಾಲಕ್ಕೆ ಅವಯವಗಳು. ಹೀಗಿರುವಲ್ಲಿ ಎಲಾ ತಿಂಗಳುಗಳಿಗಿಂತಲೂ ಈ ಕಾರ್ತಿಕಮಾಸವು ಹೇಗೆ ಶ್ರೇಷ್ಠವಾಯಿತು?

೨. ತಿಥಿಗಳಲ್ಲಿ ಏಕಾದಶಿಯೂ, ಮಾಸಗಳಲ್ಲಿ ಕಾರ್ತಿಕವೂ, ನಿನಗೆ ಪ್ರಿಯವಾದುದು ಹೇಗೆ? ಎಲೈ ದೇವದೇವನೆ! ಅದಕ್ಕೆ ಕಾರಣವನ್ನು ಹೇಳು.

೩. ಶ್ರೀ ಕೃಷ್ಣನು ಹೇಳಿದನು–ಎಲೈ ಸತ್ಯೆಯೇ! ನೀನು ಕೇಳಿದುದು ಸರಿ. ಮನಸ್ಸಿಟ್ಟು ಕೇಳು. ವೈನ್ಯನ ಮಗನಾದ ಪೃಥುವಿಗೂ, ದೇವರ್ಷಿಯಾದ ನಾರದನಿಗೂ ನಡೆದ ಒಂದು ಸಂವಾದವನ್ನು ಹೇಳುತ್ತೇನೆ.

**ಏವಮೇವ ಪುರಾ ಪೃಷ್ಟೋ ನಾರದಃ ಪೃಥುನಾ ಪ್ರಿಯೇ ।**
**ಉವಾಚ ಕಾರ್ತಿಕಾಧಿಕ್ಯೇ ಕಾರಣಂ ಸರ್ವವಿನ್ಮುನಿಃ ॥ ೪ ॥**

**॥ ನಾರದ ಉವಾಚ ॥**

**ಶಂಖನಾಮಾಭವತ್ಪೂರ್ವಮಸುರಃ ಸಾಗರಾತ್ಮಜಃ ।**
**ತ್ರೈಲೋಕೀಮಥನೇ ಶಕ್ತೋ ಮಹಾಬಲಪರಾಕ್ರಮಃ ॥ ೫ ॥**

**ಜಿತ್ವಾ ದೇವಾನ್ನಿರಾಕೃತ್ಯ ಸ್ವರ್ಲೋಕಾತ್ಸ ಮಹಾಸುರಃ ।**
**ಇಂದ್ರಾದಿಲೋಕಪಾಲಾನಾಮಧಿಕಾರಾಂಸ್ತಥಾಹರತ್ ॥ ೬ ॥**

**ತದ್ಭಯಾದಥ ತೇ ದೇವಾಃ ಸುವರ್ಣಾದ್ರಿಗುಹಾಂ ಗತಾಃ ।**
**ನ್ಯವಸನ್ಬಹುವರ್ಷಾಣಿ ಸಾವರೋಧಾಸ್ಸವಾಸವಾಃ ॥ ೭ ॥**

**ಸುವರ್ಣಾದ್ರಿಗುಹಾದುರ್ಗಂ ಸಂಸ್ಥಿತಾಸ್ತ್ರಿದಶಾ ಯದಾ ।**
**ತದ್ವಶ್ಯಾ ನೋ ಬಭೂವುಸ್ತೇ ತದಾ ದೈತ್ಯೋ ವ್ಯಚಾರಯತ್ ॥ ೮ ॥**

---

೪. ನೀನು ಹೇಳಿದಂತೆಯೇ ಹಿಂದೆ ಪೃಥುವು ನಾರದನನ್ನು ಕೇಳಲು ಆ ನಾರದನು ಕಾರ್ತಿಕಮಾಸವು ಉತ್ತಮವಾದುದಕ್ಕೆ ಕಾರಣವನ್ನು ಹೇಳಿದನು.

೫. ನಾರದನು ಹೇಳಿದನು–ಸಾಗರನ ಮಗನಾದ ಶಂಖನೆಂಬ ಒಬ್ಬ ಅಸುರನು ಪೂರ್ವದಲ್ಲಿದ್ದನು. ಅವನು ಮೂರು ಲೋಕವನ್ನೂ ಜಯಿಸುವಷ್ಟು ಬಲ ಪರಾಕ್ರಮದಿಂದ ಕೂಡಿದ್ದನು.

೬. ದೇವತೆಗಳೆಲ್ಲರನ್ನೂ ಜಯಿಸಿ ಸ್ವರ್ಗಲೋಕವನ್ನೆಲ್ಲಾ ಲೂಟಿಮಾಡಿ ಇಂದ್ರನೇ ಮೊದಲಾದ ಲೋಕಪಾಲಕರ ಅಧಿಕಾರಗಳನ್ನು ಕಿತ್ತುಕೊಂಡನು.

೭. ಅವನ ಭಯದಿಂದ ದೇವತೆಗಳೆಲ್ಲರೂ ಮೇರುಪರ್ವತದ ಗುಹೆಗೆ ಹೋಗಿ ಬಹು ವರ್ಷಗಳವರೆಗೂ ಅಲ್ಲಿ ವಾಸಿಸುತ್ತಿದ್ದರು. ಇಂದ್ರನು ಕೂಡ ತನ್ನ ಹೆಂಡಿರನ್ನು ಕರೆದುಕೊಂಡು ಆ ಪರ್ವತದ ಗುಹೆಯಲ್ಲಿ ವಾಸಮಾಡುತ್ತಿದ್ದನು. ಹೀಗೆ ಬಹು ವರ್ಷಗಳು ಕಳೆದುವು.

೮. ಈ ದೇವತೆಗಳು ಮೇರುಪರ್ವತದಲ್ಲಿ ಇತರರು ಜೈಸಲಸಾಧ್ಯವಾದ ದುರ್ಗರೂಪವಾದ ಗುಹೆಗಳನ್ನು ಹೊಂದಿ ಆ ರಾಕ್ಷಸನಿಗೆ ಅಧೀನರಾಗಲಿಲ್ಲ. ಆಗ ಆ ದೈತ್ಯನು ಇಂತೆಂದು ಯೋಚಿಸಿದನು.

ಹೃತಾಧಿಕಾರಾಸ್ತ್ರಿದಶಾ ಮಯಾ ಯದ್ಯಪಿ ನಿರ್ಜಿತಾಃ ।
ಲಕ್ಷ್ಯಂತೇ ಬಲಯುಕ್ತಾಸ್ತೇ ಕರಣೀಯಂ ಮಮಾತ್ರ ಕಿಂ ॥ ೯ ॥

ಅದ್ಯ ಜ್ಞಾತಂ ಮಯಾ ದೇವಾ ವೇದಮಂತ್ರಬಲಾನ್ವಿತಾಃ ।
ತಾನ್ ಹರಿಷ್ಯೇ ತತಸ್ಸರ್ವೇ ಬಲಹೀನಾ ಭವಂತಿ ಹಿ ॥ ೧೦ ॥

ಇತಿ ಮತ್ವಾ ತತೋ ದೈತ್ಯೋ ವಿಷ್ಣುಮಾಲಕ್ಷ್ಯ ನಿದ್ರಿತಂ ।
ಸತ್ಯಲೋಕಾಜ್ಜಹಾರಾಶು ವೇದಾನಾದಿಸ್ವಯಂಭುವಃ ॥ ೧೧ ॥

ನೀತಾಸ್ತು ತೇನ ತೇ ವೇದಾಸ್ತದ್ಭಯಾತ್ತೇ ನಿರಾಕ್ರಮನ್ ।
ತೋಯಾನಿ ವಿವಿಶುಸ್ತತ್ರ ಯಜ್ಞಮಂತ್ರಸಮನ್ವಿತಾಃ ॥ ೧೨ ॥

ತಾನ್ಮಾರ್ಗಮಾಣಶ್ಶಂಖೋಽಪಿ ಸಮುದ್ರಾನ್ತರ್ಗತೋ ಭ್ರಮನ್ ।
ಸ ದದರ್ಶ ತತೋ ದೈತ್ಯಃ ಕ್ವಚಿದೇಕತ್ರ ಸಂಸ್ಥಿತಾನ್ ॥ ೧೩ ॥

---

೯. ನಾನು ದೇವತೆಗಳನ್ನು ಜಯಿಸಿ ಅವರ ಅಧಿಕಾರವನ್ನು ಕಿತ್ತು ಕೊಂಡೆನು. ಆದರೂ ಅವರು ಬಲಿಷ್ಠರಾಗಿಯೇ ಇದ್ದಾರೆ. ಇದರ ವಿಷಯದಲ್ಲಿ ಈಗ ಏನುಮಾಡಲಿ ?

೧೦. ಓಹೋ ! ಈಗ ತಿಳಿಯಿತು. ದೇವತೆಗಳು ವೇದಮಂತ್ರಗಳ ಬಲದಿಂದ ಕೂಡಿಕೊಂಡಿರುವುದರಿಂದ ಅವರ ಬಲವು ಕುಗ್ಗಿಲ್ಲ. ಅವೆಲ್ಲವನ್ನೂ ತೆಗೆದುಕೊಂಡು ಬರುತ್ತೇನೆ. ಅನಂತರ ಅವರ ಬಲವೆಲ್ಲವೂ ಹೋಗುತ್ತದೆ.

೧೧. ಆ ದೈತ್ಯನು ಹೀಗೆಂದು ಯೋಚಿಸಿ ವಿಷ್ಣುವು ಮಲಗಿ ನಿದ್ರಿಸುತ್ತಿರುವುದನ್ನು ತಿಳಿದು ಸತ್ಯಲೋಕಕ್ಕೆ ಹೋಗಿ ಬ್ರಹ್ಮನಿಂದ ಆ ವೇದಗಳನ್ನು ಅಪಹರಿಸಿಕೊಂಡೇ ತಂದನು.

೧೨. ಆ ವೇದಗಳು ಕೂಡ ಅವನು ತೆಗೆದುಕೊಂಡು ಹೋದಮೇಲೆ ಅವನ ಭಯದಿಂದ ತನ್ನ ಪರಾಕ್ರಮವನ್ನು ತೋರಿಸಲಾರದೆ ನೀರನ್ನು ಹೊಕ್ಕುವು.

೧೩. ಆ ಶಂಖನು ಸಮುದ್ರದೊಳಕ್ಕೂ ನುಗ್ಗಿ ಆ ವೇದಗಳನ್ನು ಹುಡುಕಲು ಅವು ಅಲ್ಲಿ ಒಂದೊಂದು ಭಾಗವು ಒಂದೊಂದು ಕಡೆ ಇದ್ದುವೇ ಹೊರತು ಒಂದು ಜಾಗದಲ್ಲಿಯೂ ಒಟ್ಟಿಗೆ ಸೇರಿ ಸಿಕ್ಕಲೇ ಇಲ್ಲ.

**ಅಥ ಬ್ರಹ್ಮಾ ಸುರೈಸ್ಸಾರ್ಧಂ ವಿಷ್ಣುಂ ಶರಣಮನ್ವಯಾತ್ ।**
**ಪೂಜೋಪಕರಣಾನ್ಗೃಹ್ಯ ವೈಕುಂಠಭವನಂ ಗತಃ ॥ ೧೪ ॥**

**ತತ್ರ ತಸ್ಯ ಪ್ರಬೋಧಾಯ ಗೀತವಾದ್ಯಾದಿಕಾಃ ಕ್ರಿಯಾಃ ।**
**ಚಕ್ರುರ್ದೇವಾ ಗಂಧಪುಷ್ಪಧೂಪದೀಪಾನ್ಮುಹುರ್ಮುಹುಃ ॥ ೧೫ ॥**

**ಅಥ ಪ್ರಬುದ್ಧೋ ಭಗವಾಂಸ್ತದ್ಭಕ್ತಿಪರಿತೋಷಿತಃ ।**
**ದದೃಶೇ ತೈಸ್ಸುರೈಸ್ತತ್ರ ಸಹಸ್ರಾರ್ಕಸಮದ್ಯುತಿಃ ॥ ೧೬ ॥**

**ಉಪಚಾರೈಷ್ಷೋಡಶಭಿಃ ಸಂಪೂಜ್ಯ ತ್ರಿದಶಾಸ್ತದಾ ।**
**ದಂಡವತ್ಪತಿತಾ ಭೂಮೌ ತಾನುವಾಚಾಥ ಮಾಧವಃ ॥ ೧೭ ॥**

**॥ ವಿಷ್ಣುರುವಾಚ ॥**

**ವರದೋಽಹಂ ಸುರಗಣಾ ಗೀತವಾದ್ಯಾದಿಮಂಗಳೈಃ ।**
**ಮನೋಽಭಿಲಷಿತಾನ್ಕಾಮಾನ್ಸರ್ವಾನೇವ ದದಾಮಿ ವಃ ॥ ೧೮ ॥**

---

೧೪. ಅನಂತರ ಬ್ರಹ್ಮನು ದೇವತೆಗಳನ್ನು ಕರೆದುಕೊಂಡು ಪೂಜಾಸಾಮಗ್ರಿಗಳನ್ನು ತೆಗೆದುಕೊಂಡು ವಿಷ್ಣುವನ್ನು ಶರಣು ಹೊಂದಲು ವೈಕುಂಠಕ್ಕೆ ಹೋದನು.

೧೫. ಅಲ್ಲಿ ಆ ಸ್ವಾಮಿಯನ್ನು ಎಚ್ಚರಗೊಳಿಸಲು ಆ ದೇವತೆಗಳು ಗೀತವಾದ್ಯ ಮುಂತಾದುವನ್ನು ಮಾಡಿ ಗಂಧ, ದೂಪ, ದೀಪಗಳನ್ನು ಆಗಾಗ್ಗೆ ಸಮರ್ಪಿಸುತ್ತಿದ್ದರು.

೧೬. ಅನಂತರ ಸಾವಿರ ಸೂರ್ಯರಂತೆ ಕಾಂತಿಯುಳ್ಳ ಆ ಸ್ವಾಮಿಯು ಎಚ್ಚರಗೊಂಡು ಆ ದೇವತೆಗಳ ಭಕ್ತಿಯಿಂದ ಸಂತೋಷಗೊಂಡುದನ್ನು ಅವರು ತಿಳಿದರು.

೧೭ ಆಗ ದೇವತೆಗಳು ಆ ಸ್ವಾಮಿಯುನ್ನು ಷೋಡಶೋಪಚಾರಗಳಿಂದ ಪೂಜಿಸಿ ಸಾಷ್ಟಾಂಗ ನಮಸ್ಕಾರ ಮಾಡಲು ಆ ಮಾಧವನು ಅವರನ್ನು ಕುರಿತು ಇಂತೆಂದನು.

೧೮. ವಿಷ್ಣುವು ಹೇಳಿದನು- ಎಲೈ ದೇವತೆಗಳಿರಾ! ನಿಮ್ಮ ಗೀತವಾದ್ಯ ಗಳಿಂದ ತೃಪ್ತನಾಗಿದ್ದೇನೆ. ವರವನ್ನು ಕೊಡುತ್ತೇನೆ. ನಿಮ್ಮ ಮನಸ್ಸಿನಲ್ಲಿರುವುದನ್ನು ಕೇಳಿಕೊಳ್ಳಿರಿ.

ಇಷಸ್ಯ ಶುಕ್ಲೈಕಾದಶ್ಯಾಂ ಯಾವದುದ್ಬೋಧಿನೀ ಭವೇತ್ ।
ನಿಶಾತುರ್ಯಾಂಶಶೇಷೇ ತು ಗೀತವಾದ್ಯಾದಿಮಂಗಳೈಃ ॥ ೧೯ ॥

ಯೇ ಕುರ್ವಂತಿ ನರಾ ನಿತ್ಯಂ ಭವದ್ಭಿರ್ಯದ್ಯಥಾ ಕೃತಂ ।
ತೇ ಮತ್ಪ್ರೀತಿಕರಾ ನಿತ್ಯಂ ಮತ್ಸಾನ್ನಿಧ್ಯಂ ವ್ರಜಂತಿ ಹಿ ॥ ೨೦ ॥

ಪಾದ್ಯೈರಾಚಮನಾರ್ಘಾದ್ಯೈರ್ಭವದ್ಭಿರ್ಯದ್ಯಥಾ ಕೃತಂ ।
ತದದ್ಭುತಗುಣಂ ತಸ್ಮಾಜ್ಜಾತಂ ವಸ್ಸುಖಕಾರಣಂ ॥ ೨೧ ॥

ವೇದಾಶ್ಶಂಖಹೃತಾಸ್ಸರ್ವೇ ತಿಷ್ಠಂತ್ಯುದಕಸಂಸ್ಥಿತಾಃ ।
ತಾನಾನಯಾಮ್ಯಹಂ ದೇವಾ ಹತ್ವಾ ಸಾಗರನಂದನಂ ॥ ೨೨ ॥

ಅದ್ಯಪ್ರಭೃತಿ ವೇದಾಸ್ತು ಮಂತ್ರಬೀಜಮುಖಾನ್ವಿತಾಃ ।
ಪ್ರತ್ಯಬ್ದಂ ಕಾರ್ತಿಕೇ ಮಾಸಿ ವಿಶ್ರಾಮ್ಯಂತ್ವಪ್ಸು ಸರ್ವದಾ ॥ ೨೩ ॥

---

೧೯–೨೦ ಕಾರ್ತಿಕ ಶುದ್ಧ ಏಕಾದಶಿಯ ದಿವಸ ಉದ್ಬೋಧಿನೀ ಏಕಾದಶಿಯಾಗುತ್ತದೆ. ಆಗ ರಾತ್ರಿಯ ನಾಲ್ಕನೆ ಒಂದು ಭಾಗ ಶೇಷವಾಗಿರುವಾಗ ಗೀತವಾದ್ಯಗಳಿಂದ ನೀವು ನನ್ನನ್ನು ಎಬ್ಬಿಸಿದಂತೆ ಯಾರು ಎಬ್ಬಿಸುತ್ತಾರೆಯೋ ಅವರು ನನ್ನ ಪ್ರೀತಿಗೆ ಅರ್ಹರಾಗಿ ನನ್ನ ಬಳಿಗೆ ಬರುತ್ತಾರೆ.

೨೧. ಈಗ ನೀವು ಮಾಡಿದಂತೆ ಪಾದ್ಯ ಆಚಮನೀಯ ಅರ್ಘ್ಯಗಳನ್ನು ಕೊಟ್ಟರೆ ಅದು ಬಹುವಾದ ಗುಣವನ್ನು ಕೊಟ್ಟು ಸುಖಕಾರಣವಾಗುತ್ತದೆ. ಇದೇನೇ ನಿಮಗೂ ಸುಖಕಾರಣವಾಗಿದೆ.

೨೨. ಶಂಖನು ಕದ್ದುಕೊಂಡ ಆ ವೇದಗಳೆಲ್ಲವೂ ನೀರಿನಲ್ಲಿದ್ದುಕೊಂಡಿವೆ. ಸಾಗರನ ಮಗನಾದ ಆ ಶಂಖನನ್ನು ಕೊಂದು ಆ ವೇದಗಳನ್ನು ತರುತ್ತೇನೆ.

೨೩. ಈ ದಿನದಿಂದ ಮೊದಲುಗೊಂಡು ವೇದಗಳು ಮಂತ್ರಬೀಜಯಾಗಗಳೊಡನೆ ಪ್ರತಿವರ್ಷದಲ್ಲಿಯೂ ಕಾರ್ತಿಕಮಾಸದಲ್ಲಿ ನೀರಿನಲ್ಲಿ ವಿಶ್ರಮಿಸಿಕೊಳ್ಳಲಿ.

ಅದ್ಯಪ್ರಭೃತ್ಯಹಮಪಿ ಭವಾಮಿ ಜಲಮಧ್ಯಗಃ ।
ಭವಂತೋಽಪಿ ಮಯಾ ಸಾರ್ಧಮಾಯಾನ್ತು ಸಮುನೀಶ್ವರಾಃ ॥ ೨೪ ॥

ಕಾಲೇಽಸ್ಮಿನ್ಯೇಽಪ್ರಕುರ್ವಂತಿ ಪ್ರಾತಸ್ಸ್ನಾನಂ ದ್ವಿಜೋತ್ತಮಾಃ ।
ತೇ ಸರ್ವಯಜ್ಞಾವಭೃತ್ಯೈಃ ಸುಸ್ನಾತಾ ಸ್ಯುರ್ನ ಸಂಶಯಃ ॥ ೨೫ ॥

ಯೇ ಕಾರ್ತಿಕವ್ರತಂ ಸಮ್ಯಕ್ಕುರ್ವಂತಿ ಮನುಜಾಸ್ಸದಾ ।
ತೇ ದೇಹಾಂತೆ ತ್ವಯಾ ಶಕ್ರ ಪ್ರಾಪ್ಯಾ ಮದ್ಭವನಂ ಸದಾ ॥ ೨೬ ॥

ವಿಘ್ನೇಭ್ಯೋ ರಕ್ಷಣಂ ತೇಷಾಂ ತ್ವಯಾ ಕಾರ್ಯಂ ತಥಾ ಯಮ ।
ದೇಯಾ ತ್ವಯಾ ಚ ವರುಣ ಪುತ್ರಪೌತ್ರಾದಿಸಂತತಿಃ ॥ ೨೭ ॥

ಧನವೃದ್ಧಿರ್ಧನಾಧ್ಯಕ್ಷ್ಯ ತ್ವಯಾ ಕಾರ್ಯಾ ಮದಾಜ್ಞಯಾ ।
ಮಮ ರೂಪಧರಾಸ್ಸಾಕ್ಷಾಜ್ಜೀವನ್ಮುಕ್ತಾಸ್ತು ತೇ ಯತಃ ॥ ೨೮ ॥

---

೨೪. ಇಂದಿನಿಂದ ಮೊದಲುಗೊಂಡು ನಾನು ನೀರಿನ ಮಧ್ಯದಲ್ಲಿರುತ್ತೇನೆ. ನೀವುಗಳೂ ಮುನೀಶ್ವರರೂ ಕೂಡ ನೀರಿನಲ್ಲಿ ಇರಿರಿ.

೨೫. ಈ ಕಾಲದಲ್ಲಿ ಬೆಳಗ್ಗೆ ಯಾರು ಸ್ನಾನ ಮಾಡುತ್ತಾರೆಯೋ ಅವರು ಎಲ್ಲಾ ಯಜ್ಞಗಳಲ್ಲಿಯೂ, ಅವಭೃತಸ್ನಾನ ಮಾಡಿದಂತೆ ಆಗುತ್ತದೆ. ಸಂಶಯವಿಲ್ಲ.

೨೬. ಯಾವ ಮನುಷ್ಯರು ಕಾರ್ತಿಕ ವ್ರತವನ್ನು ಆಚರಿಸುವರೋ ಅವರು ಮೃತರಾದ ಮೇಲೆ ನನ್ನ ವೈಕುಂಠಕ್ಕೆ ಬರುತ್ತಾರೆ. ಎಲೈ ಇಂದ್ರನೇ! ಅವರನ್ನು ನೀನು ಹಾಗೆ ಕಳುಹಿಸಿಕೊಡಬೇಕು.

೨೭. ಎಲೈ ಯಮನೇ! ಅಂತಹ ಕಾರ್ತೀಕ ವ್ರತ ಮಾಡತಕ್ಕವರಿಗೆ ವಿಘ್ನಗಳು ಬರದಂತೆ ನೀನು ನೋಡಿಕೊಳ್ಳಬೇಕು. ಎಲೈ ವರುಣನೇ! ನೀನು ಅವರಿಗೆ ಪುತ್ರ ಪೌತ್ರ ರೂಪವಾದ ಸಂತತಿಯನ್ನು ಕೊಡಬೇಕು.

೨೮. ಎಲೈ ಕುಬೇರನೇ! ಅಂತಹವರಿಗೆ ಧನವೃದ್ಧಿಯನ್ನು ನೀನು ಮಾಡು. ಅವರೆಲ್ಲರೂ ನನ್ನ ರೂಪವನ್ನೇ ಹೊಂದಿದ ಜೀವನ್ಮುಕ್ತರೆಂದು ತಿಳಿ.

ಆಜನ್ಮಮರಣಾದ್ಯೈಸ್ತು ಕೃತಮೇತದ್ವ್ರತೋತ್ತಮಂ ।
ಯಥೋಕ್ತವಿಧಿನಾ ಸಮ್ಯಕ್ತೇ ಮಾನ್ಯಾ ಭವತಾಮಪಿ ॥ ೨೯ ॥

ಏಕಾದಶ್ಯಾಂ ಯತಶ್ಚಾಹಂ ಭವದ್ಭಿಃ ಪ್ರತಿಬೋಧಿತಃ ।
ಅತಶ್ಚೈಷಾ ತಿಥಿರ್ಮಾನ್ಯಾ ಸಾತೀವ ಪ್ರೀತಿದಾ ಮಮ ॥ ೩೦ ॥

ವ್ರತದ್ವಯಂ ಸಮ್ಯಗಿದಂ ನರೈಃ ಕೃತಂ
ಸಾನ್ನಿಧ್ಯಕೃನ್ಮೇನ ತಥಾನ್ಯದಸ್ತಿ ।
ದಾನಾನಿ ತೀರ್ಥಾನಿ ತಪಾಂಸಿ ಯಜ್ಞಾಃ
ಸ್ವರ್ಲೋಕದಾನ್ಯೇವ ಸದಾ ಸುರೋತ್ತಮಾಃ ॥ ೩೧ ॥

ಇತಿ ಶ್ರೀ ಮಹಾಪುರಾಣೇ ಪಾದ್ಮೇ ಉತ್ತರಖಂಡೇ ಶ್ರೀ ಕೃಷ್ಣ ಸತ್ಯಭಾಮಾ ಸಂವಾದೇ ಕಾರ್ತಿಕ ಮಹಾತ್ಮ್ಯೇ ಕಾರ್ತಿಕಾಧಿಕ್ಯ ವರ್ಣನಂ ನಾಮ ದ್ವಿನವತಿತಮೋಽಧ್ಯಾಯಸ್ಸಮಾಪ್ತಃ

---

೨೯. ಹುಟ್ಟಿದಂದಿನಿಂದ ಸಾಯುವವರೆಗೂ ಈ ಕಾರ್ತಿಕ ವ್ರತವನ್ನು ಯಾರು ಮಾಡುತ್ತಾರೆಯೋ ಅವರನ್ನು ನೀವೂ ಕೂಡ ಸರಿಯಾದ ವಿಧಿಯಿಂದ ಗೌರವಿಸಬೇಕು.

೩೦. ನಾನು ನಿಮ್ಮಿಂದ ಈ ಕಾರ್ತಿಕ ಶುದ್ಧ ಏಕಾದಶಿಯ ದಿನ ಎಬ್ಬಿಸಲ್ಪಟ್ಟೆನಾದುದರಿಂದ ಈ ತಿಥಿಯು ಗೌರವವುಳ್ಳದ್ದಾಗಿ ನನಗೆ ಬಹು ಪ್ರೀತಿಯನ್ನುಂಟುಮಾಡುತ್ತದೆ.

೩೧. ಈ ಎರಡು ವ್ರತಗಳನ್ನು ಯಾವನು ಸರಿಯಾಗಿ ಮಾಡುತ್ತಾನೆಯೋ ಅವನನ್ನು ನನ್ನ ಬಳಿಗೆ ಅವು ಹೊಂದಿಸುತ್ತವೆ. ಈ ರೀತಿಯಾದುದು ಮತ್ತೊಂದಿಲ್ಲ. ದಾನ, ತೀರ್ಥ, ತಪಸ್ಸು, ಯಜ್ಞ ಇವೆಲ್ಲವೂ ಸ್ವರ್ಗವನ್ನು ಮಾತ್ರ ಕೊಡುತ್ತವೆ.

ಇಂತು ಶ್ರೀ ಪದ್ಮಮಹಾಪುರಾಣದ ಉತ್ತರಖಂಡದ ಶ್ರೀ ಕೃಷ್ಣ ಸತ್ಯಭಾಮೆಯರ ಸಂವಾದದ ಕಾರ್ತಿಕ ಮಹಿಮೆಯಲ್ಲಿ ಕಾರ್ತಿಕ ಮಾಸದ ಆಧಿಕ್ಯ ವರ್ಣನ ಎಂಬ ತೊಂಭತ್ತೆರಡನೆಯ ಅಧ್ಯಾಯವು ಮುಗಿದುದು.



|| ಶ್ರೀಃ ||

-X-

# ಅಥ ಶ್ರೀ ಮಹಾಪುರಾಣೇ ಪಾದ್ಮೇ ಉತ್ತರಖಂಡೇ

## || ತ್ರಿನವತಿತಮೋಽಧ್ಯಾಯಃ ||



|| ನಾರದ ಉವಾಚ ||

ಇತ್ಯುಕ್ತ್ವಾ ಭಗವಾನ್ವಿಷ್ಣುಃ ಶಫರೀತುಲ್ಯರೂಪಧೃಕ್ |
ಖಾತ್ಪಪಾತಾಂಜಲೌ ವಿಂಧ್ಯವಾಸಿನಃ ಕಶ್ಯಪಸ್ಯ ಚ || ೧ ||

ಸ ತಂ ಕಮಂಡಲೌ ಸ್ವಸ್ಯ ಕೃಪಯಾ ಕ್ಷಿಪ್ತವಾನ್ಮುನಿಃ |
ತಾವತ್ಸ ನ ಮಮೌ ತತ್ರ ತತಃ ಕೂಪೇ ನ್ಯವೇಶಯತ್ || ೨ ||

ತತ್ರಾಪಿ ಸ ಮಮೌ ತಾವತ್ಕಾಸಾರಂ ಪ್ರಾಪಯತ್ಸ ತಂ |
ಏವಂ ಸ ಸಾಗರೇ ಕ್ಷಿಪ್ತಸ್ತತ್ರ ಸೋಽಪ್ಯಭ್ಯವರ್ಧತ || ೩ ||

---

## ತೊಂಭತ್ತಮೂರನೆಯ ಅಧ್ಯಾಯವು



೧. ನಾರದನು ಹೇಳಿದನು-ಭಗವಂತನಾದ ವಿಷ್ಣುವು ಹೀಗೆಂದು ಹೇಳಿ ಮೀನಿನ ಆಕಾರವನ್ನು ಹೊಂದಿ ವಿಂಧ್ಯಪರ್ವತದಲ್ಲಿ ವಾಸಿಸುತ್ತಿದ್ದ ಕಶ್ಯಪನ ಬೊಗಸೆಗೆ ಅಂತರಿಕ್ಷದಿಂದ ಬಿದ್ದನು.

೨. ಆ ಕಶ್ಯಪನು ಆ ಮೀನನ್ನು ದಯೆಯಿಂದ ಕಮಂಡಲುವಿನೊಳಕ್ಕೆ ಹಾಕಿದನು ಅದು ಹಿಡಿಸಲಿಲ್ಲ. ಅನಂತರ ಬಾವಿಯಲ್ಲಿ ಹಾಕಿದನು.

೩. ಅದರಲ್ಲಿಯೂ ಅದು ಹಿಡಿಸದಿರಲು ಅನಂತರ ಒಂದು ಸರೋವರಕ್ಕೆ ತೆಗೆದುಕೊಂಡು ಹೋದನು. ಅಲ್ಲಿಯೂ ಅದು ಹಿಡಿಸದಿರಲು ಕೊನೆಗೆ ಸಮುದ್ರಕ್ಕೆ ಬಿಟ್ಟನು. ಅಲ್ಲಿ ಅದು ಸುಖವಾಗಿ ಬೆಳೆಯಿತು.

ತತೋಽವಧೀತ್ಸತಂ ಶಂಖಂ ವಿಷ್ಣುರ್ಮತ್ಸ್ಯಸ್ವರೂಪಧೃಕ್ ।
ಅಥ ತಂ ಸ್ವಕರೇ ಕೃತ್ವಾ ಬದರೀವನಮಾವಿಶತ್ ।
ತತ್ರಾಹೂಯ ಋಷೀನ್ಸರ್ವಾನಿದಮಾಜ್ಞಾಪಯತ್ಪ್ರಭುಃ ॥ ೪ ॥

॥ ಶ್ರೀ ವಿಷ್ಣುರುವಾಚ ॥

ಜಲಾಂತರವಿಶೀರ್ಣಾಂಸ್ತು ಯೂಯಂ ವೇದಾನ್ಸಮಾರ್ಗತ ।
ಆನಯಧ್ವಂ ಚ ತ್ವರಿತಾಃ ಸರಹಸ್ಯಾಞ್ಜಲಾಂತರಾತ್ ।
ತಾವತ್ಪ್ರಯಾಗೇ ತಿಷ್ಠಾಮಿ ದೇವತಾಗಣಸಂವೃತಃ ॥ ೫ ॥

॥ ನಾರದ ಉವಾಚ ॥

ತತಸ್ತೈಸ್ಸರ್ವಮುನಿಭಿಃ ತೇಜೋಬಲಸಮನ್ವಿತೈಃ ।
ಉದ್ಧಾರಿತಾಸ್ಸಬೀಜಾಸ್ತೇ ವೇದಾ ಯಜ್ಞಸಮನ್ವಿತಾಃ ॥ ೬ ॥

ತೇಷು ಯಾವನ್ಮಿತಂ ಯೇನ ಲಬ್ಧಂ ತಾವನ್ಮಿತಸ್ಯ ಹಿ ।
ಸ ಸ ಏವ ಋಷಿರ್ಜಾತಃ ತದಾಪ್ರಭೃತಿ ಪಾರ್ಥಿವ ॥ ೭ ॥

---

೪. ಈ ರೀತಿಯಾಗಿ ಮೀನಿನ ಆಕಾರವನ್ನು ಹೊಂದಿ ಸಮುದ್ರವನ್ನು ಹೊಕ್ಕ ವಿಷ್ಣುವು ಆ ಶಂಖನೆಂಬ ದೈತ್ಯನನ್ನು ಕೊಂದನು. ಆಮೇಲೆ ಆ ದೈತ್ಯನನ್ನು ಹಿಡಿದುಕೊಂಡು ಬದರಿಕಾ (ಯಗಚಿ) ವನಕ್ಕೆ ಬಂದನು. ಅಲ್ಲಿ ಋಷಿಗಳೆಲ್ಲರನ್ನೂ ಕರೆದು ಈ ರೀತಿಯಾಗಿ ಆಜ್ಞಾಪಿಸಿದನು.

೫. ಶ್ರೀ ವಿಷ್ಣುವು ಹೇಳಿದನು-ಎಲೈ ಋಷಿಗಳಿರ! ನೀವು ನೀರಿನೊಳಗಿರುವ ವೇದಗಳನ್ನೆಲ್ಲಾ ಹುಡುಕಿ ತನ್ನಿರಿ. ಅದುವರೆಗೂ ನಾನು ದೇವತೆಗಳೊಡನೆ ಈ ಪ್ರಯಾಗದಲ್ಲಿರುತ್ತೇನೆ.

೬. ನಾರದನು ಹೇಳಿದನು–ಅನಂತರ ತೇಜೋಬಲದಿಂದ ಕೂಡಿದ ಆ ಮುನಿಗಳು ಯಜ್ಞದೊಡನೆ ಕೂಡಿರುವ ವೇದಗಳನ್ನೂ ಬೀಜಮಂತ್ರಗಳನ್ನೂ ಎತ್ತಿ ತಂದರು.

೭. ಅದರಲ್ಲಿ ಯಾರು ಯಾರಿಗೆ ಎಷ್ಟೆಷ್ಟು ಸಿಕ್ಕಿತೋ ಅವರವರು ಅಷ್ಟಷ್ಟನ್ನು ತಂದರು. ಅವರವರು ತಂದುದಕ್ಕೆ ಅವರವರೇ ಋಷಿಗಳಾದರು

ಅಥ ಸರ್ವೇಽಪಿ ಸಂಗಮ್ಯ ಪ್ರಯಾಗಂ ಮುನಿಯೋ ಯಯುಃ ।
ವಿಷ್ಣವೇ ಸವಿಧಾತ್ರೇ ತೇ ಲಬ್ಧಾನ್ವೇದಾನ್ನ್ಯವೇದಯನ್ ॥ ೮ ॥

ಲಬ್ಧ್ವಾ ವೇದಾನ್ಸಯಜ್ಞಾಂಸ್ತು ಬ್ರಹ್ಮಾ ಹರ್ಷಸಮನ್ವಿತಃ ।
ಅಯಜದ್ವಾಜಿಮೇಧೇನ ದೇವರ್ಷಿಗಣಸಂವೃತಃ ॥ ೯ ॥

ಯಜ್ಞಾಂತೇ ದೇವಗಂಧರ್ವಯಕ್ಷಕಿನ್ನರಗುಹ್ಯಕಾಃ ।
ನಿಪತ್ಯ ದಂಡವದ್ಭೂಮೌ ವಿಜ್ಞಪ್ತಿಂ ಚಕ್ರುರಂಜಸಾ ॥ ೧೦ ॥

॥ ದೇವಾ ಊಚುಃ ॥

ದೇವದೇವ ಜಗನ್ನಾಥ ವಿಜ್ಞಪ್ತಿಂ ಶೃಣು ನಃ ಪ್ರಭೋ ।
ಹರ್ಷಕಾಲೋಽಯಮಸ್ಮಾಕಂ ತಸ್ಮಾತ್ತ್ವಂ ವರದೋ ಭವ ॥ ೧೧ ॥

ಸ್ಥಾನೇಽಸ್ಮಿನ್ದ್ರುಹಿಣೋ ವೇದಾ್ ವಿನಷ್ಟಾನ್ಪ್ರಾಪಯತ್ಸ್ವಯಂ ।
ಯಜ್ಞಭಾಗಾನ್ವಯಂ ಪ್ರಾಪ್ತಾಃ ತ್ವತ್ಪ್ರಸಾದಾದ್ರಮಾಪತೇ ॥ ೧೨ ॥

---

೮. ಅನಂತರ ಆ ಋಷಿಗಳೆಲ್ಲರೂ ಸೇರಿಕೊಂಡು ಪ್ರಯಾಗಕ್ಕೆ ಹೋಗಿ ವಿಷ್ಣುವಿಗೂ ಬ್ರಹ್ಮನಿಗೂ ಅವೆಲ್ಲವನ್ನೂ ಒಪ್ಪಿಸಿದರು.

೯. ಆ ವೇದಗಳನ್ನು ಹೊಂದಿ ಬ್ರಹ್ಮನು ಹರ್ಷದಿಂದ ಋಷಿಗಳೊಡನೆ ಅಶ್ವಮೇಧಯಾಗವನ್ನು ಮಾಡಿದನು.

೧೦. ಆ ಯಾಗವು ಮುಗಿಯುತ್ತಲೂ ದೇವತೆಗಳ, ಗಂಧರ್ವರು, ಯಕ್ಷರು, ಕಿನ್ನರರು, ಗುಹ್ಯಕರು ಎಲ್ಲರೂ ಭೂಮಿಯಲ್ಲಿ ಸಾಷ್ಟಾಂಗ ನಮಸ್ಕಾರವನ್ನು ಮಾಡಿ ಆ ಸ್ವಾಮಿಗೆ ವಿಜ್ಞಾಪಿಸಿಕೊಂಡರು.

೧೧. ದೇವತೆಗಳು ಹೇಳಿದರು–ದೇವದೇವನೂ ಜಗನ್ನಾಥನೂ ಆದ ವಿಷ್ಣುವೇ! ನಮ್ಮ ವಿಜ್ಞಾಪನೆಯನ್ನು ಕೇಳು. ನಮ್ಮಗಳಿಗೆ ಇದು ಹರ್ಷಕಾಲವು. ಆದ್ದರಿಂದ ವರವನ್ನು ಕೊಡು.

೧೨. ಈ ಜಾಗದಲ್ಲಿ ಬ್ರಹ್ಮನು ನಷ್ಟವಾಗಿದ್ದ ವೇದಗಳನ್ನೆಲ್ಲವನ್ನೂ ಹೊಂದಿದನು. ನಮಗೆ ಯಜ್ಞದಲ್ಲಿ ಭಾಗವೂ ಸಿಕ್ಕಿತು. ನಿನ್ನ ಅನುಗ್ರಹದಿಂದ ಇವೆಲ್ಲವೂ ಆದುವು.

ಸ್ಥಾನಮೇತದತಶ್ಶ್ರೇಷ್ಠಂ ಪೃಥಿವ್ಯಾಂ ಪುಣ್ಯವರ್ಧನಂ ।
ಭುಕ್ತಿಮುಕ್ತಿಪ್ರದಂ ಚಾಸ್ತು ಪ್ರಸಾದಾದ್ಭವತಸ್ಸದಾ ॥ ೧೩ ॥

ಕಾಲೋಪ್ಯಯಂ ಮಹಾಪುಣ್ಯೋ ಬ್ರಹ್ಮಘ್ನಾದಿವಿಶುದ್ಧಿಕೃತ್ ।
ದತ್ತಾಕ್ಷಯಕರಶ್ಚಾಸ್ತು ವರಮೇನಂ ದದಸ್ವ ನಃ ॥ ೧೪ ॥

॥ ಶ್ರೀ ವಿಷ್ಣುರುವಾಚ ॥

ಮಮಾಪ್ಯೇತನ್ಮತಂ ದೇವಾ ಯದ್ಭವದ್ಭಿರುದಾಹೃತಂ ।
ತತ್ತಥಾಸ್ತು ಲಭತ್ವೇತದ್ಬ್ರಹ್ಮಕ್ಷೇತ್ರಮಿತಿಪ್ರಥಾಂ ॥ ೧೫ ॥

ಸೂರ್ಯವಂಶೋದ್ಭವೋ ರಾಜಾ ಗಂಗಾಮತ್ರಾನಯಿಷ್ಯತಿ ।
ಸಾ ಸೂರ್ಯಕನ್ಯಯಾ ಚಾತ್ರ ಕಾಳಿಂದ್ಯಾ ವೈ ಸಮೇಷ್ಯತಿ ॥ ೧೬ ॥

ಯೂಯಂ ಚ ಸರ್ವೇ ಬ್ರಹ್ಮಾದ್ಯಾ ಸಿವಸಧ್ವಂ ಮಯಾ ಸಹ ।
ತೀರ್ಥರಾಜೇತಿ ವಿಖ್ಯಾತಂ ತೀರ್ಥಮೇತದ್ಭವಿಷ್ಯತಿ ॥ ೧೭ ॥

---

೧೩. ಆದ್ದರಿಂದ ಈ ಜಾಗವು ಶ್ರೇಷ್ಠವಾದುದೂ, ಭೂಮಿಯಲ್ಲಿ ಪುಣ್ಯವನ್ನು ಹೆಚ್ಚಿಸತಕ್ಕದೂ, ಭುಕ್ತಿ ಮುಕ್ತಿಗಳನ್ನು ಕೊಡತಕ್ಕದೂ ಕೂಡ ನಿನ್ನ ಅನುಗ್ರಹದಿಂದಾಗಲಿ.

೧೪. ಈ ಕಾಲವೂ ಕೂಡ ಮಹಾ ಪುಣ್ಯಪ್ರದವೂ, ಬ್ರಹ್ಮಹತ್ಯೆ ಮಾಡಿದವರನ್ನು ಶುದ್ಧಿಮಾಡುವುದೂ, ದಾನದಮಾಡಿದುದೂ, ಅಕ್ಷಯಕರವೂ ಆಗಲಿ. ಈ ವರವನ್ನು ನಮಗೆ ಕೊಡು.

೧೫. ಶ್ರೀ ವಿಷ್ಣುವು ಹೇಳಿದನು–ಎಲೈ ದೇವತೆಗಳಿರ! ನನಗೂ ನೀವು ಹೇಳಿದ ಇದು ಇಷ್ಟವಾಗಿಯೇ ಇದೆ. ಹಾಗೆಯೇ ಆಗಲಿ. ಈ ಕ್ಷೇತ್ರವು ಬ್ರಹ್ಮಕ್ಷೇತ್ರವೆಂಬ ಹೆಸರನ್ನು ಹೊಂದಲಿ.

೧೬. ಸೂರ್ಯವಂಶದ ರಾಜನು ಗಂಗೆಯನ್ನು ಇಲ್ಲಿಗೆ ತರುತ್ತಾನೆ. ಆ ಗಂಗೆಯು ಸೂರ್ಯಪುತ್ರಿಯಾದ ಯಮುನೆಯೊಡನೆ ಇಲ್ಲಿ ಸೇರುತ್ತಾಳೆ.

೧೭. ಬ್ರಹ್ಮನೇ ಮುಂತಾದ ನೀವೆಲ್ಲರೂ ಇಲ್ಲಿ ನನ್ನೊಡನೆ ವಾಸಿಸಿರಿ ಈ ಜಾಗವು ತೀರ್ಥರಾಜನೆಂದು ಪ್ರಖ್ಯಾತಿಯನ್ನು ಹೊಂದುತ್ತದೆ.

ದಾನಂ ವ್ರತಂ ತಪೋ ಹೋಮೋ ಜಪಪೂಜಾದಿಕಾಃ ಕ್ರಿಯಾಃ ।
ಅನಂತಫಲದಾಸ್ಸಂತು ಮತ್ಸಾನ್ನಿಧ್ಯಕರಾಸ್ಸದಾ ॥ ೧೮ ॥

ಬ್ರಹ್ಮಹತ್ಯಾದಿಪಾಪಾನಿ ಸಪ್ತಜನ್ಮಾರ್ಜಿತಾನ್ಯಪಿ ।
ದರ್ಶನಾದಸ್ಯ ತೀರ್ಥಸ್ಯ ವಿನಾಶಂ ಯಾಂತು ತತ್‌ಕ್ಷಣಾತ್ ॥ ೧೯ ॥

ದೇಹತ್ಯಾಗಂ ತಥಾ ಧೀರಾಃ ಕುರ್ವಂತಿ ಮಮ ಸನ್ನಿಧೌ ।
ಮತ್ತನುಂ ಪ್ರವಿಶಂತ್ಯೇವ ನ ಪುನರ್ಜನ್ಮಿನೋ ನರಾಃ ॥ ೨೦ ॥

ಪಿತೄನುದ್ದಿಶ್ಯ ಯೇ ಶ್ರಾದ್ಧಂ ಕುರ್ವಂತ್ಯತ್ರ ಮಮಾಗ್ರತಃ ।
ತೇಷಾಂ ಪಿತೃಗಣಾಸ್ಸರ್ವೇ ಯಾಂತು ತೇ ಮತ್ಸಲೋಕತಾಂ ॥ ೨೧ ॥

ಕಾಲೋಽಪ್ಯೇಷ ಮಹಾಪುಣ್ಯಃ ಫಲದೋಽಸ್ತು ಸದಾ ನೃಣಾಂ ।
ಸೂರ್ಯೇ ಮಕರಗೇ ಪ್ರಾತಃ ಸ್ನಾಯಿನಾಂ ಪಾಪನಾಶನಃ ॥ ೨೨ ॥

---

೧೮. ದಾನ, ವ್ರತ, ತಪಸ್ಸು, ಹೋಮ, ಜಪ, ಪೂಜೆ ಮುಂತಾದ ಕ್ರಿಯೆಗಳನ್ನು ಇಲ್ಲಿ ಮಾಡಿದರೆ ಅವು ಅನಂತ ಫಲಗಳನ್ನು ಕೊಡಲಿ. ಮತ್ತು ನನ್ನ ಜಾಗವನ್ನೂ ಕೊಡಲಿ.

೧೯. ಏಳು ಏಳು ಜನ್ಮದ ಹಿಂದಿನದಾದ ಬ್ರಹ್ಮಹತ್ಯೆಗಳಾದರೂ ಈ ತೀರ್ಥವನ್ನು ನೋಡಿದ ಕೂಡಲೇ ನಾಶವಾಗಲಿ.

೨೦. ಯಾರು ಈ ನನ್ನ ಸನ್ನಿಧಿಯಲ್ಲಿ ದೇಹತ್ಯಾಗವನ್ನು ಮಾಡುತ್ತಾರೆಯೋ ಅವರು ನನ್ನ ದೇಹದಲ್ಲಿಯೇ ಐಕ್ಯರಾಗುತ್ತಾರೆ. ಮತ್ತೆ ಜನ್ಮವನ್ನು ಹೊಂದುವುದೇ ಇಲ್ಲ.

೨೧. ಇಲ್ಲಿ ನನ್ನ ಎದುರಿನಲ್ಲಿ ಯಾರು ಪಿತೃಗಳನ್ನು ಕುರಿತು ಶ್ರಾದ್ಧವನ್ನು ಮಾಡುತ್ತಾರೆಯೋ ಅವರ ಪಿತೃಗಳು ನನ್ನ ಲೋಕವನ್ನು ಹೊಂದುತ್ತಾರೆ.

೨೨. ಈ ಕಾರ್ತಿಕ ಮಾಸವು ಬಹು ಪುಣ್ಯವಾದ ಕಾಲವು. ಆಗ ಮಾಡಿದ ದಾನಗಳು ಬಹು ಫಲವನ್ನು ಕೊಡುತ್ತವೆ. ಸೂರ್ಯನು ಮಕರ ರಾಶಿಯನ್ನು ಹೊಂದಿರುವಾಗ ಸ್ನಾನ ಮಾಡಿದರೆ ಪಾಪವು ನಾಶವಾಗುತ್ತದೆ.

ಮಕರಸ್ಥೇ ರವೌ ಮಾಘೇ ಪ್ರಾತಸ್ಸ್ನಾನಂ ಪ್ರಕುರ್ವತಾಂ ।
ದರ್ಶನಾದೇವ ಪಾಪಾನಿ ಯಾನ್ತಿ ಸೂರ್ಯಾದ್ಯಥಾ ತಮಃ ॥ ೨೩ ॥

ಸಲೋಕತ್ವಂ ಸಮೀಪತ್ವಂ ಸರೂಪತ್ವಂ ತ್ರಯಂ ಕ್ರಮಾತ್ ।
ನೃಣಾಂ ದಾಸ್ಯಾಮ್ಯಹಂ ಸ್ನಾನೈರ್ಮಾಘೇ ಮಕರಗೇ ರವೌ ॥ ೨೪ ॥

ಯೂಯಂ ಮುನೀಶ್ವರಾಸ್ಸರ್ವೇ ಶೃಣುಧ್ವಂ ವಚನಂ ಮಮ ।
ಬದರೀವನಮಧ್ಯೇಽಹಂ ಸದಾ ತಿಷ್ಠಾಮಿ ಸರ್ವಗಃ ॥ ೨೫ ॥

ಅನ್ಯತ್ರ ದಶಭಿರ್ವರ್ಷೈಸ್ತಪಸಾವಾಪ್ಯತೇ ಫಲಂ ।
ತದತ್ರ ದಿವಸೈಕೇನ ಭವದ್ಭಿಃ ಪ್ರಾಪ್ಯತೇ ಸದಾ ॥ ೨೬ ॥

ಸ್ಥಾನಸ್ಯ ದರ್ಶನಂ ತಸ್ಯ ಯೇ ಕುರ್ವಂತಿ ನರೋತ್ತಮಾಃ ।
ಜೀವನ್ಮುಕ್ತಾಸ್ಸದಾ ತೇ ತು ಪಾಪಂ ನೈವಾವತಿಷ್ಠತಿ ॥ ೨೭ ॥

---

೨೩. ಮಾಘಮಾಸವಾಗಿದ್ದಾಗ ಮಕರರಾಶಿಯಲ್ಲಿ ರವಿಯಿದ್ದರೆ ಆಗ ಪ್ರಾತಃಸ್ನಾನವನ್ನು ಮಾಡಿದರೇನೇ ಸೂರ್ಯನನ್ನು ಕಂಡೊಡನೆಯೇ ಕತ್ತಲೆಯು ಹೋಗುವಂತೆ ಪಾಪವೆಲ್ಲವೂ ಹೋಗುತ್ತವೆ.

೨೪. ಸಲೋಕತ್ವ, ಸಮೀಪತ್ವ, ಸರೂಪತ್ವ, ಈ ಮೂರನ್ನೂ ಕೂಡ ಮಾಘ ಮಕರಗಳು ಸೇರಿರುವಾಗ ಪ್ರಾತಸ್ಸ್ನಾನ ಮಾಡಿದವರಿಗೆ ಕೊಡುತ್ತೇನೆ.

೨೫. ಎಲೈ ಮುನಿಗಳಿರ! ನೀವೆಲ್ಲರೂ ನನ್ನ ಮಾತನ್ನು ಕೇಳಿರಿ ಬದರಿಯ ವನದ ಮಧ್ಯದಲ್ಲಿ ನಾನು ಯಾವಾಗಲೂ ಇರುತ್ತೇನೆ.

೨೬. ಎಲೈ ಋಷಿಗಳಿರಾ! ಬೇರೆಯ ಕಡೆಯಲ್ಲಿ ಹತ್ತು ವರ್ಷಗಳ ಕಾಲ ತಪಸ್ಸನ್ನು ಮಾಡಿದರೆ ಯಾವ ಫಲವನ್ನು ಹೊಂದುತ್ತಾನೆಯೋ ಅ ಫಲವನ್ನು ಇಲ್ಲಿ ಒಂದು ದಿವಸ ತಪಸ್ಸು ಮಾಡಿದರೆ ಹೊಂದುತ್ತಾನೆ.

೨೭. ಈ ಸ್ಥಾನದ ದರ್ಶನವನ್ನು ಯಾರು ಮಾಡುತ್ತಾರೆಯೋ ಅವರೇ ಜೀವನ್ಮುಕ್ತರು. ಅವರಿಗೆ ಪಾಪದ ಲೇಶವಾದರೂ ಇರುವುದಿಲ್ಲ.

|| ನಾರದ ಉವಾಚ ||

ಏವಂ ದೇವಾ೯ ದೇವದೇವಸ್ತದುಕ್ತ್ವಾ
ತತ್ರೈವಾನ್ತರ್ಧಾನಮಾಗಾತ್ಸವೇಧಾಃ ।
ದೇವಾಸ್ಸರ್ವೇಪ್ಯಂಶಕೈಸ್ತತ್ರ
ತಸ್ಥುಶ್ಚಾನ್ತರ್ಧಾನಂ ಪ್ರಾಪುರಿಂದ್ರಾದಯಸ್ತೇ || ೨೮ ||

ಇಮಾಂ ಕಥಾಂ ಯಶ್ಶೃಣಿಯಾನ್ನರೋತ್ತಮೋ
ಯಶ್ಶ್ರಾವಯೇದ್ವಾಪಿ ವಿಶುದ್ಧಚೇತಾಃ ।
ಸ ತೀರ್ಥರಾಜಂ ಬದರೀವನಂ
ಯದ್ಗತ್ವಾಫಲಂ ತತ್ಸಮವಾಪ್ನುಯಾಚ್ಚ || ೨೯ ||

ಇತಿ ಶ್ರೀ ಮಹಾಪುರಾಣೇ ಪಾದ್ಮೇ ಉತ್ತರಖಂಡೇ ಶ್ರೀ ಕೃಷ್ಣ ಸತ್ಯಭಾಮಾ ಸಂವಾದೇ ಕಾರ್ತಿಕ ಮಾಹಾತ್ಮ್ಯೇ ಪ್ರಯಾಗೋತ್ಪತ್ತಿ ಕಥನಂ ನಾಮ ತ್ರಿನವತಿತಮೋಽಧ್ಯಾಯಸ್ಸಮಾಪ್ತಃ

---

೨೮. ನಾರದನು ಹೇಳಿದನು–ಸ್ವಾಮಿಯು ಈ ರೀತಿಯಾಗಿ ದೇವತೆಗಳಿಗೆ ಹೇಳಿ ಹಾಗೆಯೇ ಅಂತರ್ಧಾನನಾದನು. ಇಂದ್ರಾದಿಗಳೆಲ್ಲರೂ ತಮ್ಮ ಅಂಶಗಳಿಂದ ಅಲ್ಲಿಯೇ ನಿಂತರು.

೨೯. ಈ ಕಥೆಯನ್ನು ಶುದ್ಧವಾದ ಮನಸ್ಸಿನಿಂದ ಯಾವನು ಹೇಳುತ್ತಾನೆಯೋ ಯಾವನು ಕೇಳುತ್ತಾನೆಯೋ ಅವನು ತೀರ್ಥರಾಜನಾದ ಬದರೀವನವನ್ನು ಹೊಂದಿದ ಫಲವನ್ನು ಹೊಂದುತ್ತಾನೆ.

ಇಂತು ಶ್ರೀ ಪದ್ಮಮಹಾಪುರಾಣದ ಉತ್ತರಖಂಡದ ಶ್ರೀ ಕೃಷ್ಣ ಸತ್ಯಭಾಮೆಯರ ಸಂವಾದದ ಕಾರ್ತಿಕ ಮಹಿಮೆಯಲ್ಲಿ ಪ್ರಯಾಗೋತ್ಪತ್ತಿ ಕಥನ ಎಂಬ ತೊಂಭತ್ತಮೂರನೆಯ ಅಧ್ಯಾಯವು ಮುಗಿದುದು.



॥ ಶ್ರೀಃ ॥

-X-

# ಅಥ ಶ್ರೀ ಮಹಾಪುರಾಣೇ ಪಾದ್ಮೇ ಉತ್ತರಖಂಡೇ

## ॥ ಚತುರ್ನವತಿತಮೋಽಧ್ಯಾಯಃ ॥



॥ ಪೃಥುರುವಾಚ ॥

ಮಹಾಫಲಂ ತ್ವಯಾ ಪ್ರೋಕ್ತಂ ಮುನೇ ಕಾರ್ತಿಕಮಾಘಯೋಃ ।
ತಯೋಸ್ಸ್ನಾನ ವಿಧಿಂ ಸಮ್ಯಙ್ನಿಯಮಾನಪಿ ನಾರದ ।
ಉದ್ಯಾಪನವಿಧಿಂ ಚೈವ ಯಥಾವದ್ವಕ್ತುಮರ್ಹಸಿ ॥ ೧ ॥

॥ ನಾರದ ಉವಾಚ ॥

ತ್ವಂ ವಿಷ್ಣೋರಂಶಸಂಭೂತೋ ನಾಜ್ಞಾತಂ ವಿದ್ಯತೇ ತವ ।
ತಥಾಪಿ ವದತಸ್ಸಮ್ಯಙ್ಮಾಹಾತ್ಮ್ಯಂ ಶೃಣು ವೈ ಮಹತ್ ॥ ೨ ॥

---

## ತೊಂಭತ್ತನಾಲ್ಕನೆಯ ಅಧ್ಯಾಯವು



೧. ಪೃಥುವು ಹೇಳಿದನು–ಎಲೈ ಋಷಿಯೆ! ಮಾಘ ಕಾರ್ತಿಕ ಮಾಸಗಳ ಫಲವನ್ನು ಹೇಳಿದೆ. ಅವುಗಳ ಸ್ನಾನವಿಧಿಯನ್ನೂ ನಿಯಮಗಳನ್ನೂ ಉದ್ಯಾಪನೆಯ ವಿಧಿಯನ್ನೂ ಕ್ರಮವಾಗಿ ಹೇಳು.

೨. ನಾರದನು ಹೇಳಿದನು–ಎಲೈ ಪೃಥುವೆ! ನೀನು ಪ್ರತ್ಯಕ್ಷನಾದ ವಿಷ್ಣುವಿನ ಅಂಶದಿಂದಲೇ ಹುಟ್ಟಿದ್ದೀಯೆ. ನಿನಗೆ ತಿಳಿಯದಿರುವ ಅಂಶವೇ ಇಲ್ಲ. ಆದರೂ ಹೇಳುತ್ತೇನೆ. ಅವುಗಳ ಮಹಿಮೆಯನ್ನು ಕೇಳು.

ಆಶ್ವಿನಸ್ಯ ತು ಮಾಸಸ್ಯ ಯಾ ಶುಕ್ಲೈಕಾದಶೀ ಭವೇತ್ ।
ಕಾರ್ತಿಕಸ್ಯ ವ್ರತಾನೀಹ ತಸ್ಯಾಂ ಕುರ್ಯಾದತಂದ್ರಿತಃ ॥ ೩ ॥

ರಾತ್ರ್ಯಾಂ ತುರ್ಯಾಂಶಶೇಷಾಯಾಂ ಸಮುತ್ತಿಷ್ಠೇತ್ಸದಾ ವ್ರತೀ ।
ನೈರ್ಋತಾಶಾಂ ವ್ರಜೇದ್ಗ್ರಾಮಾತ್ ಬಹಿಸ್ತೋದಕಭಾಜನಃ ॥ ೪ ॥

ದಿವಾ ಸಂಧ್ಯಾಸು ಕರ್ಣಸ್ಥಬ್ರಹ್ಮಸೂತ್ರ ಉದಙ್ಮುಖಃ ।
ಅಂತರ್ಧಾಯ ತೃಣೈರ್ಭೂಮಿಂ ಶಿರಃ ಪ್ರಾವೃತ್ಯ ವಾಸಸಾ ॥ ೫ ॥

ವಕ್ತ್ರಂ ನಿಯಮ್ಯ ಯತ್ನೇನ ಷ್ಠೀವನೋಚ್ಛ್ವಾಸವರ್ಜಿತಃ ।
ಕುರ್ಯಾನ್ಮೂತ್ರಪುರೀಷೇ ತು ರಾತ್ರೌ ಚೇದ್ದಕ್ಷಿಣಾಮುಖಃ ॥ ೬ ॥

---

೩. ಆಶ್ವಯುಜ ಶುದ್ಧ ಏಕಾದಶಿಯ ದಿವಸ ಕಾರ್ತಿಕದ ವ್ರತಗಳನ್ನು ಚಟುವಟಿಕೆಯಿಂದ ಮಾಡಬೇಕು.

೪. ಆದಿನ ರಾತ್ರಿಯಲ್ಲಿ ನಾಲ್ಕನೆಯ ಯಾಮದಲ್ಲಿ ಮೊದಲೇ ಎದ್ದು ಕೈಯಲ್ಲಿ ನೀರಿನ ತಂಬಿಗೆಯನ್ನು ಹಿಡಿದುಕೊಂಡು ಊರಿನಿಂದ ನೈಋತ್ಯದಿಕ್ಕಿಗೆ ಹೋಗಬೇಕು.

೫–೬. ಹಗಲಿನಲ್ಲಿಯೂ ಸಂಧ್ಯಾಕಾಲಗಳಲ್ಲಿಯೂ ಕಿವಿಗೆ ಯಜ್ಞೋಪವೀತವನ್ನು ಸುತ್ತಿಕೊಂಡು ಉತ್ತರದಿಕ್ಕಿಗೆ ಮುಖಮಾಡಿಕೊಂಡು ತಲೆಗೆ ಬಟ್ಟೆಯನ್ನು ಸುತ್ತಿಕೊಂಡು ನೆಲಕ್ಕೆ ಹುಲ್ಲು ಮುಂತಾದುವುಗಳನ್ನು ಮುಚ್ಚಿ ಬಾಯನ್ನು ಬಿಗಿಯಾಗಿ ಮುಚ್ಚಿಕೊಂಡು ಉಗುಳುವುದು ಉಸಿರು ಬಿಡುವುದು ಕ್ಯಾಕರಿಸುವುದು ಮುಂತಾದುವುಗಳನ್ನು ಮಾಡದೆ ಮೂತ್ರವಿಸರ್ಜನೆಯನ್ನಾಗಲೀ ಮಲವಿಸರ್ಜನೆಯನ್ನಾಗಲೀ ಮಾಡಬೇಕು. ರಾತ್ರಿಯಲ್ಲಾದರೆ ದಕ್ಷಿಣದಿಕ್ಕಿಗೆ ಮುಖಮಾಡಿಕೊಂಡು ಉಳಿದ ನಿಯಮಗಳನ್ನು ಪಾಲಿಸುತ್ತ ಮಲಮೂತ್ರವಿಸರ್ಜನೆಗಳನ್ನು ಮಾಡಬೇಕು.

ಗೃಹೀತಶಿಶ್ನಶ್ಚೋತ್ಥಾಯ ಮೃದ್ಭಿರಭ್ಯುದ್ಧೃತೈರ್ಜಲೈಃ ।
ಗಂಧಲೇಪಕ್ಷಯಕರಂ ಶೌಚಂ ಕುರ್ಯಾದತಂದ್ರಿತಃ ॥ ೭ ॥

ಪಂಚಾಪಾನೇ ದಶೈಕಸ್ಮಿನ್ನುಭಯೋಸ್ಸಪ್ತ ಮೃತ್ತಿಕಾಃ ।
ಏಕಾ ಲಿಂಗೇ ಕರೇ ತಿಸ್ರ ಉಭಯೋರ್ಮೃದ್ದ್ವಯಂ ಸ್ಮೃತಂ ॥ ೮ ॥

ಏತದ್ದ್ವಿತ್ರಿಗುಣಂ ಜ್ಞೇಯಂ ಬ್ರಹ್ಮಚಾರಿವನಸ್ಥಯೋಃ ।
ಯತೇಶ್ಚತುರ್ಗುಣಂ ರಾತ್ರೌ ತದರ್ಧಂ ಶೌಚಮಾಚರೇತ್ ॥ ೯ ॥

ತದರ್ಧಮಪಿ ಮಾರ್ಗಸ್ಥೈಃಸ್ತ್ರೀಶೂದ್ರಾಣಾಂ ತದರ್ಧಕಂ ।
ಶೌಚಕರ್ಮವಿಹೀನಸ್ಯ ಸಮಸ್ತಾ ನಿಷ್ಫಲಾಃ ಕ್ರಿಯಾಃ ॥ ೧೦ ॥

---

೭. ಶಿಶ್ನವನ್ನು ಕೈಯಲ್ಲಿ ಹಿಡಿದುಕೊಂಡು ಎದ್ದು, ತಂಬಿಗೆ ಮುಂತಾದುವುಗಳಲ್ಲಿ ನೀರನ್ನು ತಂದು, ಮಣ್ಣನ್ನು ಹಾಕಿ ವಾಸನೆಯೂ ಲೇಪವೂ (ಅಂಟಿಕೊಂಡಿರುವಿಕೆ) ಹೋಗುವವರೆವಿಗೆ ಬೇಸರ ಪಡದೆ ತೊಳೆದುಕೊಳ್ಳಬೇಕು.

೮. ಅಪಾನಕ್ಕೆ (ಅಂಡಿಗೆ) ಐದು ಸಾರಿ ಮಣ್ಣನ್ನು ಹಾಕಿ ತೊಳೆದುಕೊಳ್ಳಬೇಕು. ಆಮೇಲೆ ಆ ಕೈ ಶುದ್ಧಿಗೋಸ್ಕರ (ಎಡಗೈಗೆ) ಹತ್ತು ಬಾರಿ ಮಣ್ಣನ್ನು ಹಾಕಿ ತೊಳೆದುಕೊಳ್ಳಬೇಕು. ಅನಂತರ ಒಂದೊಂದು ಕೈಗೂ ಏಳೇಳು ಬಾರಿ ಮಣ್ಣನ್ನು ಹಾಕಿ ತೊಳದುಕೊಳ್ಳಬೇಕು. ಲಿಂಗಕ್ಕೆ ಒಂದು ಬಾರಿ ಮಣ್ಣುಹಾಕಿ ತೊಳೆದುಕೊಳ್ಳಬೇಕು. ಎಡಗೈಗೆ ಮೂರು ಬಾರಿ ಹಾಕಿ ತೊಳೆದುಕೊಳ್ಳಬೇಕು. ಅನಂತರ ಎರಡು ಕೈಗಳಿಗೂ ಎರಡೆರಡು ಬಾರಿ ಮಣ್ಣನ್ನು ಹಾಕಿ ತೊಳೆದುಕೊಳ್ಳಬೇಕು.

೯. ಬ್ರಹ್ಮಚಾರಿಗಳಿಗೂ ವಾನಪ್ರಸ್ಥರಿಗೂ ಮೇಲೆ ಹೇಳಿದ ಗೃಹಸ್ಥರ ಎರಡರಷ್ಟೊ ಮೂರರಷ್ಟೊ ಮಾಡಿಕೊಳ್ಳಬೇಕು. ಯತಿಯು ಮೇಲೆ ಹೇಳಿದುದರ ನಾಲ್ಕರಷ್ಟನ್ನು ಮಾಡಿಕೊಳ್ಳಬೇಕು ರಾತ್ರಿಯಲ್ಲಿ ಮೇಲೆ ಹೇಳಿದುದರ ಹಗಲಿನದರಲ್ಲಿ ಅರ್ಧವನ್ನು ಮಾಡಿಕೊಳ್ಳಬೇಕು.

೧೦. ಮಾರ್ಗದಲ್ಲಿ ಪ್ರಯಾಣ ಮಾಡುವವರೂ, ಹೆಂಗಸರೂ, ಶೂದ್ರರೂ ಮೇಲೆ ಹೇಳಿದ ಗೃಹಸ್ಥರ ಶೌಚದಲ್ಲಿ ಅರ್ಧವನ್ನು ಮಾಡಿಕೊಳ್ಳಬೇಕು. ಶೌಚ ಕರ್ಮವನ್ನು ಮಾಡಿಕೊಳ್ಳದವನು ಮಾಡಿದ ಕೆಲಸಗಳೆಲ್ಲವೂ ಫಲವಿಲ್ಲದೆ ಹೋಗುತ್ತವೆ.

ಮುಖಶುದ್ಧಿ ವಿಹೀನಸ್ಯ ನ ಮಂತ್ರಾಃ ಫಲದಾಯಕಾಃ ।
ದಂತಜಿಹ್ವಾವಿಶುದ್ಧಿಂ ಚ ತಸ್ಮಾತ್ಕುರ್ಯಾತ್ಪ್ರಯತ್ನತಃ ॥ ೧೧ ॥

ಆಯುರ್ಬಲಂ ಯಶೋ ವರ್ಚಃ ಪ್ರಜಾಃ ಪಶು ವಸೂನಿ ಚ ।
ಬ್ರಹ್ಮಪ್ರಜ್ಞಾಂ ಚ ಮೇಧಾಂ ಚ ತ್ವನ್ನೋ ದೇಹಿ ವನಸ್ಪತೇ ॥ ೧೨ ॥

ಅನ್ನಾದ್ಯಾ ಯಜ್ಞವ್ಯೂಹಃ ಓಂ ಸೋಮೋ ರಾಜಾಯಮಾಗತಃ ।
ಸ ಮೇ ಮುಖಂ ಪ್ರಮಾರ್ಕ್ಷ್ಯಂ ತೇ ಯಶಸಾ ಚ ಭಗೇನ ಚ ॥ ೧೩ ॥

ಇಮಂ ಮಂತ್ರಂ ಸಮುಚ್ಚಾರ್ಯ ದ್ವಾದಶಾಂಗುಲಯಾ ಗೃಹೀ ।
ಸಮಿಧಾ ಕ್ಷೀರವೃಕ್ಷಸ್ಯ ಕ್ಷಯಾಹೋಪೋಷಣಂ ವಿನಾ ॥ ೧೪ ॥

ಪ್ರತಿಪದ್ದರ್ಶನವಮೀಷಷ್ಠೀಷ್ವರ್ಕದಿನೇ ತಥಾ ।
ಚಂದ್ರಸೂರ್ಯೋಪರಾಗೇ ಚ ನ ಕುರ್ಯಾದ್ದಂತಧಾವನಂ ॥ ೧೫ ॥

---

೧೧. ಮುಖಶುದ್ಧಿಮಾಡಿಕೊಳ್ಳದವನಿಗೆ ಮಂತ್ರಗಳೊಂದೂ ಫಲವನ್ನು ಕೊಡುವುದಿಲ್ಲ. ಆದ್ದರಿಂದ ಹಲ್ಲುಗಳನ್ನೂ, ನಾಲಗೆಯನ್ನೂ ಪ್ರಯತ್ನಪಟ್ಟು ಶುದ್ಧಿಮಾಡಿಕೊಳ್ಳಬೇಕು.

೧೨. ಆಯಸ್ಸು, ಬಲ, ಯಶಸ್ಸು, ವರ್ಚಸ್ಸು, ಪ್ರಜೆಗಳು, ಪಶುಗಳು, ಹಣಗಳು, ಬ್ರಹ್ಮಪ್ರಜ್ಞೆ, ಮೇಧೆ ಇವೆಲ್ಲವನ್ನೂ ಎಲೈ ವನಸ್ಪತಿಯೇ ನನಗೆ ಕೊಡು. ಎಂದು ವನಸ್ಪತಿಯನ್ನು ಬೇಡಿಕೊಳ್ಳಬೇಕು.

೧೩. ಅನ್ನಾದಿಗಳೇ ಯಜ್ಞದ ಗುಂಪುಗಳು. ಸೋಮನೇ ಅವೆಲ್ಲವೂ ಆಗಿರುವನು. ಅವನೇ ಅವೆಲ್ಲಕ್ಕೂ ರಾಜನು. ಅವನು ಬಂದನು. ಆ ಸೋಮನು ತನ್ನ ಯಶಸ್ಸಿನಿಂದಲೂ, ಮಹಿಮೆಯಿಂದಲೂ, ನನ್ನ ಮುಖವನ್ನು ಶುದ್ಧಿಮಾಡಲಿ.

೧೪. ಗೃಹಸ್ಥನು ಈ ಮಂತ್ರವನ್ನು ಉಚ್ಚರಿಸಿ ಹಾಲು ಬರುವ ಮರದ ಸಮಿತ್ತನ್ನು ಹನ್ನೆರಡಂಗುಲದಷ್ಟು ಉದ್ದವಾಗಿ ತೆಗೆದುಕೊಂಡು ಹಲ್ಲನ್ನು ತಿಕ್ಕಿಕೊಳ್ಳಬೇಕು. ಕ್ಷಯಾಹ (ಸೂತಕ) ಉಪವಾಸಗಳಲ್ಲಿ ಇವುಗಳಿಂದ ತಿಕ್ಕಬಾರದು.

೧೫. ಪಾಡ್ಯ, ಅಮಾವಾಸ್ಯೆ, ನವಮೀ, ಷಷ್ಠಿ, ಸಪ್ತಮಿ, ಚಂದ್ರ ಸೂರ್ಯಗ್ರಹಣ ಇಂತಹ ದಿವಸಗಳಲ್ಲಿ ಹಲ್ಲನ್ನು ಉಜ್ಜಬಾರದು.

ಉಪವಾಸೇ ತಥಾ ಶ್ರಾದ್ಧೇ ನ ಕುರ್ಯಾದ್ದಂತಧಾವನಂ ।
ಅಪಾಂ ದ್ವಾದಶಗಂಡೂಷೈರ್ಮುಖಶುದ್ಧಿರ್ವಿಧೀಯತೇ ॥ ೧೬ ॥

ಕಂಟಕೀವೃಕ್ಷಕಾರ್ಪಾಸನಿರ್ಗುಂಡೀಬ್ರಹ್ಮವೃಕ್ಷಕಾನ್ ।
ವಟೈರಂಡವಿಗಂಧಾದ್ಯಾನ್ವರ್ಜಯೇದ್ದಂತಧಾವನೇ ॥ ೧೭ ॥

ತತೋ ವಿಷ್ಣೋಃಶ್ಶಿವಸ್ಯಾಪಿ ಗೃಹಂ ಗಚ್ಛೇತ್ಪ್ರಸನ್ನಧೀಃ ।
ಗಂಧಪುಷ್ಪಂ ಸತಾಂಬೂಲಂ ಗೃಹೀತ್ವಾ ಭಕ್ತಿತತ್ಪರಃ ॥ ೧೮ ॥

ತತ್ರ ದೇವಸ್ಯ ಪಾದ್ಯಾರ್ಘ್ಯಾದ್ಯುಪಚಾರಾನ್ಪೃಥಕ್ ಪೃಥಕ್ ।
ಕೃತ್ವಾ ಸ್ತುತ್ವಾ ಪುನರ್ನತ್ವಾ ಕುರ್ಯಾದ್ಗೀತಾದಿಮಂಗಳಂ ॥ ೧೯ ॥

ತಾಳವೇಣುಮೃದಂಗಾದಿಧ್ವನಿಯುಕ್ತಂ ಸನರ್ತಕಾನ್ ।
ಪುಷ್ಪಧೂಪೈಸ್ಸತಾಂಬೂಲೈರ್ಗಾಯಕಾನಪಿ ಚಾರ್ಚಯೇತ್ ॥ ೨೦ ॥

---

೧೬. ಉಪವಾಸದ ದಿನ ಶ್ರಾದ್ಧದ ದಿನಗಳಲ್ಲಿ ಹಲ್ಲನ್ನು ಉಜ್ಜಿಕೊಳ್ಳಬಾರದು. ಆ ದಿನಗಳಲ್ಲಿ ಹನ್ನೆರಡು ಬಾರಿ ನೀರಿನಿಂದ ಬಾಯನ್ನು ಮುಕ್ಕಳಿಸಿದರೆ ಬಾಯಿಯು ಶುದ್ಧಿಯಾಗುತ್ತದೆ.

೧೭. ಮುಳ್ಳಿನಮರ, ಹತ್ತಿಮರ, ಲಕ್ಕಿ, ಅರಳಿ, ಆಲ, ಹರಳು, ವಾಸನೆಯಿಲ್ಲದ ಮರಗಳು ಇವುಗಳ ಕಡ್ಡಿಯಿಂದ ಹಲ್ಲನ್ನು ಉಜ್ಜಬಾರದು.

೧೮–೧೯. ಅನಂತರ ಒಳ್ಳೆಯ ಮನಸ್ಸಿನಿಂದ ವಿಷ್ಣುವಿನ ಅಥವಾ ಶಿವನ ದೇವಸ್ಥಾನಕ್ಕೆ ಹೋಗಬೇಕು. ಗಂಧ, ಹೂ, ತಾಂಬೂಲ ಮುಂತಾದುವುಗಳನ್ನು ಭಕ್ತಿಯಿಂದ ತೆಗೆದುಕೊಂಡು ಹೋಗಬೇಕು. ಅಲ್ಲಿ ಆ ಸ್ವಾಮಿಗೆ ಪಾದ್ಯ, ಅರ್ಘ್ಯಗಳನ್ನು ಬೇರೆ ಬೇರೆಯಾಗಿ ಕೊಡಬೇಕು. ಅನಂತರ ಸ್ತೋತ್ರ ಮಾಡಿ ನಮಸ್ಕರಿಸಿ ಮಂಗಳವಾದ್ಯಗಳನ್ನೂ ನರ್ತನವನ್ನೂ ಮಾಡಬೇಕು.

೨೦. ತಾಳ, ಕೊಳಲು, ಮೃದಂಗಗಳ ಧ್ವನಿಯನ್ನು ಮಾಡುತ್ತಾ ಕುಣಿಯಬೇಕು. ನರ್ತಕರನ್ನು ಹೂವು, ಧೂಪ, ದೀಪ ತಾಂಬೂಲಗಳಿಂದ ಪೂಜಿಸಬೇಕು.

ದೇವಾಲಯೇ ಗಾನಪರಾ ಯತಸ್ತೇ ವಿಷ್ಣುಮೂರ್ತಯಃ ।
ತಪಾಂಸಿ ಯಜ್ಞದಾನಾನಿ ಕೃತಾನಿ ಚ ಜಗದ್ಗುರೋಃ ॥ ೨೧ ॥

ತುಷ್ಟಿದಾನಿ ಕಲೌ ಯಸ್ಮಾದ್ಭಕ್ತ್ಯಾ ದಾನಂ ವಿಶಿಷ್ಯತೇ ।
ಕ್ವ ತ್ವಂ ವಸಸಿ ದೇವೇಶ ಮಯಾ ಪೃಷ್ಟಸ್ತು ಪಾರ್ಥಿವ ॥ ೨೨ ॥

ವಿಷ್ಣುರೇವಂ ತದಾ ಪ್ರಾಹ ಮದ್ಭಕ್ತಿಪರಿತೋಷಿತಃ ॥ ೨೩ ॥

॥ ವಿಷ್ಣುರುವಾಚ ॥

ನಾಹಂ ವಸಾಮಿ ವೈಕುಂಠೇ ಯೋಗಿನಾಂ ಹೃದಯೇ ನ ವೈ ।
ಮದ್ಭಕ್ತಾ ಯತ್ರ ಗಾಯಂತಿ ತತ್ರ ತಿಷ್ಠಾಮಿ ನಾರದ ॥ ೨೪ ॥

ತೇಷಾಂ ಪೂಜಾದಿಕಂ ಗಂಧಪುಷ್ಪಾದ್ಯೈಃ ಕ್ರಿಯತೇ ನರೈಃ ।
ತೇನ ಪ್ರೀತಿಂ ಪರಾಂ ಯಾಮಿ ನ ತಥಾ ಮತ್ಪ್ರಪೂಜನಾತ್ ॥ ೨೫ ॥

---

೨೧–೨೩. ದೇವಾಲಯದಲ್ಲಿ ಗಾನ ಮಾಡುವವರು ವಿಷ್ಣುವಿನ ಮೂರ್ತಿಗಳು. ಆದ್ದರಿಂದ ಅವರನ್ನು ಪೂಜಿಸಬೇಕು. ತಪಸ್ಸು, ಯಜ್ಞ, ದಾನ, ಇವು ಕಲಿಯುಗದಲ್ಲಿ ಆ ಸ್ವಾಮಿಗೆ ತೃಪ್ತಿಯನ್ನುಂಟುಮಾಡುತ್ತವೆ. ಆದ್ದರಿಂದ ಭಕ್ತಿಯಿಂದ ಮಾಡಿದ ದಾನವೇ ಉತ್ತಮವಾದುದು. ಎಲೈ ದೊರೆಯೇ ! ನಾನು ಆ ಸ್ವಾಮಿಯನ್ನು ಕುರಿತು ನೀನು ಎಲ್ಲಿ ವಾಸಮಾಡುತ್ತೀಯೆ ? ಎಂದು ಕೇಳಿದೆನು. ನನ್ನ ಭಕ್ತಿಗೆ ಸಂತೋಷಗೊಂಡು ಆ ದೇವನು ಆಗ ಇಂತೆಂದನು.

೨೪. ವಿಷ್ಣುವು ಹೇಳಿದನು–ಎಲೈ ನಾರದನೇ ! ನಾನು ವೈಕುಂಠದಲ್ಲಿಯೂ ವಾಸಿಸುವುದಿಲ್ಲ. ಯೋಗಿಗಳ ಹೃದಯದಲ್ಲಿಯೂ ವಾಸಿಸುವುದಿಲ್ಲ. ನನ್ನ ಭಕ್ತರು ಎಲ್ಲಿ ಗಾನ ಮಾಡುತ್ತಾರೆಯೋ ಅಲ್ಲಿಯೇ ಯಾವಾಗಲೂ ಇರುವೆನು.

೨೫. ಅವರನ್ನು ಗಂಧ ಪುಷ್ಪ ಮೊದಲಾದುವುಗಳಿಂದ ಪೂಜಿಸಿದರೆ ನಾನು ಸಂತೋಷಗೊಳ್ಳುವಂತೆ ನನ್ನನ್ನು ಪೂಜಿಸಿದರೂ ಸಂತೋಷಗೊಳ್ಳುವುದಿಲ್ಲ.

ಮತ್ಪುರಾಣಕಥಾಂ ಶ್ರುತ್ವಾ ಮದ್ಭಕ್ತಾನಾಂ ಚ ಗಾಯನಂ ।
ನಿಂದಂತಿ ಯೇ ನರಾ ಮೂಢಾಸ್ತೇ ಮದ್ವೇಷ್ಯಾ ಭವಂತಿ ಹಿ ॥ ೨೬ ॥

॥ ನಾರದ ಉವಾಚ ॥

ಶಿರೀಷೋನ್ಮತ್ತಗಿರಿಜಾಮಲ್ಲಿಕಾಶಾಲ್ಮಲೀಭವೈಃ ।
ಅರ್ಕಜೈಃ ಕರ್ಣಿಕಾರೈಶ್ಚ ವಿಷ್ಣುರ್ನಾರ್ಚ್ಯಸ್ತಥಾಕ್ಷತೈಃ ॥ ೨೭ ॥

ಜಪಾಕುಂದಶಿರೀಷೈಶ್ಚ ಯೂಥಿಕಾಮಾಲತೀಭವೈಃ ।
ಕೇತಕೀಭವಪುಷ್ಪೈಶ್ಚ ನೈವಾರ್ಚ್ಯಶ್ಶಂಕರಸ್ತಥಾ ॥ ೨೮ ॥

ಗಣೇಶಂ ತುಳಸೀಪತ್ರೈರ್ದುರ್ಗಾಂ ನೈವ ತು ದೂರ್ವಯಾ ।
ಮುನಿಪುಷ್ಪೈಸ್ತಥಾ ಸೂರ್ಯಂ ಲಕ್ಷ್ಮೀಕಾಮೋ ನ ಚಾರ್ಚಯೇತ್ ॥ ೨೯ ॥

ಏಭ್ಯೋಽನ್ಯಾನಿ ಪ್ರಶಸ್ತಾನಿ ಪೂಜಾಯಾಂ ಸರ್ವದೈವ ತು ।
ಏವಂ ಪೂಜಾವಿಧಿಂ ಕೃತ್ವಾ ದೇವದೇವಂ ಕ್ಷಮಾಪಯೇತ್ ॥ ೩೦ ॥

---

೨೬. ನನ್ನ ಪುರಾಣದ ಕಥೆಯನ್ನು ಕೇಳಿ, ನನ್ನ ಭಕ್ತರ ಗಾಯನವನ್ನು ಕೇಳಿ, ಯಾರು ಅವರನ್ನು ನಿಂದಿಸುತ್ತಾರೆಯೋ, ಅವರನ್ನು ನಾನು ಯಾವಾಗಲೂ ದ್ವೇಷಿಸುತ್ತೇನೆ.

೨೭. ನಾರದನು ಹೇಳಿದನು–ಬಾಗೆಹೂವು, ಉಮ್ಮತ್ತದಹೂವು, ಕಾಡುಮಲ್ಲಿಗೆ, ಬೂರಗ, ಎಕ್ಕದಹೂವು, ಕರ್ಣಿಕಾರ, ಅಕ್ಷತೆ ಇವುಗಳಿಂದ ವಿಷ್ಣುವನ್ನು ಪೂಜಿಸಬಾರದು.

೨೮. ದಾಸವಾಳ, ಕುಂದಪುಷ್ಪ, ಬಾಗೆ, ಗರುಗದಹೂವು ಜಾಜಿ, ತಾಳೆಹೂವು ಇವುಗಳಿಂದ ಶಿವನನ್ನು ಪೂಜಿಸಕೂಡದು.

೨೯. ಗಣೇಶನನ್ನು ತುಳಸಿಯಿಂದಲೂ, ದುರ್ಗೆಯನ್ನು ಗರಿಕೆಯಿಂದಲೂ, ಸೂರ್ಯನನ್ನು ಅಗಸೇಹೂವಿನಿಂದಲೂ ಪೂಜಿಸಬಾರದು. ಹಾಗೆ ಪೂಜಿಸಿದರೆ ಲಕ್ಷ್ಮಿಯು ನಾಶ ಹೊಂದುತ್ತಾಳೆ.

೩೦. ಇವುಗಳನ್ನು ಬಿಟ್ಟು ಉಳಿದ ಹೂಗಳು ಉತ್ತಮವಾದುವು. ಅವುಗಳಿಂದ ದೇವರನ್ನು ಪೂಜಿಸಬೇಕು. ಈ ರೀತಿ ಪೂಜೆಮಾಡಿ ಸ್ವಾಮಿಯನ್ನು ಕ್ಷಮಿಸಬೇಕೆಂದು ಕೇಳಿಕೊಳ್ಳಬೇಕು.

ಮಂತ್ರಹೀನಂ ಕ್ರಿಯಾಹೀನಂ ಭಕ್ತಿಹೀನಂ ಸುರೇಶ್ವರ ।
ಯತ್ಪೂಜಿತಂ ಮಯಾ ದೇವ ಪರಿಪೂರ್ಣಂ ತದಸ್ತು ಮೇ ॥ ೩೧ ॥

ತತಃ ಪ್ರದಕ್ಷಿಣಂ ಕೃತ್ವಾ ದಂಡವತ್ಪ್ರಣಿಪತ್ಯ ಚ ।
ಪುನಃ ಕ್ಷಮಾಪಯೇದ್ದೇವಂ ಗಾಯನಾದ್ಯಂ ಸಮಾಪಯೇತ್ ॥ ೩೨ ॥

ವಿಷ್ಣೋಶ್ಶಿವಸ್ಯಾಪಿ ಹಿ ಪೂಜನಂ ಯೇ
ಕುರ್ವಂತಿ ಸಮ್ಯಙ್ನಿಶಿ ಕಾರ್ತಿಕಸ್ಯ ।
ವಿಧೂತಪಾಪಾಃ ಸಹ ಪೂರ್ವಜೈಸ್ತೇ
ಪ್ರಯಾಂತಿ ವಿಷ್ಣೋರ್ಭವನಂ ಮನುಷ್ಯಾಃ ॥ ೩೩ ॥

ಇತಿ ಶ್ರೀ ಮಹಾಪುರಾಣೇ ಪಾದ್ಮೇ ಉತ್ತರಖಂಡೇ ಶ್ರೀ ಕೃಷ್ಣ ಸತ್ಯಭಾಮಾ ಸಂವಾದೇ ಕಾರ್ತಿಕ ಮಹಾತ್ಮ್ಯೇ ಪೂಜಾ ಜಾಗರಣ ವಿಧಿರ್ನಾಮ ಚತುರ್ನವತಿತಮೋಽಧ್ಯಾಯಸ್ಸಮಾಪ್ತಃ

---

೩೧. ಎಲೈ ದೇವನೇ ! ನನ್ನ ಪೂಜೆಯು ಮಂತ್ರ, ಕ್ರಿಯೆ, ಭಕ್ತಿಗಳಿಂದ ಹೀನವಾದುದು. ಆ ರೀತಿ ಪೂಜೆಮಾಡಿದ್ದರೂ ಅದು ನನಗೆ ಪೂರ್ತಿಯಾಗಿ ಮಾಡಿದಂತಾಗಲಿ.

೩೨. ಅನಂತರ ಪ್ರದಕ್ಷಿಣೆ ನಮಸ್ಕಾರಗಳನ್ನು ಮಾಡಿ ಮತ್ತೆ ಕ್ಷಮಿಸುವಂತೆ ಕೇಳಿಕೊಂಡು ಗಾಯನ ಮುಂತಾದುವನ್ನು ಮಾಡಬೇಕು.

೩೩. ಕಾರ್ತಿಕ ಮಾಸದ ರಾತ್ರಿಯ ವೇಳೆಯಲ್ಲಿ ವಿಷ್ಣುವಿಗಾಗಲೀ ಶಿವನಿಗಾಗಲೀ ಯಾರು ಪೂಜೆಯನ್ನು ಮಾಡುತ್ತಾರೆಯೋ ಅವರು ಪಾಪವನ್ನು ಕಳೆದುಕೊಂಡು ಅವರ ಪೂರ್ವೀಕರೊಡನೆ ವಿಷ್ಣುವಿನ ಮನೆಯನ್ನು ಹೊಂದುತ್ತಾರೆ.

ಇಂತು ಶ್ರೀ ಪದ್ಮಮಹಾಪುರಾಣದ ಉತ್ತರಖಂಡದ ಶ್ರೀ ಕೃಷ್ಣ ಸತ್ಯಭಾಮಾ ಸಂವಾದದ ಕಾರ್ತಿಕ ಮಹಿಮೆಯಲ್ಲಿ ಪೂಜೆ, ಜಾಗರಣೆಗಳ ವಿಧಿ ಎಂಬ ತೊಂಭತ್ತನಾಲ್ಕನೆಯ ಅಧ್ಯಾಯವು ಮುಗಿದುದು.



॥ ಶ್ರೀಃ ॥

-x-

# ಅಥ ಶ್ರೀ ಮಹಾಪುರಾಣೇ ಪಾದ್ಮೇ ಉತ್ತರಖಂಡೇ

## ॥ ಪಂಚನವತಿತಮೋಽಧ್ಯಾಯಃ ॥



**॥ ನಾರದ ಉವಾಚ ॥**

**ನಾಡೀದ್ವಯಾವಶಿಷ್ಟಾಯಾಂ ರಾತ್ರೌ ಗಚ್ಛೇಜ್ಜಲಾಶಯಂ ।**
**ತಿಲದರ್ಭಾಕ್ಷತೈಃ ಪುಷ್ಪಗಂಧಾದ್ಯೈಃ ಸಹಿತಶ್ಶುಚಿಃ ॥ ೧ ॥**

**ಮಾನುಷೇ ದೇವಖಾತೇ ಚ ನದ್ಯಾಮಥ ಚ ಸಂಗಮೇ ।**
**ಕ್ರಮಾದ್ದಶಗುಣಂ ಸ್ನಾನಂ ತೀರ್ಥೇಽನಂತಫಲಂ ಸ್ಮೃತಂ ॥ ೨ ॥**

**ವಿಷ್ಣುಂ ಸ್ಮೃತ್ವಾ ತತಃ ಕುರ್ಯಾತ್ ಸಂಕಲ್ಪಂ ಸಾವನಸ್ಯ ತು ।**
**ತೀರ್ಥಾದಿದೇವತಾಭ್ಯಶ್ಚ ಕ್ರಮಾದರ್ಘ್ಯಾದಿ ದಾಪಯೇತ್ ॥ ೩ ॥**

---

## ತೊಂಭತ್ತೈದನೆಯ ಅಧ್ಯಾಯವು



೧. ನಾರದನು ಹೇಳಿದನು-ಇನ್ನೂ ರಾತ್ರಿ ಎರಡು ಗಳಿಗೆ ಉಳಿದಿರುವಾಗಲೇ ದರ್ಭೆ, ಎಳ್ಳು, ಅಕ್ಷತೆಗಳನ್ನೂ, ಪುಷ್ಪ, ಗಂಧಗಳನ್ನೂ ತೆಗೆದುಕೊಂಡು ಹೋಗಿ ನೀರಿನಲ್ಲಿ ಸ್ನಾನಮಾಡಬೇಕು.

೨. ಮನುಷ್ಯರು ಕಟ್ಟಿಸಿದುದು, ದೇವತೆಗಳಿಂದ ನಿರ್ಮಿತವಾದುದು, ನದಿಯ ಸಂಗಮ ಇವುಗಳಲ್ಲಿ ಸ್ನಾನ ಮಾಡಿದರೆ ಒಂದೊಂದಕ್ಕಿಂತಲೂ ಒಂದೊಂದು ಹತ್ತು ಹತ್ತರಷ್ಟು ಫಲ ಹೆಚ್ಚುಂಟು. ಮನುಷ್ಯ ನಿರ್ಮಿತಕ್ಕಿಂತ ದೇವಖಾತ ಹತ್ತರಷ್ಟು ಹೆಚ್ಚು. ದೇವಖಾತಕ್ಕಿಂತ ಸಂಗಮ ಹತ್ತರಷ್ಟು ಹೆಚ್ಚು. ತೀರ್ಥಗಳಲ್ಲಿ ಆದರೆ ಅನಂತ ಫಲವು ಬರುತ್ತದೆ.

೩. ವಿಷ್ಣುಧ್ಯಾನ ಮಾಡುತ್ತ ಸಾವನಸಂಕಲ್ಪವನ್ನು ಮಾಡಬೇಕು. ಅನಂತರ ತೀರ್ಥದ ದೇವತೆಗಳಿಗೂ ಕ್ರಮವಾಗಿ ಅರ್ಘ್ಯವನ್ನು ಕೊಡಬೇಕು.

ನಮಃ ಕಮಲನಾಭಾಯ ನಮಸ್ತೇ ಜಲಶಾಯಿನೇ ।
ನಮಸ್ತೇಽಸ್ತು ಹೃಷೀಕೇಶ ಗೃಹಾಣಾರ್ಘ್ಯಂ ನಮೋಽಸ್ತು ತೇ ॥ ೪ ॥

ವೈಕುಂಠೇ ಚ ಪ್ರಯಾಗೇ ಚ ತಥಾ ಬದರಿಕಾಶ್ರಮೇ ।
ಯತೋ ವಿಷ್ಣುರ್ವಿಚಕ್ರಮೇ ತ್ರೇಧಾ ವಿನಿದಧೇ ಪದಂ ॥ ೫ ॥

ಅತೋ ದೇವಾ ಅವಂತು ತ್ರೇಧಾ ಸ ನಿದಧೇ ಪದಂ ।
ತೈರೇವ ಸಹಿತೈಸ್ಸರ್ವೈರ್ಮುನಿವೇದಮುಖಾನ್ವಿತೈಃ ॥ ೬ ॥

ಕಾರ್ತಿಕೇಽಹಂ ಕರಿಷ್ಯಾಮಿ ಪ್ರಾತಸ್ಸ್ನಾನಂ ಜನಾರ್ದನ ।
ಪ್ರೀತ್ಯರ್ಥಂ ತವ ದೇವೇಶ ದಾಮೋದರ ಮಯಾ ಸಹ ॥ ೭ ॥

ಧ್ಯಾತ್ವಾಹಂ ತ್ವಾಂ ಚ ದೇವೇಶ ಜಲೇಽಸ್ಮಿನ್ ಸ್ನಾತುಮುದ್ಯತಃ ।
ತವ ಪ್ರಸಾದಾತ್ಪಾಪಂ ಮೇ ದಾಮೋದರ ವಿನಶ್ಯತು ॥ ೮ ॥

---

೪. ಕಮಲನಾಭನಿಗೆ ನಮಸ್ಕಾರವು. ಜಲಶಾಯಿಗೆ ನಮಸ್ಕಾರವು. ಹೃಷೀಕೇಶನಿಗೆ ನಮಸ್ಕಾರವು. ಅರ್ಘ್ಯವನ್ನು ತೆಗೆದುಕೋ. ನಿನಗೆ ನಮಸ್ಕಾರಗಳಿರಲಿ.

೫. ವೈಕುಂಠದಲ್ಲಿ, ಪ್ರಯಾಗದಲ್ಲಿ, ಬದರಿಕಾಶ್ರಮದಲ್ಲಿ ಈ ಮೂರು ಜಾಗಗಳಲ್ಲಿಯೂ ಮೂರು ಹೆಜ್ಜೆಗಳನ್ನು ಸ್ವಾಮಿಯು ಇಟ್ಟನು.

೬. ಮೂರು ರೀತಿಯಾಗಿ ಕಾಲುಗಳನ್ನಿಟ್ಟ ಆ ಸ್ವಾಮಿಯೂ ಮತ್ತು ವೇದಗಳೊಡನೆಯೂ, ಯಾಗಗಳೊಡನೆಯೂ ಕೂಡಿರುವ ದೇವತೆಗಳು ನನ್ನನ್ನು ಕಾಪಾಡಲಿ.

೭. ಎಲೈ ಜನಾರ್ದನನೇ ! ಕಾರ್ತಿಕ ಮಾಸದಲ್ಲಿ ನಿನ್ನ ಪ್ರೀತಿಯನ್ನು ಸಂಪಾದಿಸಲು ಈ ಪ್ರಾತಸ್ಸ್ನಾನವನ್ನು ಮಾಡುತ್ತೇನೆ. ನೀನು ಸುಪ್ರೀತನಾಗು.

೮. ಎಲೈ ದೇವನೇ ! ನಾನು ನಿನ್ನನ್ನು ಧ್ಯಾನ ಮಾಡುತ್ತಾ ಈ ನೀರಿನಲ್ಲಿ ಸ್ನಾನ ಮಾಡುತ್ತೇನೆ. ನಿನ್ನ ಅನುಗ್ರಹದಿಂದ ನನ್ನ ಪಾಪವು ನಾಶವಾಗಲಿ.

|| ಅರ್ಘ್ಯಮಂತ್ರಃ ||

ನಿತ್ಯೇ ನೈಮಿತ್ತಿಕೇ ಕೃಷ್ಣ ಕಾರ್ತಿಕೇ ಪಾಪನಾಶನೇ ।
ಗೃಹಾಣಾರ್ಘ್ಯಂ ಮಯಾ ದತ್ತಂ ರಾಧಯಾ ಸಹಿತೋ ಹರೇ || ೯ ||

ಸ್ಮೃತ್ವಾ ಭಾಗೀರಥೀಂ ವಿಷ್ಣುಂ ಶಿವಂ ಸೂರ್ಯಂ ಜಲಂ ವಿಶೇತ್ ।
ನಾಭಿಮಾತ್ರೇ ಜಲೇ ತಿಷ್ಠೇತ್ ವ್ರತೀ ಸ್ನಾಯಾದ್ಯಥಾವಿಧಿ || ೧೦ ||

ತಿಲಾಮಲಕಚೂರ್ಣೇನ ಗೃಹೀ ಸ್ನಾನಂ ಸಮಾಚರೇತ್ ।
ವನಸ್ಥಾನಾಂ ಯತೀನಾಂ ಚ ತುಲಸೀಮೂಲಮೃತ್ಸ್ನಯಾ || ೧೧ ||

ಸಪ್ತಮೀದರ್ಶನವಮೀ ದ್ವಿತೀಯಾ ದಶಮೀಷು ಚ ।
ತ್ರಯೋದಶ್ಯಾಂ ಚ ನ ಸ್ನಾಯಾದ್ಧಾತ್ರೀಫಲತಿಲೈಸ್ಸಹ || ೧೨ ||

ಆದೌ ಕುರ್ಯಾನ್ಮಲಸ್ನಾನಂ ಮಂತ್ರಸ್ನಾನಂ ತತಃ ಪರಂ ।
ಸ್ತ್ರೀಶೂದ್ರಾಣಾಂ ನ ವೇದೋಕ್ತೈರ್ಮಂತ್ರೈಸ್ತ್ರೀಣಾಂ ಪುರಾಣಜೈಃ|| ೧೩ ||

---

೯. ಅರ್ಘ್ಯವನ್ನು ಕೊಡುವ ಮಂತ್ರವು–ಪಾಪನಾಶಕವಾದ ಈ ಕಾರ್ತೀದಲ್ಲಿ ನಿತ್ಯವಾದ ನೈಮಿತ್ತಿಕವಾದ ಕೆಲಸಗಳನ್ನು ಮಾಡುತ್ತ ನಿನಗೆ ಈ ಅರ್ಘ್ಯವನ್ನು ಕೊಡುತ್ತೇನೆ. ರಾಧೆಯೊಡಗೂಡಿ ಅರ್ಘ್ಯವನ್ನು ಸ್ವೀಕರಿಸು.

೧೦. ಭಾಗೀರಥಿ, ವಿಷ್ಣು, ಶಿವ, ಸೂರ್ಯರನ್ನು ಸ್ಮರಿಸುತ್ತ ನೀರಿನಲ್ಲಿ ಇಳಿದು ಹೊಕ್ಕಳಿನವರೆಗೂ ಬರುವಷ್ಟು ನೀರಿನಲ್ಲಿ ನಿಂತು ಸ್ನಾನಮಾಡಬೇಕು.

೧೧. ಗೃಹಸ್ಥರಾದವರು ಎಳ್ಳಿನ ಎಣ್ಣೆಯನ್ನು ಹಚ್ಚಿಕೊಂಡು ನೆಲ್ಲಿಯ ಚಿಟ್ಟನ್ನು ಹಚ್ಚಿಕೊಂಡು ಸ್ನಾನಮಾಡಬೇಕು. ವಾನಪ್ರಸ್ಥರೂ ಯತಿಗಳೂ ತುಳಸಿಯ ಬುಡದ ಮಣ್ಣನ್ನೇ ಹಚ್ಚಿಕೊಂಡು ಸ್ನಾನಮಾಡಬೇಕು.

೧೨. ಸಪ್ತಮಿ, ಅಮಾವಾಸ್ಯೆ, ನವಮೀ, ಬಿದಿಗೆ, ದಶಮಿ, ತ್ರಯೋದಶಿ ಈ ತಿಥಿಗಳಲ್ಲಿ ನೆಲ್ಲಿಯ ಚಿಟ್ಟು, ಎಣ್ಣೆಗಳನ್ನು ಹಾಕಿಕೊಂಡು ಸ್ನಾನಮಾಡಬಾರದು.

೧೩. ಮೊದಲು ಕೊಳೆ ಹೋಗುವ ಸ್ನಾನವನ್ನು ಮಾಡಬೇಕು. ಅನಂತರ ಮಂತ್ರವನ್ನು ಹೇಳಿಕೊಂಡು ಸ್ನಾನಮಾಡಬೇಕು. ಶೂದ್ರರುಗಳು, ಹೆಂಗಸರು ವೇದೋಕ್ತವಾದ ಮಂತ್ರದಿಂದ ಸ್ನಾನಮಾಡಕೂಡದು. ಪುರಾಣದ ಮಂತ್ರಗಳನ್ನು ಹೇಳಿಕೊಂಡು ಸ್ನಾನಮಾಡಬೇಕು.

ತ್ರಿಧಾಭೂದ್ಧೇಕಾರ್ಯಾರ್ಥಂ ಯಃ ಪುರಾ ಭಕ್ತಿಭಾವಿತಃ ।
ಸ ವಿಷ್ಣು ಸ್ಸರ್ವಪಾಪಘ್ನಃ ಪುನಾತು ಕೃಪಯಾತ್ರ ಮಾಂ ॥ ೧೪ ॥

ವಿಷ್ಣೋರಾಜ್ಞಾಮನುಪ್ರಾಪ್ಯ ಕಾರ್ತಿಕವ್ರತಕಾರಣಾತ್ ।
ಕ್ಷಮಂತು ದೇವಾಸ್ತೇ ಸರ್ವೇ ಮಾಂ ಪುನಂತು ಸವಾಸವಾಃ ॥ ೧೫ ॥

ವೇದಮಂತ್ರಾಸ್ಸಬೀಜಾಶ್ಚ ಸರಹಸ್ಯಾ ಮಖಾನ್ವಿತಾಃ ।
ಕಶ್ಯಪಾದ್ಯಾಶ್ಚ ಮುನಯೋ ಮಾಂ ಪುನಂತು ಸದೈವ ತೇ ॥ ೧೬ ॥

ಗಂಗಾದ್ಯಾಸ್ಸರಿತಸ್ಸರ್ವಾಸ್ತೀರ್ಥಾನಿ ಜಲದಾ ನದಾಃ ।
ಸಸಪ್ತಸಾಗರಾಸ್ಸರ್ವೇ ಮಾಂ ಪುನಂತು ಸದೈವ ತೇ ॥ ೧೭ ॥

ಪತಿವ್ರತಾಸ್ತ್ವದಿತ್ಯಾದ್ಯಾ ಯಕ್ಷಾಸ್ಸಿದ್ಧಾಃ ಸಪನ್ನಗಾಃ ।
ಓಷಧ್ಯಃ ಪರ್ವತಾಶ್ಚಾಪಿ ಮಾಂ ಪುನಂತು ತ್ರಿಲೋಕಜಾಃ ॥ ೧೮ ॥

---

೧೪. ದೇವತಾ ಕಾರ್ಯಕ್ಕೋಸ್ಕರ ಯಾವ ಸ್ವಾಮಿಯು ಮೂರು ಬಗೆಯಾಗಿ ಆಗಿರುವನೋ ಅಂಥಹ ವಿಷ್ಣುವು ಭಕ್ತಿಯಿಂದ ಕೂಡಿದ ನನ್ನ ಪಾಪಗಳನ್ನು ನಾಶಮಾಡಲಿ. ಪವಿತ್ರನನ್ನಾಗಿ ಮಾಡಲಿ.

೧೫. ನಾನು ಕಾರ್ತಿಕ ವ್ರತವನ್ನು ಮಾಡುತ್ತಿರುವುದರಿಂದ ಇಂದ್ರನೇ ಮುಂತಾದ ದೇವತೆಗಳು ವಿಷ್ಣುವಿನ ಅಪ್ಪಣೆಯ ಪ್ರಕಾರ ನನ್ನನ್ನು ಪವಿತ್ರನನ್ನಾಗಿ ಮಾಡಲಿ. ಮತ್ತು ಕ್ಷಮಿಸಲಿ.

೧೬. ರಹಸ್ಯಗಳು, ಯಾಗಗಳು, ಬೀಜಮಂತ್ರಗಳು ಇವುಗಳಿಂದ ಕೂಡಿದ ವೇದಮಂತ್ರಗಳೂ, ಕಶ್ಯಪನೇ ಮುಂತಾದ ಋಷಿಗಳೂ ಇವರೆಲ್ಲರೂ ನನ್ನನ್ನು ಯಾವಾಗಲೂ ಪವಿತ್ರನನ್ನಾಗಿ ಮಾಡಲಿ.

೧೭. ಗಂಗೆಯೇ ಮುಂತಾದ ನದಿಗಳೂ, ನದಗಳೂ, ತೀರ್ಥಗಳೂ, ಏಳು ಸಮುದ್ರಗಳೂ ಇವೆಲ್ಲವೂ ನನ್ನನ್ನು ಪವಿತ್ರನನ್ನಾಗಿ ಮಾಡಲಿ.

೧೮. ಪತಿವ್ರತೆಯರಾದ ಅದಿತಿಯೇ ಮುಂತಾದವರೂ ಯಕ್ಷರೂ, ಸಿದ್ಧರೂ, ಪನ್ನಗರೂ, ಓಷಧಿಗಳೂ, ಪರ್ವತಗಳೂ ಮೂರು ಲೋಕದಲ್ಲಿರುವ ಪದಾರ್ಥಗಳೂ ನನ್ನನ್ನು ಪವಿತ್ರನನ್ನಾಗಿ ಮಾಡಲಿ.

ಏಭಿಸ್ಸ್ನಾಯಾದ್ವ್ರತೀ ಮಂತ್ರೈರ್ಹಸ್ತನ್ಯಸ್ತಪವಿತ್ರಕಃ ।
ದೇವರ್ಷಿನ್ಮಾನವಾನ್ಪಿತೄಂಸ್ತರ್ಪಯೇಚ್ಚ ಯಥಾವಿಧಿ ॥ ೧೯ ॥

ಯಾವನ್ತಃ ಕಾರ್ತಿಕೇ ಮಾಸಿ ವರ್ತಂತೇ ಪಿತೃತರ್ಪಣೇ ।
ತಿಲಾಸ್ತತ್ಸಂಖ್ಯಕಾಬ್ದಾನಿ ಪಿತರಸ್ಸ್ವರ್ಗವಾಸಿನಃ ॥ ೨೦ ॥

ತತೋ ಜಲಾದ್ವಿನಿಷ್ಕ್ರಮ್ಯ ಶುಚಿವಸ್ತ್ರಾವೃತೋ ವ್ರತೀ ।
ಪ್ರಾತಃಕಾಲೋದಿತಂ ಕರ್ಮ ಸಮಾಪ್ಯಾರ್ಚೇದ್ಧರಿಂ ಪುನಃ ॥ ೨೧ ॥

ತೀರ್ಥಾದಿ ದೇವಾನ್ ಸಂಸ್ಮೃತ್ಯ ಪುನರರ್ಘ್ಯಂ ಪ್ರದಾಪಯೇತ್ ।
ಗಂಧಪುಷ್ಪಫಲೈರ್ಯುಕ್ತಂ ಭಕ್ತ್ಯಾ ತತ್ಪರಮಾನಸಃ ॥ ೨೨ ॥

ವ್ರತಿನಃ ಕಾರ್ತಿಕೇ ಮಾಸಿ ಸ್ನಾತಸ್ಯ ವಿಧಿವನ್ಮಮ ।
ಗೃಹಾಣಾರ್ಘ್ಯಂ ಮಯಾ ದತ್ತಂ ರಾಧಯಾ ಸಹಿತೋ ಹರೇ ॥ ೨೩ ॥

---

೧೯. ವ್ರತಮಾಡತಕ್ಕವನು ಕೈಯಲ್ಲಿ ಪವಿತ್ರವನ್ನು ಹಾಕಿಕೊಂಡು ಈ ಮಂತ್ರಗಳಿಂದ ಸ್ನಾನಮಾಡಬೇಕು. ಅನಂತರ ಕ್ರಮವಾಗಿ ದೇವತೆಗಳಿಗೂ, ಋಷಿಗಳಿಗೂ, ಪಿತೃಗಳಿಗೂ ತರ್ಪಣವನ್ನು ಕೊಡಬೇಕು.

೨೦. ಕಾರ್ತಿಕ ಮಾಸದಲ್ಲಿ ಪಿತೃಗಳಿಗೆ ತರ್ಪಣ ಕೊಡುವಾಗ ಎಷ್ಟು ಎಳ್ಳುಗಳನ್ನು ತೆಗೆದುಕೊಂಡು ತರ್ಪಣವನ್ನು ಕೊಡುತ್ತಾನೆಯೋ ಆ ಎಳ್ಳುಗಳಲ್ಲಿ ಒಂದೊಂದು ಎಳ್ಳಿಗೂ ಒಂದೊಂದು ವರ್ಷದಂತೆ ಪಿತೃಗಳು ಸ್ವರ್ಗದಲ್ಲಿ ವಾಸಿಸುತ್ತಾರೆ.

೨೧. ಆಮೇಲೆ ನೀರಿನಿಂದ ಈಚೆಗೆ ಬಂದು ವ್ರತಮಾಡತಕ್ಕವನು ಶುಚಿಯಾದ ಬಟ್ಟೆಗಳನ್ನು ಧರಿಸಿಕೊಂಡು ಪ್ರಾತಃಕಾಲದಲ್ಲಿ ಮಾಡಬೇಕಾದ ಕೆಲಸಗಳನ್ನು ಮಾಡಿ ಹರಿಯ ಪೂಜೆಯನ್ನು ಮಾಡಬೇಕು.

೨೨. ನೀರಿನೊಳಕ್ಕೆ ಗಂಧ, ಹೂ, ಹಣ್ಣುಗಳನ್ನು ಹಾಕಿಕೊಂಡು ಭಕ್ತಿಯಿಂದ ಆ ಸ್ವಾಮಿಯಲ್ಲಿಯೇ ಮನಸ್ಸನ್ನಿಟ್ಟುಕೊಂಡು, ತೀರ್ಥದ ದೇವತೆಗಳನ್ನೂ ದೇವರನ್ನೂ ಸ್ಮರಿಸಿಕೊಂಡು ಮತ್ತೆ ಅರ್ಘ್ಯವನ್ನು ಕೊಡಬೇಕು.

೨೩. ಕಾರ್ತಿಕ ಮಾಸದ ವ್ರತವನ್ನು ಹಿಡಿದು ವಿಧಿಗನುಸಾರವಾಗಿ ಸ್ನಾನಮಾಡಿ ನಾನು ಕೊಟ್ಟ ಅರ್ಘ್ಯವನ್ನು ಎಲೈ ಹರಿಯೇ! ರಾಧೆಯಿಂದ ಕೂಡಿಕೊಂಡು ಸ್ವೀಕರಿಸು. ಎಂದು ಅರ್ಘ್ಯವನ್ನು ಕೊಡಬೇಕು.

ತತಶ್ಚ ಬ್ರಾಹ್ಮಣಾನ್ಭಕ್ತ್ಯಾ ಪೂಜಯೇದ್ವೇದಪಾರಗಾನ್ ।
ಗಂಧೈಃ ಪುಷ್ಪೈಶ್ಚ ತಾಂಬೂಲೈಃ ಪ್ರಣಮೇತ್ತು ಪುನಃ ಪುನಃ ॥ ೨೪ ॥

ತೀರ್ಥಾನಿ ದಕ್ಷಿಣೇ ಪಾದೇ ವೇದಾಶ್ಚ ಮುಖಮಾಶ್ರಿತಾಃ ।
ಸರ್ವಾಂಗೇಷ್ವಾಸ್ಥಿತಾ ದೇವಾಃ ಪೂಜಿತಾಸ್ತೇ ತದರ್ಚನೇ ॥ ೨೫ ॥

ಅವ್ಯಕ್ತರೂಪಿಣೋ ವಿಷ್ಣೋಃ ಸ್ವರೂಪಂ ಬ್ರಾಹ್ಮಣಾ ಭುವಿ ।
ನಾವಮಾನ್ಯಾ ನೋ ವಿರೋಧ್ಯಾಃ ಕದಾಚಿಚ್ಛುಭಮಿಚ್ಛತಾ ॥ ೨೬ ॥

ತತೋ ಹರಿಪ್ರಿಯಾಂ ದೇವೀಂ ತುಳಸೀಮರ್ಚಯೇದ್ವ್ರತೀ ।
ಪ್ರಯಾಗಸ್ನಾನಯುಕ್ತಾನಾಂ ಕಾಶ್ಯಾಂ ಪ್ರಾಣವಿಮೋಕ್ಷಣೇ ॥ ೨೭ ॥

---

೨೪. ಆಮೇಲೆ ಬ್ರಾಹ್ಮಣರಿಗೆ ನಮಸ್ಕರಿಸಿ ಭಕ್ತಿಯಿಂದ ಗಂಧ, ಹೂವು, ತಾಂಬೂಲಗಳಿಂದ ಸತ್ಕರಿಸಬೇಕು

೨೫. ಆ ಸ್ವಾಮಿಯ ಬಲಗಾಲಿನಲ್ಲಿ ತೀರ್ಥಗಳೂ, ಮುಖದಲ್ಲಿ ವೇದಗಳೂ, ಅವಯುವಗಳಲ್ಲಿ ದೇವತೆಗಳೂ, ಆಶ್ರಯಿಸಿಕೊಂಡಿರುತ್ತಾರೆ. ಆದ್ದರಿಂದ ಆತನನ್ನು ಪೂಜಿಸಿದರೆ ಎಲ್ಲರನ್ನೂ ಪೂಜಿಸಿದಂತೆ ಆಗುತ್ತದೆ.

೨೬. ಎಲ್ಲರಿಗೂ ಕಾಣಿಸಿಕೊಳ್ಳದ ರೂಪವುಳ್ಳ ಆ ವಿಷ್ಣುವಿನ ರೂಪವನ್ನು ಹೊಂದಿರುವವರೇ ಪ್ರಪಂಚದಲ್ಲಿ ಈ ಬ್ರಾಹ್ಮಣರು. ಆದ್ದರಿಂದ ಬ್ರಾಹ್ಮಣರನ್ನು ಅವಮಾನಗೊಳಿಸಬಾರದು. ಅವರೊಡನೆ ಯಾವಾಗಲೂ ವಿರೋಧವನ್ನು ಮಾಡಿಕೊಳ್ಳಬಾರದು. ಹಾಗೆ ವಿರೋಧವನ್ನೂ ಅವಮಾನವನ್ನೂ ಮಾಡಿದರೆ ಅವರಿಗೆ ಶುಭವುಂಟಾಗುವುದಿಲ್ಲ.

೨೭. ಅನಂತರ ಹರಿಗೆ ಪ್ರೀತಿಪಾತ್ರಳಾದ ತುಳಸೀ ದೇವಿಯನ್ನು ಪೂಜಿಸಬೇಕು. ಪ್ರಯಾಗದಲ್ಲಿ ಸ್ನಾನ ಮಾಡುತ್ತಿರುವವರಿಗೂ, ಕಾಶಿಯಲ್ಲಿ ಪ್ರಾಣಬಿಡುವವರಿಗೂ ವೇದಗಳಲ್ಲಿ ಯಾವ ಫಲವನ್ನು ಹೇಳಿದೆಯೋ ಆ ಫಲವು ಈ ತುಳಸಿಯನ್ನು ಪೂಜಿಸುವುದರಿಂದ ಬರುತ್ತದೆ.

ಯತ್ಫಲಂ ವಿಹಿತಂ ವೇದ್ಯೈಃ ತುಳಸೀಪೂಜನೇನ ತತ್ ।
ಯುಕ್ತೋ ಯದಿ ಸದಾ ಪಾಪೈಃ ಸುಕೃತಂ ನಾರ್ಜಿತಂ ಕ್ವಚಿತ್ ॥ ೨೮ ॥

ತಥಾಪಿ ಗೀಯತೇ ಮೋಕ್ಷಃ ತುಳಸೀ ಪೂಜಿತಾ ಯದಿ ।
ಪ್ರದಕ್ಷಿಣನಮಸ್ಕಾರಾನ್ ಕುರ್ಯಾದೇಕಾಗ್ರಮಾನಸಃ ॥ ೨೯ ॥

ವೇದ್ಯೈಸ್ತ್ವಂ ನಿರ್ಮಿತಾ ಪೂರ್ವಮರ್ಚಿತಾಸಿ ಮುನೀಶ್ವರೈಃ ।
ನಮೋ ನಮಸ್ತೇ ತುಳಸಿ ಪಾಪಂ ಹರ ಹರಿಪ್ರಿಯೇ ॥ ೩೦ ॥

ತತೋ ವಿಷ್ಣುಕಥಾಂ ಶ್ರುತ್ವಾ ಪೌರಾಣೀಂ ಸ್ಥಿರಮಾನಸಃ ।
ಬ್ರಾಹ್ಮಣಂ ತಂ ಮುನಿಂ ವಿಪ್ರಂ ಪೂಜಯೇದ್ಭಕ್ತಿಮಾನ್ವಶೀ ॥ ೩೧ ॥

ಏವಂ ಸರ್ವವಿಧಿಂ ಸಮ್ಯಕ್ಪೂರ್ವೋಕ್ತಂ ಭಕ್ತಿಮಾನ್ನರಃ ।
ಕರೋತಿ ಯಸ್ಸಲಭತೇ ನಾರಾಯಣಸಲೋಕತಾಂ ॥ ೩೨ ॥

---

೨೮–೨೯. ಸ್ವಲ್ಪವೂ ಪುಣ್ಯವನ್ನೂ ಮಾಡದೆ ಯಾವಾಗಲೂ ಪಾಪವನ್ನೇ ಮಾಡುತ್ತಾ, ಪಾಪಿಯಾಗಿದ್ದರೂ, ತುಳಸಿಯನ್ನು ಪೂಜಿಸಿದರೆ ಮೋಕ್ಷವು ಬರುವುದೆಂದು ಹೇಳಲ್ಪಟ್ಟಿದೆ. ಅನಂತರ ಒಂದೇ ಮನಸ್ಸಿನಿಂದ ಆ ತುಳಸಿಗೆ ನಮಸ್ಕರಿಸಬೇಕು.

೩೦. ಎಲೈ ತುಳಸಿಯೇ ! ನೀನು ಪೂರ್ವದಲ್ಲಿ ವೇದಗಳಿಂದಲೇ ನಿರ್ಮಿತಳಾಗಿದ್ದೀಯೆ. ನಿನಗೆ ನಮಸ್ಕಾರವು. ಎಲೈ ಹರಿಪ್ರಿಯೆಯೇ ! ನನ್ನ ಪಾಪಗಳನ್ನು ನಾಶಮಾಡು.

೩೧. ವ್ರತಮಾಡತಕ್ಕವನು ಆಮೇಲೆ ಏಕಾಗ್ರಚಿತ್ತದಿಂದ ಪುರಾಣದಲ್ಲಿರುವ ವಿಷ್ಣುವಿನ ಕಥೆಯನ್ನು ಕೇಳಿ ಆಮೇಲೆ ಆ ಪುರೋಹಿತನಾದ ಬ್ರಾಹ್ಮಣನನ್ನು ಭಕ್ತಿಯಿಂದ ಪೂಜಿಸಬೇಕು.

೩೨. ಮೇಲೆ ಹೇಳಿದಂತೆ ಕ್ರಮವಾಗಿ ಯಾವನು ಎಲ್ಲವನ್ನೂ ಮಾಡುತ್ತಾನೆಯೋ ಅವನು ನಾರಾಯಣನಲ್ಲಿ ಐಕ್ಯತೆಯನ್ನು ಹೊಂದುತ್ತಾನೆ.

ರೋಗಾಪಹಂ ಪಾತಕನಾಶತತ್ಪರಂ
ಸದ್ಬುದ್ಧಿದಂ ಪುತ್ರಧನಾದಿಸಾಧನಂ ।
ಮುಕ್ತೇರ್ನಿದಾನಂ ನ ಹಿ ಕಾರ್ತಿಕವ್ರತಾ
ದ್ವಿಷ್ಣುಪ್ರಿಯಾದನ್ಯದಿಹಾಸ್ತಿ ಭೂತಲೇ || ೩೩ ||

ಇತಿ ಶ್ರೀ ಮಹಾಪುರಾಣೇ ಪಾದ್ಮೇ ಉತ್ತರಖಂಡೇ ಶ್ರೀ ಕೃಷ್ಣ
ಸತ್ಯಭಾಮಾ ಸಂವಾದೇ ಕಾರ್ತಿಕ ಮಹಾತ್ಮ್ಯೇ ಸ್ನಾನವಿಧಿ
ವರ್ಣನಂ ನಾಮ ಪಂಚನವತಿತಮೋಽಧ್ಯಾಯಸ್ಸಮಾಪ್ತಃ

---

೩೩. ರೋಗವನ್ನು ನಾಶಮಾಡುವ, ಪಾಪಗಳನ್ನು ನಾಶಮಾಡುವ, ಒಳ್ಳೆಯ ಬುದ್ಧಿಯನ್ನು ಕೊಡುವ, ಮಕ್ಕಳು ಹಣವನ್ನು ಕೊಡುವ, ಮುಕ್ತಿಗೆ ಕಾರಣನಾದ, ವಿಷ್ಣುವಿಗೆ ಪ್ರಿಯವಾದ, ವ್ರತವು ಈ ಕಾರ್ತಿಕ ವ್ರತಕ್ಕಿಂತ ಮತ್ತೊಂದು ಭೂಮಿಯಮೇಲೆ ಇಲ್ಲವೇ ಇಲ್ಲ.

ಇಂತು ಶ್ರೀ ಪದ್ಮಮಹಾಪುರಾಣದ ಉತ್ತರಖಂಡದ ಶ್ರೀ ಕೃಷ್ಣ
ಸತ್ಯಭಾಮೆಯರ ಸಂವಾದದ ಕಾರ್ತಿಕ ಮಹಿಮೆಯಲ್ಲಿ ಸ್ನಾನವಿಧಿ
ವರ್ಣನ ಎಂಬ ತೊಂಭತ್ತೈದನೆಯ ಅಧ್ಯಾಯವು ಮುಗಿದುದು.



॥ ಶ್ರೀಃ ॥

-X-

## ಅಥ ಶ್ರೀ ಮಹಾಪುರಾಣೇ ಪಾದ್ಮೇ ಉತ್ತರಖಂಡೇ

## ॥ ಷಣ್ಣವತಿತಮೋಽಧ್ಯಾಯಃ ॥



॥ ನಾರದ ಉವಾಚ ॥

ಕಾರ್ತಿಕವ್ರತಿನಾಂ ಪುಂಸಾಂ ನಿಯಮಾ ಯೇ ಪ್ರಕೀರ್ತಿತಾಃ ।
ತಾನ್ ಶೃಣುಷ್ವ ಮಯಾ ರಾಜನ್ ಕಥ್ಯಮಾನಾನ್ಸಮಾಸತಃ ॥ ೧ ॥

ಅನ್ನದಾನಂ ಗವಾಂ ಗ್ರಾಸೋ ವೈಷ್ಣವೈಸ್ಸಹ ಸಂಕಥಾ ।
ಬೋಧನಾತ್ಪರದೀ ಪಸ್ಯ ಧರ್ಮಮಾಹುರ್ಮನೀಷಿಣಃ ॥ ೨ ॥

ಪರಾನ್ನಂ ಪರಶಯ್ಯಾಂ ಚ ಪರವಾದಂ ಪರಾಂಗನಾಂ ।
ಸದಾ ಚ ವರ್ಜಯೇತ್ಪ್ರಾಜ್ಞೋ ವಿಶೇಷೇಣ ತು ಕಾರ್ತಿಕೇ ॥ ೩ ॥

---

## ತೊಂಭತ್ತಾರನೆಯ ಅಧ್ಯಾಯವು



೧. ನಾರದನು ಹೇಳಿದನು–ಎಲೈ ರಾಜನೆ ! ಕಾರ್ತಿಕ ವ್ರತ ಮಾಡತಕ್ಕವರು ಮಾಡಬೇಕಾದ ನಿಯಮಗಳನ್ನು ಹೇಳುತ್ತೇನೆ. ಅವನ್ನು ಕೇಳು.

೨. ಅನ್ನದಾನ ಮಾಡಬೇಕು. ಗೋವುಗಳಿಗೆ ಗ್ರಾಸವನ್ನು ಕೊಡಬೇಕು. ವೈಷ್ಣವರೊಡನೆ ಧರ್ಮಸಂಬಂಧವಾದ ಮಾತುಗಳನ್ನಾಡುತ್ತಿರಬೇಕು. ದೀಪಗಳನ್ನು ಹಚ್ಚುತ್ತಿರಬೇಕು. ಇವು ಧರ್ಮಗಳೆಂದು ತಿಳಿದವರು ಹೇಳುತ್ತಾರೆ.

೩. ಪರರ ಮನೆಯ ಅನ್ನವನ್ನು ತಿನ್ನುವುದು, ಪರರ ಹಾಸಿಗೆಯಲ್ಲಿ ಮಲಗುವುದು, ಪರರನ್ನು ದೂಷಿಸುವುದು, ಪರರ ಹೆಂಗಸರನ್ನು ಅನುಭವಿಸುವುದು, ಇವನ್ನು ಯಾವಾಗಲೂ ಬಿಡಬೇಕು. ಅದರಲ್ಲಿಯೂ ಕಾರ್ತಿಕ ಮಾಸದಲ್ಲಿ ಕೂಡಲೇ ಕೂಡದು.

ಸರ್ವಾಮಿಷಾಣಿ ಮಾಷಾಂಶ್ಚ ಕ್ಷೌದ್ರಂ ಸೌವೀರಕಂ ತಥಾ ।
ರಾಜಮಾಷಾದಿಕಂ ಚಾಪಿ ನೈವಾದ್ಯಾತ್ಕಾರ್ತಿಕವ್ರತೀ ॥ ೪ ॥

ದ್ವಿದಳಂ ತಿಲತೈಲಂ ಚ ತಥಾನ್ನಂ ಶಲ್ಯದೂಷಿತಂ ।
ಭಾವದುಷ್ಟಂ ಶಬ್ದದುಷ್ಟಂ ವರ್ಜಯೇತ್ಕಾರ್ತಿಕವ್ರತೀ ॥ ೫ ॥

ಪರಾನ್ನಂ ಚ ಪರದ್ರೋಹಂ ಪರದಾರಾಗಮಂ ತಥಾ ।
ತೀರ್ಥೇ ಪರಿಗ್ರಹಂ ನಾಪಿ ಗೃಹ್ಣೀಯಾತ್ಕಾರ್ತಿಕವ್ರತೀ ॥ ೬ ॥

ದೇವವೇದದ್ವಿಜಾನಾಂ ಚ ಗುರುಗೋವ್ರತಿನಾಂ ತಥಾ ।
ಸ್ತ್ರೀರಾಜಮಹತಾಂ ನಿಂದಾಂ ವರ್ಜಯೇತ್ಕಾರ್ತಿಕವ್ರತೀ ॥ ೭ ॥

ಪ್ರಾಣ್ಯಂಗಮಾಮಿಷಂ ಚೂರ್ಣಂ ಫಲೇ ಜಂಬೀರಮಾಮಿಷಂ ।
ಧಾನ್ಯೇ ಮಸೂರಿಕಾ ಪ್ರೋಕ್ತಾ ಹ್ಯನ್ನಂ ಪರ್ಯುಷಿತಂ ತಥಾ ॥ ೮ ॥

---

೪. ಎಲ್ಲಾ ವಿಧವಾದ ಮಾಂಸಗಳು, ಉದ್ದು, ಜೇನು, ತುಪ್ಪ ಜೋಳ ತಡಗಣಿಕಾಳು ಇವನ್ನು ಕಾರ್ತಿಕ ವ್ರತಮಾಡುವವನು ತಿನ್ನಬಾರದು.

೫-೬. ದ್ವಿದಳಧಾನ್ಯಗಳು ಎಂದರೆ ಎರಡುಬೇಳೆಯಾಗುವ ಧಾನ್ಯಗಳು. ಎಳ್ಳೆಣ್ಣೆ ಮುಳ್ಳು ಮುಂತಾದ ಅಸಹ್ಯ ಪದಾರ್ಥಗಳಿಂದಲೂ ಕೂದಲು ಮುಂತಾದುವುಗಳಿಂದಲೂ ಕೂಡಿದ ಅನ್ನ, ದುರಭಿಪ್ರಾಯದಿಂದ ಕೂಡಿದ ಅನ್ನ, ಅಯೋಗ್ಯವಾದ ಮಾತುಗಳನ್ನು ಆಡುತ್ತ ಹಾಕಿದ ಅನ್ನ, ಇವನ್ನು ಕಾರ್ತಿಕವ್ರತ ಮಾಡುವವನು ಬಿಡಬೇಕು. ಪರರ ಸಂಬಂಧವಾದ ಅನ್ನ, ಪರರಿಗೆ ಕೆಡಕುಮಾಡುವುದು, ಪರರ ಹೆಂಡತಿಯನ್ನು ಹೊಂದುವುದು, ತೀರ್ಥಗಳಲ್ಲಿ ದಾನ ತೆಗೆದುಕೊಳ್ಳುವುದು, ಇವನ್ನು ಕಾರ್ತಿಕ ವ್ರತಮಾಡುವವನು ಸ್ವೀಕರಿಸಲೇಬಾರದು.

೭ ದೇವತೆಗಳು, ವೇದಗಳು, ಬ್ರಾಹ್ಮಣರು, ಗುರುಗಳು, ಗೋವುಗಳು, ವ್ರತಮಾಡತಕ್ಕವರು, ಹೆಂಗಸರು, ರಾಜರು, ಮಹಾತ್ಮರು, ಇವರನ್ನು ನಿಂದಿಸಬಾರದು.

೮. ಪ್ರಾಣಿಗಳ ಅವಯವಗಳ ಚೂರ್ಣವು ಮಾಂಸವು ಎಂದು ಎನಿಸಿಕೊಳ್ಳುತ್ತದೆ. ಹಣ್ಣುಗಳಲ್ಲಿ ನಿಂಬೆಹಣ್ಣು ಮಾಂಸವು. ಧಾನ್ಯಗಳಲ್ಲಿ ಸಾಮೆಯು ಮಾಂಸವು. ಅಂತೆಯೇ ಹಳಸಿದ ಅನ್ನವೂ ಮಾಂಸವು ಇವನ್ನು ವ್ರತಮಾಡತಕ್ಕವನು ಬಿಟ್ಟುಬಿಡಬೇಕು.

ಅಜಾಗೋಮಹಿಷೀಕ್ಷೀರಾದನ್ಯದುಗ್ಧಾದ್ಯಮಾಮಿಷಂ ।
ದ್ವಿಜಕ್ರೀತಾ ರಸಾಸ್ಸರ್ವೇ ಲವಣಂ ಭೂಮಿಜಂ ತಥಾ ॥ ೯ ॥

ತಾಮ್ರಪಾತ್ರಸ್ಥಿತಂ ಗವ್ಯಂ ಜಲಂ ಪಲ್ವಲಸಂಸ್ಥಿತಂ ।
ಆತ್ಮಾರ್ಥಂ ಪಾಚಿತಂ ಚಾನ್ನಮಾಮಿಷಂ ತತ್ಸ್ಮೃತಂ ಬುಧೈಃ ॥ ೧೦ ॥

ಬ್ರಹ್ಮಚರ್ಯಮಧಸ್ಸುಪ್ತಿಃ ಪತ್ರಾವಳ್ಯಾಂ ಚ ಭೋಜನಂ ।
ಚತುರ್ಥಕಾಲೇ ಭುಂಜೀತ ಕುರ್ಯಾದೇವಂ ಸದಾ ವ್ರತೀ ॥ ೧೧ ॥

ನರಕಸ್ಯ ಚತುರ್ದಶ್ಯಾಂ ತೈಲಾಭ್ಯಂಗಂ ಚ ಕಾರಯೇತ್ ।
ಅನ್ಯತ್ರ ಕಾರ್ತಿಕಸ್ನಾಯೀ ತೈಲಾಭ್ಯಂಗಂ ಚ ವರ್ಜಯೇತ್ ॥ ೧೨ ॥

ಪಲಾಂಡುಂ ಲಶುನಂ ಹಿಂಗು ಛತ್ರಾಕಂ ಗೃಂಜನಂ ತಥಾ ।
ನಾಳಿಕಂ ಮೂಲಕಂ ಶಿಗ್ರುಂ ವರ್ಜಯೇತ್ಕಾರ್ತಿಕವ್ರತೀ ॥ ೧೩ ॥

---

೯. ಆಡು, ಹಸು, ಎಮ್ಮೆಗಳ ಹಾಲು ಹೊರತಾಗಿ ಮಿಕ್ಕಹಾಲುಗಳು, ಮೊಸರು ತುಪ್ಪಗಳೂ, ಮಾಂಸಗಳು. ಬ್ರಾಹ್ಮಣನಿಂದ ಕೊಂಡುಕೊಂಡ ರಸಪದಾರ್ಥಗಳೆಲ್ಲವೂ ಮಾಂಸಗಳೇ. ಭೂಮಿಯ ಸಂಬಂಧವಾದ ಉಪ್ಪು (ಚೌಳುಪ್ಪು ಮುಂತಾದುವು) ಮಾಂಸಗಳೇ.

೧೦. ತಾಮ್ರದ ಪಾತ್ರೆಯಲ್ಲಿರುವ ಹಾಲು, ತುಪ್ಪ, ಮೊಸರು, ಮಜ್ಜಿಗೆಗಳೆಲ್ಲವೂ ಮಾಂಸಗಳೇ. ಸಣ್ಣಕುಂಟೆಯಲ್ಲಿರುವ ನೀರು ಮಾಂಸವು, ತನಗೋಸ್ಕರ ಮಾಡಿಕೊಂಡು ಅನ್ನವು ಮಾಂಸವು, ಎಂಬುದಾಗಿ ತಿಳಿದವರು ಹೇಳುತ್ತಾರೆ. ಇವೊಂದನ್ನೂ ಕಾರ್ತಿಕವ್ರತಿಯು ಉಪಯೋಗಿಸಬಾರದು.

೧೧–೧೨. ಕಾರ್ತಿಕವ್ರತ ಮಾಡುವವನು ಬ್ರಹ್ಮಚರ್ಯದಿಂದ ಇರಬೇಕು. ನೆಲದಮೇಲೆಯೇ ಮಲಗಬೇಕು. ಎಲೆಯಲ್ಲಿಯೇ ಊಟಮಾಡಬೇಕು. ಹಗಲಿನ ನಾಲ್ಕನೆ ಝಾವದಲ್ಲಿ ಊಟಮಾಡಬೇಕು ಕಾರ್ತಿಕ ಸ್ನಾನಮಾಡುವವನು, ನರಕಚತುರ್ದಶಿಯ ದಿವಸ ಎಣ್ಣೆ ಒತ್ತಿ ನೀರೆರೆದುಕೊಳ್ಳಬೇಕು ಕಾರ್ತಿಕಮಾಸದ ಉಳಿದ ದಿನಗಳಲ್ಲಿ ಎಣ್ಣೆ ನೀರನ್ನು ಹಾಕಿಕೊಳ್ಳಕೂಡದು.

೧೩. ಈರುಳ್ಳಿ, ಬೆಳ್ಳುಳ್ಳಿ, ಇಂಗು, ಅಣಬೆ, ಹಳದಿಯ ಬಣ್ಣದ ನೀರುಳ್ಳಿ, ದಂಟು, ಮೂಲಂಗಿ, ನುಗ್ಗೆಕಾಯಿ, ಮತ್ತು ಸೊಪ್ಪು ಇವನ್ನು ಕಾರ್ತಿಕವ್ರತಿಯು ಉಪಯೋಗಿಸಬಾರದು.

ಅಲಾಬುಂ ಚೈವ ವೃಂತಾಕಂ ಕೂಷ್ಮಾಂಡಂ ಬೃಹತೀಫಲಂ ।
ಶ್ಲೇಷ್ಮಾತಕಂ ಕಪಿತ್ಥಂ ಚ ವರ್ಜಯೇದ್ವೈಷ್ಣವವ್ರತೀ ॥ ೧೪ ॥

ರಜಸ್ವಲಾಂ ತ್ಯಜೇನ್ಮ್ಲೇಚ್ಛಪತಿತಾವ್ರತಕೈಸ್ಸಹ ।
ದ್ವಿಜದ್ವಿಡ್ವೇದಬಾಹ್ಯೈಶ್ಚ ನ ವದೇತ್ಸರ್ವದಾ ವ್ರತೀ ॥ ೧೫ ॥

ಏಭಿರ್ದೃಷ್ಟಂ ಚ ಕಾಕೈಶ್ಚ ಸೂತಿಕಾನ್ನಂ ಚ ಯದ್ಭವೇತ್ ।
ದ್ವಿಃಪಾಚಿತಂ ಚ ದಗ್ಧಾನ್ನಂ ನೈವಾದ್ಯಾದ್ವೈಷ್ಣವವ್ರತೀ ॥ ೧೬ ॥

ತೈಲಾಭ್ಯಂಗಂ ತಥಾ ಶಯ್ಯಾಂ ಪರಾನ್ನಂ ಕಾಂಸ್ಯಭೋಜನಂ ।
ಕಾರ್ತಿಕೇ ವರ್ಜಯೇದ್ಯಸ್ತು ಪರಿಪೂರ್ಣವ್ರತೀ ಭವೇತ್ ॥ ೧೭ ॥

ಏತಾನಿ ವರ್ಜಯೇನ್ನಿತ್ಯಂ ವ್ರತೀ ಸರ್ವವ್ರತೇಷ್ವಪಿ ।
ಕೃಚ್ಛ್ರಾದಿಕಂ ಪ್ರಕುರ್ವೀತ ಸ್ವಶಕ್ತ್ಯಾ ವಿಷ್ಣುತುಷ್ಟಯೆ ॥ ೧೮ ॥

---

೧೪. ಸೋರೆಕಾಯಿ, ಬದನೇಕಾಯಿ, ಕುಂಬಳಕಾಯಿ, ಗುಳ್ಳದಕಾಯಿ, ಚೊಳ್ಳೆಕಾಯಿ, ಬೇಲದಕಾಯಿ, ಹಣ್ಣು ಇವನ್ನು ಕಾರ್ತಿಕವ್ರತ ಮಾಡುವವನು ತಿನ್ನಬಾರದು.

೧೫. ಮುಟ್ಟಾದವಳನ್ನು ಮುಟ್ಟಬಾರದು, ಮ್ಲೇಚ್ಛರು, ಪತಿತರು, ವ್ರತಮಾಡದವರು, ಬ್ರಾಹ್ಮಣರನ್ನೂ ವೇದವನ್ನೂ ದೂಷಿಸುವವರು, ಬ್ರಾಹ್ಮಣ, ವೇದಗಳಿಂದ ಬಾಹ್ಯರು, ಇವರ ಸಂಗಡ ಮಾತನಾಡಬಾರದು.

೧೬. ಈ ಮೇಲೆ ಹೇಳಿದವರಿಂದ ನೋಡಲ್ಪಟ್ಟ, ಕಾಗೆಯಿಂದ ಮುಟ್ಟಲ್ಪಟ್ಟ ಅನ್ನವನ್ನೂ, ಸೂತಿಕಾನ್ನವನ್ನೂ ಎರಡುಸಾರಿ ಬೇಯಿಸಿದ ಅನ್ನವನ್ನೂ, ಸೀದ ಅನ್ನವನ್ನೂ, ತಿನ್ನಬಾರದು.

೧೭. ಅಭ್ಯಂಜನ, ಹಾಸಿಗೆಯಲ್ಲಿ ಮಲಗುವುದು, ಪರಾನ್ನವನ್ನು ತಿನ್ನುವುದು, ಕಂಚಿನ ತಣಿಗೆಯಲ್ಲಿ ಊಟಮಾಡುವುದು ಇವನ್ನು ಕಾರ್ತಿಕಮಾಸದಲ್ಲಿ ಬಿಟ್ಟರೆ ಅವನ ವ್ರತವು ಪೂರ್ಣವಾಗುತ್ತದೆ.

೧೮. ವ್ರತಮಾಡತಕ್ಕವನು ಮೇಲಿನವುಗಳೆಲ್ಲವನ್ನೂ ಬಿಡಬೇಕು. ಎಲ್ಲಾ ವ್ರತಗಳಲ್ಲಿಯೂ ಇವೆಲ್ಲವನ್ನೂ ಬಿಡಬೇಕು. ವಿಷ್ಣುವಿನ ತೃಪ್ತಿಗೋಸ್ಕರ ಕೃಚ್ಛ್ರ ಮುಂತಾದುವುಗಳನ್ನು ಶಕ್ತ್ಯನುಗುಣವಾಗಿ ಕೊಡಬೇಕು.

ಕ್ರಮಾತ್ಕೂಶ್ಮಾಂಡಬೃಹತೀ ತಗುಣೀಮೂಲಕಂ ತಥಾ ।
ಶ್ರೀಫಲಂ ಚ ಕಳಿಂಗಂ ಚ ಫಲಂ ಧಾತ್ರೀಭವಂ ತಥಾ ॥ ೧೯ ॥

ನಾರಿಕೇಳಮಲಾಬುಂ ಚ ಪಟೋಲಂ ಬದರೀಫಲಂ ।
ಚರ್ಮವೃಂತಾಕವಲ್ಲೀ ಚ ಶಾಕಂ ತುಲಸಿಜಂ ತಥಾ ॥ ೨೦ ॥

ಶಾಕಾನ್ಯೇತಾನಿ ವರ್ಜ್ಯಾನಿ ಕ್ರಮಾತ್ಪ್ರತಿ ಪದಾದಿಷು ।
ಧಾತ್ರೀಫಲಂ ರವೌ ತದ್ವದ್ವರ್ಜಯೇತ್ಸರ್ವದಾ ಗೃಹೀ ॥ ೨೧ ॥

ಏಭ್ಯೋಽನ್ಯದ್ವರ್ಜಯೇಕ್ಕಿಂಚಿದ್ಯದ್ವಿಷ್ಣು ಪ್ರೀತಯೇ ನರಃ ।
ತತ್ಪುನರ್ಬ್ರಾಹ್ಮಣೇ ದತ್ವಾ ಭಕ್ಷಯೇತ್ಸರ್ವದೈವ ಹಿ ॥ ೨೨ ॥

ಏವಮೇವ ಹಿ ಮಾಘೇಽಪಿ ಕುರ್ಯಾದ್ವೈ ನಿಯಮಾನ್ವ್ರತೀ ।
ಹರಿಜಾಗರಣಂ ತತ್ರ ವಿಧಿಪ್ರೋಕ್ತಂ ಚ ಕಾರಯೇತ್ ॥ ೨೩ ॥

---

೧೯–೨೦. ಕುಂಬಳ, ಗುಳ್ಳ, ಅಣಬೆ, ಮೂಲಂಗಿ, ಬಿಲ್ವಪತ್ರೆ, ಕಳಿಂಗ, ನೆಲ್ಲಿ, ತೆಂಗಿನಕಾಯಿ, ಸೋರೆ, ಪಡವಲ, ಎಗಚಿ, ಸಿಪ್ಪೆಯೇ ದಪ್ಪವಾಗಿ ಉಳ್ಳ ಬದನೆ ತುಲಸಿಯಲ್ಲಿ ಮಾಡುವ ಪದಾರ್ಥಗಳು ಇವುಗಳನ್ನು ಕ್ರಮವಾಗಿ ಪಾಡ್ಯದಿಂದ ಮೊದಲು ಮಾಡಿಕೊಂಡು ಒಂದನೇ ತಿಥಿಯಲ್ಲಿ ಒಂದನೇದನ್ನೂ, ಎರಡನೇ ತಿಥಿಯಲ್ಲಿ ಎರಡನೆಯದನ್ನೂ ಈ ರೀತಿ ಬಿಡಬೇಕು.

೨೧. ನೆಲ್ಲಿಕಾಯನ್ನು ಎಂದರೆ ಅದರಲ್ಲಿ ಮಾಡಿದುದನ್ನು ಭಾನುವಾರದಲ್ಲಿ ತಿನ್ನಬಾರದು. ಇದರಂತೆ ವಾರಗಳನ್ನು ನೋಡಿಕೊಂಡು ಅದಕ್ಕೆ ಅಧಿಪತಿಗಳಾದ ದೇವತೆಗಳಿಗೆ ಪ್ರಿಯವಾದುದನ್ನು ಆಯಾ ವಾರಗಳಲ್ಲಿ ಬಿಟ್ಟುಬಿಡಬೇಕು.

೨೨ ಮೇಲೆ ಹೇಳಿದುದನ್ನು ಅಲ್ಲದೆ ಮತ್ತೂ ಕೆಲವನ್ನು ವಿಷ್ಣು ಪ್ರೀತಿಗೋಸ್ಕರ ಬಿಡಬೇಕು. ಮತ್ತೆ ಅದನ್ನು ತಿನ್ನಬೇಕೆಂದು ತೋರಿದಾಗ ಮೊದಲು ಬ್ರಾಹ್ಮಣನಿಗೆ ಅದನ್ನು ದಾನಮಾಡಿ ಆಮೇಲೆ ತಿನ್ನಬೇಕು.

೨೩. ಈ ರೀತಿಯಾಗಿಯೇ ನಿಯಮಗಳನ್ನೂ ಮಾಘಮಾಸದ ವ್ರತದಲ್ಲಿಯೂ ಮಾಡಬೇಕು. ಆಗಲೂ ಹರಿಯ ಜಾಗರಣೆಯನ್ನು ನಿಯಮದಂತೆ ಆಚರಿಸಬೇಕು.

ಯಥೋಕ್ತಕಾರಿಣಂ ದೃಷ್ಟ್ವಾ ಕಾರ್ತಿಕವ್ರತಿನಂ ನರಂ ।
ಯಮದೂತಾಃ ಪಲಾಯನ್ತೇ ಗಜಾಸ್ಸಿಂಹಾರ್ದಿತಾ ಯಥಾ || ೨೪ ||

ವರಂ ವಿಷ್ಣುವ್ರತಂ ಹ್ಯೇತತ್ ಜ್ಞೇಯಂ ಯಜ್ಞಶತಾಧಿಕಂ ।
ಯಜ್ಞಕೃತ್ಪ್ರಾಪ್ನುಯಾತ್ಸ್ವರ್ಗಂ ವೈಕುಂಠಂ ಕಾರ್ತಿಕವ್ರತೀ || ೨೫ ||

ಭುಕ್ತಿಮುಕ್ತಿಪ್ರದಾನೀಹ ಯಾನಿ ಕ್ಷೇತ್ರಾಣಿ ಭೂತಲೇ ।
ವಸಂತಿ ತಾನಿ ವೈ ದೇಹೇ ಕಾರ್ತಿಕವ್ರತಕಾರಿಣಃ || ೨೬ ||

ದುಸ್ಸ್ವಪ್ನಂ ದುಷ್ಕೃತಂ ಕಿಂಚಿನ್ಮನೋವಾಕ್ಕಾಯಕರ್ಮಜಂ ।
ಕಾರ್ತಿಕವ್ರತಿನಂ ದೃಷ್ಟ್ವಾ ವಿಲಯಂ ಯಾತಿ ತತ್ಕ್ಷಣಾತ್ || ೨೭ ||

ಕಾರ್ತಿಕವ್ರತಿನಃ ಪುಂಸೋ ವಿಷ್ಣುವಾಕ್ಯಪ್ರಣೋದಿತಾಃ ।
ರಕ್ಷಾಂ ಕುರ್ವಂತಿ ಶಕ್ರಾದ್ಯಾ ರಾಜ್ಞೋ ವೈ ಕಿಂಕರಾ ಯಥಾ || ೨೮ ||

---

೨೪. ಈ ರೀತಿಯಾಗಿ ನಿಯಮಗಳನ್ನು ಅನುಸರಿಸುತ್ತಿರುವವನನ್ನು ನೋಡಿ ಯಮದೂತರು ಸಿಂಹಗಳಿಂದ ಹೆದರಿದ ಆನೆಗಳು ಓಡುವಂತೆ ಓಡುತ್ತಾರೆ.

೨೫. ಈ ವಿಷ್ಣು ವ್ರತವು ನೂರು ಯಜ್ಞಗಳಿಗಿಂತಲೂ ಶ್ರೇಷ್ಠವಾದುದು. ಯಜ್ಞ ಮಾಡಿದವನು ಸ್ವರ್ಗವನ್ನು ಹೊಂದುತ್ತಾನೆ. ಈ ಕಾರ್ತಿಕ ವ್ರತವನ್ನು ಮಾಡಿದವನು ವೈಕುಂಠವನ್ನು ಹೊಂದುತ್ತಾನೆ.

೨೬. ಭುಕ್ತಿ ಮುಕ್ತಿಯನ್ನು ಕೊಡತಕ್ಕ ಕ್ಷೇತ್ರಗಳು ಭೂಮಿಯಲ್ಲಿ ಎಷ್ಟಿವೆಯೋ ಅವೆಲ್ಲವೂ ಕೂಡ ಕಾರ್ತಿಕ ವ್ರತವನ್ನು ಮಾಡುವವನ ದೇಹದಲ್ಲಿ ವಾಸಮಾಡುತ್ತವೆ.

೨೭. ದುಸ್ಸ್ವಪ್ನಗಳು, ಮನಸ್ಸು, ದೇಹ, ಮಾತುಗಳಿಂದ ಮಾಡಿದ ಪಾಪಗಳು ಎಲ್ಲವೂ ಈ ಕಾರ್ತಿಕ ವ್ರತಮಾಡುವವನನ್ನು ನೋಡಿದ ಒಡನೆಯೇ ನಾಶವಾಗುತ್ತವೆ.

೨೮. ಕಾರ್ತಿಕ ವ್ರತವನ್ನು ಆಚರಿಸುವ ಮನುಷ್ಯನನ್ನು ವಿಷ್ಣುವಿನ ಅಪ್ಪಣೆಯಿಂದ ಇಂದ್ರನೇ ಮುಂತಾದ ದೇವತೆಗಳು ರಾಜನನ್ನು ಆಳುಗಳು ರಕ್ಷಿಸುವಂತೆ ರಕ್ಷಿಸುತ್ತಾರೆ.

ವಿಷ್ಣುವ್ರತಕರೋ ನಿತ್ಯಂ ಯತ್ರ ತಿಷ್ಠತಿ ಪೂಜಿತಃ ।
ಗ್ರಹಭೂತಪಿಶಾಚಾದ್ಯಾ ನೈವ ತಿಷ್ಠಂತಿ ತತ್ರ ವೈ ॥ ೨೯ ॥

ಕಾರ್ತಿಕವ್ರತಿನಃ ಪುಣ್ಯಂ ಯತೋಕ್ತವ್ರತಕಾರಿಣಃ ।
ನ ಸಮರ್ಥೋ ಭವೇದ್ವಕ್ತುಂ ಬ್ರಹ್ಮಾಪಿ ಹಿ ಚತುರ್ಮುಖಃ ॥ ೩೦ ॥

ವಿಷ್ಣುಪ್ರಿಯಂ ಸಕಲಕಲ್ಮಷನಾಶನಂ ಚ
ಸತ್ಪುತ್ರಪೌತ್ರಧನಧಾನ್ಯಸಮೃದ್ಧಿಕಾರಿ ।
ಊರ್ಜವ್ರತಂ ಸನಿಯಮಂ ಕುರುತೇ ಮನುಷ್ಯಃ
ಕಿಂ ತಸ್ಯ ತೀರ್ಥಪರಿಶೀಲನಸೇವಯಾ ಚ ॥ ೩೧ ॥

ಇತಿ ಶ್ರೀ ಮಹಾಪುರಾಣೇ ಪಾದ್ಮೇ ಉತ್ತರಖಂಡೇ ಶ್ರೀ ಕೃಷ್ಣ ಸತ್ಯಭಾಮಾ ಸಂವಾದೇ ಕಾರ್ತಿಕ ಮಾಹಾತ್ಮ್ಯೇ ಹರಿ ಜಾಗರಣ ವಿಧಿರ್ನಾಮ ಷಣ್ಣವತಿತಮೋಽಧ್ಯಾಯಸ್ಸಮಾಪ್ತಃ

---

೨೯. ವಿಷ್ಣುವಿನ ವ್ರತಗಳನ್ನು ಮಾಡುವವನು ಎಲ್ಲಿ ಇರುತ್ತಾನೆಯೋ ಆ ಜಾಗದಲ್ಲಿ ಗ್ರಹಗಳು, ಭೂತ, ಪ್ರೇತ, ಪಿಶಾಚಗಳೂ ನಿಲ್ಲದೆ ಓಡಿಹೋಗುತ್ತವೆ.

೩೦. ಶಾಸ್ತ್ರದಲ್ಲಿ ಹೇಳಿರುವ ರೀತಿಯಲ್ಲಿ ಕಾರ್ತಿಕ ವ್ರತವನ್ನು ಮಾಡುವವನ ಪುಣ್ಯವನ್ನು ಹೇಳಲು ನಾಲ್ಕು ಮುಖವುಳ್ಳ ಬ್ರಹ್ಮನಿಗೂ ಸಾಧ್ಯವಾಗಲಾರದು.

೩೧. ಈ ಕಾರ್ತಿಕ ವ್ರತವು ವಿಷ್ಣುವಿಗೆ ಪ್ರೀತಿಕರವು. ಎಲ್ಲಾ ಪಾಪವನ್ನೂ ನಾಶಮಾಡುತ್ತದೆ. ಮಕ್ಕಳು ಮೊಮ್ಮಕ್ಕಳನ್ನು ಕೊಡುತ್ತದೆ. ಧಾನ್ಯಗಳನ್ನು ವೃದ್ಧಿಪಡಿಸುತ್ತದೆ. ಇದನ್ನು ನಿಯಮದಿಂದ ಮಾಡಿದ ಮನುಷ್ಯನಿಗೆ ಬೇರೆ ತೀರ್ಥಗಳು ಬೇಕಿರುವುದೇ ಇಲ್ಲವು.

ಇಂತು ಶ್ರೀ ಪದ್ಮಮಹಾಪುರಾಣದ ಉತ್ತರಖಂಡದ ಶ್ರೀ ಕೃಷ್ಣ ಸತ್ಯಭಾಮೆಯರ ಸಂವಾದದ ಕಾರ್ತಿಕ ಮಹಿಮೆಯಲ್ಲಿ ಹರಿ ಜಾಗರಣ ವಿಧಿ ಎಂಬ ತೊಂಭತ್ತಾರನೆಯ ಅಧ್ಯಾಯವು ಮುಗಿದುದು.



|| ಶ್ರೀಃ ||

–X–

## ಅಥ ಶ್ರೀ ಮಹಾಪುರಾಣೇ ಪಾದ್ಮೇ ಉತ್ತರಖಂಡೇ

## || ಸಪ್ತನವತಿತಮೋಽಧ್ಯಾಯಃ ||



|| ನಾರದ ಉವಾಚ ||

**ಅಥೋರ್ಜವ್ರತಿನಸ್ಸಮ್ಯಗುದ್ಯಾಪನಂ ವಿಧಿಂ ನೃಪ |**
**ತ್ವಂ ಶೃಣುಷ್ವ ಮಯಾಖ್ಯಾತಂ ಸ ವಿಧಾನಂ ಸಮಾಸತಃ || ೧ ||**

**ಊರ್ಜಶುಕ್ಲ ಚತುರ್ದಶ್ಯಾಂ ಕುರ್ಯಾದುದ್ಯಾಪನಂ ವ್ರತೀ |**
**ವ್ರತಸಂಪೂರಣಾರ್ಥಾಯ ವಿಷ್ಣುಪ್ರೀತ್ಯರ್ಥಮೇವ ಚ || ೨ ||**

**ತುಲಸ್ಯಾ ಉಪರಿಷ್ಟಾತ್ತು ಕುರ್ಯಾನ್ಮಂಡಪಿಕಾಂ ಶುಭಾಂ |**
**ಸುತೋರಣಾಂ ಚತುರ್ದ್ವಾರಾಂ ಪುಷ್ಪಚಾಮರಶೋಭಿತಾಂ || ೩ ||**

---

## ತೊಂಭತ್ತೇಳನೆಯ ಅಧ್ಯಾಯವು



೧. ನಾರದನು ಹೇಳಿದನು–ಕಾರ್ತಿಕಮಾಸದ ವ್ರತವನ್ನು ಮಾಡುವವರು ಉದ್ಯಾಪನೆ ಮಾಡುವ ವಿಧಿಯನ್ನು ಹೇಳುತ್ತೇನೆ. ಅದನ್ನು ಕೇಳು.

೨. ವ್ರತ ಪೂರ್ತಿಯಾಗುವುದಕ್ಕೂ, ವಿಷ್ಣುವು ಪ್ರೀತನಾಗುವುದಕ್ಕೂ, ಕಾರ್ತಿಕ ಶುದ್ಧ ಚತುರ್ದಶಿಯ ದಿವಸ ಉದ್ಯಾಪನೆಯನ್ನು ವ್ರತ ಮಾಡುತ್ತಿರುವವನು ಮಾಡಬೇಕು.

೩. ತುಳಸಿಯ ಮೇಲುಗಡೆ ಮಂಟಪವನ್ನು ಕಟ್ಟಬೇಕು. ಅದಕ್ಕೆ ನಾಲ್ಕು ಬಾಗಿಲುಗಳಿರಬೇಕು. ತೋರಣವನ್ನು ಕಟ್ಟಿ ಹೂವು, ಚಾಮರಗಳಿಂದ ಅಲಂಕರಿಸಬೇಕು.

ದ್ವಾರೇಷು ದ್ವಾರಪಾಲಾಂಶ್ಚ ಪೂಜಯೇನ್ಮೃಣ್ಮಯಾನ್ಪೃಥಕ್ ।
ಪುಣ್ಯಶೀಲಂ ಸುಶೀಲಂ ಚ ಜಯಂ ವಿಜಯಮೇವ ಚ ॥ ೪ ॥

ತುಳಸೀಮೂಲದೇಶೇ ವೈ ಸರ್ವತೋ ಭದ್ರಮಾಲಿಕೇತ್ ।
ಚತುರ್ಭಿರ್ವರ್ಣಕೈಸ್ಸಮ್ಯಕ್ ಶೋಭಾಢ್ಯಂ ಸುಮನೋಹರಂ ॥ ೫ ॥

ತಸ್ಯೋಪರಿಷ್ಟಾತ್ಕಲಶಂ ಪಂಚರತ್ನಸಮನ್ವಿತಂ ।
ಮಹಾಫಲೇನ ಸಂಯುಕ್ತಂ ಕುಂಭಂ ತತ್ರ ನಿಧಾಯ ಚ ॥ ೬ ॥

ಪೂಜಯೇತ್ತತ್ರ ದೇವೇಶಂ ಶಂಖಚಕ್ರಗದಾಧರಂ ।
ಕೌಶೇಯಪೀತವಸನಂ ಯುತಂ ಜಲಧಿಕನ್ಯಯಾ ॥ ೭ ॥

ಇಂದ್ರಾದಿಲೋಕಪಾಲಾಂಶ್ಚ ಪೂಜಯೇನ್ಮಂಡಲೇ ವ್ರತೀ ।
ದ್ವಾದಶ್ಯಾಂ ಪ್ರತಿಬುದ್ಧೋಽಸೌ ತ್ರಯೋದಶ್ಯಾಂ ತತಸ್ಸುರೈಃ ॥ ೮ ॥

---

೪. ಬಾಗಿಲುಗಳಲ್ಲಿ ಪುಣ್ಯಶೀಲ, ಸುಶೀಲ, ಜಯ, ವಿಜಯರೆಂಬ ದ್ವಾರ ಪಾಲಕರನ್ನು ಮಣ್ಣಿನಲ್ಲಿ ಮಾಡಿ ಇಟ್ಟು ಪೂಜಿಸಬೇಕು.

೫. ತುಳಸಿಯ ಬುಡದಲ್ಲಿ ಸರ್ವತೋಭದ್ರವೆಂಬ ಮಂಡಲವನ್ನು ಬರೆಯಬೇಕು. ಅದನ್ನು ನಾಲ್ಕು ಬಗೆಯ ಬಣ್ಣಗಳಿಂದ ಅಲಂಕಾರವಾಗಿ ಚೆನ್ನಾಗಿ ಬರೆಯಬೇಕು.

೬. ಆ ಸರ್ವತೋಭದ್ರಮಂಡಲದಮೇಲೆ ಐದು ಬಗೆಯ ರತ್ನಗಳನ್ನು ಹಾಕಿ ಮೇಲೆ ಫಲವನ್ನು ಇಟ್ಟು ಒಂದು ಕಲಶವನ್ನು ಇಡಬೇಕು.

೭. ಆ ಕಲಶದಲ್ಲಿ ದೇವದೇವನಾದ, ಶಂಖ ಚಕ್ರ ಗದಾಧರನಾದ, ಹೊಂಬಣ್ಣದ ರೇಷ್ಮೆಯ ಬಟ್ಟೆಯನ್ನು ಹೊದ್ದಿರುವ, ವಿಷ್ಣುವನ್ನು ಲಕ್ಷ್ಮಿಯೊಡನೆ ಆವಾಹಿಸಿ ಪೂಜಿಸಬೇಕು.

೮–೯. ಇಂದ್ರನೇ ಮುಂತಾದ ಲೋಕಪಾಲಕರನ್ನು ಆ ಮಂಡಲದಮೇಲೆ ಪೂಜಿಸಬೇಕು. ದ್ವಾದಶಿಯದಿನ ಎಚ್ಚರಗೊಂಡ ಸ್ವಾಮಿಯನ್ನು ದೇವತೆಗಳು ತ್ರಯೋದಶಿಯ ದಿವಸ ನೋಡಿ ಚತುರ್ದಶಿಯ ದಿವಸ ಪೂಜಿಸಿದರು. ಆದ್ದರಿಂದ

ದೃಷ್ಟ್ವೋರ್ಚಿತಶ್ಚತುರ್ದಶ್ಯಾಂ ತಸ್ಮಾತ್ಪೂಜ್ಯಸ್ತ್ವಿಹಾಪಿ ಚ ।
ತಸ್ಯಾಮುಪವಸೇದ್ಭಕ್ತ್ಯಾ ಶಾಸ್ತ್ರಂ ಪ್ರಯತಮಾನಸಃ ॥ ೯ ॥

ಪೂಜಯೇದ್ದೇವದೇವೇಶಂ ಸೌವರ್ಣಂ ಗುರ್ವನುಜ್ಞಯಾ ।
ಉಪಚಾರೈಷ್ಷೋಡಶಭಿಃ ನಾನಾಭಕ್ಷ್ಯಸಮನ್ವಿತೈಃ ॥ ೧೦ ॥

ರಾತ್ರೌ ಜಾಗರಣಂ ಕುರ್ಯಾದ್ಗೀತವಾದ್ಯಾದಿಮಂಗಳೈಃ ।
ಗೀತಂ ಕುರ್ವಂತಿ ಯೇ ಭಕ್ತ್ಯಾ ಜಾಗರೇ ಚಕ್ರಪಾಣಿನಃ ॥ ೧೧ ॥

ಜನ್ಮಾಂತರಶತೋದ್ಭೂತೈಃ ಮುಕ್ತಾಸ್ತೇ ಪಾಪಸಂಚಯೈಃ ।
ನರಾಣಾಂ ಜಾಗರೇ ವಿಷ್ಣೋಃ ಗೀತವಾದ್ಯಂ ಪ್ರಕುರ್ವತಾಂ ॥ ೧೨ ॥

ಗೋಸಹಸ್ರಂ ಚ ದದತಾಂ ಸಮಂ ಫಲಮುದಾಹೃತಂ ।
ಗೀತನೃತ್ಯಾದಿಕಂ ಕುರ್ವನ್ದರ್ಶಯನ್ಕೌತುಕಾನಿ ಚ ॥ ೧೩ ॥

---

ಇಲ್ಲಿಯೂ ಅದರಂತೆಯೇ ಪೂಜಿಸಬೇಕು ಆದಿನ ಶಾಂತಚಿತ್ತದಿಂದ ಉಪವಾಸ ಮಾಡಿ ಪೂಜಿಸಬೇಕು.

೧೦. ಗುರುವಿನ ಅಪ್ಪಣೆಯನ್ನು ಪಡೆದು ಚಿನ್ನದ ಪ್ರತಿಮೆಯಲ್ಲಿ ಆವಾಹಿಸಿರುವ ಆ ಸ್ವಾಮಿಯನ್ನು ಷೋಡಶೋಪಚಾರಗಳಿಂದಲೂ ನಾನಾ ಬಗೆಯಾದ ಭಕ್ಷ್ಯಗಳಿಂದಲೂ ಪೂಜಿಸಬೇಕು.

೧೧-೧೭. ರಾತ್ರಿಯಲ್ಲಿ ಗೀತ ವಾದ್ಯಾದಿಗಳನ್ನು ಮಾಡುತ್ತ ಜಾಗರಣೆ ಮಾಡಬೇಕು. ವಿಷ್ಣುವಿನ ಜಾಗರಣೆಯ ದಿವಸ ಭಕ್ತಿಯಿಂದ ಯಾರು ಗಾನವನ್ನು ಮಾಡುತ್ತಾರೆಯೋ ಅವರು ನೂರಾರು ಜನ್ಮಗಳು ಮಾಡಿರುವ ಪಾಪಗಳಿಂದ ಮುಕ್ತರಾಗುತ್ತಾರೆ. ವಿಷ್ಣುವಿನ ಜಾಗರಣೆಯಲ್ಲಿ ಗೀತವಾದ್ಯಗಳನ್ನು ಮಾಡುವವರಿಗೂ ಸಾವಿರ ಗೋದಾನ ಮಾಡುವವರಿಗೂ ಒಂದೇ ಫಲವು ಬರುವುದೆಂದು ಹೇಳಲ್ಪಟ್ಟಿದೆ. ಆ ಜಾಗರಣೆಯ ದಿನದಲ್ಲಿ ಗೀತ, ನೃತ್ಯ, ವಾದ್ಯಗಳನ್ನು ಮಾಡುತ್ತಾ ಚಮತ್ಕಾರಗಳನ್ನು ತೋರಿಸಬೇಕು. ಆ ರಾತ್ರಿಯ ಜಾಗರಣೆಯಲ್ಲಿ

ಪುರತೋ ವಾಸುದೇವಸ್ಯ ರಾತ್ರೌ ಚ ಹರಿಜಾಗರೇ ।
ಪಠನ್ವಿಷ್ಣುಚರಿತ್ರಾಣಿ ಯೋ ರಂಜಯತಿ ವೈಷ್ಣವಾನ್ ॥ ೧೪ ॥

ಮುಖೇನ ಕುರುತೇ ವಾದ್ಯಂ ಸ್ವೇಚ್ಛಾಲಾಪಾಂಶ್ಚ ವರ್ಜಯೇತ್ ।
ಭಾವೈರೇತೈರ್ನರೋ ಯಸ್ತು ಕುರುತೇ ಹರಿಜಾಗರಂ ॥ ೧೫ ॥

ದಿನೇ ದಿನೇ ತಸ್ಯ ಪುಣ್ಯಂ ತೀರ್ಥಕೋಟಿಸಮಂ ಸ್ಮೃತಂ ।
ತತಸ್ತು ಪೌರ್ಣಮಾಸ್ಯಾಂ ವೈ ಸಪತ್ನೀಕಾನ್ದ್ವಿಜೋತ್ತಮಾನ್ ॥ ೧೬ ॥

ತ್ರಿಂಶನ್ಮಿತಾನಥೈಕಂ ವಾ ಸ್ವಶಕ್ತ್ಯಾ ವಾ ನಿಮಂತ್ರಯೇತ್ ।
ವರಾನ್ದತ್ವಾ ಯತೋ ವಿಷ್ಣುಃ ಮತ್ಸ್ಯರೂಪ್ಯಭವತ್ತತಃ ॥ ೧೭ ॥

ಅಸ್ಯಾಂ ದತ್ತಂ ಹುತಂ ಜಪ್ತಂ ತದಕ್ಷಯಫಲಂ ಸ್ಮೃತಂ ।
ಅತಸ್ತಾನ್ಭೋಜಯೇದ್ವಿಪ್ರಾ್ ಪಾಯಸಾನ್ನಾದಿನಾ ವ್ರತೀ ॥ ೧೮ ॥

---

ಸ್ವಾಮಿಯ ಮುಂದೆ ವಿಷ್ಣುವಿನ ಚರಿತ್ರೆಯನ್ನು ಓದಬೇಕು. ಹಾಗೆ ಮಾಡುತ್ತ ಜನಗಳನ್ನು ಸಂತೋಷಪಡಿಸಬೇಕು. ಮುಖದಿಂದ ವಾದ್ಯಗಳನ್ನು ಬಾರಿಸಬೇಕು. ಉಪಯೋಗವಿಲ್ಲದ ಹರಟೆಯನ್ನು ಹರಟಬಾರದು. ಈ ರೀತಿಯಾಗಿ ಯಾವನು ಜಾಗರಣೆಯನ್ನು ಮಾಡುತ್ತಾನೆಯೋ ಅವನಿಗೆ ಪ್ರತಿದಿನವಲ್ಲಿಯೂ ಕೋಟಿ ತೀರ್ಥಗಳನ್ನು ಸೇವಿಸಿದ ಫಲವು ಬರುತ್ತದೆ. ಆಮೇಲೆ ಹುಣ್ಣಿಮೆಯ ದಿವಸ ಮೂವತ್ತು ಜನ ದಂಪತಿಗಳಿಗೆ ಹೇಳಬೇಕು. ಅಥವಾ ಕೈಲಾದಷ್ಟು ಜನ ದಂಪತಿಗಳಿಗೆ ಊಟಕ್ಕೆ ಹೇಳಬೇಕು. ಕೊನೆಗೆ ಒಂದು ದಂಪತಿಗಳಿಗಾದರೂ ಹೇಳಬೇಕು. ಆ ಪೂರ್ಣಿಮೆಯ ದಿವಸ ವಿಷ್ಣುವು ವರವನ್ನು ಕೊಟ್ಟು ಅನಂತರ ಮತ್ಸ್ಯರೂಪವನ್ನು ಹೊಂದಿದನು. ಆದ್ದರಿಂದ ಆ ದಿನವು ಅತ್ಯಂತ ಶ್ರೇಷ್ಠವಾದುದು.

೧೮. ಆ ಹುಣ್ಣಿಮೆಯಲ್ಲಿ ಮಾಡಿದ ದಾನ, ಹೋಮ, ಜಪಗಳು ಅಕ್ಷಯ ಫಲವನ್ನು ಕೊಡುತ್ತವೆ. ಆದ್ದರಿಂದ ಆದಿನ ದಂಪತಿಗಳನ್ನು ಮೃಷ್ಟಾನ್ನದಿಂದ ಊಟಮಾಡಿಸಬೇಕು.

ಅತೋ ದೇವಾ ಇತಿ ದ್ವಾಭ್ಯಾಂ ಜುಹುಯಾತ್ತಿಲಪಾಯಸಂ ।
ಪ್ರೀತ್ಯರ್ಥಂ ದೇವದೇವಸ್ಯ ದೇವಾನಾಂ ಚ ಪೃಥಕ್ ಪೃಥಕ್ ॥ ೧೯ ॥

ದಕ್ಷಿಣಾಂ ಚ ಯಥಾಶಕ್ತಿ ಪ್ರದದ್ಯಾತ್ಪ್ರಣಮೇಚ್ಚ ತಾನ್ ।
ಪುನರ್ದೇವಂ ಸಮಭ್ಯರ್ಚ್ಯ ದೇವಾಂಶ್ಚ ತುಲಸೀಂ ತಥಾ ॥ ೨೦ ॥

ತತೋ ಗಾಂ ಕಪಿಲಾಂ ತತ್ರ ಪೂಜಯೇ ದ್ವಿಧಿವದ್ವ್ರತೀ ।
ಗುರುಂ ವ್ರತೋಪದೇಷ್ಟಾರಂ ವಸ್ತ್ರಾಲಂಕರಣಾದಿಭಿಃ ॥ ೨೧ ॥

ಸಪತ್ನೀಕಂ ಸಮಭ್ಯರ್ಚ್ಯ ತಾಂಶ್ಚ ವಿಪ್ರಾನ್ ಕ್ಷಮಾಪಯೇತ್ ।
ಯುಷ್ಮತ್ಪ್ರಸಾದಾದ್ದೇವೇಶಃ ಪ್ರಸನ್ನೋಽಸ್ತು ಸದಾ ಮಮ ॥ ೨೨ ॥

ವ್ರತಾದಸ್ಮಾಚ್ಚ ಯತ್ಪಾಪಂ ಸಪ್ತಜನ್ಮಕೃತಂ ಮಯಾ ।
ತತ್ಸರ್ವಂ ನಾಶಮಾಯಾತು ಸ್ಥಿರಾ ನೋ ಚಾಸ್ತು ಸಂತತಿಃ ॥ ೨೩ ॥

---

೧೯. "ಅತೋದೇವಾ ಅವಂತು ನಃ" ಎಂಬ ಎರಡು ಮಂತ್ರಗಳಿಂದ ಎಳ್ಳನ್ನೂ ಪಾಯಸವನ್ನೂ ಹೋಮ ಮಾಡಬೇಕು. ಹಾಗೆ ಮಾಡಿದರೆ ದೇವ ದೇವನಾದ ಸ್ವಾಮಿಗೆ ಸಂತೋಷವಾಗುತ್ತದೆ. ಅನಂತರ ಉಳಿದ ದೇವತೆಗಳಿಗೆ ಅವರವರ ಹೆಸರನ್ನು ಹೇಳಿಕೊಂಡು ಬೇರೆಬೇರೆಯಾಗಿ ಹೋಮಮಾಡಬೇಕು

೨೦–೨೨. ಶಕ್ತಿಗನುಗುಣವಾಗಿ ಅವರಿಗೆ ದಕ್ಷಿಣೆಯನ್ನು ಕೊಡಬೇಕು. ಅನಂತರ ಅವರಿಗೆ ನಮಸ್ಕರಿಸಬೇಕು. ಆಮೇಲೆ ಮತ್ತೆ ಆ ವಿಷ್ಣುವನ್ನೂ ಲೋಕಪಾಲರೇ ಮುಂತಾದ ದೇವತೆಗಳನ್ನೂ ತುಲಸಿಯನ್ನೂ ಗೋವನ್ನೂ ಪೂಜಿಸಬೇಕು. ಆ ಗೋವು ಕಪಿಲ ಬಣ್ಣಕ್ಕಿದ್ದರೆ ಶ್ರೇಷ್ಠವು. ವ್ರತವನ್ನು ಉಪದೇಶಿಸಿದ ಗುರುವಿಗೆ ಬಟ್ಟೆ ಮುಂತಾದ ಅಲಂಕಾರಗಳಿಂದ ಅಲಂಕರಿಸಬೇಕು. ಆತನ ಹೆಂಡತಿಯನ್ನು ಅಲಂಕಾರಗಳಿಂದ ಪೂಜಿಸಬೇಕು. ಹೀಗೆ ಆ ದಂಪತಿ ಗಳನ್ನು ಪೂಜಿಸಿ ಅನಂತರ ಆ ಬ್ರಾಹ್ಮಣರನ್ನು ಕ್ಷಮಿಸುವಂತೆ ಕೇಳಿಕೊಂಡು ಉಪಚಾರವನ್ನು ಹೇಳಬೇಕು. ನಿಮ್ಮ ಅನುಗ್ರಹದಿಂದ ದೇವದೇವನು ನನಗೆ ಯಾವಾಗಲೂ ಪ್ರಸನ್ನನಾಗಿ ಆಗಲಿ ಎಂದೆನ್ನಬೇಕು.

೨೩. ನಾನು ಏಳು ಜನ್ಮದಿಂದಲೂ ಮಾಡಿರುವ ಪಾಪಗಳು ಎಲ್ಲವೂ ಈ ವ್ರತದಿಂದ ನಾಶವನ್ನು ಹೊಂದಲಿ. ನನ್ನ ಸಂತತಿಯು ನಾಶವನ್ನು ಹೊಂದದೆ ಸ್ಥಿರವಾಗಲಿ.

ಮನೋರಥಾಸ್ತು ಸಫಲಾಸ್ಸಂತು ನಿತ್ಯಂ ಸಮರ್ಚನಾತ್ ।
ದೇಹಾನ್ತೇ ವೈಷ್ಣವಂ ಸ್ಥಾನಮವಾಪ್ನುಯಾಮತಿದುರ್ಲಭಂ ॥ ೨೪ ॥

ಇತಿಕ್ಷಮಾಪ್ಯ ತಾನ್ವಿಪ್ರಾನ್ಪ್ರಸಾದ್ಯ ಚ ವಿಸರ್ಜಯೇತ್ ।
ತಾಮರ್ಚಾಂ ಗುರುವೇ ದದ್ಯಾದ್ಧೇನ್ವಾ ಯುಕ್ತಾಂ ತದಾ ವ್ರತೀ ॥ ೨೫ ॥

ತತಸ್ಸುಹೃದ್ಗುರುಯುತಃ ಸ್ವಯಂ ಭುಂಜೀತ ಭಕ್ತಿಮಾನ್ ।
ಕಾರ್ತಿಕೇ ವಾಥ ತಪಸಿ ವಿಧಿರೇವಂವಿಧಃ ಸ್ಮೃತಃ ॥ ೨೬ ॥

ಏವಂ ಯಃ ಕುರುತೇ ಸಮ್ಯಕ್ಕಾರ್ತಿಕಸ್ಯ ವ್ರತಂ ನರಃ ।
ನಿಷ್ಪಾಪಸ್ಸವಿನಿರ್ಮುಕ್ತೋ ವಿಷ್ಣುಸಾನ್ನಿಧ್ಯಮಾಪ್ನುಯಾತ್ ॥ ೨೭ ॥

ಸರ್ವವ್ರತೈಸ್ಸರ್ವತೀರ್ಥೈ ಸ್ಸರ್ವದಾನೈಶ್ಚ ಯತ್ಫಲಂ ।
ತತ್ಕೋಟಿಗುಣಿತಂ ಜ್ಞೇಯಂ ಸಮ್ಯಗಸ್ಯ ವಿಧಾನತಃ ॥ ೨೮ ॥

---

೨೪. ಈರೀತಿ ನಿನ್ನನ್ನು ಪೂಜಿಸುವುದರಿಂದ ನನ್ನ ಇಷ್ಟಾರ್ಥಗಳು ಫಲಸಲಿ. ಸತ್ತಮೇಲೆ ದುರ್ಲಭವಾದ ವೈಕುಂಠವನ್ನು ಹೊಂದುತ್ತೇನೆ.

೨೫. ಈರೀತಿ ಬ್ರಾಹ್ಮಣರನ್ನು ಕೇಳಿಕೊಂಡು ಅವರನ್ನು ಸಂತೋಷ ಪಡಿಸಿ ಕಳುಹಿಸಬೇಕು. ಅನಂತರ ತಾನು ಪೂಜೆಮಾಡಿದ ಕಲಶ ಮತ್ತು ಗೋವನ್ನು ಗುರುವಿಗೆ ಕೊಡಬೇಕು.

೨೬. ಆಮೇಲೆ ಸ್ನೇಹಿತರನ್ನೂ ಗುರುಗಳನ್ನೂ ಕೂರಿಸಿಕೊಂಡು ಭೋಜನ ಮಾಡಬೇಕು. ಕಾರ್ತಿಕ ಮಾಘ ಮಾಸಗಳಲ್ಲಿ ಈರೀತಿಯಾಗಿ ವ್ರತವನ್ನು ಮಾಡಬೇಕು.

೨೭. ಈರೀತಿಯಲ್ಲಿ ಕಾರ್ತಿಕವ್ರತವನ್ನು ಚೆನ್ನಾಗಿ ಮಾಡಿದವನು ಪಾಪ ವನ್ನು ಕಳೆದುಕೊಂಡು ವಿಷ್ಣುವಿನ ಸನ್ನಿಧಿಯನ್ನು ಹೊಂದುತ್ತಾನೆ.

೨೮. ಎಲ್ಲಾ ತೀರ್ಥಗಳಲ್ಲಿಯೂ ಸ್ನಾನ ಮಾಡಿದರೆ, ವ್ರತಗಳೆಲ್ಲವನ್ನೂ ಮಾಡಿದರೆ, ದಾನಗಳೆಲ್ಲವನ್ನೂ ಕೊಟ್ಟರೆ, ಬರುವ ಫಲಗಳ ಕೋಟಿಪಾಲಿನಷ್ಟು ಫಲವು ಈ ವ್ರತದಿಂದ ಬರುತ್ತದೆ.

ತೇ ಧನ್ಯಾಸ್ತೇ ಸದಾ ಪೂಜ್ಯಾಸ್ತೇಷಾಂ ಸರ್ವಫಲೋದಯಃ ।
ವಿಷ್ಣುಭಕ್ತಿಪರಾ ಯೇ ಸ್ಯುಃ ಕಾರ್ತಿಕವ್ರತಚಾರಿಣಃ　　॥ ೨೯ ॥

ದೇಹಸ್ಥಿತಾನಿ ಪಾಪಾನಿ ವಿತರ್ಕಂ ಯಾನ್ತಿ ತದ್ಭಯಾತ್ ।
ಕ್ವ ಯಾಸ್ಯಾಮೋ ವದಂತ್ಯೇಷ ಯದೂರ್ಜವ್ರತಕೃನ್ನರಃ　　॥ ೩೦ ॥

ಇತ್ಯೂರ್ಜವ್ರತನಿಯಮಾನ್ ಶೃಣೋತಿ ಭಕ್ತ್ಯಾ
ಯೋ ವೈತತ್ಕಥಯತಿ ವೈಷ್ಣವಾಗ್ರತೋ ಯಃ ।
ತೌ ಸಮ್ಯಗ್ವ್ರತಿಕರಣಾತ್ಫಲಂ ಲಭೇತಾಂ
ದೃಷ್ಟ್ವಾ ತೌ ಕಲುಷವಿನಾಶನಂ ಲಭಂತೇ　　॥ ೩೧ ॥

ಇತಿ ಶ್ರೀ ಮಹಾಪುರಾಣೇ ಪಾದ್ಮೇ ಉತ್ತರಖಂಡೇ ಶ್ರೀ ಕೃಷ್ಣ ಸತ್ಯಭಾಮಾ ಸಂವಾದೇ ಕಾರ್ತಿಕ ಮಹಾತ್ಮ್ಯೇ ಉದ್ಯಾಪನ ವಿಧಿರ್ನಾಮ ಸಪ್ತನವತಿತಮೋಽಧ್ಯಾಯಸ್ಸಮಾಪ್ತಃ

---

೨೯. ವಿಷ್ಣುಭಕ್ತಿಯಿಂದ ಕೂಡಿಕೊಂಡು ಈ ಕಾರ್ತಿಕ ವ್ರತವನ್ನು ಮಾಡಿದವರೇ ಅವರೇ ಧನ್ಯರು. ಅವರೇ ಪೂಜ್ಯರು. ಅವರೆಲ್ಲರಿಗೂ ಎಲ್ಲಾ ಫಲವೂ ಸಿಕ್ಕುತ್ತದೆ.

೩೦. ದೇಹದಲ್ಲಿರುವ ಪಾಪಗಳೆಲ್ಲವೂ ಆ ವ್ರತದ ಭಯದಿಂದ ಈತನು ಕಾರ್ತಿಕವ್ರತವನ್ನು ಮಾಡುತ್ತಾನೆ, ನಾವೆಲ್ಲರೂ ಎಲ್ಲಿ ಹೋಗೋಣವೆಂದು ಸಂದೇಹಗೊಳ್ಳುತ್ತವೆ. ಮತ್ತು ಯೋಚಿಸುತ್ತವೆ.

೩೧. ಯಾವನು ಭಕ್ತಿಯಿಂದ ಈ ಕಾರ್ತಿಕ ವ್ರತವನ್ನು ಕೇಳುತ್ತಾನೆಯೋ ವೈಷ್ಣವರೆದುರಿಗೆ ಹೇಳುತ್ತಾನೆಯೋ ಅವರಿಬ್ಬರೂ ಸಾಂಗವಾಗಿ ವ್ರತವನ್ನು ಮಾಡಿದ ಫಲವನ್ನು ಹೊಂದುತ್ತಾರೆ. ಪಾಪದ ವಿನಾಶವನ್ನು ಹೊಂದುತ್ತಾರೆ.

ಇಂತು ಶ್ರೀ ಪದ್ಮಮಹಾಪುರಾಣದ ಉತ್ತರಖಂಡದ ಶ್ರೀ ಕೃಷ್ಣ ಸತ್ಯಭಾಮಾ ಸಂವಾದದ ಕಾರ್ತಿಕ ಮಹಿಮೆಯಲ್ಲಿ ಉದ್ಯಾಪನ ವಿಧಿಯು ನಿಯಮು ಎಂಬ ತೊಂಭತ್ತೇಳನೆಯ ಅಧ್ಯಾಯವು ಮುಗಿದುದು.



॥ ಶ್ರೀಃ ॥

-X-

# ಅಥ ಶ್ರೀ ಮಹಾಪುರಾಣೇ ಪಾದ್ಮೇ ಉತ್ತರಖಂಡೇ

## ॥ ಅಷ್ಟನವತಿತಮೋಽಧ್ಯಾಯಃ ॥



॥ ಪೃಥುರುವಾಚ ॥

ತ್ವಯಾ ಯತ್ಕಥಿತಂ ಬ್ರಹ್ಮನ್ ವ್ರತಮೂರ್ಜಸ್ಯ ವಿಸ್ತರಾತ್ ।
ತತ್ರ ಯಾ ತುಲಸೀಮೂಲೇ ಪೂಜಾ ವಿಷ್ಣೋಸ್ತ್ವಯೋದಿ ॥ ೧ ॥

ತೇನಾಹಂ ಪ್ರಷ್ಟುಮಿಚ್ಛಾಮಿ ಮಾಹಾತ್ಮ್ಯಂ ತುಳಸೀಭವಂ ।
ಕಥಂ ಸಾತಿಪ್ರಿಯಾ ವಿಷ್ಣೋರ್ದೇವದೇವಸ್ಯ ಶಾಙ್ಗಿಣಃ ॥ ೨ ॥

ಕಥಮೇಷಾ ಸಮುತ್ಪನ್ನಾ ಕಸ್ಮಿನ್ ಸ್ಥಾನೇ ಚ ನಾರದ ।
ಏತದ್ಬ್ರೂಹಿ ಸಮಾಸೇನ ಸರ್ವಜ್ಞೋಽಸಿ ಮತೋ ಮಮ ॥ ೩ ॥

---

## ತೊಂಭತ್ತೆಂಟನೆಯ ಅಧ್ಯಾಯವು



೧. ಪೃಥುವು ಹೇಳಿದನು–ಎಲೈ ಬ್ರಾಹ್ಮಣನೇ ! ಕಾರ್ತಿಕಮಾಸದ ವ್ರತದ ಉದ್ಯಾಪನೆಯನ್ನು ನೀನು ಹೇಳಿದೆಯಷ್ಟೆ ! ಅದರಲ್ಲಿ ತುಳಸಿಯ ಮೂಲದಲ್ಲಿ ಮಂಡಲವನ್ನು ಮಾಡಿ ತುಳಸಿಯನ್ನು ಪೂಜಿಸಬೇಕೆಂದು ಹೇಳಿ ಇರುತ್ತೀಯೆ.

೨. ಆದ್ದರಿಂದ ನಿನ್ನನ್ನು ಒಂದು ಮಾತನ್ನು ಕೇಳಬೇಕೆನ್ನಿಸಿದೆ. ತುಳಸಿ ಮಹಾತ್ಮ್ಯೆಯು ಯಾವರೀತಿಯಾದುದು ? ಆ ತುಳಸಿಯು ವಿಷ್ಣುವಿಗೆ ಹೇಗೆ ಪ್ರಿಯಳಾದಳು ?

೩. ಆ ತುಳಸಿಯು ಹುಟ್ಟಿದುದು ಹೇಗೆ ? ಎಲ್ಲಿ ಹುಟ್ಟಿದಳು ? ಎಲೈ ನಾರದನೆ ! ನೀನು ಸರ್ವಜ್ಞನಾಗಿದ್ದೀಯೆ ಇದೆಲ್ಲವನ್ನೂ ನನಗೆ ವಿಶದವಾಗಿ ತಿಳಿಸು.

॥ ನಾರದ ಉವಾಚ ॥

ಶೃಣು ರಾಜನ್ನವಹಿತೋ ಮಾಹಾತ್ಮ್ಯಂ ತುಳಸೀಭವಂ ।
ಸೇತಿಹಾಸಂ ಪುರಾವೃತ್ತಂ ತತ್ಸರ್ವಂ ಕಥಯಾಮಿ ತೇ ॥ ೪ ॥

ಪುರಾ ಶಕ್ರಶ್ಶಿವಂ ದ್ರಷ್ಟುಮಗಾತ್ಕೈಲಾಸಪರ್ವತಂ ।
ಸರ್ವದೇವೈಃ ಪರಿವೃತಸ್ತ್ವಪ್ಸರೋಗಣಸೇವಿತಃ ॥ ೫ ॥

ಯಾವದ್ಗತಶ್ಶಿವಗೃಹಂ ತಾವತ್ತತ್ರ ಚ ದೃಷ್ಟವಾನ್ ।
ಪುರುಷಂ ಭೀಮಕರ್ಮಾಣಂ ದಂಷ್ಟ್ರಾನಯನಭೀಷಣಂ ॥ ೬ ॥

ಸ ಪೃಷ್ಟಸ್ತೇನ ಕಸ್ತ್ವಂ ಭೋಃ ಕ್ವ ಗತೋ ಜಗದೀಶ್ವರಃ ।
ಏವಂ ಪುನಃ ಪುನಃ ಪೃಷ್ಟಃ ಸ ಯದಾ ನೋಚಿವಾನ್ನೃಪ ।
ತತಃ ಕ್ರುದ್ಧೋ ವಜ್ರಪಾಣಿಸ್ತನ್ನಿರ್ಭರ್ತ್ಸ್ಯ ವಚೋಽಬ್ರವೀತ್ ॥ ೭ ॥

॥ ಶಕ್ರ ಉವಾಚ ॥

ರೇ ಮಯಾ ಪೃಚ್ಛ್ಯಮಾನೋಽಪಿ ನೋತ್ತರಂ ದತ್ತವಾನಸಿ ।
ಅತಸ್ತ್ವಾಂ ಹನ್ಮಿ ವಜ್ರೇಣ ಕಸ್ತೇ ತ್ರಾತಾಸ್ತಿ ದುರ್ಮತೇ ॥ ೮ ॥

---

೪. ನಾರದನು ಹೇಳಿದನು—ಎಲೈ ರಾಜನೇ ! ತುಳಸಿಯ ಮಹಿಮೆಯನ್ನು ಮನಸ್ಸಿಟ್ಟು ಕೇಳು. ಇದನ್ನು ಹಿಂದಿನ ಕಥೆಯೊಡನೆ ಹೇಳುತ್ತೇನೆ. ಕೇಳು.

೫. ಹಿಂದೆ ಇಂದ್ರನು ಶಿವನನ್ನು ನೋಡಲು ದೇವತೆಗಳೊಡನೆಯೂ ಅಪ್ಸರೆಯರೊಡನೆಯೂ ಕೂಡಿಕೊಂಡು ಕೈಲಾಸಕ್ಕೆ ಹೋದನು

೬. ಶಿವನಮನೆಗೆ ಹೋಗುತ್ತಲೂ ಅಲ್ಲಿ ಭಯಂಕರವಾದ ಕೆಲಸಮಾಡುವ, ಹಲ್ಲುಕಣ್ಣುಗಳನ್ನೂ ಭಯಂಕರವಾಗಿ ಹೊಂದಿರುವ ಒಬ್ಬನನ್ನು ನೋಡಿದನು

೭. ಆಗ ಇಂದ್ರನು ಅವನನ್ನು ಕುರಿತು ಅಯ್ಯ ನೀನು ಯಾರು ? ಆ ಜಗದೀಶ್ವರನು ಎಲ್ಲಿ ಹೋಗಿರುವನು ? ಎಂದು ಕೇಳಿದನು. ಅವನು ಮಾತನಾಡಲೇ ಇಲ್ಲ. ಅದರೂ ಇನ್ನೂ ಅನೇಕಬಾರಿ ಕೇಳಿದರೂ ಮಾತನಾಡಲೇ ಇಲ್ಲ. ಆಗ ಇಂದ್ರನಿಗೆ ಕೋಪಬಂದು ಅವನನ್ನು ಹೆದರಿಸುತ್ತಾ ಇಂತೆಂದನು.

೮. ಇಂದ್ರನು ಹೇಳಿದನು—ಲೋ ! ನಾನು ನಿನ್ನನ್ನು ಕೇಳುತ್ತಿದ್ದರೂ ನೀನು ಉತ್ತರವನ್ನು ಕೊಡುತ್ತಿಲ್ಲ. ಆದ್ದರಿಂದ ನಿನ್ನನ್ನು ಈ ವಜ್ರಾಯುಧದಿಂದ ಕಡಿದುಹಾಕುತ್ತೇನೆ. ನಿನ್ನನ್ನು ಕಾಪಾಡುವವರಾರು ! ನೋಡೋಣ ಎಂದನು.

|| ನಾರದ ಉವಾಚ ||

ಇತ್ಯುದೀರ್ಯ ತತೋ ವಜ್ರೀ ವಜ್ರೇಣಾಭ್ಯಹನದ್ದೃಢಂ ।
ತೇನಾಸ್ಯ ಕಂಠೋ ನೀಲತ್ವಮಗಾದ್ವಜ್ರಂ ಚ ಭಸ್ಮತಾಂ || ೯ ||

ತತೋ ರುದ್ರಃ ಪ್ರಜಜ್ವಾಲ ತೇಜಸಾ ಪ್ರದಹನ್ನಿವ ।
ದೃಷ್ಟ್ವಾ ಬೃಹಸ್ಪತಿಸ್ತೂರ್ಣಂ ಕೃತಾಂಜಲಿಪುಟೋಭ್ಯಗಾತ್ ।
ಇಂದ್ರಶ್ಚ ದಂಡವದ್ಭೂಮೌ ನತ್ವಾ ಸ್ತೋತುಂ ಪ್ರಚಕ್ರಮೇ || ೧೦ ||

|| ಬೃಹಸ್ಪತಿರುವಾಚ ||

ನಮೋ ದೇವಾಧಿಪತಯೇ ತ್ರ್ಯಂಬಕಾಯ ಕಪರ್ದಿನೇ ।
ತ್ರಿಪುರಘ್ನಾಯ ಶರ್ವಾಯ ನಮೋಂಧಕನಿಷೂದಿನೇ || ೧೧ ||

ವಿರೂಪಾಯಾತಿರೂಪಾಯ ಬಹುರೂಪಾಯ ಶಂಭವೇ ।
ಯಜ್ಞವಿಧ್ವಂಸಕರ್ತ್ರೇ ಚ ಯಜ್ಞಾನಾಂ ಫಲದಾಯಿನೇ || ೧೨ ||

---

೯. ನಾರದನು ಹೇಳಿದನು–ಇಂದ್ರನು ಹೀಗೆಂದು ಹೇಳಿ ವಜ್ರಾಯುಧದಿಂದ ಕುತ್ತಿಗೆಯ ಮೇಲೆ ಬಲವಾಗಿ ಹೊಡೆದನು. ಆಗ ಅವನ ಕತ್ತು ನೀಲಿಕಟ್ಟಿಕೊಂಡಿತು. ವಜ್ರಾಯುಧವೂ ಬೂದಿಯಾಯಿತು.

೧೦. ಆಗ ರುದ್ರನು ಸುಡುವವನಂತೆ ಕೋಪಗೊಂಡು ಜ್ವಲಿಸಿದನು. ಇದನ್ನು ನೋಡಿ ಬೃಹಸ್ಪತಿಯು ಕೈಮುಗಿದುಕೊಂಡು ಆ ರುದ್ರನ ಬಳಿಗೆ ಓಡಿ ಬಂದನು. ಇಂದ್ರನು ನೆಲದಮೇಲೆ ಮಲಗಿ ನಮಸ್ಕಾರಮಾಡುತ್ತ ಸ್ತೋತ್ರ ಮಾಡುವುದಕ್ಕೆ ಮೊದಲು ಮಾಡಿದನು.

೧೧. ಬೃಹಸ್ಪತಿಯು ಹೇಳಿದನು–ದೇವಾಧಿಪತಿಯೂ ಮುಕ್ಕಣ್ಣನೂ ಜಡೆಯುಳ್ಳವನೂ ಆದ ನಿನಗೆನಮುಸ್ಕಾರವು. ತ್ರಿಪುರವನ್ನು ನಾಶಮಾಡಿದ ಶರ್ವನಾದ ನಿನಗೆ ನಮುಸ್ಕಾರವು. ಅಂಧಕಾಸುರನನ್ನು ಕೊಂದ ನಿನಗೆ ನಮುಸ್ಕಾರವು.

೧೨. ವಿರೂಪನಾದ ಬಹುರೂಪನಾದ ರೂಪವನ್ನು ಅತಿಕ್ರಮಿಸಿದ ಶಂಭುವಿಗೆ ನಮುಸ್ಕಾರವು. ಯಜ್ಞವನ್ನು ನಾಶಮಾಡಿದ ಯಜ್ಞದ ಫಲಗಳನ್ನು ಕೊಡುವ ಆ ಸ್ವಾಮಿಗೆ ನಮುಸ್ಕಾರವು.

ಕಾಲಾಂತಕಾಯ ಕಾಲಾಯ ಭೋಗಿಭೋಗಧರಾಯ ಚ ।
ನಮೋ ಬ್ರಹ್ಮಶಿರೋಹಂತ್ರೇ ಬ್ರಹ್ಮಣ್ಯಾಯ ನಮೋ ನಮಃ ॥ ೧೩ ॥

॥ ನಾರದ ಉವಾಚ ॥

ಏವಂ ಸ್ತುತಸ್ತದಾ ಶಂಭುಃ ಧಿಷಣೇನ ಜಗಾದ ತಂ ।
ಸಂಹರನ್ನಯನಜ್ವಾಲಾಂ ತ್ರಿಲೋಕೀದಹನಕ್ಷಮಾಂ ॥ ೧೪ ॥

॥ ಶಿವ ಉವಾಚ ॥

ವರಂ ವರಯ ಭೋ ಬ್ರಹ್ಮನ್ ಪ್ರೀತಸ್ಸ್ತುತ್ಯಾನಯಾ ತವ ।
ಇಂದ್ರಸ್ಯ ಜೀವದಾನೇನ ಜೀವೇತಿ ತ್ವಂ ಪ್ರಥಾಂ ವ್ರಜ ॥ ೧೫ ॥

॥ ಬೃಹಸ್ಪತಿರುವಾಚ ॥

ಯದಿ ತುಷ್ಟೋಽಸಿ ದೇವ ತ್ವಂ ಪಾಹೀಂದ್ರಂ ಶರಣಾಗತಂ ।
ಅಗ್ನಿರೇಷ ಶಮಂ ಯಾತು ಭಾಲನೇತ್ರಸಮುದ್ಭವಃ ॥ ೧೬ ॥

---

೧೩. ಯಮನಿಗೆ ಯಮನಾದ, ಕಾಲಸ್ವರೂಪನಾದ, ಸರ್ಪಗಳೇ ದೇಹಕ್ಕೆ ಅಲಂಕಾರವಾಗಿ ಉಳ್ಳ, ಬ್ರಹ್ಮನ ಶಿರಸ್ಸನ್ನು ಕತ್ತರಿಸಿದ ಬ್ರಹ್ಮವಾದಿಯಾದ ಸ್ವಾಮಿಗೆ ನಮಸ್ಕಾರವು.

೧೪. ನಾರದನು ಹೇಳಿದನು—ಈ ರೀತಿಯಾಗಿ ಗುರುವು ಶಿವನನ್ನು ಸ್ತುತಿಸಲು ಆ ಶಿವನು ಮೂರುಲೋಕಗಳನ್ನೂ ಸುಡುವುದರಲ್ಲಿ ಶಕ್ತವಾದ ಕಣ್ಣಿನ ಜ್ವಾಲೆಯನ್ನು ತಡೆಯುತ್ತ ಇಂತೆಂದನು.

೧೫. ಶಿವನು ಹೇಳಿದನು—ಎಲೈ ಬೃಹಸ್ಪತಿಯೇ! ನಿನ್ನ ಈ ಸ್ತುತಿಯಿಂದ ನಾನು ಸಂತೋಷಗೊಂಡಿದ್ದೇನೆ. ಬೇಕಾದ ವರವನ್ನು ಕೇಳಿಕೋ ಇಂದ್ರನಿಗೆ ಜೀವದಾನ ಮಾಡಿದುದರಿಂದ ಲೋಕದಲ್ಲಿ ಜೀವನೆಂಬ ಹೆಸರನ್ನು ಹೊಂದು.

೧೬. ಬೃಹಸ್ಪತಿಯು ಹೇಳಿದನು—ಎಲೈ ದೇವನೇ! ನೀನು ಸಂತೋಷಗೊಂಡಿದ್ದರೆ ಶರಣಾಗತನಾದ ಈ ಇಂದ್ರನನ್ನು ಕಾಪಾಡು. ನಿನ್ನ ಈ ಹಣೆಗಣ್ಣಿನಿಂದ ಹೊರಟ ಅಗ್ನಿಯು ಶಾಂತವಾಗಲಿ.

॥ ಈಶ್ವರ ಉವಾಚ ॥

ಪುನಃ ಪ್ರವೇಶಮಾಯಾತಿ ಭಾಲನೇತ್ರೇ ಕಥಂ ಶಿಖೀ ।
ಏನಂ ತ್ಯಕ್ಷ್ಯಾಮ್ಯಹಂ ದೂರೇ ಯಥೇಂದ್ರಂ ನೈವ ಪೀಡಯೇತ್ ॥ ೧೭ ॥

॥ ನಾರದ ಉವಾಚ ॥

ಇತ್ಯುಕ್ತ್ವಾ ತಂ ಕರೇ ಧೃತ್ವಾ ಪ್ರಾಕ್ಷಿಪಲ್ಲವಣಾರ್ಣವೇ ।
ಸೋಽಪತತ್ಸಿಂಧುಗಂಗಾಯಾಸ್ಸಾಗರಸ್ಯ ಚ ಸಂಗಮೇ ॥ ೧೮ ॥

ತಾವತ್ಸ ಬಾಲರೂಪತ್ವಮಗಾತ್ತತ್ರ ರುರೋದ ಹ ।
ರುದತಸ್ತಸ್ಯ ಶಬ್ದೇನ ಪ್ರಾಕಂಪದ್ಧರಣೀ ಮುಹುಃ ॥ ೧೯ ॥

ಸ್ವರ್ಗಶ್ಚ ಸತ್ಯಲೋಕಶ್ಚ ತತ್ಸ್ವನಾದ್ಬಧಿರೀಕೃತೌ ।
ಶ್ರುತ್ವಾ ಬ್ರಹ್ಮಾ ಯಯೌ ತತ್ರ ಕಿಮೇತದಿತಿ ವಿಸ್ಮಿತಃ ॥ ೨೦ ॥

ತಾವತ್ಸಮುದ್ರಸ್ಯೋತ್ಸಂಗೇ ತಂ ಬಾಲಂ ಸ ದದರ್ಶ ಹ ।
ದೃಷ್ಟ್ವಾ ಬ್ರಹ್ಮಾಣಮಾಯಾಂತಂ ಸಮುದ್ರೋಽಪಿ ಕೃತಾಂಜಲಿಃ ॥ ೨೧ ॥

---

೧೭. ಈಶ್ವರನು ಹೇಳಿದನು–ಎಲೈ ಬೃಹಸ್ಪತಿಯೇ! ಈ ಫಾಲಾಗ್ನಿಯು ಹೊರಗೆ ಬಂದುದು ಹೇಗೆ ಒಳಗೆ ಮತ್ತೆ ಹೋದೀತು? ಆದ್ದರಿಂದ ಇದು ಇಂದ್ರನನ್ನು ಪೀಡಿಸದಂತೆ ಇದನ್ನು ದೂರಕ್ಕೆ ಎಸೆಯುತ್ತೇನೆ.

೧೮. ನಾರದನು ಹೇಳಿದನು–ಹೀಗೆಂದು ಹೇಳಿ ಆ ಬೆಂಕಿಯನ್ನು ಕೈಯಲ್ಲಿ ಹಿಡಿದುಕೊಂಡು ಲವಣಸಮುದ್ರಕ್ಕೆ ಎಸೆದನು. ಆ ಬೆಂಕಿಯು ಸಿಂಧು ಗಂಗೆಗಳು ಸಮುದ್ರಕ್ಕೆ ಬೀಳುವ ಜಾಗದಲ್ಲಿ ಬಿದ್ದಿತು.

೧೯. ಅಲ್ಲಿ ಬಿದ್ದ ಆ ಬೆಂಕಿಯು ಮಗುವಿನ ಆಕಾರವನ್ನು ಹೊಂದಿ ಅತ್ತಿತು ಆ ಅಳುವಿನ ಶಬ್ದದಿಂದ ಭೂಮಿಯೇ ನಡುಗಿತು.

೨೦. ಸ್ವರ್ಗವೂ, ಸತ್ಯಲೋಕವೂ ಆ ಧ್ವನಿಯಿಂದ ಕಿವುಡಾದುವು. ಇದನ್ನು ಕೇಳಿ ಬ್ರಹ್ಮನು ಇದೇನೆಂದು ಆಶ್ಚರ್ಯಪಡುತ್ತ ಅಲ್ಲಿಗೆ ಹೋದನು

೨೧–೨೩. ಹೋದ ಒಡನೆಯೇ ಆ ಮಗುವನ್ನು ಸಮುದ್ರರಾಜನ ತೊಡೆಯಮೇಲೆ ನೋಡಿದನು. ಬ್ರಹ್ಮನು ಬರುತ್ತಿರುವುದನ್ನು ನೋಡಿ ಸಮುದ್ರನು

ತತೋ ಬ್ರಹ್ಮಾ ಬ್ರವೀದ್ವಾಕ್ಯಂ ಕಸ್ಯಾಯಂ ಶಿಶುರದ್ಭುತಃ ।
ಸರಿತ್ಪತೇ ಕುತೋ ಲಬ್ಧೋ ಬಾಲೋ ಹ್ಯೇಷ ಮಹಾಬಲಃ ॥ ೨೨ ॥

ತಸ್ಯ ನಾದೇನ ಸಂತ್ರಸ್ತಾ ದೇವಾಸುರಮಹೋರಗಾಃ ।
ನಿಶಮ್ಯೇತಿ ವಚೋ ಧಾತುರ್ವಾಕ್ಯಂ ತು ಸಾಗರೋಽಬ್ರವೀತ್ ॥ ೨೩ ॥

॥ ಸಮುದ್ರ ಉವಾಚ ॥

ಭೋ ಬ್ರಹ್ಮನ್ ಸಿಂಧು ಗಂಗಾಯಾಂ ಜಾತೋಽಯಂ ಮಮ ಪುತ್ರಕಃ ।
ಜಾತಕರ್ಮಾದಿಸಂಸ್ಕಾರಾನ್ ಕುರುಷ್ವಾಸ್ಯ ಜಗದ್ಗುರೋ ॥ ೨೪ ॥

॥ ನಾರದ ಉವಾಚ ॥

ಇತ್ಥಂ ವದತಿ ಪಾಥೋಧೌ ಸ ಬಾಲಸ್ಸಾಗರಾತ್ಮಜಃ ।
ಬ್ರಹ್ಮಾಣಮುಗ್ರಹೀತ್ಕೂರ್ಚೇ ವಿಧುನ್ವಂಸ್ತಂ ಮುಹುರ್ಮುಹುಃ ॥ ೨೫ ॥

ಧುನ್ವತಸ್ತಸ್ಯ ಕೂರ್ಚಂ ತು ನೇತ್ರಾಭ್ಯಾಮಗಮಜ್ಜಲಂ ।
ಕಥಂಚಿನ್ಮುಕ್ತಕೂರ್ಚಸ್ತು ಬ್ರಹ್ಮಾ ಪ್ರೋವಾಚ ಸಾಗರಂ ॥ ೨೬ ॥

---

ಕೈಮುಗಿದುಕೊಂಡು ನಮಸ್ಕರಿಸಿ ಆ ಮಗುವನ್ನು ಆ ಬ್ರಹ್ಮನ ತೊಡೆಯಮೇಲೆ ಇಟ್ಟನು. ಈ ಅದ್ಭುತವಾದ ಮಗುವು ಯಾರದು ? ಎಲೈ ಸಮುದ್ರರಾಜನೇ ! ಇದು ಎಲ್ಲಿ ಸಿಕ್ಕಿತು? ಬಹು ಬಲವಾಗಿದೆಯಲ್ಲಾ ! ಆ ಮಗುವಿನ ಧ್ವನಿಯಿಂದ ದೇವತೆಗಳೂ, ಅಸುರರೂ, ಪನ್ನಗರೂ ಹೆದರಿರುವವರಲ್ಲ. ಎಂಬುದಾಗಿ ಬ್ರಹ್ಮನು ಎನ್ನಲು ಈ ಮಾತನ್ನು ಸಮುದ್ರನು ಕೇಳಿ ಇಂತೆಂದನು.

೨೪. ಸಮುದ್ರನು ಹೇಳಿದನು—ಎಲೈ ಬ್ರಹ್ಮನೆ! ಈ ಮಗುವು ಸಿಂಧು ಗಂಗೆಗಳಲ್ಲಿ ಹುಟ್ಟಿತು. ನನ್ನ ಮಗುವು. ಎಲೈ ಜಗದ್ಗುರುವೇ ! ಈ ಮಗುವಿಗೆ ಜಾತಕರ್ಮವೇ ಮುಂತಾದ ಸಂಸ್ಕಾರಗಳನ್ನು ಮಾಡು.

೨೫. ನಾರದನು ಹೇಳಿದನು—ಸಾಗರನು ಹೀಗೆ ಹೇಳುತ್ತಿರುವಾಗ ಬ್ರಹ್ಮನ ತೊಡೆಯಮೇಲಿದ್ದ ಆ ಮಗುವು ಬ್ರಹ್ಮನ ಗಡ್ಡವನ್ನು ಹಿಡಿದು ಎಳೆಯುತ್ತಿದ್ದಿತು.

೨೬. ಹೀಗೆ ಗಡ್ಡವನ್ನು ಎಳೆಯುತ್ತಿರಲು, ನೋವನ್ನು ತಡೆಯಲಾರದೆ ಬ್ರಹ್ಮನ ಕಣ್ಣಿನಿಂದ ನೀರು ಬಂದಿತು. ಆಮೇಲೆ ಆ ಬ್ರಹ್ಮನು ಬಹು ಕಷ್ಟದಿಂದ ಆ ಗಡ್ಡವನ್ನು ಬಿಡಿಸಿಕೊಂಡು ಸಮುದ್ರರಾಜನಿಗಿಂತೆಂದನು.

|| ಬ್ರಹ್ಮೋವಾಚ ||

ನೇತ್ರಾಭ್ಯಾಂ ನಿಧೃತಂ ಯಸ್ಮಾದನೇನೈತಜ್ಜಲಂ ಮಮ ।
ತಸ್ಮಾಜ್ಜಲಂಧರ ಇತಿ ನಾಮ್ನಾ ಖ್ಯಾತೋ ಭವತ್ವಸೌ || ೨೭ ||

ಅಧುನೈವೈಷ ತರುಣಸ್ಸರ್ವಶಸ್ತ್ರಾಸ್ತ್ರಪಾರಗಃ ।
ಅವಧ್ಯಸ್ಸರ್ವಭೂತಾನಾಂ ವಿನಾ ರುದ್ರಂ ಭವಿಷ್ಯತಿ ||
ಯತ ಏವ ಸಮುದ್ಭೂತಸ್ತತ್ರೈವಾನ್ತಂ ಗಮಿಷ್ಯತಿ || ೨೮ ||

|| ನಾರದ ಉವಾಚ ||

ಇತ್ಯುಕ್ತ್ವಾ ಶುಕ್ರಮಾಹೂಯ ರಾಜ್ಯೇ ತಂ ಚಾಭ್ಯಷೇಚಯತ್ ।
ಆಮಂತ್ರ್ಯ ಸರಿತಾಂ ನಾಥಂ ಬ್ರಹ್ಮಾನ್ತರ್ಧಾನಮಾಗಮತ್ || ೨೯ ||

ಅಥ ತದ್ದರ್ಶನೋತ್ಫುಲ್ಲನಯನಃ ಸಾಗರಸ್ತದಾ ।
ಕಾಲನೇಮಿಸುತಾಂ ವೃಂದಾಂ ತದ್ಭಾರ್ಯಾರ್ಥಮಯಾಚತ || ೩೦ ||

---

೨೭. ಬ್ರಹ್ಮನು ಹೇಳಿದನು–ಈ ಮಗುವು ನನ್ನ ಕಣ್ಣುಗಳಿಂದ ನೀರುಬರುವಂತೆ ಮಾಡಿದುದರಿಂದ ಜಲಂಧರನೆಂಬ ಹೆಸರಿನಿಂದ ಪ್ರಖ್ಯಾತನಾಗಲಿ.

೨೮. ಈತನು ಈಗಲೇ ಯೌವನಸ್ಥನಾಗಿ ಎಲ್ಲಾ ಶಸ್ತ್ರಾಸ್ತ್ರಗಳಲ್ಲಿಯೂ ನಿಪುಣನಾಗಲಿ. ರುದ್ರನನ್ನುಳಿದು ಯಾವಪ್ರಾಣಿಯಿಂದಲೂ ಇವನಿಗೆ ಮರಣವು ಬೇಡ. ಇವನು ಯಾವನಿಂದ ಉತ್ಪನ್ನನಾದನೋ ಅವನಿಂದಲೇ ಮರಣವನ್ನು ಹೊಂದುವನು.

೨೯. ನಾರದನು ಹೇಳಿದನು–ಹೀಗೆಂದು ಹೇಳಿ ಬ್ರಹ್ಮನು ಶುಕ್ರಾಚಾರ್ಯನನ್ನು ಕರೆದು ಆತನೊಡನೆ ಆ ಜಲಂಧರನಿಗೆ ರಾಜ್ಯಾಭಿಷೇಕ ಮಾಡಿದನು. ಆಮೇಲೆ ಸಮುದ್ರರಾಜನಿಗೆ ಹೇಳಿ ಆ ಬ್ರಹ್ಮನು ಹೊರಟುಹೋದನು.

೩೦. ಅನಂತರ ಆ ಮಗನನ್ನು ನೋಡಿ ಸಂತೋಷಪಡುತ್ತಿರುವ ಸಮುದ್ರರಾಜನು ಕಾಲನೇಮಿಯ ಮಗಳಾದ ವೃಂದೆಯನ್ನು ಈ ಜಲಂಧರನಿಗೆ ವಿವಾಹಮಾಡಿಕೊಡುವಂತೆ ಆ ಕಾಲನೇಮಿಯನ್ನು ಕೇಳಿದನು.

ತೇ ಕಾಲನೇಮಿಪ್ರಮುಖಾಸ್ತತೋಽಸುರಾಃ
ತಸ್ಮೈ ಸುತಾಂ ತಾಂ ಪ್ರದದುಃ ಪ್ರಹರ್ಷಿತಾಃ ।
ಸ ಚಾಪಿ ತಾನ್ಪ್ರಾಪ್ಯ ಸುಹೃದ್ವರಾನ್ವಶೀ
ಶಶಾಸ ಗಾಂ ಶುಕ್ರಸಹಾಯವಾನ್ಬಲೀ || ೩೧ ||

ಇತಿ ಶ್ರೀ ಮಹಾಪುರಾಣೇ ಪಾದ್ಮೇ ಉತ್ತರಖಂಡೇ ಶ್ರೀ ಕೃಷ್ಣ ಸತ್ಯಭಾಮಾ ಸಂವಾದೇ ಕಾರ್ತಿಕ ಮಾಹಾತ್ಮ್ಯೇ ಜಲಂಧರೋತ್ಪತ್ತಿ ರ್ನಾಮ ಅಷ್ಟನವತಿತಮೋಽಧ್ಯಾಯಸ್ಸಮಾಪ್ತಃ

---

೩೧. ಆ ಕಾಲನೇಮಿಯೇ ಮುಂತಾದ ಅಸುರರು ಸಂತೋಷದಿಂದ ಆ ಜಲಂಧರಿಗೆ ಮಗಳಾದ ವೃಂದೆಯನ್ನು ಕೊಟ್ಟು ಮದುವೆಮಾಡಿದರು. ಆ ಜಲಂಧರನು ಸ್ನೇಹಿತರಾದ ಆ ಕಾಲನೇಮಿ ಮುಂತಾದ ರಾಕ್ಷಸರನ್ನು ಸೇರಿಸಿ ಕೊಂಡು ಶುಕ್ರನ ಸಹಾಯದಿಂದ ಭೂಮಿಯನ್ನು ಆಳುತ್ತಿದ್ದನು.

ಇಂತು ಶ್ರೀ ಪದ್ಮಮಹಾಪುರಾಣದ ಉತ್ತರಖಂಡದ ಶ್ರೀ ಕೃಷ್ಣ ಸತ್ಯಭಾಮೆಯರ ಸಂವಾದದ ಕಾರ್ತಿಕ ಮಹಿಮೆಯಲ್ಲಿ ಜಲಂಧರೋತ್ಪತ್ತಿ ಎಂಬ ತೊಂಭತ್ತೆಂಟನೆಯ ಅಧ್ಯಾಯವು ಮುಗಿದುದು.



॥ ಶ್ರೀಃ ॥

-X-

# ಅಥ ಶ್ರೀ ಮಹಾಪುರಾಣೇ ಪಾದ್ಮೇ ಉತ್ತರಖಂಡೇ

## ॥ ನವನವತಿತಮೋಽಧ್ಯಾಯಃ ॥



॥ ನಾರದ ಉವಾಚ ॥

ಯೇ ದೇವೈರ್ನಿರ್ಜಿತಾಃ ಪೂರ್ವಂ ದೈತ್ಯಾಃ ಪಾತಾಳಸಂಸ್ಥಿತಾಃ ।
ತೇಽಪಿ ಭೂಮಂಡಲಂ ಯಾತಾ ನಿರ್ಭಯಾಸ್ತಮುಪಾಶ್ರಿತಾಃ ॥ ೧ ॥

ಕದಾಚಿಚ್ಛಿನ್ನಶಿರಸಂ ದೃಷ್ಟ್ವಾ ರಾಹುಂ ಸ ದೈತ್ಯರಾಟ್ ।
ಪಪ್ರಚ್ಛ ಭಾರ್ಗವಂ ತತ್ರ ತಚ್ಛಿರಶ್ಛೇದಕಾರಣಂ ॥ ೨ ॥

ಭಾರ್ಗವಸ್ತಸ್ಯ ಶಿರಸಃ ಛೇದಂ ರಾಹೋಶ್ಶಶಂಸ ಹ ।
ಅಮೃತಾರ್ಥಂ ಸಮುದ್ರಸ್ಯ ಮಥನಂ ದೇವಕಾರಿತಂ ॥ ೩ ॥

---

## ತೊಂಭತ್ತೊಂಭತ್ತನೆಯ ಅಧ್ಯಾಯವು



೧. ನಾರದನು ಹೇಳಿದನು–ಹಿಂದೆ ದೇವತೆಗಳಿಂದ ಸೋತು ಪಾತಾಳ ಲೋಕಕ್ಕೆ ಹೋಗಿ ಸೇರಿಕೊಂಡಿದ್ದ ದೈತ್ಯರು ಈ ಜಲಂಧರನನ್ನು ಆಶ್ರಯಿಸಿ ಕೊಂಡು ಭಯವನ್ನು ಬಿಟ್ಟು ಭೂಮಂಡಲಕ್ಕೆ ಮತ್ತೆ ಬಂದರು.

೨. ಒಂದುಸಾರಿ ಆ ಜಲಂಧರನು ರಾಹುವಿನ ತಲೆಯು ಕತ್ತರಿಸಿ ಹೋಗಿರುವುದನ್ನು ನೋಡಿ ಇದಕ್ಕೆ ಕಾರಣವೇನೆಂದು ಶುಕ್ರಾಚಾರ್ಯನನ್ನು ಕೇಳಿದನು.

೩. ಆ ಶುಕ್ರನು ರಾಹುವಿನ ತಲೆಯು ಕತ್ತರಿಸಿ ಹೋದುದಕ್ಕೆ ಕಾರಣ ವನ್ನೂ ದೇವತೆಗಳು ಅಮೃತಕ್ಕೋಸ್ಕರ ಸಮುದ್ರವನ್ನು ಕಡೆದುದನ್ನೂ ಹೇಳಿದನು.

ರತ್ನಾಪಹರಣಂ ದೇವೈರ್ದೈತ್ಯಾನಾಂ ಚ ಪರಾಭವಂ ।
ಸ ಶ್ರುತ್ವಾ ಕ್ರೋಧತಾಮ್ರಾಕ್ಷಃ ಸ್ವಪಿತುರ್ಮಥನಂ ತದಾ || ೪ ||

ಪೂರ್ವಂ ಪ್ರಸ್ಥಾಪಯಾಮಾಸ ಘಸ್ಮರಂ ಶಕ್ರಸನ್ನಿಧೌ ।
ದೂತಸ್ತ್ರಿವಿಷ್ಟಪಂ ಗತ್ವಾ ಸುಧರ್ಮಾಂ ಪ್ರಾಪ್ಯ ಸತ್ವರಃ ||
ಗತ್ವಾದಗಖರ್ವಮೌಳಿಸ್ತು ದೇವೇಂದ್ರಂ ವಾಕ್ಯಮಬ್ರವೀತ್ || ೫ ||

|| ಘಸ್ಮರ ಉವಾಚ ||

ಜಲಂಧರೋಽಬ್ಧಿತನಯಃ ಸರ್ವದೈತ್ಯಜನೇಶ್ವರಃ ।
ದೂತೋಽಹಂ ಪ್ರೇಷಿತಸ್ತೇನ ಸ ಯದಾಹ ಶೃಣುಷ್ವ ತತ್ || ೬ ||

ತಸ್ಮಾತ್ತ್ವಯಾ ಮಮ ಪಿತಾ ಮಥಿತಸ್ಸಾರೋಽದ್ರಿಣಾ ।
ನೀತಾನಿ ಸರ್ವರತ್ನಾನಿ ತಾನಿ ಶೀಘ್ರಂ ಪ್ರಯಚ್ಛ ನಃ || ೭ ||

---

೪. ಆಗ ಜಲಂಧರನು ತನ್ನ ತಂದೆಯಾದ ಸಮುದ್ರನನ್ನು ಕಡೆದುದನ್ನೂ ಅದರಿಂದ ದೇವತೆಗಳು ರತ್ನಗಳನ್ನು ಅಪಹರಿಸಿರುವುದನ್ನೂ ದೈತ್ಯರ ಸೋಲನ್ನೂ ಕೇಳಿ ಕೋಪದಿಂದ ಕಣ್ಣುಗಳನ್ನು ಕೆಂಪಗೆ ಮಾಡಿಕೊಂಡನು.

೫. ಮೊದಲು ಘಸ್ಮರನೆಂಬ ದೂತನನ್ನು ಇಂದ್ರನಬಳಿಗೆ ಕಳುಹಿಸಿದನು. ಆ ದೂತನು ದೇವಲೋಕದ ದೇವೇಂದ್ರನ ಸುಧರ್ಮವೆಂಬ ಸಭೆಗೆಹೋಗಿ ಹೆಮ್ಮೆಯಿಂದ ತಲೆಯನ್ನು ಕೂಡ ತಗ್ಗಿಸದೆ ದೇವೇಂದ್ರನನ್ನು ಕುರಿತು ಇಂತೆಂದನು.

೬. ಘಸ್ಮರನು ಹೇಳಿದನು—ಸಮುದ್ರರಾಜನ ಮಗನಾದ ಜಲಂಧರನು ಎಲ್ಲಾ ದೈತ್ಯರಿಗೂ ಒಡೆಯನಾಗಿದ್ದಾನೆ. ನಾನು ಅವನ ದೂತನು. ಅವನು ನನ್ನನ್ನು ಕಳುಹಿಸಿದ್ದಾನೆ. ಅವನು ಹೇಳುವುದನ್ನು ಕೇಳು.

೭. ಬೆಟ್ಟವನ್ನು ಹಾಕಿಕೊಂಡು ನನ್ನ ತಂದೆಯನ್ನೇಕೆ ಕಡೆದೆ? ಅವನಿಂದ ತೆಗೆದುಕೊಂಡು ಹೋಗಿರುವ ಎಲ್ಲಾ ರತ್ನಗಳನ್ನೂ ಬೇಗನೆ ತಂದುಕೊಡು.

|| ನಾರದ ಉವಾಚ ||

ಇತಿ ದೂತವಚಶ್ಶ್ರುತ್ವಾ ವಿಸ್ಮಿತಸ್ತ್ರಿದಶಾಧಿಪಃ |
ಉವಾಚ ಸಂಸ್ಮರನ್ರುದ್ರಂ ಭಯರೋಷಸಮನ್ವಿತಃ || ೮ ||

|| ಇಂದ್ರ ಉವಾಚ ||

ಶೃಣು ದೂತ ಮಯಾ ಪೂರ್ವಂ ಮಥಿತಸ್ಸಾಗರೋ ಯಥಾ |
ಅದ್ರಯೋ ಮದ್ಭಯತ್ರಸ್ತಾಃ ಸ್ವಕುಕ್ಷಿಸ್ಥಾಸ್ತಥಾ ಕೃತಾಃ || ೯ ||

ಅನ್ಯೇಪಿ ಮದ್ವಿಷಸ್ತೇನ ರಕ್ಷಿತಾ ದಿತಿಜಾಃ ಪುರಾ |
ತಸ್ಮಾತ್ತದ್ರತ್ನಜಾತಂ ತು ಮಯಾಪ್ಯಪಹೃತಂ ಕಿಲ || ೧೦ ||

ಶಂಖೋಪ್ಯೇವಂ ಪುರಾ ದೇವಾನದ್ವಿಕ್ಷತ್ಸಾಗರಾತ್ಮಜಃ |
ಮಮಾನುಜೇನ ನಿಹತಃ ಪ್ರವಿಷ್ಟಸ್ಸಾಗರೋದರೇ |
ತದ್ಗಚ್ಛ ಕಥಯಸ್ವಾಸ್ಯ ಸರ್ವಂ ಮಥನಕಾರಣಂ || ೧೧ ||

---

೮. ನಾರದನು ಹೇಳಿದನು–ಈ ರೀತಿಯಾಗಿ ಆ ದೂತನು ಹೇಳಿದುದನ್ನು ಕೇಳಿ ದೇವೇಂದ್ರನು ಆಶ್ಚರ್ಯಪಟ್ಟು ಭಯ ಕೋಪಗಳಿಂದ ಕೂಡಿದವನಾಗಿ ರುದ್ರನನ್ನು ಸ್ಮರಿಸುತ್ತ ಇಂತೆಂದನು

೯. ಇಂದ್ರನು ಹೇಳಿದನು–ಎಲೈ ದೂತನೇ ! ನಾನು ಪೂರ್ವದಲ್ಲಿ ಸಮುದ್ರವನ್ನೇಕೆ ಕಡೆದನೆಂಬುದನ್ನು ಕೇಳು. ನನಗೆ ಹೆದರಿಕೊಂಡು ಬಂದ ಬೆಟ್ಟಗಳಿಗೆ ಅವನು ತನ್ನೊಳಗೆ ಆಶ್ರಯವನ್ನು ಕೊಟ್ಟನು.

೧೦. ಇದೂ ಅಲ್ಲದೆ ಇನ್ನೂ ನನ್ನ ಶತ್ರುಗಳಾದ ದೈತ್ಯರಿಗೆ ಈ ಸಮುದ್ರನು ತನ್ನಲ್ಲಿ ಆಶ್ರಯವನ್ನು ಕೊಟ್ಟನು. ಆದ್ದರಿಂದ ಅವನನ್ನು ಮಥಿಸಿ ಅವನಲ್ಲಿರುವ ರತ್ನಗಳೆಲ್ಲವನ್ನೂ ಕಸಿದುಕೊಂಡೆನು.

೧೧. ಆ ಸಾಗರನ ಮಗನಾದ ಶಂಖನೂ ಹಿಂದೆ ದೇವತೆಗಳನ್ನು ದ್ವೇಷಿಸುತ್ತಿದ್ದು ನನ್ನ ತಮ್ಮನಾದ ವಿಷ್ಣುವಿನಿಂದ ನಿಗ್ರಹಿಸಲ್ಪಟ್ಟು ಸಾಗರದೊಳಗೆ ಸೇರಿಕೊಂಡನು. ಇವೆಲ್ಲವೂ ಮಥನ ಕಾರಣಗಳು. ಇನ್ನು ನೀನು ಹೋಗು. ಈ ಕಾರಣಗಳೆಲ್ಲವನ್ನೂ ಅವನಿಗೆ ತಿಳಿಸು.

|| ನಾರದ ಉವಾಚ ||

ಇತ್ಥಂ ವಿಸರ್ಜಿತೋ ದೂತಸ್ತ್ವದೇಂದ್ರೇಣಾಗಮದ್ಭವಂ |
ತದಿಂದ್ರವಚನಂ ದೈತ್ಯರಾಜಾಯಾಕಥಯತ್ತದಾ || ೧೨ ||

ತನ್ನಿಶಮ್ಯ ತತೋ ದೈತ್ಯೋ ರೋಷಾತ್ಪ್ರಸ್ಫುರಿತಾಧರಃ |
ಉದ್ಯೋಗಮಕರೋತ್ತೂರ್ಣಂ ಸರ್ವದೇವಜಿಗೀಷಯಾ || ೧೩ ||

ತದೋದ್ಯೋಗೇಽಸುರೇಂದ್ರಸ್ಯ ದಿಗ್ಭ್ಯಃ ಪಾತಾಳತಸ್ತಥಾ |
ದಿತಿಜಾಃ ಪ್ರತ್ಯಪದ್ಯಂತ ಶತಶಃ ಕೋಟಿಶಸ್ತದಾ || ೧೪ ||

ಅಥ ಶುಂಭನಿಶುಂಭಾದ್ಯೈರ್ಬಲಾಧಿಪತಿಕೋಟಿಭಿಃ |
ಗತ್ವಾ ತ್ರಿವಿಷ್ಟಪಂ ದೈತ್ಯೋ ನಂದನಾಧಿಷ್ಠಿತೋಽಭವತ್ || ೧೫ ||

ನಿರ್ಯಯುಸ್ತ್ವಮರಾವತ್ಯಾ ದೇವಾ ಯುದ್ಧಾಯ ದಂಶಿತಾಃ |
ಪುರಮಾವೃತ್ಯ ತಿಷ್ಠಂತಿ ದೃಷ್ಟ್ವಾ ದೈತ್ಯಬಲಂ ಮಹತ್ || ೧೬ ||

---

೧೨. ನಾರದನು ಹೇಳಿದನು–ಇಂದ್ರನು ಹೀಗೆಂದು ಹೇಳಲು ದೂತನು ಹಿಂತಿರುಗಿ ಜಾಲಂಧರನ ಬಳಿಗೆ ಬಂದು ಅವನು ಹೇಳಿದುದನ್ನೆಲ್ಲಾ ಹೇಳಿದನು.

೧೩. ಈ ಮಾತನ್ನು ಜಾಲಂಧರನು ಕೇಳಿದೊಡನೆಯೇ ಕೋಪದಿಂದ ಅವನ ತುಟಿಗಳು ನಡುಗಿದುವು. ಒಡನೆಯೇ ದೇವತೆಗಳೆಲ್ಲರನ್ನೂ ಜಯಿಸಲು ಸನ್ನಾಹವನ್ನು ಮಾಡಿಕೊಂಡನು.

೧೪. ದೈತ್ಯನು ಸನ್ನಾಹಮಾಡುತ್ತಿರಲು ಎಲ್ಲಾ ಕಡೆಯಿಂದಲೂ, ಪಾತಾಳದಿಂದಲೂ ಕೂಡ. ದೈತ್ಯರು, ಕೋಟಿಗಟ್ಟಲೆಯಾಗಿ ಬಂದು ಸೇರಿದರು.

೧೫. ಅನಂತರ ಆ ಸೈನ್ಯವೆಲ್ಲವನ್ನೂ ಶುಂಭ, ನಿಶುಂಭರು ಸೇನಾಧಿಪತಿಗಳಾಗಿ ನಡೆಸುತ್ತಿರಲು ಜಾಲಂಧರನು ಸ್ವರ್ಗಕ್ಕೆ ಹೋಗಿ ನಂದನವನದಲ್ಲಿ ಪಾಳೆಯವನ್ನು ಬಿಟ್ಟನು.

೧೬. ದೇವತೆಗಳೂ ಕೂಡ ಯುದ್ಧಕ್ಕೆ ಸಿದ್ಧರಾಗಿ ಕವಚಗಳನ್ನು ಹಾಕಿಕೊಂಡು ಆ ದೈತ್ಯರ ಮಹತ್ತಾದ ಸೈನ್ಯವನ್ನು ನೋಡಿ ಅದನ್ನು ಜಯಿಸಲು ಅಮರಾವತಿಯ ಸುತ್ತಲೂ ನಿಂತರು.

ತತಸ್ಸಮಭವದ್ಯುದ್ಧಂ ದೇವದಾನವಸೇನಯೋಃ |
ಮುಶಲೈಃ ಪಟ್ಟಿಶೈಃ ಬಾಣೈರ್ಗದಾಪರಿಘಶಕ್ತಿಭಿಃ ॥ ೧೭ ॥

ತೇಽನ್ಯೋನ್ಯಂ ಸಮಧಾವೇತಾಂ ಜಘ್ನತುಶ್ಚ ಪರಸ್ಪರಂ |
ಕ್ಷಣೇನಾಭವತಾಂ ಸೇನೇ ರುಧಿರೌಘಪರಿಪ್ಲುತೇ ॥ ೧೮ ॥

ಪತಿತೈಃ ಪಾತ್ಯಮಾನೈಶ್ಚ ಗಜಾಶ್ವರಥಪತ್ತಿಭಿಃ ।
ವ್ಯರಾಜತ ರಣೇ ಭೂಮಿಃ ಸಂಧ್ಯಾಭ್ರಪಟಲೈರಿವ ॥ ೧೯ ॥

ತತ್ರ ಯುದ್ಧೇ ಮೃತಾನ್ದೈತ್ಯಾನ್ಭಾರ್ಗವಸ್ತೂದತಿಷ್ಠಯತ್ |
ವಿದ್ಯಯಾಮೃತಜೀವಿನ್ಯಾ ಮಂತ್ರಿತೈಸ್ತೋಯಬಿಂದುಭಿಃ ॥ ೨೦ ॥

ದೇವಾನಪಿ ತಥಾ ಯುದ್ಧೇ ತತ್ರಾಜೀವಯದಂಗಿರಾಃ |
ದಿವ್ಯೌಷಧೀಸ್ಸಮಾನೀಯ ದ್ರೋಣಾದ್ರೇಸ್ಸ ಪುನಃ ಪುನಃ ॥ ೨೧ ॥

---

೧೭. ಅನಂತರ ದೇವದಾನವರಿಗೆ ಮುಸಲ, ಪಟ್ಟಿಶ, ಬಾಣ, ಗದೆ, ಪರಿಘ, ಶಕ್ತ್ಯಾಯುಧಗಳಿಂದ ಯುದ್ಧ ಮೊದಲಾಯಿತು.

೧೮. ಒಬ್ಬರ ಮೇಲೊಬ್ಬರು ಬಿದ್ದು ಹೊಡೆದಾಡುತ್ತಿರಲು ಕ್ಷಣಕಾಲ ದಲ್ಲಿಯೇ ಎರಡು ಕಡೆಯ ಸೈನ್ಯಗಳೂ ರಕ್ತದಿಂದ ನೆನೆದುವು.

೧೯. ಆನೆ, ಕುದುರೆ, ಕಾಲಾಳುಗಳು ಸತ್ತುಬಿದ್ದುವು. ಬೀಳುತ್ತಲೂ ಇದ್ದುವು. ಇವುಗಳಿಂದ ಆ ಯುದ್ಧರಂಗವು ಸಾಯಂಕಾಲದ ಮೋಡದಂತೆ ಕೆಂಪಗೆ ಕಾಣುತ್ತ ಇದ್ದಿತು.

೨೦. ಆ ಯುದ್ಧದಲ್ಲಿ ಸತ್ತಿರುವ ದೈತ್ಯರನ್ನು ಶುಕ್ರಾಚಾರ್ಯನು ಅಮೃತ ಸಂಜೀವಿನೀ ವಿದ್ಯೆಯಿಂದ ಮಂತ್ರಿಸಿದ ನೀರನ್ನು ಚುಮುಕಿಸಿ ಬದುಕಿಸುತ್ತಿದ್ದನು.

೨೧. ಬೃಹಸ್ಪತಿಯೂ ಕೂಡ ಆ ಯುದ್ಧದಲ್ಲಿ ಸತ್ತ ದೇವತೆಗಳನ್ನು ದ್ರೋಣಪರ್ವತದಿಂದ ಅಮೃತಸಂಜೀವಿನಿಯ ಮೂಲಿಕೆಯನ್ನು ತಂದು ಒದಗಿಸುತ್ತಿದ್ದನು.

ದೃಷ್ಟ್ವಾ ದೇವಾಂಸ್ತಥಾ ಯುದ್ಧೇ ಪುನರೇವ ಸಮುತ್ಥಿತಾನ್ ।
ಜಲಂಧರಃ ಕ್ರೋಧವಶೋ ಭಾರ್ಗವಂ ವಾಕ್ಯಮಬ್ರವೀತ್ ॥ ೨೨ ॥

॥ ಜಲಂಧರ ಉವಾಚ ॥

ಮಯಾ ದೇವಾ ಹತಾ ಯುದ್ಧೇ ಉತ್ತಿಷ್ಠಂತಿ ಕಥಂ ಪುನಃ ।
ತವ ಸಂಜೀವಿನೀ ವಿದ್ಯಾ ನೈವಾನ್ಯತ್ರೇತಿ ವಿಶ್ರುತಂ ॥ ೨೩ ॥

॥ ಶುಕ್ರ ಉವಾಚ ॥

ದಿವ್ಯೌಷಧೀಸ್ಸಮಾನೀಯ ದ್ರೋಣಾದ್ರೇರಂಗಿರಾಸ್ಸುರಾನ್ ।
ಜೀವಯತ್ಯೇಷ ವೈ ಶೀಘ್ರಂ ದ್ರೋಣಾದ್ರಿಂ ತಮುಪಾಹರ ॥ ೨೪ ॥

॥ ನಾರದ ಉವಾಚ ॥

ಇತ್ಯುಕ್ತಃ ಸ ತು ದೈತ್ಯೇಂದ್ರೋ ನೀತ್ವಾ ದ್ರೋಣಾಚಲಂ ತದಾ ।
ಪ್ರಾಕ್ಷಿಪತ್ಸಾಗರೇ ತೂರ್ಣಂ ಪುನರಾಯಾನ್ಮಹಾಹವಂ ॥ ೨೫ ॥

---

೨೨. ಈ ರೀತಿಯಾಗಿ ಸತ್ತ ದೇವತೆಗಳೂ ಮತ್ತೆ ಮತ್ತೆ ಎದ್ದು ಯುದ್ಧಕ್ಕೆ ಬರುತ್ತಿರಲು ಜಲಂಧರನಿಗೆ ಕೋಪಬಂದು ಶುಕ್ರನನ್ನು ಕುರಿತು ಇಂತೆಂದನು.

೨೩. ಜಲಂಧರನು ಹೇಳಿದನು–ಎಲೈ ಶುಕ್ರನೇ ! ನನ್ನಿಂದ ಕೊಲ್ಲಲ್ಪಟ್ಟ ದೇವತೆಗಳು ಮತ್ತೆ ಯುದ್ಧಕ್ಕೆ ಬರುತ್ತಿದ್ದಾರಲ್ಲಾ ! ಕಾರಣವೇನು ? ಸಂಜೀವಿನೀ ವಿದ್ಯೆಯು ನಿನಗೊಬ್ಬನಿಗೆ ಗೊತ್ತಿರುವುದು ಎಂಬುದು ಲೋಕಕ್ಕೇ ಗೊತ್ತಿದೆಯಲ್ಲ.

೨೪. ಶುಕ್ರನು ಹೇಳಿದನು–ಈ ಬೃಹಸ್ಪತಿಯು ದ್ರೋಣಪರ್ವತದಿಂದ ಉತ್ತಮವಾದ ಔಷಧಿಗಳನ್ನು ತಂದು ಅವರನ್ನು ಬದುಕಿಸುತ್ತಿದ್ದಾನೆ. ನೀನು ಬೇಗನೆ ಆ ದ್ರೋಣಪರ್ವತವನ್ನು ತಂದು ಇಲ್ಲಿಡು.

೨೫ ನಾರದನು ಹೇಳಿದನು–ಶುಕ್ರನು ಹೀಗೆನ್ನಲು ಆ ಜಾಲಂಧರನು ಒಡನೆಯೇ ಹೋಗಿ ಆ ದ್ರೋಣಪರ್ವತವನ್ನು ಕಿತ್ತು ತಂದು ಸಮುದ್ರಕ್ಕೆ ಮುಳುಗುವಂತೆ ಎಸೆದು ಮತ್ತೆ ಯುದ್ಧ ಮಾಡಲು ಬಂದನು.

ಅಥ ದೇವಾನ್ ಹತಾನ್ ದೃಷ್ಟ್ವಾ ದ್ರೋಣಾದ್ರಿಮಗಮದ್ಗುರುಃ ।
ತಾವತ್ತತ್ರ ಗಿರೀಂದ್ರಂ ತಂ ನ ದದರ್ಶ ಸುರಾರ್ಚಿತಃ ॥ ೨೬ ॥

ಜ್ಞಾತ್ವಾ ದೈತ್ಯಹೃತಂ ದ್ರೋಣಂ ಧಿಷಣೋ ಭಯವಿಹ್ವಲಃ ।
ಆಗತ್ಯ ದೂರಾದ್ವ್ಯಾಜಹ್ರೇ ಶ್ವಾಸಾಕುಲಿತವಿಗ್ರಹಃ ॥ ೨೭ ॥

ಪಲಾಯಧ್ವಂ ಮಹಾದೈತ್ಯೋ ನಾಯಂ ಜೇತುಂ ಕ್ಷಮೋ ಯತಃ ।
ರುದ್ರಾಂಶಸಂಭವೋ ಹ್ಯೇಷಃ ಸ್ಮರಧ್ವಂ ಶಕ್ರಚೇಷ್ಟಿತಂ ॥ ೨೮ ॥

॥ ನಾರದ ಉವಾಚ ॥

ಶ್ರುತ್ವಾ ತದ್ವಚನಂ ದೇವಾ ಭಯವಿಹ್ವಲಿತಾಸ್ತದಾ ।
ದೈತ್ಯೇನ ವಧ್ಯಮಾನಾಸ್ತೇಽಪಲಾಯಂತ ದಿಶೋ ದಶ ॥ ೨೯ ॥

ದೇವಾನ್ವಿದ್ರಾವಿತಾನ್ದೃಷ್ಟ್ವಾ ದೈತ್ಯಸ್ಸಾಗರನಂದನಃ ।
ಶಂಖಭೇರೀಜಯರವೈಃ ಪ್ರವಿವೇಶಾಮರಾವತೀಂ ॥ ೩೦ ॥

---

೨೬. ಅನಂತರ ಯುದ್ಧದಲ್ಲಿ ಸತ್ತ ದೇವತೆಗಳನ್ನು ನೋಡಿ ಅವರನ್ನು ಬದುಕಿಸಲು ಗುರುವು ದ್ರೋಣಪರ್ವತಕ್ಕೆ ಹೋದನು. ಎಲ್ಲಿ ನೋಡಿದರೂ ಅದು ಕಾಣಲೇ ಇಲ್ಲವು.

೨೭. ಆಗ ಬೃಹಸ್ಪತಿಯು ದೈತ್ಯನೇ ಈ ಬೆಟ್ಟವನ್ನು ಕದ್ದುಕೊಂಡು ಹೋಗಿರಬೇಕೆಂದು ನಿಶ್ಚಯಿಸಿ ಯುದ್ಧರಂಗಕ್ಕೆ ಓಡಿಬಂದು ನಿಟ್ಟುಸಿರುಬಿಡುತ್ತ ದೂರದಿಂದಲೇ ಕೂಗುತ್ತ ಇಂತೆಂದನು.

೨೮. ಎಲೈ ದೇವತೆಗಳಿರಾ ! ಯುದ್ಧದಿಂದ ಓಡಿಹೋಗಿರಿ. ಈ ದೈತ್ಯನನ್ನು ಜಯಿಸಲು ಸಾಧ್ಯವಿಲ್ಲ. ಇವನು ರುದ್ರನ ಅಂಶದಿಂದ ಹುಟ್ಟಿದವನು. ಇಂದ್ರನು ಮಾಡಿದ ಚೇಷ್ಟೆಯನ್ನು ಸ್ಮರಿಸಿಕೊಳ್ಳಿರಿ.

೨೯. ನಾರದನು ಹೇಳಿದನು–ದೇವತೆಗಳು ಆ ಮಾತನ್ನು ಕೇಳಿ ಭಯಪಟ್ಟವರಾಗಿ ಆ ದೈತ್ಯನ ಏಟನ್ನು ತಡೆಯಲಾರದೆ ಸಿಕ್ಕಿದಕಡೆಗೆ ಓಡಿಹೋದರು.

೩೦. ದೇವತೆಗಳೆಲ್ಲರೂ ಓಡಿಹೋಗಲು ಈ ಜಾಲಂಧರನು ಜಯಭೇರಿಯನ್ನು ಬಡಿಸುತ್ತಾ ಶಂಖವನ್ನು ಊದಿಸುತ್ತ ಜಯಜಯಕಾರಗಳನ್ನು ಮಾಡಿಸುತ್ತ ಅಮರಾವತಿಯನ್ನು ಪ್ರವೇಶಿಸಿದನು.

ಪ್ರವಿಷ್ಟೇ ನಗರೀಂ ದೈತ್ಯೇ ದೇವಾಶ್ಶಕ್ರಪುರೋಗಮಾಃ ।
ಸುವರ್ಣಾದ್ರಿಗುಹಾಂ ಪ್ರಾಪ್ತಾ ನ್ಯವಸನ್ದೈತ್ಯತಾಪಿತಾಃ ॥ ೩೧ ॥

ತತಸ್ಸ ಸರ್ವೇಷ್ವಸುರೋಽಧಿಕಾರೇ
ಷ್ವಿಂದ್ರಾದಿಕಾನಾಂ ವ್ಯನಿವೇಶಯತ್ತದಾ ।
ಶುಂಭಾದಿಕಾನ್ದೈತ್ಯವರಾನ್ ಪೃಥಕ್ ಪೃಥಕ್
ಸ್ವಯಂ ಸುವರ್ಣಾದ್ರಿಗುಹಾಮುಗಾನ್ನೃಪ ॥ ೩೨ ॥

ಇತಿ ಶ್ರೀ ಮಹಾಪುರಾಣೇ ಪಾದ್ಮೇ ಉತ್ತರಖಂಡೇ ಶ್ರೀ ಕೃಷ್ಣ ಸತ್ಯಭಾಮಾ ಸಂವಾದೇ ಕಾರ್ತಿಕ ಮಹಾತ್ಮ್ಯೇ ಅಮರಾವತೀ ಜಯೋ ನಾಮ ನವನವತಿತಮೋಽಧ್ಯಾಯಸ್ಸಮಾಪ್ತಃ

---

೩೧. ಈ ದೈತ್ಯನು ಅಮರಾವತಿಯನ್ನು ಆಕ್ರಮಿಸಿಕೊಳ್ಳಲು ಇಂದ್ರನೇ ಮುಂತಾದ ದೇವತೆಗಳು ದೈತ್ಯನ ತೊಂದರೆಯನ್ನು ತಡೆಯಲಾರದೆ ಮೇರು ಪರ್ವತದ ಗುಹೆಯನ್ನು ಹೊಕ್ಕರು.

೩೨. ಆಮೇಲೆ ಆ ಜಾಲಂಧರನು ಇಂದ್ರಾದಿಗಳ ಅಧಿಕಾರದಲ್ಲಿ ಶುಂಭನೇ ಮುಂತಾದ ಬಲಿಷ್ಠರಾದ ದೇವತೆಗಳನ್ನಿಟ್ಟು ಅವರೆಲ್ಲರಿಗೂ ಬೇರೆಬೇರೆಯಾದ ಅಧಿಕಾರಗಳನ್ನು ಕೊಟ್ಟು ತಾನು ಮೇರುಪರ್ವತದ ಗುಹೆಯನ್ನು ಹೊಕ್ಕನು.

ಇಂತು ಶ್ರೀ ಪದ್ಮಮಹಾಪುರಾಣದ ಉತ್ತರಖಂಡದ ಶ್ರೀ ಕೃಷ್ಣ ಸತ್ಯಭಾಮೆಯರ ಸಂವಾದದ ಕಾರ್ತಿಕ ಮಹಿಮೆಯಲ್ಲಿ ಅಮರಾವತೀ ಜಯ ಎಂಬ ತೊಂಭತ್ತೊಂಭತ್ತನೆಯ ಅಧ್ಯಾಯವು ಮುಗಿದುದು.



|| ಶ್ರೀಃ ||

-X-

# ಅಥ ಶ್ರೀ ಮಹಾಪುರಾಣೇ ಪಾದ್ಮೇ ಉತ್ತರಖಂಡೇ

|| ಶತತಮೋಽಧ್ಯಾಯಃ ||



|| ನಾರದ ಉವಾಚ ||

ಪುನರ್ದೈತ್ಯಂ ಸಮಾಯಾನ್ತಂ ದೃಷ್ಟ್ವಾ ದೇವಾಸ್ಸವಾಸವಾಃ |
ಭಯಪ್ರಕಂಪಿತಾಸ್ಸರ್ವೇ ವಿಷ್ಣುಂ ಸ್ತೋತುಂ ಪ್ರಚಕ್ರಮುಃ || ೧ ||

|| ದೇವಾ ಊಚುಃ ||

ನಮೋ ಮತ್ಸ್ಯಕೂರ್ಮಾದಿನಾನಾಸ್ವರೂಪೈಃ ।
ಸದಾ ಭಕ್ತಕಾರ್ಯೋದ್ಯತಾಯಾರ್ತಿಹಂತ್ರೇ ॥
ವಿಧಾತ್ರಾದಿಸರ್ಗಸ್ಥಿತಿಧ್ವಂಸಕರ್ತ್ರೇ ।
ಗದಾಪದ್ಮಶಂಖಾರಿಹಸ್ತಾಯ ತೇಸ್ತು || ೨ ||

---

## ನೂರನೆಯ ಅಧ್ಯಾಯವು



೧. ನಾರದನು ಹೇಳಿದನು–ಮತ್ತೆ ಅಲ್ಲಿಗೂ ಆ ದೈತ್ಯನು ಬರುತ್ತಿರುವುದನ್ನು ಕಂಡು ಇಂದ್ರಾದಿಗಳು ಹೆದರಿ ನಡುಗುತ್ತಾ ವಿಷ್ಣುವನ್ನು ಸ್ತುತಿಸಲು ಮೊದಲು ಮಾಡಿದರು.

೨. ದೇವತೆಗಳು ಹೇಳಿದರು–ಮತ್ಸ್ಯ, ಕೂರ್ಮ, ಮುಂತಾದ ಅವತಾರಗಳನ್ನು ಮಾಡಿ ಭಕ್ತರ ಕಾರ್ಯದಲ್ಲಿಯೇ ನಿರತನಾಗಿ ಆ ಭಕ್ತರ ಕಷ್ಟವನ್ನು ಪರಿಹರಿಸುವ ನಿನಗೆ ನಮಸ್ಕಾರವು. ಬ್ರಹ್ಮನೇ ಮುಂತಾದವರನ್ನು ಉತ್ಪತ್ತಿ ಮಾಡುವ, ಕಾಪಾಡುವ, ನಾಶವನ್ನು ಮಾಡುವ ಮತ್ತು ಗದೆ, ಪದ್ಮ, ಶಂಖ, ಚಕ್ರಗಳನ್ನು ಧರಿಸಿರುವ ನಿನಗೆ ನಮಸ್ಕಾರವು.

ರಮಾವಲ್ಲಭಾಯಾಸುರಾಣಾಂ ನಿಹಂತ್ರೇ ।
ಭುಜಂಗಾರಿಯಾನಾಯ ಪೀತಾಂಬರಾಯ ॥
ಮುಖಾದಿಕ್ರಿಯಾಪಾಕಕರ್ತ್ರೇಽಥ ಹಂತ್ರೇ
ಶರಣ್ಯಾಯ ತಸ್ಮೈ ನತಾಸ್ಮೋ ನತಾಃ ಸ್ಮಃ ॥ ೩ ॥

ನಮೋ ದೈತ್ಯಸಂತಾಪಿತಾಮರ್ತ್ಯದುಃಖಾ
ಚಲಧ್ವಂಸದಂಭೋಳಯೇ ವಿಷ್ಣವೇ ತೇ ।
ಭುಜಂಗೇಶತಲ್ಪೇಶಯಾಯಾರ್ಕಚಂದ್ರಾ
ಗ್ನಿನೇತ್ರಾಯ ತಸ್ಮೈ ನತಾಃ ಸ್ಮೋ ನತಾಃ ಸ್ಮಃ ॥ ೪ ॥

॥ ನಾರದ ಉವಾಚ ॥

ಸಂಕಷ್ಟನಾಶನಂ ಸ್ತೋತ್ರಮೇತದ್ಯಸ್ತು ಪಠೇನ್ನರಃ ।
ಸ ಕದಾಚಿನ್ನ ಸಂಕಷ್ಟೈಃ ಪೀಡ್ಯತೇ ಕೃಪಯಾ ಹರೇಃ ॥ ೫ ॥

ಇತಿ ದೇವಾಸ್ಸ್ತುತಿಂ ಯಾವತ್ಕುರ್ವಂತಿ ದನುಜದ್ವಿಷಃ ।
ತಾವತ್ಸುರಾಣಾಮಾಪತ್ತಿರ್ವಿಜ್ಞಾತಾ ವಿಷ್ಣುನಾ ತದಾ ॥ ೬ ॥

ಸಹಸೋತ್ಥಾಯ ದೈತ್ಯಾದಿಃ ಕೃಪಯಾ ಖಿನ್ನಮಾನಸಃ ।
ಆರುಹ್ಯ ಗರುಡಂ ವೇಗಾಲ್ಲಕ್ಷ್ಮೀಂ ವಚನಮಬ್ರವೀತ್ ॥ ೭ ॥

---

೩. ರಮೆಗೆ ಗಂಡನಾದ ಅಸುರರನ್ನು ನಾಶಮಾಡುವ ಗರುಡಗಾಮಿಯಾದ ಪೀತಾಂಬರವನ್ನು ಧರಿಸಿರುವ ಯಜ್ಞಾದಿಗಳಿಗೆ ಫಲವನ್ನು ಕೊಡುವ ರಕ್ಷಕನಾದ ನಿನಗೆ ನಮೋ ನಮಃ.

೪. ದೈತ್ಯರಿಂದ ತೊಂದರೆಯನ್ನು ಹೊಂದಿದ ಮನುಷ್ಯರ ದುಃಖವೆಂಬ ಬೆಟ್ಟಕ್ಕೆ ವಜ್ರಾಯುಧನಾದ ನಿನಗೆ ನಮಸ್ಕಾರವು. ಆದಿಶೇಷನೇ ಹಾಸಿಗೆಯಾಗಿ ಉಳ್ಳ ಸೂರ್ಯ ಚಂದ್ರ ಅಗ್ನಿಗಳೇ ಕಣ್ಣಾಗಿ ಉಳ್ಳ ನಿನಗೆ ನಮಸ್ಕಾರವು.

೫. ನಾರದನು ಹೇಳಿದನು—ಈ ಸಂಕಷ್ಟನಾಶನ ಸ್ತೋತ್ರವನ್ನು ಯಾರು ಪಠಿಸುತ್ತಾರೆಯೋ ಅವರು ಹರಿಯ ಕೃಪೆಗೆ ಪಾತ್ರರಾಗಿ ಕಷ್ಟಗಳಿಗೆ ಸಿಕ್ಕುವುದಿಲ್ಲ.

೬. ಈ ರೀತಿಯಾಗಿ ದೇವತೆಗಳು ವಿಷ್ಣುವನ್ನು ಸ್ತುತಿಸುತ್ತಿರಲು ಆಗ ದೇವತೆಗಳಿಗೆ ಆಪತ್ತು ಸಂಭವಿಸಿರುವುದು ಅವನಿಗೆ ಗೊತ್ತಾಯಿತು.

೭. ಆಗ ಕೃಪೆಯಿಂದ ವ್ಯಥೆಪಟ್ಟು ಆ ವಿಷ್ಣುವು ಬೇಗನೆ ಮೇಲಕ್ಕೆದ್ದು ಗರುಡನನ್ನು ಹತ್ತುತ್ತ ಲಕ್ಷ್ಮಿಯನ್ನು ಕುರಿತು ಇಂತೆಂದನು.

|| ಶ್ರೀ ವಿಷ್ಣುರುವಾಚ ||

ಜಲಂಧರೇಣ ತೇ ಭ್ರಾತ್ರಾ ದೇವಾನಾಂ ಕದನಂ ಕೃತಂ |
ತೈರಾಹೂತೋ ಗಮಿಷ್ಯಾಮಿ ಯುದ್ಧಾಯಾತಿತ್ವರಾನ್ವಿತಃ || ೮ ||

|| ಶ್ರೀರುವಾಚ ||

ಅಹಂ ತೇ ವಲ್ಲಭಾ ನಾಥ ಭಕ್ತಾ ಚ ಯದಿ ಸರ್ವದಾ |
ತತ್ಕಥಂ ತೇ ಮಮ ಭ್ರಾತಾ ಯುದ್ಧೇ ವಧ್ಯಃ ಕೃಪಾ ನಿಧೇ || ೯ ||

|| ಶ್ರೀ ವಿಷ್ಣುರುವಾಚ ||

ರುದ್ರಾಂಶಸಂಭವತ್ವಾಚ್ಚ ಬ್ರಹ್ಮಣೋ ವಚನಾದಪಿ |
ಪ್ರೀತ್ಯಾ ತವ ಚ ನೈವಾಯಂ ಮಮ ವಧ್ಯೋ ಜಲಂಧರಃ || ೧೦ ||

ಇತ್ಯುಕ್ತ್ವಾ ಗರುಡಾರೂಢಃ ಶಂಖಚಕ್ರಗದಾಸಿಭೃತ್ ||
ವಿಷ್ಣುರ್ವೇಗಾದ್ಯಯೌ ಯೋದ್ಧುಂ ಯತ್ರ ದೇವಾಃ ಸ್ತುವಂತಿ ತೇ|| ೧೧ ||

---

೮. ಶ್ರೀ ವಿಷ್ಣುವು ಹೇಳಿದನು–ನಿನ್ನ ತಮ್ಮನಾದ ಜಲಂಧರನು ದೇವತೆಗಳೊಡನೆ ಯುದ್ಧಮಾಡುತ್ತಿರುವನು. ಆ ದೇವತೆಗಳು ನನ್ನನ್ನು ಬರಹೇಳುತ್ತಿರುವುದರಿಂದ ನಾನೂ ಯುದ್ಧಕ್ಕೆ ಹೋಗುತ್ತೇನೆ.

೯. ಲಕ್ಷ್ಮಿಯು ಹೇಳಿದಳು– ಎಲೈ ಸ್ವಾಮಿಯೇ ! ನಾನು ನಿನಗೆ ಪ್ರೀತಿಪಾತ್ರಳು, ಮತ್ತು ಭಕ್ತಳು. ಹೀಗಿರುವಲ್ಲಿ ಯುದ್ಧದಲ್ಲಿ ನನ್ನ ತಮ್ಮನನ್ನು ಕೊಲ್ಲುವುದು ನ್ಯಾಯವೆ. ?

೧೦. ಶ್ರೀ ವಿಷ್ಣುವು ಹೇಳಿದನು– ಆ ಜಲಂಧರನು ರುದ್ರನ ಅಂಶದಿಂದ ಹುಟ್ಟಿರುವುದರಿಂದಲೂ ಬ್ರಹ್ಮನು ರುದ್ರನು ಹೊರತು ಮತ್ತೊಬ್ಬರಿಂದ ವಧ್ಯನಲ್ಲವೆಂದು ಹೇಳಿರುವುದರಿಂದಲೂ ನನಗೆ ನಿನ್ನ ಮೇಲಿರುವ ಪ್ರೀತಿಯಿಂದಲೂ ನಾನು ಆತನನ್ನು ಕೊಲ್ಲುವುದಿಲ್ಲ.

೧೧. ಹೀಗೆಂದು ಹೇಳಿ ಆ ವಿಷ್ಣುವು ಶಂಖ ಚಕ್ರ ಗದೆ ಕತ್ತಿಗಳನ್ನು ಧರಿಸಿ ಗರುಡನ ಮೇಲೆ ಹತ್ತಿಕೊಂಡು ಯುದ್ಧಕ್ಕೋಸ್ಕರವಾಗಿ ದೇವತೆಗಳು ತನ್ನನ್ನು ಸ್ತುತಿಸುತ್ತಿರುವಲ್ಲಿಗೆ ಹೋದನು.

ಅಥಾರುಣಾನುಜಜವಾತ್ ಪಕ್ಷವಾತಪ್ರಪೀಡಿತಾಃ ।
ವಾತ್ಯಾ ವಿವರ್ತಿತಾ ದೈತ್ಯಾ ಬಭ್ರಮುಃ ಖೇ ಯಥಾ ಘನಾಃ ॥ ೧೨ ॥

ತತೋ ಜಲಂಧರೋ ದೃಷ್ಟ್ವಾ ದೈತ್ಯಾನ್ವಾತ್ಯಾ ಪ್ರಪೀಡಿತಾನ್ ।
ಉದ್ವೃತ್ಯ ನಯನೇ ಕ್ರೋಧಾತ್ತತೋ ವಿಷ್ಣುಂ ಸಮಭ್ಯಗಾತ್ ॥ ೧೩ ॥

ತತಸ್ಸಮಭವದ್ಯುದ್ಧಂ ವಿಷ್ಣುದೈತ್ಯೇಂದ್ರಯೋರ್ಮಹತ್ ।
ಆಕಾಶಂ ಕುರ್ವತೋಃ ಬಾಣೈಸ್ತದಾ ನಿರವಕಾಶವತ್ ॥ ೧೪ ॥

ವಿಷ್ಣುರ್ದೈತ್ಯಸ್ಯ ಬಾಣೌಘೈಃ ಧ್ವಜಂ ಛತ್ರಂ ಧನುರ್ಹಯಾನ್ ।
ಚಿಚ್ಛೇದ ತಂ ಚ ಹೃದಯೇ ಬಾಣೇನೈಕೇನ ತಾಡಯನ್ ॥ ೧೫ ॥

ತತೋ ದೈತ್ಯಸ್ಸಮುತ್ಪತ್ಯ ಗದಾಪಾಣಿಸ್ತ್ವರಾನ್ವಿತಃ ।
ಆಹತ್ಯ ಗರುಡಂ ಮೂರ್ಧ್ನಿ ಪಾತಯಾಮಾಸ ಭೂತಳೇ ॥ ೧೬ ॥

---

೧೨. ಅನಂತರ ವಿಷ್ಣುವು ಯುದ್ಧಕ್ಕೆ ಹೊರಡಲು ಗರುಡನ ರೆಕ್ಕೆಯ ಗಾಳಿಯಿಂದ ಸುಂಟರಗಾಳಿಗಳು ಹುಟ್ಟಲು ದೈತ್ಯರೆಲ್ಲರೂ ಅಂತರಿಕ್ಷದಲ್ಲಿ ಮೋಡಗಳು ಸುತ್ತುವಂತೆ ಆ ಗಾಳಿಯಲ್ಲಿ ಸಿಕ್ಕಿ ಸುತ್ತುತ್ತಲಿದ್ದರು.

೧೩. ಆಗ ಜಾಲಂಧರನು ದೈತ್ಯರು ಸುಂಟರಗಾಳಿಯಿಂದ ತೊಂದರೆಪಡುತ್ತಿರುವುದನ್ನು ನೋಡಿ ಕೋಪದಿಂದ ಕಣ್ಣುಗಳನ್ನು ತಿರುಗಿಸುತ್ತ ವಿಷ್ಣುವನ್ನು ಎದುರಿಸಿದನು.

೧೪. ಆಗ ವಿಷ್ಣು ಜಲಂಧರರು ಬಾಣಗಳಿಂದ ಆಕಾಶವನ್ನು ತುಂಬುತ್ತ ಘೋರವಾದ ಯುದ್ಧವನ್ನು ಮಾಡಿದರು. ಆ ಬಾಣದಿಂದ ಆಕಾಶವು ತುಂಬಿ ಜಾಗವಿಲ್ಲದಂತಾಯಿತು.

೧೫. ಆಗ ವಿಷ್ಣುವು ಆ ದೈತ್ಯನ ಧ್ವಜವನ್ನೂ ಛತ್ರವನ್ನೂ ಧನುಸ್ಸನ್ನೂ ಕುದುರೆಗಳನ್ನೂ ಬಾಣಗಳಿಂದ ಕತ್ತರಿಸಿ ಅವನಿಗೂ ಎದೆಗೆ ಹೊಡೆದನು.

೧೬. ಅನಂತರ ಆ ದೈತ್ಯನು ಗದೆಯನ್ನು ತೆಗೆದುಕೊಂಡು ರಭಸದಿಂದ ಗರುಡನ ತಲೆಯಮೇಲೆ ಹೊಡೆದು ಆ ಗರುಡನನ್ನು ನೆಲದಮೇಲೆ ಕೆಡವಿದನು.

ವಿಷ್ಣೋರ್ಗದಾಂ ಸ್ವಖಡ್ಗೇನ ಚಿಚ್ಛೇದ ಪ್ರಹಸನ್ನಿವ ।
ತಾವತ್ಸಹೃದಯೇ ವಿಷ್ಣುಂ ಜಘಾನ ದೃಢಮುಷ್ಟಿನಾ ॥ ೧೭ ॥

ತತಸ್ತೌ ಬಾಹುಯುದ್ಧೇನ ಯುಯುಧಾತೇ ಮಹಾಬಲೌ ।
ಬಾಹುಭಿರ್ಮುಷ್ಟಿಭಿಶ್ಚೈವ ಜಾನುಭಿರ್ನಾದಯನ್ಮಹೀಂ ॥ ೧೮ ॥

ಏವಂ ಸುರುಚಿರಂ ಯುದ್ಧಂ ಕೃತ್ವಾ ವಿಷ್ಣುಃ ಪ್ರತಾಪವಾನ್ ।
ಉವಾಚ ದೈತ್ಯರಾಜಾನಂ ಮೇಘಗಂಭೀರಯಾ ಗಿರಾ ॥ ೧೯ ॥

॥ ಶ್ರೀ ವಿಷ್ಣುರುವಾಚ ॥

ವರಂ ವರಯ ದೈತ್ಯೇಂದ್ರ ಪ್ರೀತೋಽಸ್ಮಿ ತವ ವಿಕ್ರಮಾತ್ ।
ಅದೇಯಮಪಿ ತೇ ದದ್ಮಿ ಯತ್ತೇ ಮನಸಿ ವರ್ತತೇ ॥ ೨೦ ॥

॥ ಜಲಂಧರ ಉವಾಚ ॥

ಯದಿ ಭೋಸ್ತ್ವಂ ಪ್ರತುಷ್ಟೋಽಸಿ ವರಮೇತಂ ದದಸ್ವ ಮೇ ।
ಮದ್ಭಗಿನ್ಯಾ ಸಹ ತಯಾ ಮದ್ಗೃಹೇ ಸಗಣೋ ವಸ ॥ ೨೧ ॥

---

೧೭. ವಿಷ್ಣುವು ನಗುತ್ತ ಆ ಗದೆಯನ್ನು ತನ್ನ ಖಡ್ಗದಿಂದ ಕತ್ತರಿಸಿದನು. ಅಷ್ಟರೊಳಗೆ ದೈತ್ಯನು ವಿಷ್ಣುವಿಗೆ ಮುಷ್ಟಿಯಿಂದ ಎದೆಯಮೇಲೆ ಹೊಡೆದನು.

೧೮. ಅನಂತರ ಅವರು ತೋಳುಗಳಿಂದಲೂ ಮುಷ್ಟಿಗಳಿಂದಲೂ ಹೊಡೆದಾಡುತ್ತಾ ಮೊಣಕಾಲುಗಳಿಂದ ಭೂಮಿಯನ್ನು ಕುಕ್ಕುತ್ತ ಸದ್ದುಮಾಡುತ್ತ ಬಾಹುಯುದ್ಧವನ್ನು ಮಾಡಿದರು.

೧೯. ಬಲಿಷ್ಠನಾದ ವಿಷ್ಣುವು ಆ ದೈತ್ಯನೊಡನೆ ಬಹು ಹೊತ್ತು ಯುದ್ಧ ಮಾಡಿ ಅವನನ್ನು ಕುರಿತು ಮೇಘದಂತೆ ಧ್ವನಿಯಿಂದ ಗಂಭೀರವಾಗಿ ಇಂತೆಂದನು.

೨೦. ಶ್ರೀ ವಿಷ್ಣುವು ಹೇಳಿದನು-ಎಲೈ ದೈತ್ಯೇಂದ್ರನೇ! ನಿನ್ನ ಪರಾಕ್ರಮದಿಂದ ಪ್ರೀತನಾಗಿದ್ದೇನೆ. ನಿನ್ನ ಮನಸ್ಸಿನಲ್ಲಿರುವ ವರವನ್ನು ಕೇಳಿಕೋ. ಅದು ಕೊಡುವುದಕ್ಕೆ ಯೋಗ್ಯವಿಲ್ಲದಿದ್ದರೂ ಕೊಡುತ್ತೇನೆ.

೨೧. ಜಲಂಧರನು ಹೇಳಿದನು-ಎಲೈ ವಿಷ್ಣುವೆ! ನೀನು ಪ್ರಸನ್ನನಾಗಿದ್ದರೆ ನನಗೆ ಈ ವರವನ್ನು ಕೊಡು. ನನ್ನ ಅಕ್ಕನೊಡನೆ ನಿನ್ನ ಗಣಗಳನ್ನು ಕರೆದುಕೊಂಡು ಬಂದು ನನ್ನ ಮನೆಯಲ್ಲಿಯೇ ವಾಸಮಾಡಿಕೊಂಡು ಇರು.

॥ ನಾರದ ಉವಾಚ ॥

ತಥೇತ್ಯುಕ್ತ್ವಾ ಸ ಭಗವಾನ್ ಸರ್ವದೇವಗಣೈಸ್ಸಹ ।
ಜಾಲಂಧರಂ ನಾಮ ಪುರಮಗಮದ್ರಮಯಾ ಸಹ ॥ ೨೨ ॥

ಜಾಲಂಧರಶ್ಚ ದೇವಾನಾಮಧಿಕಾರೇಷು ದಾನವಾನ್ ।
ಸ್ಥಾಪಯಿತ್ವಾ ಸಹರ್ಷಂ ಸ ಪುನರಾಗಾನ್ಮಹೀತಳಂ ॥ ೨೩ ॥

ದೇವಗಂಧರ್ವಸಿದ್ಧೇಷು ಯತ್ಕಿಂಚಿದ್ರತ್ನಸಂಜ್ಞಿತಂ ।
ತದಾತ್ಮವಶಗಂ ಕೃತ್ವಾಽತಿಷ್ಠತ್ಸಾಗರನಂದನಃ ॥ ೨೪ ॥

ಪಾತಾಳಭುವನೇ ದೈತ್ಯಂ ನಿಶುಂಭಂ ಸ ಮಹಾಬಲಂ ।
ಸ್ಥಾಪಯಿತ್ವಾ ಸ ಶೇಷಾದೀನಾನಯದ್ಭೂತಳಂ ಬಲೀ ॥ ೨೫ ॥

ದೇವಗಂಧರ್ವ ಸಿದ್ಧೌಘಾನ್ ಸರ್ಪರಾಕ್ಷಸಮಾನುಷಾನ್ ।
ಸ್ವಪುರೇ ನಾಗರಾನ್ಕೃತ್ವಾ ಶಶಾಸ ಭುವನತ್ರಯಂ ॥ ೨೬ ॥

---

೨೨. ನಾರದನು ಹೇಳಿದನು-ಆ ರೀತಿಯೇ ಆಗಲೆಂದು ಹೇಳಿ ವಿಷ್ಣುವು ರಮೆಯೊಡನೆಯೂ ತನ್ನ ದೇವಗಣಗಳೊಡನೆಯೂ ಜಾಲಂಧರಪುರವೆಂಬ ಅವನ ಪಟ್ಟಣದಲ್ಲಿ ಹೋಗಿ ನಿಂತನು.

೨೩. ಜಲಂಧರನು ದೇವತೆಗಳ ಅಧಿಕಾರದಲ್ಲಿ ದೈತ್ಯರನ್ನು ನಿಯಮಿಸಿ ಸಂತೋಷದಿಂದ ಮತ್ತೆ ಭೂಲೋಕಕ್ಕೆ ಬಂದನು.

೨೪. ದೇವತೆಗಳು ಗಂಧರ್ವರು ಸಿದ್ಧರಲ್ಲಿ ಇದ್ದ ಉತ್ತಮ ವಸ್ತುಗಳೆಲ್ಲ ವನ್ನೂ ಈ ದೈತ್ಯನು ತನ್ನ ಅಧೀನಕ್ಕೆ ತೆಗೆದುಕೊಂಡು ರಾಜ್ಯಭಾರವನ್ನು ಮಾಡುತ್ತಿದ್ದನು.

೨೫. ಪಾತಾಳಲೋಕದಲ್ಲಿ ಬಲಿಷ್ಠನಾದ ನಿಶುಂಭನೆಂಬ ದೈತ್ಯನನ್ನು ನಿಲ್ಲಿಸಿ ಉಳಿದ ದೈತ್ಯರೆಲ್ಲರನ್ನೂ ಭೂಲೋಕಕ್ಕೆ ಕರೆದುಕೊಂಡು ಬಂದನು.

೨೬. ದೇವತೆಗಳು, ಗಂಧರ್ವರು, ಸಿದ್ಧರು, ಸರ್ಪರು, ರಾಕ್ಷಸರು ಇವರೆಲ್ಲರನ್ನೂ ತನ್ನ ಪಟ್ಟಣದಲ್ಲಿ ವಾಸಮಾಡುವಂತೆ ಮಾಡಿ ಮೂರುಲೋಕ ವನ್ನೂ ಆಳುತ್ತಿದ್ದನು.

ಏವಂ ಜಲಂಧರಃ ಕೃತ್ವಾ ದೇವಾನ್ ಸ ವಶವರ್ತಿನಃ ।
ಧರ್ಮೇಣ ಪಾಲಯಾಮಾಸ ಪ್ರಜಾಃ ಪುತ್ರಾನಿವೌರಸಾನ್ ॥ ೨೭ ॥

ನ ಕಶ್ಚಿದ್ವ್ಯಾಧಿತೋ ನೈವ ದುಃಖಿತೋ ನ ಕೃಶಃ ತಥಾ ।
ನ ದೀನೋ ದೃಶ್ಯತೇ ತಸ್ಮಿನ್ ಧರ್ಮಾದ್ರಾಜ್ಯಂ ಪ್ರಶಾಸತಿ ॥ ೨೮ ॥

ಏವಂ ಮಹೀಂ ಶಾಸತಿ ದಾನವೇಂದ್ರೇ
ಧರ್ಮೇಣ ಸಮ್ಯಕ್ ಯದೃಚ್ಛಯಾಹಂ ।
ಕದಾಚಿದಾಗಾಮಥ ತಸ್ಯ ಲಕ್ಷ್ಮೀಂ
ವಿಲೋಕಿತುಂ ಶ್ರೀರಮಣಂ ಚ ಸೇವಿತುಂ ॥ ೨೯ ॥

ಇತಿ ಶ್ರೀ ಮಹಾಪುರಾಣೇ ಪಾದ್ಮೇ ಉತ್ತರಖಂಡೇ ಶ್ರೀ ಕೃಷ್ಣ
ಸತ್ಯಭಾಮಾ ಸಂವಾದೇ ಕಾರ್ತಿಕ ಮಹಾತ್ಮ್ಯೇ ಜಲಂಧರಸ್ಯ ವಿಷ್ಣು
ವರ ಪ್ರಾಪ್ತಿರ್ನಾಮ ಶತತಮೋಽಧ್ಯಾಯಸ್ಸಮಾಪ್ತಃ

---

೨೭. ಈ ರೀತಿಯಾಗಿ ಜಾಲಂಧರನು ದೇವತೆಗಳನ್ನು ತನ್ನ ಅಧೀನರನ್ನಾಗಿ ಮಾಡಿಕೊಂಡು ಪ್ರಜೆಗಳನ್ನು ಹೊಟ್ಟೆಯಲ್ಲಿ ಹುಟ್ಟಿದ ಮಕ್ಕಳಂತೆ ಧರ್ಮದಿಂದ ಕಾಪಾಡುತ್ತಿದ್ದನು.

೨೮. ಆ ಜಾಲಂಧರನು ಧರ್ಮದಿಂದ ರಾಜ್ಯವಾಳುತ್ತಿರಲು ಅವನ ರಾಜ್ಯದಲ್ಲಿ ರೋಗಿಯಾಗಲಿ, ದುಃಖಿಯಾಗಲಿ, ಕೃಶನಾದವನಾಗಲೀ, ಬಡವನಾಗಲೀ, ಒಬ್ಬನೂ ಇರಲಿಲ್ಲ.

೨೯. ಈ ರೀತಿಯಾಗಿ ದಾನವೇಂದ್ರನು ಧರ್ಮದಿಂದ ರಾಜ್ಯವನ್ನು ಆಳುತ್ತಿರಲು ಒಂದುಸಾರಿ ನಾನು ಆ ದೈತ್ಯನ ಐಶ್ವರ್ಯವನ್ನು ನೋಡುವುದಕ್ಕೂ ಆ ಸ್ವಾಮಿಯಾದ ವಿಷ್ಣುವನ್ನು ಸೇವಿಸುವುದಕ್ಕೂ ಅಲ್ಲಿಗೆ ಹೋದೆನು.

ಇಂತು ಶ್ರೀ ಪದ್ಮಮಹಾಪುರಾಣದ ಉತ್ತರಖಂಡದ ಶ್ರೀ ಕೃಷ್ಣ
ಸತ್ಯಭಾಮಾ ಸಂವಾದದ ಕಾರ್ತಿಕ ಮಹಿಮೆಯಲ್ಲಿ ಜಲಂಧರನಿಗೆ ವಿಷ್ಣುವು
ವರವನ್ನು ಕೊಟ್ಟುದು ಎಂಬ ನೂರನೆಯ ಅಧ್ಯಾಯವು ಮುಗಿದುದು.



॥ ಶ್ರೀಃ ॥

-X-

# ಅಥ ಶ್ರೀ ಮಹಾಪುರಾಣೇ ಪಾದ್ಮೇ ಉತ್ತರಖಂಡೇ

## ॥ ಏಕಾಧಿಕಶತತಮೋಽಧ್ಯಾಯಃ ॥



॥ ನಾರದ ಉವಾಚ ॥

ಸ ಮಾಂ ಸಂಪೂಜ್ಯ ವಿಧಿವದ್ದಾನವೇಂದ್ರೋಽತಿಭಕ್ತಿತಃ ।
ಸಂಪ್ರಹಸ್ಯ ತದಾ ವಾಕ್ಯಂ ಜಗಾದ ನೃಪಸತ್ತಮ ॥ ೧ ॥

॥ ಜಲಂಧರ ಉವಾಚ ॥

ಕುತ ಆಗಮ್ಯತೇ ಬ್ರಹ್ಮನ್ ಕಿಂಚಿದ್ದೃಷ್ಟಂ ತ್ವಯಾ ಕ್ವಚಿತ್ ।
ಯದರ್ಥಮಿಹ ಚಾಯಾತಸ್ತದಾಜ್ಞಾಪಯ ಮಾಂ ಮುನೇ ॥ ೨ ॥

---

## ನೂರಒಂದನೆಯ ಅಧ್ಯಾಯವು



೧. ನಾರದನು ಹೇಳಿದನು- ಆಗ ಆ ದಾನವೇಂದ್ರನು ನನ್ನನ್ನು ಬಹು ಭಕ್ತಿಯಿಂದ ವಿಧಿವತ್ತಾಗಿ ಪೂಜಿಸಿದನು. ಆಮೇಲೆ ಸಂತೋಷದಿಂದ ಇಂತೆಂದನು.

೨. ಜಲಂಧರನು ಹೇಳಿದನು-ಎಲೈ ಋಷಿಯೆ ! ಎಲ್ಲಿಂದ ಬಂದೆ ? ಎಲ್ಲಿಯಾದರೂ ಯಾವುದಾದರೂ ಆಶ್ಚರ್ಯವನ್ನು ನೋಡಿದೆಯಾ ! ಇಲ್ಲಿಗೇಕೆ ಬಂದೆ ? ದಯವಿಟ್ಟು ಅದನ್ನು ಅಪ್ಪಣೆ ಕೊಡಿಸು.

## ॥ ನಾರದ ಉವಾಚ ॥

ಗತಃ ಕೈಲಾಸಶಿಖರಂ ದೈತ್ಯೇಂದ್ರಾಽಹಂ ಯದೃಚ್ಛಯಾ ।
ತತ್ರೋಮಯಾ ಸಹಾಸೀನಂ ದೃಷ್ಟವಾನಸ್ಮಿ ಶಂಕರಂ ॥ ೩ ॥

ಯೋಜನಾಯುತವಿಸ್ತೀರ್ಣೇ ಕಲ್ಪದ್ರುಮಮಹಾವನೇ ।
ಕಾಮಧೇನುಶತಾಕೀರ್ಣೇ ಚಿಂತಾಮಣಿಸುದೀಪಿತೇ ॥ ೪ ॥

ತಂ ದೃಷ್ಟ್ವಾ ಮಹದಾಶ್ಚರ್ಯಂ ವಿತರ್ಕೋಮೇಽಭವತ್ತದಾ ।
ಕ್ವಾಪೀದೃಶೀ ಭವೇದ್ವೃದ್ಧಿಸ್ತ್ರಿಲೋಕ್ಯಾಂ ವಾ ನ ವೇತಿ ಚ ॥ ೫ ॥

ತಾವತ್ತವಾಽಪಿ ದೈತ್ಯೇಂದ್ರ ಸಮೃದ್ಧಿಃ ಸಂಸ್ಮೃತಾ ಮಯಾ ।
ತದ್ವಿಲೋಕನಕಾಮೋಽಹಂ ತ್ವತ್ಸಾನ್ನಿಧ್ಯಮಿಹಾಗತಃ ॥ ೬ ॥

ತ್ವತ್ಸಮೃದ್ಧಿಮಿಮಾಂ ಪಶ್ಯನ್ ಸ್ತ್ರೀರತ್ನರಹಿತಾಂ ಧ್ರುವಂ ।
ಕಲ್ಪಯಾಮಿ ಶಿವಾದನ್ಯಸ್ತ್ರಿಲೋಕ್ಯಾಂ ನ ಸಮೃದ್ಧಿಮಾನ್ ॥ ೭ ॥

---

೩. ನಾರದನು ಹೇಳಿದನು-ಎಲೈ ದೈತ್ಯೇಂದ್ರನೆ! ಒಂದುಸಾರಿ ಹಾಗೆಯೇ ಸುತ್ತುತ್ತಾ ಕೈಲಾಸ ಶಿಖರಕ್ಕೆ ಹೋದೆನು. ಅಲ್ಲಿ ಉಮಾದೇವಿಯೊಡನೆ ಶಂಕರನು ಕುಳಿತುಕೊಂಡಿದ್ದುದನ್ನು ನೋಡಿದೆನು.

೪. ಸಾವಿರ ಯೋಜನಗಳ ವಿಸ್ತೀರ್ಣವುಳ್ಳ ಅನೇಕ ಕಲ್ಪವೃಕ್ಷಗಳ ಕಾಡುಗಳೇ ಇರುವ ಸಾವಿರಾರು ಕಾಮಧೇನುಗಳು ವಿಹರಿಸುತ್ತಿರುವ ಚಿಂತಾಮಣಿಯಿಂದ ಪ್ರಕಾಶಿತವಾದ ಆ ಶಿಖರದಲ್ಲಿ ಆ ಶಿವನು ಕುಳಿತಿದ್ದನು.

೫. ಅದನ್ನು ನೋಡಿ ನನಗೆ ಬಹು ಆಶ್ಚರ್ಯವಾಯಿತು. ಮತ್ತು ನನಗೆ ಆಗ ಈರೀತಿ ಯೋಚನೆಯು ಬಂದಿತು. ಈ ರೀತಿಯಾದ ಅಟ್ಟಹಾಸವೂ ಐಶ್ವರ್ಯವೂ ಮೂರು ಲೋಕದಲ್ಲಿ ಎಲ್ಲಿಯೂ ಇಲ್ಲವೆಂದು ನನಗೆ ಕಂಡುಬಂದಿತು.

೬. ಅಷ್ಟರೊಳಗೆ ನಿನ್ನ ಐಶ್ವರ್ಯವೂ ನನಗೆ ಜ್ಞಾಪಕಕ್ಕೆ ಬಂದಿತು. ಆ ರೀತಿಯಾದ ಐಶ್ವರ್ಯವನ್ನು ನಿನ್ನಲ್ಲಿ ನೋಡಲು ಇಲ್ಲಿಗೆ ಬಂದಿರುವೆನು.

೭. ನಿನ್ನ ಸಮೃದ್ಧಿಯನ್ನೂ ನೋಡಿದೆನು. ಆ ಶಿವನ ಸಮೃದ್ಧಿಯನ್ನೂ ನೋಡಿದೆನು. ಆದರೆ ನಿನ್ನಲ್ಲಿ ಅಂತಹ ಸ್ತ್ರೀರತ್ನವಿಲ್ಲದಿರುವುದರಿಂದ ಶಿವನಿಗಿಂತಲೂ ಮೂರು ಲೋಕದಲ್ಲಿಯೂ ಮತ್ತೊಬ್ಬನು ಐಶ್ವರ್ಯವಂತನಿಲ್ಲವೆಂದು ತಿಳಿದೆನು.

ಅಪ್ಸರೋನಾಗಕನ್ಯಾದ್ಯಾ ಯದ್ಯಪಿತ್ವದ್ವಶೇ ಸ್ಥಿತಾಃ ।
ತಥಾಪಿ ತಾ ನ ಪಾರ್ವತ್ಯಾ ರೂಪೇಣ ಸದೃಶಾ ಧ್ರುವಂ ॥ ೮ ॥

ಯಸ್ಯಾ ಲಾವಣ್ಯಜಲಧೌ ನಿಮಗ್ನಶ್ಚತುರಾನನಃ ।
ಸ್ವಧೈರ್ಯಂ ಮುಮುಚೇ ಪೂರ್ವಂ ತಯಾ ಕಾನ್ಯೋಪಮೀಯತೇ ॥ ೯ ॥

ವೀತರಾಗೋಽಪಿ ಹಿ ಯಯಾ ಮದನಾರಿಸ್ಸ್ವಲೀಲಯಾ ।
ವಿಶ್ವತಂತ್ರೋಽಪಿ ಹಿ ಯತಃ ಸ್ವಾತ್ಮನೋ ವಶಗಃ ಕೃತಃ ॥ ೧೦ ॥

ಸೌಂದರ್ಯಾದ್ಗಹನೇ ಭ್ರಾಮನ್ ಶಬರೀರೂಪಯಾ ಪುರಾ ।
ನಿಷ್ಕಾಮಃ ಕಾಮಯುಕ್ತೋಽಪಿ ಸ್ವವಶೇಽಪಿ ವಶಃ ಕೃತಃ ॥ ೧೧ ॥

ಯಸ್ಯಾಃ ಪುನಃ ಪುನಃ ಪಶ್ಯನ್ ರೂಪಂ ಧಾತಾ ವಿಸರ್ಜನೇ ।
ಸಸರ್ಜಾಪ್ಸರಸಸ್ತಾಸಾಂ ತತ್ಸಮೈಕಾಽಪಿ ನಾಽಭವತ್ ॥ ೧೨ ॥

---

೮. ಆದರೆ ಉತ್ತಮೋತ್ತಮರಾದ ಅಪ್ಸರಸ್ತ್ರೀಯರೂ ನಾಗಕನ್ಯೆಯರೂ ನಿನ್ನ ಅಧೀನದಲ್ಲಿರುವರು. ಆದರೂ ಅವರೊಬ್ಬರೂ ಆ ಪಾರ್ವತಿಯ ರೂಪಿನಂತೆ ರೂಪವನ್ನು ಹೊಂದಿಲ್ಲ. ಅವಳಿಗೆ ಸಮರೂ ಅಲ್ಲ.

೯. ಆ ಪಾರ್ವತಿಯ ಸೌಂದರ್ಯವನ್ನು ನೋಡಿ ಪೂರ್ವದಲ್ಲಿ ಬ್ರಹ್ಮನು ಮೋಹಗೊಂಡು ತನ್ನ ಧೈರ್ಯವನ್ನು ಬಿಟ್ಟಿದ್ದನು ಎಂದಮೇಲೆ ಅವಳನ್ನು ಯಾರಿಗೆ ಹೋಲಿಸಲಾಗುತ್ತದೆ ?

೧೦. ಮನ್ಮಥ ಶತ್ರುವಾದ ಆ ಪರಮೇಶ್ವರನೂ ಆಸೆಗಳನ್ನು ಬಿಟ್ಟಿದ್ದರೂ ಪ್ರಪಂಚಕ್ಕೆ ಒಡೆಯನಾಗಿದ್ದರೂ ಕೂಡ ಆತನನ್ನು ಆ ಪಾರ್ವತಿಯು ತನ್ನ ಲೀಲೆಯಿಂದ ಅಧೀನನನ್ನಾಗಿ ಮಾಡಿಕೊಂಡಿರುವಳು.

೧೧. ಹಿಂದೆ ಆ ಪಾರ್ವತಿಯು ಬೇಡತಿಯಾಗಿದ್ದು ಕಾಡಿನಲ್ಲಿ ಸಂಚರಿಸುತ್ತಿದ್ದಾಗ ಆಕೆಯ ಸೌಂದರ್ಯವನ್ನು ನೋಡಿ ಆಶೆಯನ್ನು ಬಿಟ್ಟಿದ್ದ ಆ ಶಿವನು ಕಾಮಯುಕ್ತನಾಗಿ ತನ್ನ ಮನಸ್ಸನ್ನು ಹಿಡಿಯಲಾರದೆ ಅವಳಿಗೆ ಅಧೀನನಾದನು.

೧೨. ಸೃಷ್ಟಿಮಾಡುವಾಗ ಆಕೆಯ ರೂಪಲಾವಣ್ಯಗಳನ್ನು ಬ್ರಹ್ಮನೇ ಮತ್ತೆ ಮತ್ತೆ ನೋಡುತ್ತ ಅಪ್ಸರಸ್ತ್ರೀಯರನ್ನು ಸೃಷ್ಟಿಮಾಡಿದನು. ಆದರೂ ಅವರಲ್ಲಿ ಒಬ್ಬಳೂ ಅವಳಂತೆ ಆಗಲೇ ಇಲ್ಲ.

ಅತಸ್ತ್ರೀರತ್ನಸಂಭೋಕ್ತುಃ ಸಮೃದ್ಧಿಸ್ತಸ್ಯ ಸಾ ವರಾ।
ತಥಾ ನ ತವ ದೈತ್ಯೇಂದ್ರ ಸರ್ವರತ್ನಾಧಿಪಸ್ಯ ಚ ॥ ೧೩ ॥

ಏವಮುಕ್ತ್ವಾ ತಮಾಮಂತ್ರ್ಯ ಗತೇ ಮಯಿ ಸ ದೈತ್ಯರಾಟ್।
ತದ್ರೂಪಶ್ರವಣಾದಾಸೀದನಂಗಜ್ವರಪೀಡಿತಃ ॥ ೧೪ ॥

ಅಥ ಸಂಪ್ರೇಷಯಾಮಾಸ ಸ ದೂತಂ ಸಿಂಹಿಕಾಸುತಂ।
ತ್ರ್ಯಂಬಕಾಯ ತದಾ ಕಿಂಚಿದ್ವಿಷ್ಣುಮಾಯಾವಿಮೋಹಿತಃ ॥ ೧೫ ॥

ಕೈಲಾಸಮಗಮದ್ರಾಹುಃ ಕುರ್ವನ್ ಶುಕ್ಲೇಂದುವರ್ಚಸಂ।
ಕಾರ್ಷ್ಣ್ಯೇನ ಕೃಷ್ಣಪಕ್ಷೇಂದುವರ್ಚಸಂ ಸ್ವಾಂಗಜೇನ ತು ॥ ೧೬ ॥

ನಿವೇದಿತಸ್ತ್ವದೇಶಾಯ ನಂದಿನಾ ಸ ಪ್ರವೇಶಿತಃ।
ತ್ರ್ಯಂಬಕೆ ಭ್ರೂಲತಾಸಂಜ್ಞಾಪ್ರೇರಿತೋ ವಾಕ್ಯಮಬ್ರವೀತ್ ॥ ೧೭ ॥

---

೧೩. ಆದುದರಿಂದ ಅಂತಹ ಸ್ತ್ರೀರತ್ನವನ್ನು ಅನುಭವಿಸುವ ಐಶ್ವರ್ಯವೇ ಮೇಲಾದುದು. ಎಲೈ ದೈತ್ಯೇಂದ್ರನೆ! ನೀನು ಎಲ್ಲಾರತ್ನಗಳಿಗೂ ಒಡೆಯನಾಗಿದ್ದರೂ ಆ ರೀತಿಯಾದ ಐಶ್ವರ್ಯವು ನಿನಗಿಲ್ಲ.

೧೪. ನಾನು ಈ ರೀತಿಯಾಗಿ ಹೇಳಿ ಹೊರಟುಹೋಗಲು ಆ ದೈತ್ಯನು ಆಕೆಯ ಸೌಂದರ್ಯವನ್ನು ಕೇಳಿ ಅವಳಲ್ಲಿ ಮನಸ್ಸುಳ್ಳವನಾಗಿ ಮನ್ಮಥಜ್ವರದಿಂದ ಬಾಧಿತನಾದನು.

೧೫ ಆಗ ಆ ದೈತ್ಯನು ವಿಷ್ಣುಮಾಯೆಯಿಂದ ಮೋಹಿತನಾಗಿ ರಾಹುವನ್ನು ಈಶ್ವರನ ಬಳಿಗೆ ದೂತನನ್ನಾಗಿ ಕಳುಹಿಸಿಕೊಟ್ಟನು.

೧೬. ಬೆಳ್ಳಗಿರುವ ಆ ಕೈಲಾಸಪರ್ವತವನ್ನು ರಾಹುವು ತನ್ನ ದೇಹದ ಕಪ್ಪಿನಿಂದ ಕಪ್ಪುಳ್ಳದ್ದನ್ನಾಗಿ ಮಾಡುತ್ತಾ ಹೋದನು.

೧೭. ಆ ರಾಹುವು ಬಂದಿರುವುದನ್ನು ಈಶ್ವರನಿಗೆ ತಿಳಿಸಿ ನಂದಿಯು ಅವನನ್ನು ಒಳಗೆ ಕರೆದುಕೊಂಡು ಹೋದನು. ಆಗ ಶಿವನು ಹುಬ್ಬಿನ ಸಂಜ್ಞೆಯಿಂದಲೇ ಬಂದ ಕೆಲಸವನ್ನು ಹೇಳೆಂದು ಸಂಜ್ಞೆಮಾಡಲು ಆ ರಾಹುವು ಆಗ ಇಂತೆಂದನು.

|| ರಾಹುರುವಾಚ ||

ದೇವಪನ್ನಗಸೇವ್ಯಸ್ಯ ತ್ರೈಲೋಕ್ಯಾಧಿಪತೇಸ್ತಥಾ ।
ಸರ್ವರತ್ನೇಶ್ವರಸ್ಯ ತ್ವಮಾಜ್ಞಾಂ ಶೃಣು ವೃಷಧ್ವಜ || ೧೮ ||

ಶ್ಮಶಾನವಾಸಿನೋ ನಿತ್ಯಮಸ್ಥಿಭಾರವಹಸ್ಯ ಚ
ದಿಗಂಬರಸ್ಯ ತೇ ಭಾರ್ಯಾ ಕಥಂ ಹೈಮವತೀ ಶುಭಾ || ೧೯ ||

ಅಹಂ ರತ್ನಾಧಿನಾಥೋಽಸ್ಮಿ ಸಾಽಪಿ ಸ್ತ್ರೀರತ್ನಸಂಜ್ಞಿತಾ ।
ತಸ್ಮಾನ್ಮಮೈವ ಸಾ ಯೋಗ್ಯಾ ನೈವ ಭಿಕ್ಷಾಶಿನಸ್ತವ || ೨೦ ||

|| ನಾರದ ಉವಾಚ ||

ವದತ್ಯೇವಂ ತದಾ ರಾಹೌ ಭ್ರೂಮಧ್ಯಾಚ್ಛೂಲಪಾಣಿನಃ ।
ಅಭವತ್ಪುರುಷೋ ರೌದ್ರಸ್ತೀವ್ರಾಶನಿಸಮಸ್ವನಃ || ೨೧ ||

---

೧೮. ರಾಹುವು ಹೇಳಿದನು – ದೇವತೆಗಳೂ ಪನ್ನಗರೂ ಸೇವಿಸಲ್ಪಡುತ್ತಿರುವ ಮೂರುಲೋಕಕ್ಕೂ ಅಧಿಪತಿಯಾದ ಎಲ್ಲಾರತ್ನಗಳಿಗೂ ಒಡೆಯನಾದ ಆ ದೈತ್ಯೇಂದ್ರನಾದ ಜಲಂಧರನ ಅಪ್ಪಣೆಯನ್ನು ಎಲೈ ಶಿವನೇ ! ನೀನು ಕೇಳು.

೧೯. ನೀನು ಯಾವಾಗಲೂ ಶ್ಮಶಾನದಲ್ಲಿ ವಾಸಿಸುತ್ತೀಯೆ. ಮೂಳೆಗಳನ್ನು ಹಿಡಿದಿದ್ದೀಯೆ. ಬಟ್ಟೆಬರೆಗಳೇ ನಿನಗಿಲ್ಲ. ಇಂತಹ ನಿನಗೆ ಮಂಗಳಕರಳಾದ ಆ ಪಾರ್ವತಿಯು ಏಕೆ ?

೨೦. ನಾನು ರತ್ನಗಳಿಗೆಲ್ಲಾ ಅಧಿಪತಿಯು. ಆ ಪಾರ್ವತಿಯು ಸ್ತ್ರೀರತ್ನವೆನ್ನಿಸಿಕೊಂಡಿದ್ದಾಳೆ. ಆದುದರಿಂದ ಆ ಪಾರ್ವತಿಯು ನನಗೇ ಯೋಗ್ಯಳು. ಭಿಕ್ಷೆಮಾಡಿ ಊಟಮಾಡುವ ನಿನಗೆ ಯೋಗ್ಯಳಲ್ಲ.

೨೧. ನಾರದನು ಹೇಳಿದನು–ರಾಹುವು ಹೀಗೆ ಹೇಳುತ್ತಿರುವಾಗಲೇ ಆ ಶೂಲಪಾಣಿಯ ಹಣೆಗಣ್ಣಿನಿಂದ ಸಿಡಿಲಿಗೆ ಸಮನಾದ ರೌದ್ರಾಕಾರನಾದ ಒಬ್ಬ ಪುರುಷನು ಹುಟ್ಟಿದನು.

ಸಿಂಹಾಸ್ಯಃ ಪ್ರಚಲಜ್ಜಿಹ್ವಃ ಸಜ್ವಾಲನಯನೋ ಮಹಾನ್ ।
ಊರ್ಧ್ವಕೇಶಶ್ಶುಕ್ಲತನುರ್ನೃಸಿಂಹ ಇವ ಚಾಽಪರಃ ॥ ೨೨ ॥

ಸ ತಂ ಖಾದಿತುಮಾಯಾಂತಂ ದೃಷ್ಟ್ವಾ ರಾಹುರ್ಭಯಾತುರಃ ।
ಅಧಾವದತಿವೇಗೇನ ಬಹಿಸ್ಸ ಚ ದಧಾರ ತಂ ॥ ೨೩ ॥

ಸ ಚ ರಾಹುರ್ಮಹಾಬಾಹುರ್ಮೇಘಗಂಭೀರಯಾ ಗಿರಾ ।
ಉವಾಚ ದೇವದೇವೇಶಂ ಪಾಹಿ ಮಾಂ ಶರಣಾಗತಮ್ ॥ ೨೪ ॥

ಬ್ರಾಹ್ಮಣಂ ಮಾಂ ಮಹಾದೇವ ಖಾದಿತುಂ ಸಮುಪಾಗತಃ ।
ಏತಸ್ಮಾದ್ರಕ್ಷ ದೇವೇಶ ಶರಣಾಗತವತ್ಸಲ ॥ ೨೫ ॥

ರಕ್ಷ ರಕ್ಷ ಮಹಾದೇವ ತ್ವಾಮಹಂ ಶರಣಂ ಗತಃ ।
ಮಹಾದೇವೋ ವಚಶ್ಶ್ರುತ್ವಾ ಬ್ರಾಹ್ಮಣಸ್ಯ ತದಾಽಬ್ರವೀತ್ ॥ ೨೬ ॥

---

೨೨. ಅವನಿಗೆ ಸಿಂಹದಂತೆ ಮುಖವಿದ್ದಿತು. ನಾಲಗೆಯನ್ನು ಅಲ್ಲಾಡಿಸುತ್ತಲೇ ಇದ್ದನು. ಕಣ್ಣಿನಲ್ಲಿ ಕೆಂಪಗೆ ಜ್ವಾಲೆಯು ಹೊರಡುತ್ತಿದ್ದಿತು. ತಲೆಗೂದಲೂ ಮೇಲುಮುಖವಾಗಿ ನಿಂತುಕೊಂಡಿದ್ದಿತು. ಬೆಳ್ಳಗಿದ್ದನು. ಒಟ್ಟಿನಲ್ಲಿ ಮತ್ತೊಬ್ಬ ನರಸಿಂಹನಂತೆಯೇ ಇದ್ದನು.

೨೩. ಹೀಗೆ ಹುಟ್ಟಿದವನು ಆ ರಾಹುವನ್ನು ತಿನ್ನುವುದಕ್ಕೆ ಬರುತ್ತಿರಲು ರಾಹುವು ಭಯದಿಂದ ಜಾಗ್ರತೆಯಾಗಿ ಓಡಿದನು. ಆದರೂ ಆ ಪುರುಷನು ಹೊರಗಡೆಯಲ್ಲಿ ಅವನನ್ನು ಹಿಡಿದುಕೊಂಡನು.

೨೪. ಆಗ ಆ ರಾಹುವು ಘಟ್ಟಿಯಾಗಿ ಸ್ವಾಮಿಯಾದ ಶಂಕರನನ್ನು ಕುರಿತು ನಾನು ಶರಣಾಗತನಾಗಿದ್ದೇನೆ. ನನ್ನನ್ನು ಕಾಪಾಡು. ಎಂದನು.

೨೫. ಎಲೈ ಮಹಾದೇವನೆ! ಬ್ರಾಹ್ಮಣನಾದ ನನ್ನನ್ನು ತಿನ್ನುವುದಕ್ಕೆ ಬರುತ್ತಿದ್ದಾನೆ. ಶರಣಾಗತವತ್ಸಲನೇ! ಇವನಿಂದ ನನ್ನನ್ನು ಕಾಪಾಡು

೨೬. ಎಲೈ ಮಹಾದೇವನೆ! ಶರಣಾಗತನಾದ ನನ್ನನ್ನು ರಕ್ಷಿಸು ರಕ್ಷಿಸು. ಎನ್ನಲು ಮಹಾದೇವನು ಬ್ರಾಹ್ಮಣನಾದ ಆ ರಾಹುವಿನ ಮಾತನ್ನು ಕೇಳಿ ಇಂತೆಂದನು.

ಧೃತ್ವಾ ಖಾದಿತುಮಾರಬ್ಧಸ್ತಾವದ್ರುದ್ರೇಣವಾರಿತಃ ।
ನೈವಾಽಸೌ ವಧ್ಯತಾಮೀತಿ ದೂತೋಽಯಂ ಪರವಾನ್ಯತಃ || ೨೭ ||

ಮುಂಚೇತಿ ಪುರುಷಶ್ಶ್ರುತ್ವಾ ರಾಹುಂ ತತ್ಯಾಜ ಸೋಽಂಬರೇ ।
ರಾಹುಂ ತ್ಯಕ್ತ್ವಾ ಸ ಪುರುಷೋ ಮಹಾದೇವಂ ವ್ಯಜಿಜ್ಞಪತ್ || ೨೮ ||

॥ ಪುರುಷ ಉವಾಚ ॥

ಕ್ಷುಧಾ ಮಾಂ ಬಾಧತೇ ಸ್ವಾಮಿನ್ ಕ್ಷುತ್ಕ್ಷಾಮಶ್ಚಾಽಸ್ಮಿ ಸರ್ವಥಾ ।
ಕಿಂ ಭಕ್ಷ್ಯಂ ಮೇ ಮಹಾದೇವ ತದಾಜ್ಞಾಪಯ ಮಾಂ ಪ್ರಭೋ || ೨೯ ||

|| ಈಶ್ವರ ಉವಾಚ ||

ಭಕ್ಷಯಸ್ವಾತ್ಮನಶ್ಶೀಘ್ರಂ ಮಾಂಸಂ ತ್ವಂ ಹಸ್ತಪಾದಯೋಃ || ೩೦ ||

॥ ನಾರದ ಉವಾಚ ||

ಸ ಶಿವೇನೈವಮಾಜ್ಞಪ್ತಶ್ಚಖಾದ ಪುರುಷಸ್ಸ್ವಯಂ ।
ಹಸ್ತಪಾದೋದ್ಭವಂ ಮಾಂಸಂ ಶಿರಶ್ಶೇಷೋ ಯದಾಽಭವತ್ || ೩೧ ||

---

೨೭. ಆ ಮನುಷ್ಯನು ಹಿಡಿದು ಕೊಂಡು ತಿನ್ನುವಷ್ಟರಲ್ಲಿಯೇ ರುದ್ರನು ಅವನನ್ನು ತಡೆದು ಇವನು ದೂತನು. ಮತ್ತೊಬ್ಬರಿಗೆ ಅಧೀನನು. ಕೊಲ್ಲಲು ಯೋಗ್ಯನಲ್ಲ. ಬಿಟ್ಟುಬಿಡು. ಎಂದನು.

೨೮. ಶಿವನು ಬಿಡು ಎಂದು ಹೇಳಿದುದನ್ನು ಆ ಪುರುಷನು ಕೇಳಿ ಆಕಾಶ ದಲ್ಲಿಯೇ ಆ ರಾಹುವನ್ನು ಬಿಟ್ಟು ಆ ಮಹಾದೇವನನ್ನು ಕುರಿತು ಈರೀತಿ ವಿಜ್ಞಾಪಿಸಿಕೊಂಡನು.

೨೯. ಪುರುಷನು ಹೇಳಿದನು—ಎಲೈ ಸ್ವಾಮಿಯೇ ! ನನ್ನನ್ನು ಹಸಿವು ಬಹುವಾಗಿ ಬಾಧಿಸುತ್ತಿದೆ. ಹಸಿವಿನಿಂದ ಬಳಲಿದ್ದೇನೆ. ಎಲೈ ದೇವನೇ ! ನನಗೆ ತಿಂಡಿ ಯಾವುದೆಂಬುದನ್ನು ಅಪ್ಪಣೆ ಕೊಡಿಸು.

೩೦. ಈಶ್ವರನು ಹೇಳಿದನು—ಎಲೈ ಪುರುಷನೇ ! ನಿನ್ನ ಕೈಕಾಲುಗಳ ಮಾಂಸಗಳನ್ನೇ ನೀನು ಜಾಗ್ರತೆಯಾಗಿ ತಿನ್ನು.

೩೧. ನಾರದನು ಹೇಳಿದನು—ಶಿವನು ಹೀಗೆ ಆಜ್ಞಾಪಿಸಲು ಆ ಪುರುಷನು ಕೈಕಾಲುಗಳಮಾಂಸವನ್ನು ತಿಂದನು. ತಲೆಯು ಮಾತ್ರ ಉಳಿದುಕೊಂಡಿತು.

ದೃಷ್ಟ್ವಾ ಶಿರೋಽವಶೇಷಂ ತಂ ಸುಪ್ರಸನ್ನಸ್ತದಾ ಶಿವಃ ।
ಪುರುಷಂ ಭೀಮಕರ್ಮಾಣಂ ತಮುವಾಚ ಸ ವಿಸ್ಮಯಃ ॥ ೩೨ ॥

॥ ಈಶ್ವರ ಉವಾಚ ॥

ತ್ವಂ ಕೀರ್ತಿಮುಖಸಂಜ್ಞೋ ಹಿ ಭವ ಮದ್ದ್ವಾರಗಸ್ಸದಾ ।
ತ್ವದರ್ಚಾಂ ಯೇ ನ ಕುರ್ವಂತಿ ನೈವ ತೇ ಮತ್ಪ್ರಿಯಂಕರಾಃ ॥ ೩೩ ॥

॥ ನಾರದ ಉವಾಚ ॥

ತದಾಪ್ರಭೃತಿ ದೇವೇಶದ್ವಾರೇ ಕೀರ್ತಿಮುಖಸ್ಥಿತಃ ।
ನಾರ್ಚಯಂತೀಹ ಯೇ ಪೂರ್ವಂ ತೇಷಾಮರ್ಚಾ ವೃಥಾ ಭವೇತ್ ॥ ೩೪ ॥

ರಾಹುರ್ವಿಮುಕ್ತೋ ಯಸ್ತೇನ ಸೋಽಪತದ್ಬರ್ಬರಸ್ಥಳೇ ।
ಅತಸ್ಸಬರ್ಬರೋದ್ಭೂತ ಇತಿ ಭೂಮೌ ಪ್ರಥಾಂ ಗತಃ ॥ ೩೫ ॥

---

೩೨. ಅವನ ತಲೆಯು ಮಾತ್ರ ಉಳಿದುಕೊಳ್ಳಲು ಆಗ ಶಿವನು ಪ್ರಸನ್ನನಾದನು. ಆಗ ಭಯಂಕರವಾದ ಕೆಲಸವನ್ನು ಮಾಡಿದ ಆ ಪುರುಷನನ್ನು ಕುರಿತು ಇಂತೆಂದನು.

೩೩. ಈಶ್ವರನು ಹೇಳಿದನು–ನಿನ್ನ ಹೆಸರು ಕೀರ್ತಿಮುಖನೆಂದಾಗಲಿ. ನೀನು ಯಾವಾಗಲೂ ನನ್ನ ಬಾಗಿಲಿನಲ್ಲಿರು. ನಿನ್ನನ್ನು ಯಾರು ಪೂಜಿಸುವುದಿಲ್ಲವೋ ಅವರು ನನಗೆ ಪ್ರಿಯರಲ್ಲ.

೩೪. ನಾರದನು ಹೇಳಿದನು–ಅದು ಮೊದಲುಗೊಂಡು ಕೀರ್ತಿಮುಖನು ಆ ಸ್ವಾಮಿಯ ಬಾಗಿಲಿನಲ್ಲಿರುವನು. ಅವನನ್ನು ಪೂಜಿಸದವರ ಪೂಜೆಯು ವ್ಯರ್ಥವಾಗುತ್ತದೆ.

೩೫. ರಾಹುವನ್ನು ಆ ಆಕಾಶದಲ್ಲಿಯೇ ಬಿಟ್ಟುಬಿಡಲು ಅವನು ಬರ್ಬರ ದೇಶದಲ್ಲಿ ಬಿದ್ದನು. ಆಗಿನಿಂದ ಅವನು ಬರ್ಬರದಲ್ಲಿ ಹುಟ್ಟಿದವನೆಂದು ಹೆಸರನ್ನು ಹೊಂದಿದನು.

ತತಃ ಸ ರಾಹುಃ ಪುನರೇವ ಜಾತ
ಮಾತ್ಮಾನಮಸ್ಮಿನ್ನಿತಿ ಮನ್ಯಮಾನಃ ।
ಸಮೇತ್ಸ ಸರ್ವಂ ಕಥಯಾಂಬಭೂವ
ಜಲಂಧರಾಯೇಶವಿಚೇಷ್ಟಿತಂ ತತ್ ॥ ೩೬ ॥

ಇತಿ ಶ್ರೀ ಮಹಾಪುರಾಣೇ ಪಾದ್ಮೇ ಉತ್ತರಖಂಡೇ ಶ್ರೀ ಕೃಷ್ಣ ಸತ್ಯಭಾಮಾ ಸಂವಾದೇ ಕಾರ್ತಿಕ ಮಾಹಾತ್ಮ್ಯೇ ಜಲಂಧರೋಪಾಖ್ಯಾನೇ ಶಿವದೂತ ಸಂವಾದೋ ನಾಮ ಏಕಾಧಿಕಶತತಮೋಽಧ್ಯಾಯಸ್ಸಮಾಪ್ತಃ

---

೩೬. ಅದು ಮೊದಲುಗೊಂಡು ಅವನು ಆ ಬರ್ಬರದೇಶದಲ್ಲಿಯೇ ಹುಟ್ಟಿದಂತೆ ತಿಳಿದುಕೊಂಡು ಅನಂತರ ಆ ಜಲಂಧರನ ಬಳಿಗೆ ಬಂದು ಶಿವನು ಮಾಡಿದುದೆಲ್ಲವನ್ನೂ ಹೇಳಿದನು

ಇಂತು ಶ್ರೀ ಪದ್ಮಮಹಾಪುರಾಣದ ಉತ್ತರಖಂಡದ ಶ್ರೀ ಕೃಷ್ಣ ಸತ್ಯಭಾಮೆಯರ ಸಂವಾದದ ಕಾರ್ತಿಕ ಮಹಿಮೆಯ ಜಲಂಧರೋಪಾಖ್ಯಾನ ದಲ್ಲಿ ಶಿವದೂತ ಸಂವಾದ ಎಂಬ ನೂರೊಂದನೆಯ ಅಧ್ಯಾಯವು ಮುಗಿದುದು.



॥ ಶ್ರೀಃ ॥

–X–

# ಅಥ ಶ್ರೀ ಮಹಾಪುರಾಣೇ ಪಾದ್ಮೇ ಉತ್ತರಖಂಡೇ

## ॥ ದ್ವ್ಯಧಿಕಶತತಮೋಽಧ್ಯಾಯಃ ॥



॥ ನಾರದ ಉವಾಚ ॥

ಜಲಂಧರಸ್ತು ತಚ್ಛ್ರುತ್ವಾ ಕೋಪಾಕುಲಿತಮಾನಸಃ ।
ನಿರ್ಜಗಾಮಾಶು ದೈತ್ಯಾನಾಂ ಕೋಟಿಭಿಃ ಪರಿವಾರಿತಃ ॥ ೧ ॥

ಗತಸ್ತಸ್ಯಾಽಗ್ರತಶ್ಶುಕ್ರೋ ರಾಹುದೃಷ್ಟಿಸ್ಥಿತೋಽಭವತ್ ।
ಮುಕುಟಶ್ಚಾಪತದ್ಭೂಮೌ ವೇಗಾತ್ಪ್ರಸ್ಖಲಿತಸ್ತದಾ ॥ ೨ ॥

ದೈತ್ಯಸೈನ್ಯಾವೃತೈಸ್ತತ್ರ ವಿಮಾನಾನಾಂ ಶತೈಸ್ತದಾ ।
ಅರಾಜತ ನಭಃ ಪೂರ್ಣಂ ಪ್ರಾವೃಷೀವ ಬಲಾಹಕೈಃ ॥ ೩ ॥

---

## ನೂರ ಎರಡನೆಯ ಅಧ್ಯಾಯವು



೧. ನಾರದನು ಹೇಳಿದನು–ಜಲಂಧರನು ಆ ಮಾತನ್ನು ಕೇಳಿ ಕೋಪಗೊಂಡು ಕೊಟಿಗಟ್ಟಲೆಯಾಗಿ ರಾಕ್ಷಸರನ್ನು ಕರೆದುಕೊಂಡು ಹೊರಟನು.

೨. ಶುಕ್ರನು ಅವನ ಮುಂದೆ ಹೊರಟನು. ಹೊರಟ ಒಡನೆಯೇ ಅವನ ದೃಷ್ಟಿಗೆ ರಾಹುವು ಬಿದ್ದನು. ವೇಗದಿಂದ ಹೋಗುತ್ತಿರಲು ಎಡವಿದುದರಿಂದ ಕಿರೀಟವು ಕೆಳಗೆ ಬಿದ್ದಿತು.

೩. ದೈತ್ಯರು ಕುಳಿತಿದ್ದ ವಿಮಾನಗಳು ಅನೇಕವಾಗಿ ಅಂತರಿಕ್ಷದಲ್ಲಿ ಹೋಗುತ್ತಿರಲು ಆಕಾಶವು ಮಾಘಪಕ್ಷಿಗಳಿಂದ ತುಂಬಿದಂತೆ ಪ್ರಕಾಶಿಸುತ್ತಿದ್ದಿತು.

ತಸ್ಯೋದ್ಯೋಗಂ ತತೋ ದೃಷ್ಟ್ವಾ ದೇವಾಶ್ಶಕ್ರಪುರೋಗಮಾಃ ।
ಅಲಕ್ಷಿತಾಸ್ತ್ವರಾಜಗ್ಮುಃ ಶೂಲಿನಂ ತೇ ವ್ಯಜಿಜ್ಞಪನ್ ॥ ೪ ॥

॥ ದೇವಾ ಊಚುಃ ॥

ನ ಜಾನಾಸಿ ಕಥಂ ಸ್ವಾಮಿನ್ ದೇವಾಪತ್ತಿಮಿಮಾಂ ಪ್ರಭೋ ।
ತದಸ್ಮದ್ರಕ್ಷಣಾರ್ಥಾಯ ಜಹಿ ಸಾಗರನಂದನಂ ॥ ೫ ॥

॥ ನಾರದ ಉವಾಚ ॥

ಇತಿ ದೇವವಚಶ್ಶ್ರುತ್ವಾ ಪ್ರಹಸ್ಯ ವೃಷಭಧ್ವಜಃ ।
ಮಹಾವಿಷ್ಣುಂ ಸಮಾಹೂಯ ವಚನಂ ಚೇದಮಬ್ರವೀತ್ ॥ ೬ ॥

॥ ಈಶ್ವರ ಉವಾಚ ॥

ಜಲಂಧರಃ ಕಥಂ ವಿಷ್ಣೋ ನ ಹತಸ್ಸಂಗರೇ ತ್ವಯಾ ।
ತದ್ಗೃಹಂ ಚಾಪಿ ಯಾತೋಽಸಿ ತ್ಯಕ್ತ್ವಾ ವೈಕುಂಠಮಾತ್ಮನಃ ॥ ೭ ॥

---

೪. ಆ ದೈತ್ಯನು ಮಾಡುತ್ತಿದ್ದ ಸಿದ್ಧತೆಯನ್ನು ನೋಡಿದ ಇಂದ್ರನೇ ಮುಂತಾದವರು ಅವನಿಗೆ ತಿಳಿಯದಂತೆ ಹೋಗಿ ಶಿವನಿಗೆ ವಿಜ್ಞಾಪಿಸಿಕೊಂಡರು.

೫. ದೇವತೆಗಳು ಹೇಳಿದರು—ಎಲೈ ಸ್ವಾಮಿಯೆ! ಈ ದೇವತೆಗಳಿಗೆ ಬಂದಿರುವ ಆಪತ್ತು ನಿನಗೆ ಏಕೆ ಗೊತ್ತಾಗುವುದಿಲ್ಲ? ನಮ್ಮನ್ನು ಕಾಪಾಡಲು ನೀನು ಆ ಸಾಗರ ನಂದನನಾದ ಜಲಂಧರನನ್ನು ಸಂಹರಿಸು.

೬. ನಾರದನು ಹೇಳಿದನು—ಈ ರೀತಿಯಾದ ದೇವತೆಗಳ ಮಾತನ್ನು ಕೇಳಿ ಶಿವನು ನಕ್ಕು ವಿಷ್ಣುವನ್ನು ಕರೆದು ಅವನಿಗೆ ಇಂತೆಂದನು.

೭. ಈಶ್ವರನು ಹೇಳಿದನು—ಎಲೈ ವಿಷ್ಣುವೇ! ನೀನೇಕೆ ಯುದ್ಧದಲ್ಲಿ ಜಲಂಧರನನ್ನು ಕೊಲ್ಲಲಿಲ್ಲ? ಅದೂ ಅಲ್ಲದೇ ನಿನ್ನ ವೈಕುಂಠವನ್ನು ಬಿಟ್ಟು ಆ ದೈತ್ಯನ ಮನೆಗೆ ಹೊರಟುಹೋಗಿದ್ದೀಯೆ.

॥ ಶ್ರೀ ಭಗವಾನುವಾಚ ॥

ತವಾಂಶಸಂಭವತ್ವಾಚ್ಚ ಭ್ರಾತೃತ್ವಾಚ್ಚ ತಥಾ ಶ್ರಿಯಃ ।
ನ ಮಯಾ ನಿಹತಸ್ಸಂಖ್ಯೇ ತ್ವಮೇನಂ ಜಹಿ ದಾನವಂ ॥ ೮ ॥

॥ ಈಶ್ವರ ಉವಾಚ ॥

ನಾಯಮೇಭಿರ್ಮಹಾತೇಜಾಃ ಶಸ್ತ್ರಾಸ್ತ್ರೈರ್ವಧ್ಯತೇ ಮಯಾ ।
ದೇವೈಸ್ಸಹ ಸ್ವತೇಜೋಂಶಂ ಶಸ್ತ್ರಾರ್ಥಂ ದೀಯತಾಂ ಮಮ ॥ ೯ ॥

॥ ನಾರದ ಉವಾಚ ॥

ಅಥ ವಿಷ್ಣುಮುಖಾ ದೇವಾಃ ಸ್ವತೇಜಾಂಸಿ ದದುಸ್ತದಾ ।
ತಾನ್ಯೇಕತ್ವಂ ಗತಾನೀಶೋ ದೃಷ್ಟ್ವಾ ಸ್ವಂ ಚ ಮಹಸ್ತದಾ ॥ ೧೦ ॥

ತೇನಾಕರೋನ್ಮಹಾದೇವೋ ಮಹಸಾ ಶಸ್ತ್ರಮುತ್ತಮಂ ।
ಚಕ್ರಂ ಸುದರ್ಶನಂ ನಾಮ ಜ್ವಾಲಾಮಾಲಾಽತಿಭೀಷಣಂ ॥ ೧೧ ॥

---

೮. ಶ್ರೀ ಭಗವಂತನು ಹೇಳಿದನು–ಅವನು ನಿನ್ನ ಅಂಶದಿಂದ ಹುಟ್ಟಿದವನು. ನನ್ನ ಹೆಂಡತಿಗೆ ಸಹೋದರನು. ಆದುದರಿಂದ ಅವನನ್ನು ನಾನು ಕೊಲ್ಲಲಿಲ್ಲ. ಯುದ್ಧದಲ್ಲಿ ಆ ದಾನವನನ್ನು ನೀನು ಸಂಹರಿಸು.

೯. ಈಶ್ವರನು ಹೇಳಿದನು–ಎಲೈ ವಿಷ್ಣುವೇ! ನನ್ನ ಶಸ್ತ್ರಾಸ್ತ್ರಗಳಿಂದ ಇವನು ಸಾಯುವುದಿಲ್ಲ. ಆದ್ದರಿಂದ ದೇವತೆಗಳೊಡನೆ ನಿನ್ನ ತೇಜಸ್ಸಿನ ಅಂಶವನ್ನೂ ಶಸ್ತ್ರಕ್ಕೋಸ್ಕರ ನನಗೆ ಕೊಡು.

೧೦. ನಾರದನು ಹೇಳಿದನು–ಆಗ ವಿಷ್ಣುವೇ ಮುಂತಾದವರು ತಮ್ಮ ತಮ್ಮ ತೇಜಸ್ಸನ್ನು ಕೊಟ್ಟರು. ಅವೆಲ್ಲವೂ ಸೇರಿ ಒಂದಾದುದನ್ನು ನೋಡಿ ತನ್ನ ತೇಜಸ್ಸನ್ನೂ ಸೇರಿಸಿದನು.

೧೧. ಮಹಾದೇವನು ಆ ತೇಜಸ್ಸುಗಳೆಲ್ಲವನ್ನೂ ಸೇರಿಸಿ ಸುದರ್ಶನವೆಂಬ ಚಕ್ರವನ್ನು ಮಾಡಿದನು. ಅದು ಜ್ವಾಲೆಯನ್ನು ಸುರಿಸುತ್ತ ಬಹು ಭಯಂಕರವಾಗಿದ್ದಿತು.

ತೇಜಶ್ಶೇಷೇಣ ಚ ತದಾ ವಜ್ರಂ ಚ ಕೃತವಾನ್ ಹರಃ ।
ತಾವಜ್ಜಲಂಧರೋ ದೃಷ್ಟಃ ಕೈಲಾಸತಲಭೂಮಿಷು ॥ ೧೨ ॥

ಹಸ್ತ್ಯಶ್ವರಥಪತ್ತೀನಾಂ ಕೋಟಿಭಿಃ ಪರಿವಾರಿತಃ ।
ತಂ ದೃಷ್ಟ್ವಾsಲಕ್ಷಿತಾ ಜಗ್ಮುಃ ದೇವಾಸ್ಸರ್ವೇ ಯಥಾಗತಂ ॥ ೧೩ ॥

ಗಣಾಶ್ಚ ಸಮುನಹ್ಯಂತ ಯುದ್ಧಾಯಾತಿತ್ವರಾನ್ವಿತಾಃ ।
ನಂದೀಭವಕ್ತ್ರಸೇನಾನೀಮುಖಾಃ ಸರ್ವೇ ಶಿವಾಜ್ಞಯಾ ॥ ೧೪ ॥

ಅವತೇರುರ್ಗಣಾಸ್ಸರ್ವೇ ಕೈಲಾಸಾದ್ಯುದ್ಧದುರ್ಮದಾಃ ।
ತತಸ್ಸಮಭವದ್ಯುದ್ಧಂ ಕೈಲಾಸೋಪತ್ಯಕಾಭುವಿ ॥ ೧೫ ॥

ಪ್ರಮಥಾಧಿಪದೈತ್ಯಾನಾಂ ಘೋರಂ ಶಸ್ತ್ರಾಸ್ತ್ರಸಂಕುಲಂ ।
ಭೇರೀಮೃದಂಗಶಂಖೌಘನಿಸ್ವನೈರ್ವೀರಹರ್ಷಣೈಃ ॥ ೧೬ ॥

---

೧೨. ಉಳಿದ ತೇಜಸ್ಸಿನಿಂದ ಆ ಹರನು ವಜ್ರಾಯುಧವನ್ನು ಮಾಡಿದನು. ಇಷ್ಟಾಗುವ ವೇಳೆಗೆ ಜಲಂಧರನು ಕೈಲಾಸ ಪರ್ವತದ ಬಳಿಗೆ ಬಂದನು.

೧೩. ಅವನು ಆನೆ, ಕುದುರೆ, ಕಾಲಾಳುಗಳನ್ನೂ ಅನೇಕವಾಗಿ ಸೇರಿಸಿಕೊಂಡು ಬಂದನು. ಅವನು ಬಂದುದನ್ನು ನೋಡಿ ದೇವತೆಗಳು ಅವನಿಗೆ ಕಾಣದಂತೆ ಹೊರಟುಹೋದರು.

೧೪ ಗಣಗಳೂ ಕೂಡ ಯುದ್ಧಕ್ಕೋಸ್ಕರ ಜಾಗ್ರತೆಯಾಗಿ ಸಿದ್ಧರಾದರು. ನಂದಿ, ಗಣಪತಿ ಸೇನಾನಿಗಳೆಲ್ಲರೂ ಶಿವನ ಅಪ್ಪಣೆಯಂತೆ ಯುದ್ಧಕ್ಕೋಸ್ಕರ ಕೈಲಾಸದಿಂದ ಕೆಳಗಿಳಿದರು.

೧೫. ಆಗ ಪ್ರಮಥರಿಗೂ ದೈತ್ಯರಿಗೂ ಶಸ್ತ್ರಾಸ್ತ್ರದ ಘೋರಯುದ್ಧವು ಆ ಕೈಲಾಸದ ತಪ್ಪಲಿನಲ್ಲಿ ಘೋರವಾಗಿ ನಡೆಯಿತು.

೧೬. ಭೇರಿ, ಮೃದಂಗ, ಶಂಖಗಳ ಧ್ವನಿಯಿಂದಲೂ ವೀರರ ಗರ್ಜನೆಯಿಂದಲೂ ಆನೆ, ಕುದುರೆ, ರಥಗಳ ಶಬ್ದಗಳಿಂದಲೂ ಭೂಮಿಯು ನಡುಗಿತು.

ಗಜಾಶ್ವರಥಶಬ್ದೈಶ್ಚ ನಾದಿತಾ ಭೂರ್ವ್ಯಕಂಪತ ।
ಶಕ್ತಿತೋಮರಬಾಣಾಘ್ಯೈಃ ಮುಸಲಪ್ರಾಸಪಟ್ಟಿಶೈಃ ॥ ೧೭ ॥

ವ್ಯರಾಜತ ನಭಃ ಪೂರ್ಣಮುಲ್ಕಾಭಿಃ ಸಂವೃತಂ ಯಥಾ ।
ನಿಹತೈರಥನಾಗಾಶ್ವೈಃ ಪತ್ತಿಭಿರ್ಭೂರ್ವ್ಯರಾಜತಃ ॥ ೧೮ ॥

ವಜ್ರಾಹತಾಚಲಶಿರಶ್ಶಕಲೈರಿವ ಸಂವೃತಾ ।
ಪ್ರಮಥಾಹತದೈತ್ಯಾಘ್ಯೈಃ ದೈತ್ಯಾಹತಗಣೈಸ್ತಥಾ ॥ ೧೯ ॥

ವಸಾಸೃಙ್ಮಾಂಸಪಂಕಾದ್ಯೈಃ ಭೂರಗಮ್ಯೋಽಭವತ್ ತದಾ ।
ಪ್ರಮಥಾಹತದೈತ್ಯಾಘಾನ್ ಭಾರ್ಗವಸ್ಸಮಜೀವಯತ್ ॥ ೨೦ ॥

ಯುದ್ಧೇ ಪುನಃ ಪುನಶ್ಚೈವ ಮೃತಸಂಜೀವಿನೀಬಲಾತ್ ।
ತಂ ದೃಷ್ಟ್ವಾ ವ್ಯಾಕುಲೀಭೂತಾ ಗಣಾಸ್ಸರ್ವೇ ಭಯಾರ್ದಿತಾಃ ॥ ೨೧ ॥

---

೧೭. ಶಕ್ತಿ, ತೋಮರ, ಬಾಣಗಳಿಂದಲೂ, ಮುಸಲ, ಪ್ರಾಸ, ಪಟ್ಟಿಶಗಳಿಂದಲೂ ಉಲ್ಕಾಪಾತಗಳಿಂದಲೂ ಆಕಾಶವು ತುಂಬಿ ಪ್ರಕಾಶಿಸಿತು.

೧೮. ವಜ್ರಾಯುಧದಿಂದ ಏಟನ್ನು ತಿಂದು ಕೆಳಗೆ ಬಿದ್ದ ಬೆಟ್ಟಗಳ ಶಿಖರಗಳ ತಂಡದಂತೆ ಸತ್ತು ಬಿದ್ದಿರುವ ಆನೆ, ಕುದುರೆ, ಕಾಲಾಳುಗಳಿಂದ ಆ ಭೂಮಿಯು ಪ್ರಕಾಶಿಸಿತು.

೧೯. ಪ್ರಮಥರು ಕೊಂದ ದೈತ್ಯರಿಂದಲೂ ದೈತ್ಯರು ಕೊಂದ ಪ್ರಮಥರಿಂದಲೂ ಆ ಯುದ್ಧರಂಗವು ವಜ್ರಾಯುಧದಿಂದ ಶೀಳಿದ ಪರ್ವತ ಶಿಖರದಂತೆ ಪ್ರಕಾಶಿಸಿತು.

೨೦. ರಕ್ತ ಕೊಬ್ಬು ಮಾಂಸಗಳ ಕೊಚ್ಚೆಗಳಿಂದ ಭೂಮಿಯು ತಿರುಗಾಡಲು ಅಸಾಧ್ಯವಾಯಿತು. ಪ್ರಮಥರಿಂದ ಕೊಲ್ಲಲ್ಪಟ್ಟ ದೈತ್ಯರನ್ನು ಆ ಶುಕ್ರನು ಬದುಕಿಸಿದನು.

೨೧. ಆ ಶುಕ್ರನು ಮಂತ್ರಿಸುತ್ತಿದ್ದ ಮೃತಸಂಜೀವಿನೀ ಬಲದಿಂದ ಯುದ್ಧದಲ್ಲಿ ಸತ್ತವರು ಮತ್ತೆ ಮತ್ತೆ ಯುದ್ಧಕ್ಕೆ ಬರುತ್ತಿದ್ದರು. ಇದನ್ನು ನೋಡಿ ಭೂತಗಣಗಳೂ ಕೂಡ ಭಯದಿಂದ ಕೂಡಿಕೊಂಡುವು.

**ಶಶಂಸುರ್ದೇವದೇವಾಯ ತತ್ಸರ್ವಂ ಶುಕ್ರಚೇಷ್ಟಿತಂ ।**
**ಅಥ ರುದ್ರಮುಖಾತ್ಕೃತ್ಯಾ ಬಭೂವಾತೀವ ಭೀಷಣಾ ॥ ೨೨ ॥**

**ತಾಳಜಂಘಾ ದರೀವಕ್ತ್ರಾ ಸ್ತನಪೀಡಿತಭೂರುಹಾ ।**
**ಸಾ ಯುದ್ಧಭೂಮಿಮಾಸಾದ್ಯ ಭಕ್ಷಯಂತೀ ಮಹಾಸುರಾನ್ ॥ ೨೩ ॥**

**ಭಾರ್ಗವಂ ಸ್ವಭಗೇ ಕೃತ್ವಾ ಜಗಾಮಾಂತರ್ಹಿತಾ ನಭಃ ।**
**ನಿಧೃತಂ ಭಾರ್ಗವಂ ದೃಷ್ಟ್ವಾ ದೈತ್ಯಸೇನಾ ಗಣಾಸ್ತದಾ ॥ ೨೪ ॥**

**ಅಮ್ಲಾನವದನಾ ಹರ್ಷಾನ್ನಿಜಘ್ನುರ್ಯುದ್ಧದುರ್ಮದಾಃ ।**
**ಅಥಾಭಜ್ಯತ ದೈತ್ಯಾನಾಂ ಸೇನಾ ಗಣಭಯಾರ್ದಿತಾ ॥ ೨೫ ॥**

**ವಾಯುವೇಗಹತಾ ಯದ್ವತ್ಪ್ರಕೀರ್ಣಾ ತೃಣಸಂಹತಿಃ ।**
**ಭಗ್ನಾಂ ಗಣಭಯಾತ್ಸೇನಾಂ ದೃಷ್ಟ್ವಾಽಮರ್ಷಯುತಾ ಯಯುಃ॥ ೨೬ ॥**

---

೨೨. ಆ ಪ್ರಮಥರು ಶುಕ್ರನು ಮಾಡುತ್ತಿದ್ದುದನ್ನು ಶಿವನಿಗೆ ಹೇಳಲು ಇದರಿಂದ ಕೋಪಗೊಂಡ ರುದ್ರನ ಮುಖದಿಂದ ಒಂದು ಕೃತ್ಯೆಯು ( ಮಾಟದ ಮಸಣಿಯು ) ಹೊರಟಿತು. ಅದು ಬಹು ಭಯಂಕರವಾಗಿದ್ದಿತು.

೨೩. ತಾಳೆಯ ಮರದಂತೆ ಉದ್ದವಾದ ಕಾಲುಗಳಿದ್ದವು ಗುಹೆಯಂತೆ ಬಾಯಿಯು ಆಳವಾಗಿದ್ದಿತು. ಸ್ತನಗಳು ಮರಗಳಿಗೆ ತಗಲುತ್ತಿದ್ದವು. ಆಕೆಯು ಯುದ್ಧದ ಭೂಮಿಗೆ ಹೋಗಿ ಆ ಅಸುರರನ್ನು ತಿನ್ನುತ್ತಾ ಬಂದಳು.

೨೪–೨೫. ಆ ಹೆಂಗಸು ಶುಕ್ರನನ್ನು ತನ್ನ ಉಪಸ್ಥೆಯೊಳಗೆ ಇಟ್ಟು ಕೊಂಡು ಅಂತರಿಕ್ಷದಲ್ಲಿ ಮಾಯವಾಗಿ ಹೊರಟುಹೋದಳು. ಶುಕ್ರನನ್ನು ಹೀಗೆ ಹಿಡಿದುಕೊಂಡು ಹೋದುದನ್ನು ನೋಡಿ ಗಣಗಳು ದೈತ್ಯರ ಸೇನೆಯ ಮೇಲೆ ಉಲ್ಲಾಸದಿಂದ ಬಿದ್ದು ಹೊಡೆದರು. ಆಗ ಆ ಸೇನೆಯು ಗಣಗಳ ಭಯದಿಂದ ದಿಕ್ಕಾಪಾಲಾಗಿ ಓಡಿಹೋದರು.

೨೬. ಗಾಳಿಯ ಹೊಡೆತದಿಂದ ಚೆಲ್ಲಾಪಿಲ್ಲಿಯಾದ ಹುಲ್ಲುಗಳ ಗುಂಪಿನಂತೆ ಆ ದೈತ್ಯಸೇನೆಯು ಗಣಗಳ ಹೊಡೆತದಿಂದ ಭಯಗೊಂಡು ಓಡಿತು.

ನಿಶುಂಭಶುಂಭಸೇನಾನ್ಯಾ ಕಾಲನೇಮಿಶ್ಚ ವೀರ್ಯವಾನ್ ।
ತ್ರಯಸ್ತೇ ವಾರಯಾಮಾಸುರ್ಗಣಸೇನಾಂ ಮಹಾಬಲಾಃ ॥ ೨೭ ॥

ಮುಂಚಂತಶ್ಶರವರ್ಷಾಣಿ ಪ್ರಾವೃಷೀವ ಬಲಾಹಕಾಃ ।
ತತೋ ದೈತ್ಯಶರೌಘಾಸ್ತೇ ಶಲಭಾನಾಮಿವ ವ್ರಜಾಃ ॥ ೨೮ ॥

ರುರುಧುಃ ಖಂ ದಿಶಸ್ಸರ್ವಾ ಗಣಸೇನಾಮಕಂಪಯನ್ ।
ಗಣಾಶ್ಶರಶತೈರ್ಭಿನ್ನಾ ರುಧಿರಾಸಾರವರ್ಷಿಣಃ ॥ ೨೯ ॥

ವಸಂತಕಿಂಶುಕಾಭಾಸಾ ನ ಪ್ರಾಜ್ಞಾಯಂತ ಕಿಂಚನ ।
ಪತಿತಾಃ ಪಾತ್ಯಮಾನಾಶ್ಚ ಛಿನಭಿನ್ನಾ ಗಣಾಸ್ತದಾ
ತ್ಯಕ್ತ್ವಾ ಸಂಗ್ರಾಮಭೂಮಿಂ ತೇ ಸರ್ವೇಽಪಿ ವಿಮುಖಾಽಭವನ್ ॥ ೩೦ ॥

---

೨೭. ನಿಶುಂಭ, ಶುಂಭ, ಕಾಲನೇಮಿ ಈ ಮೂರು ಜನರೂ ಆ ಗಣಗಳನ್ನು ಓಡಿಹೋಗದಂತೆ ತಡೆದರು.

೨೮-೨೯. ಮಳೆಗಾಲದಲ್ಲಿ ಮಾಘಪಕ್ಷಿಗಳು ಬರುವಂತೆ ದೈತ್ಯರು ಆ ಗಣಸೇನೆಯ ಮೇಲೆ ಬಾಣವನ್ನು ಬಿಟ್ಟರು. ದೈತ್ಯರ ಶರಗಳು ಶಲಭವೆಂಬ ಮಿಡಿತೆಗಳು ಗೋವುಗಳ ಕೊಟ್ಟಿಗೆಯನ್ನು ಮುತ್ತುವಂತೆ ಮುತ್ತುತ್ತಿದ್ದುವು. ಈ ರೀತಿಯಲ್ಲಿ ಗಣಗಳ ಸೇನೆಗಳೂ ಹೆದರಿದವು. ಏಟುತಿಂದ ಗಣಗಳು ರಕ್ತವನ್ನು ಸುರಿಸುತ್ತಿದ್ದುವು.

೩೦. ರಕ್ತದಿಂದ ನೆನೆದ ಆ ಗಣಗಳು ವಸಂತ ಕಾಲದಲ್ಲಿ ಮುತ್ತುಗದ ಮರಗಳು ಹೂಬಿಟ್ಟು ಪ್ರಕಾಶಿಸುವಂತೆ ಕಂಗೊಳಿಸಿದವು. ಈ ರೀತಿಯಾಗಿ ಕೆಳಗೆ ಬಿದ್ದು ಮತ್ತು ಬೀಳುತ್ತಿರುವ ಗಣಗಳು ಏಟುಗಳನ್ನು ತಿಂದು ಯುದ್ಧಭೂಮಿಯನ್ನು ಬಿಟ್ಟು ಹಿಂತಿರುಗಿದವು.

ತತಃ ಪ್ರಭಿನ್ನಂ ಸ್ವಬಲಂ ವಿಲೋಕ್ಯ
ಶೈಲಾದಿಲಂಬೋದರ ಕಾರ್ತಿಕೇಯಾಃ ।
ತ್ವರಾನ್ವಿತಾ ದೈತ್ಯವರಾನ್ಪ್ರಸಹ್ಯ
ನಿವಾರಯಾಮಾಸುರಮರ್ಷಣಾಸ್ತೇ ॥ ೩೧ ॥

ಇತಿ ಶ್ರೀ ಮಹಾಪುರಾಣೇ ಪಾದ್ಮೇ ಉತ್ತರಖಂಡೇ ಶ್ರೀ ಕೃಷ್ಣ ಸತ್ಯಭಾಮಾ ಸಂವಾದೇ ಕಾರ್ತಿಕ ಮಾಹಾತ್ಮ್ಯೇ ಜಲಂಧರೋಪಾಖ್ಯಾನೇ ದೈತ್ಯಸೇನಾವಧೋ ನಾಮ ದ್ವ್ಯಧಿಕಶತತಮೋಽಧ್ಯಾಯಸ್ಸಮಾಪ್ತಃ

---

೩೧. ಹೀಗೆ ತಮ್ಮ ಗಣಗಳು ಓಡುತ್ತಿರುವುದನ್ನು ನೋಡಿ ಶೈಲಾದಿ ಗಣಪತಿ ಕುಮಾರಸ್ವಾಮಿ ಮುಂತಾದವರು ಅವಸರಪಡುತ್ತಾ ಕೋಪದಿಂದ ಆ ದೈತ್ಯರನ್ನು ಬಲಾತ್ಕಾರದಿಂದ ತಡೆದರು.

ಇಂತು ಶ್ರೀ ಪದ್ಮಮಹಾಪುರಾಣದ ಉತ್ತರಖಂಡದ ಶ್ರೀ ಕೃಷ್ಣ ಸತ್ಯಭಾಮೆಯರ ಸಂವಾದದ ಕಾರ್ತಿಕ ಮಹಿಮೆಯಲ್ಲಿ ಜಲಂಧರೋಪಾಖ್ಯಾನ ದಲ್ಲಿ ದೈತ್ಯಸೇನಾವಧ ಎಂಬ ನೂರ ಎರಡನೆಯ ಅಧ್ಯಾಯವು ಮುಗಿದುದು.



॥ ಶ್ರೀಃ ॥

-X-

# ಅಥ ಶ್ರೀ ಮಹಾಪುರಾಣೇ ಪಾದ್ಮೇ ಉತ್ತರಖಂಡೇ

## ॥ ತ್ರ್ಯಧಿಕಶತತಮೋಽಧ್ಯಾಯಃ ॥



॥ ನಾರದ ಉವಾಚ ॥

ತೇ ಗಣಾಧಿಪತೀನ್ ದೃಷ್ಟ್ವಾ ನಂದೀಭಮುಖಷಣ್ಮುಖಾನ್ ।
ಅಮರ್ಷಾದಭ್ಯಧಾವಂತ ದ್ವಂದ್ವಯುದ್ಧಾಯ ದಾನವಾಃ ॥ ೧ ॥

ನಂದಿನಂ ಕಾಲನೇಮಿಸ್ತು ಶುಂಭೋ ಲಂಬೋದರಂ ತಥಾ ।
ನಿಶುಂಭಷ್ಷಣ್ಮುಖಂ ವೇಗಾದಭ್ಯಧಾವತ ದಂಶಿತಃ ॥ ೨ ॥

ನಿಶುಂಭಃ ಕಾರ್ತಿಕೇಯಸ್ಯ ಮಯೂರಂ ಪಂಚಭಿಸ್ಶರೈಃ ।
ಹೃದಿ ವಿವ್ಯಾಧ ವೇಗೇನ ಮೂರ್ಛಿತಸ್ಸ ಪಪಾತ ಹ ॥ ೩ ॥

---

## ನೂರಮೂರನೆಯ ಅಧ್ಯಾಯವು



೧. ನಾರದನು ಹೇಳಿದನು-ಆ ದೈತ್ಯರು ಗಣಾಧಿಪತಿಗಳಾದ ನಂದಿ, ಗಜಾನನ, ಷಣ್ಮುಖರನ್ನು ನೋಡಿ ಕೋಪದಿಂದ ದ್ವಂದ್ವ ಯುದ್ಧಕ್ಕೆ ನಿಂತರು.

೨. ನಂದಿಯೊಡನೆ ಕಾಲನೇಮಿಯೂ, ಲಂಬೋದರನೊಡನೆ ಶುಂಭನೂ, ಷಣ್ಮುಖನೊಡನೆ ನಿಶುಂಭನೂ ಯುದ್ಧಕ್ಕೆ ನಿಂತರು.

೩. ನಿಶುಂಭನು ಷಣ್ಮುಖನ ವಾಹನವಾದ ನವಿಲನ್ನು ಐದು ಬಾಣಗಳನ್ನು ಬಿಟ್ಟು ಹೊಡೆಯಲು ಅದು ಮೂರ್ಛೆಗೊಂಡು ಕೆಳಗೆ ಬಿದ್ದಿತು.

ತತಶ್ಶಕ್ತಿಧರಶ್ಶಕ್ತಿಂ ಯಾವಜ್ಜಗ್ರಾಹ ರೋಷಿತಃ ।
ತಾವನ್ನಿಶುಂಭೋ ವೇಗೇನ ಸ್ವಶಕ್ತ್ಯಾ ತಮುಪಾತಯತ್ ॥ ೪ ॥

ತತೋ ನಂದೀಶ್ವರೋ ಬಾಣೈಃ ಕಾಲನೇಮಿಮವಿಧ್ಯತ ।
ಸಪ್ತಭಿಶ್ಚ ಹಯಾನ್ಕೇತುಂ ತ್ರಿಭಿಸ್ಸಾರಥಿಮಚ್ಛಿನತ್ ॥ ೫ ॥

ಕಾಲನೇಮಿಸ್ತು ಸಂಕ್ರುದ್ಧೋ ಧನುಶ್ಚಿಚ್ಛೇದ ನಂದಿನಃ ।
ತದಪಾಸ್ಯ ಸ ಶೂಲೇನ ತಂ ವಕ್ಷಸ್ಯಹನದ್ದೃಢಂ ॥ ೬ ॥

ಸ ಶೂಲಭಿನ್ನಹೃದಯೋ ಹತಾಶ್ವೋ ಹತಸಾರಥಿಃ ।
ಅದ್ರೇಶ್ಶಿಖರಮಾಮುಚ್ಯ ಶೈಲಾದಿಂ ಸೋಽಭ್ಯತಾಡಯತ್ ॥ ೭ ॥

ಅಥ ಶುಂಭೋ ಗಣೇಶಶ್ಚ ರಥಮೂಷಕವಾಹನೌ ।
ಯುಧ್ಯಮಾನೌ ಶರವ್ರಾತೈಃ ಪರಸ್ಪರಮವಿಧ್ಯತಾಂ ॥ ೮ ॥

---

೪. ಅನಂತರ ಕಾರ್ತಿಕೇಯನು ಶಕ್ತ್ಯಾಯುಧವನ್ನು ಬಿಡುವುದರೊಳಗೇನೇ ನಿಶುಂಭನು ತಾನು ಶಕ್ತ್ಯಾಯುಧದಿಂದ ಹೊಡೆದು ಆ ಕುಮಾರಸ್ವಾಮಿಯನ್ನು ಕೆಡಹಿದನು.

೫. ಇತ್ತ ನಂದೀಶ್ವರನು ಬಾಣಗಳಿಂದ ಕಾಲನೇಮಿಯನ್ನು ಹೊಡೆದು ಏಳುಬಾಣಗಳಿಂದ ಅವನ ಕುದುರೆಯನ್ನೂ ಮೂರು ಬಾಣಗಳಿಂದ ಸಾರಥಿಯನ್ನೂ ಕತ್ತರಿಸಿದನು.

೬. ಕಾಲನೇಮಿಯು ಕೋಪಗೊಂಡು ಆ ನಂದಿಯ ಧನುಸ್ಸನ್ನು ಕತ್ತರಿಸಿದನು. ಆನಂದಿಯು ಆ ಧನುಸ್ಸನ್ನು ಬಿಟ್ಟು ಶೂಲವನ್ನು ಹಿಡಿದು ಕಾಲನೇಮಿಯ ಎದೆಗೆ ಹೊಡೆದನು.

೭. ಆ ಕಾಲನೇಮಿಯು ಸಾರಥಿಯನ್ನೂ ಕುದುರೆಯನ್ನೂ ಕಳೆದು ಕೊಂಡು ತಾನೂ ಏಟನ್ನು ತಿಂದು ಕೊನೆಗೆ ಬೆಟ್ಟದ ಕೋಡುಗಲ್ಲನ್ನು ತಂದು ನಂದಿಯನ್ನು ಹೊಡೆದನು.

೮. ರಥ ಇಲಿಗಳನ್ನು ವಾಹನವಾಗಿ ಉಳ್ಳ ಶುಂಭ ಗಣೇಶರು ಬಾಣಗಳಿಂದ ಹೊಡೆದಾಡಿದರು.

ಗಣೇಶಸ್ತು ತದಾ ಶುಂಭಂ ಹೃದಿ ವಿವ್ಯಾಧ ಪತ್ರಿಣಾ ।
ಸಾರಥಿಂ ಚ ತ್ರಿಭಿರ್ಬಾಣೈಃ ಪಾತಯಾಮಾಸ ಭೂತಲೇ ॥ ೯ ॥

ತತೋಽತಿಕ್ರುದ್ಧಶ್ಶುಂಭೋಽಪಿ ಬಾಣಷಷ್ಟ್ಯಾ ಗಣಾಧಿಪಂ ।
ಮೂಷಿಕಂ ಚ ತ್ರಿಭಿರ್ವಿಧ್ವಾ ನನಾದ ಜಲದಸ್ವನಃ ॥ ೧೦ ॥

ಮೂಷಕಶ್ಶರಭಿನ್ನಾಂಗಶ್ಚಚಾಲ ದೃಢವೇದನಃ ।
ಲಂಬೋದರಶ್ಚ ಪತಿತಃ ಪದಾತಿರಭವನ್ನೃಪ ॥ ೧೧ ॥

ತತೋ ಲಂಬೋದರಶ್ಶುಂಭಂ ಹತ್ವಾ ಪರಶುನಾ ಹೃದಿ ।
ಅಪಾತಯತ್ತದಾ ಭೂಮೌ ಮೂಷಕಂ ಚಾರುಹತ್ಪುನಃ ॥ ೧೨ ॥

ಕಾಲನೇಮಿರ್ನಿಶುಂಭಶ್ಚಾಪ್ಯುಭೌ ಲಂಬೋದರಂ ಶರೈಃ ।
ಯುಗಪಜ್ಜಘ್ನತುಃ ಕ್ರೋಧಾತ್ ತೋತ್ರೈರಿವ ಮಹಾದ್ವಿಪಂ ॥ ೧೩ ॥

---

೯. ಗಣೇಶನು ಶುಂಭನ ಎದೆಗೆ ಬಾಣವನ್ನು ಬಿಟ್ಟು ಹೊಡೆದನು. ಮತ್ತು ಮೂರು ಬಾಣಗಳನ್ನು ಬಿಟ್ಟು ಆ ಶುಂಭನ ಸಾರಥಿಯನ್ನೂ ಕೆಡವಿದನು.

೧೦. ಶುಂಭನು ಕೋಪಗೊಂಡು ಅರವತ್ತು ಬಾಣಗಳಿಂದ ಗಣಾಧಿಪನನ್ನು ಹೊಡೆದು ಅವನ ಇಲಿಯನ್ನೂ ಮೂರು ಬಾಣಗಳಿಂದ ಹೊಡೆದು ಗುಡುಗಿನಂತೆ ಗರ್ಜಿಸಿದನು.

೧೧. ಬಾಣದ ಏಟಿನಿಂದ ನೊಂದ ಆ ಇಲಿಯು ಅತ್ತಿತ್ತ ಓಡಾಡಲು ಗಣಪತಿಯು ಕೆಳಗೆ ಬಿದ್ದುಹೋಗಿ ಪದಾತಿಯಾದನು.

೧೨. ಅನಂತರ ಆ ಗಣಪತಿಯೂ ಕೂಡ ಶುಂಭನನ್ನು ಕೊಡಲಿಯಿಂದ ಹೊಟ್ಟೆಗೆ ಹೊಡೆದು ಕೆಡವಿ ಮತ್ತೆ ಇಲಿಯಮೇಲೆ ಕುಳಿತನು.

೧೩. ಕಾಲನೇಮಿ ನಿಶುಂಭರಿಬ್ಬರೂ ಸೇರಿಕೊಂಡು ಬಾಣಗಳಿಂದ ಆ ಗಣಪತಿಯನ್ನು ಚಾವಟಿಯಿಂದ ಆನೆಯನ್ನು ಹೊಡೆಯುವಂತೆ ಹೊಡೆದರು.

ತಂ ಪೀಡ್ಯಮಾನಮಾಲೋಕ್ಯ ವೀರಭದ್ರೋ ಮಹಾಬಲಃ ।
ಅಭ್ಯಧಾವತವೇಗೇನ ಭೂತಕೋಟಿಯುತಸ್ತದಾ ॥ ೧೪ ॥

ಕೂಶ್ಮಾಂಡಾ ಭೈರವಾಶ್ಚಾಽಪಿ ವೇತಾಳಾ ಯೋಗಿನೀಗಣಾಃ ।
ಪಿಶಾಚಾ ರಕ್ಷಸಾಂ ಸಂಘಾ ಗಣಾಶ್ಚಾಪಿ ತಮನ್ವಯುಃ ॥ ೧೫ ॥

ತತಃ ಕಿಲಕಿಲಾಶಬ್ದೈಃ ಸಿಂಹನಾದೈಸ್ಸಘರ್ಘರೈಃ ।
ವಿನಾದಿತಾ ಡಮರುಗೈಃ ಪೃಥಿವೀ ಸಮಕಂಪತ ॥ ೧೬ ॥

ತತೋ ಭೂತಾನ್ಯಧಾವಂತ ಭಕ್ಷಯಂತಿ ಸ್ಮ ದಾನವಾನ್ ।
ಉತ್ಪತನ್ತ್ಯಾಪತಂತಿ ಸ್ಮ ನನೃತುಶ್ಚ ರಣಾಂಗಣೇ ॥ ೧೭ ॥

ನಂದೀ ಚ ಕಾರ್ತಿಕೇಯಶ್ಚ ಸಮಾಯಾತೌ ತ್ವರಾನ್ವಿತೌ ।
ನಿಜಘ್ನತೂ ರಣೇ ದೈತ್ಯಾನ್ ನಿರಂತರಶರವ್ರಜೈಃ ॥ ೧೮ ॥

---

೧೪. ಗಣಪತಿಯು ತೊಂದರೆಪಡುತ್ತಿರುವುದನ್ನು ನೋಡಿ ವೀರಭದ್ರನು ಅನೇಕಕೋಟಿ ಭೂತಳನ್ನು ಕರೆದುಕೊಂಡು ಜಾಗ್ರತೆಯಾಗಿ ಅವನನ್ನು ರಕ್ಷಿಸಲು ಹೋದನು.

೧೫. ಕೂಶ್ಮಾಂಡರು, ಭೈರವರು, ಬೇತಾಳರು, ಯೋಗಿನಿಗಳು, ಪಿಶಾಚರು, ರಕ್ಷೋಗಣಗಳು ಇವರೆಲ್ಲರೂ ಆ ವೀರಭದ್ರನನ್ನು ಅನುಸರಿಸಿ ಹೋದರು.

೧೬. ಅನಂತರ ಕಿಲಕಿಲಶಬ್ದದಿಂದಲೂ ಸಿಂಹನಾದದಿಂದಲೂ ಡಮರುಗದ ಶಬ್ದದಿಂದಲೂ ಭೂಮಿಯು ನಡುಗಿತು.

೧೭. ಆಗ ಆ ಭೂತಗಳೆಲ್ಲವೂ ಹೊರಟು ದಾನವರನ್ನು ತಿನ್ನುವುದಕ್ಕೆ ಮೊದಲಿಟ್ಟುವು. ಆ ಭೂತಗಳು ನೆಗೆಯುವುದು ಮೇಲೆಬೀಳುವುದು ಈ ರೀತಿ ಮಾಡುತ್ತಾ ಯುದ್ಧಭೂಮಿಯಲ್ಲಿ ಕುಣಿದುವು.

೧೮. ನಂದಿಯೂ ಸೇನಾನಿಯೂ ಅಲ್ಲಿಗೆ ಬಂದು ವೇಗದಿಂದ ಬಾಣಗಳನ್ನು ಬಿಡುತ್ತಾ ದೈತ್ಯರನ್ನು ಹೊಡೆದರು.

ಭಿನ್ನಭಿನ್ನಾಹತೈರ್ದೈತ್ಯೈಃ ಪಾತಿತೈರ್ಭಕ್ಷಿತೈಸ್ತದಾ ।
ವ್ಯಾಕುಲಾ ಸಾಽಭವತ್ಸೇನಾ ವಿಷಣ್ಣವದನಸ್ತದಾ ॥ ೧೯ ॥

ಪ್ರವಿಧ್ವಸ್ತಾಂ ತಥಾ ಸೇನಾಂ ದೃಷ್ಟ್ವಾ ಸಾಗರನಂದನಃ ।
ರಥೇನಾತಿಪತಾಕೇನ ಗಣೇನಾಭಿಯಯೌ ಬಲೀ ॥ ೨೦ ॥

ಹಸ್ತ್ಯಶ್ವರಥಸಂಹ್ರಾದಾಃ ಶಂಖಭೇರೀರವಾಸ್ತಥಾ ।
ಅಭವನ್ಸಿಂಹನಾದಾಶ್ಚ ಸೇನಯೋರುಭಯೋಸ್ತದಾ ॥ ೨೧ ॥

ಜಲಂಧರಶರವ್ರಾತೈರ್ನೀಹಾರಪಟಲೈರಿವ ।
ದ್ಯಾವಾಪೃಥಿವ್ಯೋರಾಚ್ಛನ್ನಮಂತರಂ ಸಮಪದ್ಯತ ॥ ೨೨ ॥

ಗಣೇಶಂ ಪಂಚಭಿರ್ವಿದ್ಧ್ವಾ ಶೈಲಾದಿಂ ನವಭಿಶ್ಶರೈಃ ।
ವೀರಭದ್ರಂ ಚ ವಿಂಶತ್ಯಾ ನನಾದ ಜಲದಸ್ವನಃ ॥ ೨೩ ॥

---

೧೯. ಈ ರೀತಿಯಾಗಿ ದೈತ್ಯರು ಅನೇಕವಾಗಿ ಏಟುಗಳನ್ನು ತಿನ್ನುತ್ತಾ ಕೆಡವಲ್ಪಡುತ್ತಿರಲು ಆ ದಾನವ ಸೇನೆಯು ದುಃಖಗೊಂಡು ಕಾಂತಿಗೆಟ್ಟು ಹೋಯಿತು.

೨೦. ಆಗ ಜಲಂಧರನು ದಾನವ ಸೇನೆಯು ಚೆಲ್ಲಾಪಿಲ್ಲಿಯಾಗಿ ಓಡುವುದನ್ನು ನೋಡಿ ಉತ್ತಮವಾದ ರಥದಲ್ಲಿ ಕುಳಿತುಕೊಂಡು ಅಲ್ಲಿಗೆ ಬಂದನು.

೨೧. ಆನೆ, ಕುದುರೆಗಳ, ಧ್ವನಿಯೂ ಶಂಖ, ಭೇರಿಗಳ ಧ್ವನಿಯೂ ಸಿಂಹನಾದಗಳೂ ಎರಡು ಸೇನೆಗಳಲ್ಲಿಯೂ ಕೇಳಿಬಂದುವು.

೨೨ ಜಲಂಧರನು ಬಿಟ್ಟ ಬಾಣಗಳು ಮೋಘಗಳು ಅಂತರಿಕ್ಷವನ್ನು ಮುಚ್ಚುವಂತೆ ಭೂಮ್ಯಾಕಾಶಗಳ ಮಧ್ಯಭಾಗವನ್ನು ಮುಚ್ಚಿದುವು.

೨೩. ಗಣೇಶನನ್ನು ಐದು ಬಾಣಗಳಿಂದಲೂ, ನಂದಿಯನ್ನು ಒಂಭತ್ತು ಬಾಣಗಳಿಂದಲೂ, ವೀರಭದ್ರನನ್ನು ಇಪ್ಪತ್ತು ಬಾಣಗಳಿಂದಲೂ ಹೊಡೆದು ಗುಡುಗಿನಂತೆ ಜಲಂಧರನು ಗರ್ಜಿಸಿದನು.

ಕಾರ್ತಿಕೇಯಸ್ತತೋ ದೈತ್ಯಂ ಶಕ್ತ್ಯಾ ವಿವ್ಯಾಧ ಸತ್ವರಃ ।
ವ್ಯಾಘೂರ್ಣಃ ಶಕ್ತಿನಿರ್ಭಿನ್ನಃ ಕಿಂಚಿದ್ವ್ಯಾಕುಲಮಾನಸಃ ॥ ೨೪ ॥

ತತಃ ಕ್ರೋಧಪರೀತಾಕ್ಷಃ ಕಾರ್ತಿಕೇಯಂ ಜಲಂಧರಃ ।
ಗದಯಾ ತಾಡಯಾಮಾಸ ಸ ತೂರ್ಣಂ ಭೂತಲೇಽಪತತ್ ॥ ೨೫ ॥

ತಥೈವ ನಂದಿನಂ ಕೋಪಾದಪಾತಯತ ಭೂತಲೇ ।
ತತೋ ಗಣೇಶ್ವರಃ ಕ್ರುದ್ಧೋ ಗದಾಂ ಪರಶುನಾಽಚ್ಛಿನತ್ ॥ ೨೬ ॥

ವೀರಭದ್ರಸ್ತ್ರಿಭಿರ್ಬಾಣೈರ್ಹೃದಿ ವಿವ್ಯಾಧ ದಾನವಂ ।
ಸಪ್ತಭಿಶ್ಚ ಹಯಾನ್ಕೇತುಂ ಧನುಶ್ಛತ್ರಂ ಚ ಚಿಚ್ಛಿದೇ ॥ ೨೭ ॥

ತತೋಽತಿಕ್ರುದ್ಧೋ ದೈತ್ಯೇಂದ್ರಃ ಶಕ್ತಿಮುದ್ಯಮ್ಯ ದಾರುಣಾಂ ।
ಗಣೇಶಂ ಪಾತಯಾಮಾಸ ರಥಮನ್ಯಂ ಸಮಾರುಹತ್ ॥ ೨೮ ॥

---

೨೪. ಷಣ್ಮುಖನು ಆ ಜಲಂಧರನನ್ನು ಶಕ್ತ್ಯಾಯುಧದಿಂದ ಹೊಡೆದನು. ಆ ಏಟಿನಿಂದ ನೊಂದು ಸ್ವಲ್ಪ ಖಿನ್ನನಾದನು.

೨೫. ಜಲಂಧರನು ಕೋಪಗೊಂಡು ಗದೆಯಿಂದ ಆ ಷಣ್ಮುಖನನ್ನು ಹೊಡೆಯಲು ಅವನು ಒಡನೆಯೆ ನೆಲದ ಮೇಲೆ ಬಿದ್ದನು.

೨೬. ಅನಂತರ ನಂದಿಯನ್ನು ಗದೆಯಿಂದ ಹೊಡೆದು ಕೊಂದನು. ಇವನ್ನು ನೋಡಿ ಗಣೇಶನು ಕೋಪಗೊಂಡು ಪರಶುವಿನಿಂದ ಆ ಗದೆಯನ್ನು ಕತ್ತರಿಸಿದನು.

೨೭. ವೀರಭದ್ರನು ಆ ದಾನವನನ್ನು ಮೂರು ಬಾಣಗಳನ್ನು ಬಿಟ್ಟು ನೋಯಿಸಿದನು. ಏಳು ಬಾಣಗಳನ್ನು ಬಿಟ್ಟು ಅವನ ಕುದುರೆಗಳನ್ನೂ ಧ್ವಜವನ್ನೂ ಧನುಸ್ಸನ್ನೂ ಕತ್ತರಿಸಿದನು.

೨೮. ಆಗ ಜಲಂಧರನು ಕೋಪಗೊಂಡು ಶಕ್ತಿ ಎಂಬ ಆಯುಧವನ್ನು ತೆಗೆದುಕೊಂಡು ಗಣೇಶನನ್ನು ಕೆಡವಿದನು. ಬೇರೆಯ ರಥವನ್ನೂ ಹತ್ತಿಕೊಂಡನು.

ಅಭ್ಯಯಾದಥ ವೇಗೇನ ವೀರಭದ್ರಂ ರುಷಾನ್ವಿತಃ ।
ತತಸ್ತೌ ಸೂರ್ಯಸಂಕಾಶೌ ಯುಯುಧಾತೇ ಪರಸ್ಪರಂ ॥ ೨೯ ॥

ವೀರಭದ್ರಃ ಪುನಸ್ತಸ್ಯ ಹಯಾನ್ಬಾಣೈರಪಾತಯತ್ ।
ಧನುಶ್ಚ ಚಿಚ್ಛಿದೇ ದೈತ್ಯಃ ಪುಪ್ಲುವೇ ಪರಿಘಾಯುಧಃ ॥ ೩೦ ॥

ಸ ವೀರಭದ್ರಂ ತ್ವರಯಾಭಿಗಮ್ಯ
ಜಘಾನ ದೈತ್ಯಃ ಪರಿಘೇಣ ಮೂರ್ಧನಿ ।
ಸ ಚಾಪಿ ವೀರಃ ಪ್ರವಿಭಿನ್ನಮೂರ್ಧಾ
ಪಪಾತ ಭೂಮೌ ರುಧಿರಂ ಸಮುದ್ಗಿರನ್ ॥ ೩೧ ॥

ಇತಿ ಶ್ರೀ ಮಹಾಪುರಾಣೇ ಪಾದ್ಮೇ ಉತ್ತರಖಂಡೇ ಶ್ರೀ ಕೃಷ್ಣ ಸತ್ಯಭಾಮಾ ಸಂವಾದೇ ಕಾರ್ತಿಕೆ ಮಹಾತ್ಮ್ಯೇ ಜಲಂಧರೋಪಾಖ್ಯಾನೇ ಸೈನ್ಯ ಪರಾಭವೋ ನಾಮ ತ್ರ್ಯಧಿಕಶತತಮೋಽಧ್ಯಾಯಸ್ಸಮಾಪ್ತಃ

---

೨೯. ರಥದಲ್ಲಿ ಕುಳಿತು ಕೋಪದಿಂದ ವೀರಭದ್ರನನ್ನು ಎದುರಿಸಿದನು. ಆಗ ಅವರಿಬ್ಬರಿಗೂ ಘೋರವಾನ ಕದನವು ನಡೆಯಿತು.

೩೦. ವೀರಭದ್ರನು ಆ ದೈತ್ಯನ ಕುದುರೆಗಳನ್ನು ಕೊಂದು ಕೆಡವಿದನು. ಮತ್ತು ದೈತ್ಯನ ಧನುಸ್ಸನ್ನು ಕತ್ತರಿಸಲು ಪರಿಘವನ್ನು ತೆಗೆದುಕೊಂಡು ಆ ದೈತ್ಯನು ರಥದಿಂದ ಧುಮುಕಿದನು.

೩೧. ಆ ದೈತ್ಯನು ವೀರಭದ್ರನಿಗೆ ಪರಿಘದಿಂದ ತಲೆಯಮೇಲೆ ಹೊಡೆಯಲು ತಲೆಯು ಒಡೆದು ಹೋಗಿ ರಕ್ತವನ್ನು ಸುರಿಸುತ್ತ ಕಳಗಡೆ ಬಿದ್ದನು.

ಇಂತು ಶ್ರೀ ಪದ್ಮಮಹಾಪುರಾಣದ ಉತ್ತರಖಂಡದ ಶ್ರೀ ಕೃಷ್ಣ ಸತ್ಯಭಾಮೆಯರ ಸಂವಾದದ ಕಾರ್ತಿಕ ಮಹಿಮೆಯ ಜಲಂಧರೋಪಾಖ್ಯಾನದಲ್ಲಿ ಸೈನ್ಯ ಪರಾಭವ ಎಂಬ ನೂರಮೂರನೆಯ ಅಧ್ಯಾಯವು ಮುಗಿದುದು.



॥ ಶ್ರೀಃ ॥

–x–

# ಅಥ ಶ್ರೀ ಮಹಾಪುರಾಣೇ ಪಾದ್ಮೇ ಉತ್ತರಖಂಡೇ

## ॥ ಚತುರಧಿಕಶತತಮೋಽಧ್ಯಾಯಃ ॥



॥ ನಾರದ ಉವಾಚ ॥

**ಪತಿತಂ ವೀರಭದ್ರಂ ತು ದೃಷ್ಟ್ವಾ ರುದ್ರಗಣಾ ಭಯಾತ್ ।**
**ಪ್ರಾಗಚ್ಛಂಸ್ತೇ ರಣಂ ಹಿತ್ವಾ ಕ್ರೋಶಮಾನಾ ಮಹೇಶ್ವರಂ ॥ ೧ ॥**

**ಅಥ ಕೋಲಾಹಲಂ ಶ್ರುತ್ವಾ ಗಣಾನಾಂ ಚಂದ್ರಶೇಖರಃ ।**
**ಅಭ್ಯಯಾದ್ವೃಷಭಾರೂಢಃ ಸಂಗ್ರಾಮಂ ಪ್ರಹಸನ್ನಿವ ॥ ೨ ॥**

**ರುದ್ರಮಾಯಾಂತಮಾಲೋಕ್ಯ ಸಿಂಹನಾದೈರ್ಗಣಾಃ ಪುನಃ ।**
**ನಿವೃತ್ತಾಸ್ಸಂಗರೇ ದೈತ್ಯಾನ್ ನಿಜಘ್ನುಃ ಶರವೃಷ್ಟಿಭಿಃ ॥ ೩ ॥**

---

## ನೂರನಾಲ್ಕನೆಯ ಅಧ್ಯಾಯವು



೧. ನಾರದನು ಹೇಳಿದನು–ವೀರಭದ್ರನು ಬಿದ್ದುದನ್ನು ನೋಡಿ ಗಣಗಳು ಭಯಪಟ್ಟು ಯುದ್ಧಭೂಮಿಯಿಂದ ಓಡಿಹೋಗಿ ಮಹೇಶ್ವರನ ಬಳಿಯಲ್ಲಿ ಮೊರೆಯಿಟ್ಟುವು.

೨. ಚಂದ್ರಶೇಖರನು ಈ ಗಣಗಳ ಮೊರೆಯನ್ನು ಕೇಳಿ ಬಸವನ ಮೇಲೆ ಕುಳಿತು ಯುದ್ಧಭೂಮಿಗೆ ಬಂದನು.

೩. ಯುದ್ಧಕ್ಕೆ ರುದ್ರನು ಬರುತ್ತಿರುವುದನ್ನು ನೋಡಿ ಗಣಗಳು ಹಿಂತಿರುಗಿ ಸಿಂಹನಾದ ಮಾಡುತ್ತ ಆ ದೈತ್ಯರನ್ನು ಬಾಣಗಳ ಮಳೆಗರೆಯುತ್ತಾ ಹೊಡೆದುವು.

ದೈತ್ಯಾಶ್ಚ ಭೀಷಣಂ ರುದ್ರಂ ದೃಷ್ಟ್ವಾ ಸರ್ವೇಽಭಿದುದ್ರುವುಃ ।
ಕಾರ್ತಿಕವ್ರತಿನಂ ದೃಷ್ಟ್ವಾ ಪಾತಕಾನೀವ ತದ್ಭಯಾತ್ ॥ ೪ ॥

ಅಥ ಜಾಲಂಧರೋ ದೈತ್ಯಾನ್ ವಿದ್ರುತಾನ್ಪ್ರೇಕ್ಷ್ಯ ಸಂಗರಾತ್ ।
ರೋಷಾದಧಾವಚ್ಚಂಡೀಶಂ ಮುಂಚನ್ಬಾಣಾನ್ಸಹಸ್ರಶಃ ॥ ೫ ॥

ಶುಂಭೋ ನಿಶುಂಭೋಽಶ್ವಮುಖಃ ಕಾಲನೇಮಿರ್ಬಲಾಹಕಃ ।
ಖಡ್ಗರೋಮೋ ಪ್ರಚಂಡಶ್ಚ ಘಸ್ಮರಶ್ಚ ಶಿವಂ ಯಯುಃ ॥ ೬ ॥

ಬಾಣಾಂಧಕಾರಸಂಛನ್ನಂ ದೃಷ್ಟ್ವಾ ಗಣಬಲಂ ಶಿವಃ ।
ಬಾಣಜಾಲಮುವಚ್ಛಿದ್ಯ ಸ ಬಾಣೈರಾವೃಣೋನ್ನಭಃ ॥ ೭ ॥

ದೈತ್ಯಾಂಶ್ಚ ಬಾಣವಾತ್ಯಾಭಿಃ ಪೀಡಿತಾನಕರೋತ್ತದಾ ।
ಪ್ರಚಂಡಬಾಣಜಾಲೌಘೈಃ ಅಪಾತಯತ ಭೂತಲೇ ॥ ೮ ॥

---

೪ ದೈತ್ಯರೆಲ್ಲರೂ ಆ ಭಯಂಕರನಾದ ರುದ್ರನನ್ನು ನೋಡಿ ಕಾರ್ತಿಕವ್ರತ ಮಾಡುವವನನ್ನು ನೋಡಿ ಪಾಪಗಳು ಓಡಿಹೋಗುವಂತೆ ಓಡಿಹೋದರು.

೫. ಜಾಲಂಧರನು ದೈತ್ಯರು ಓಡುತ್ತಿರುವುದನ್ನು ನೋಡಿ ಕೋಪದಿಂದ ಬಾಣಗಳನ್ನು ಬಿಡುತ್ತಾ ಚಂಡೀಶನ ಮೇಲೆ ಬಿದ್ದನು.

೬. ಶುಂಭ, ನಿಶುಂಭ, ಅಶ್ವಮುಖ, ಕಾಲನೇಮಿ, ಬಲಾಹಕ, ಖಡ್ಗರೋಮ, ಪ್ರಚಂಡ, ಘಸ್ಮರ ಇವರೆಲ್ಲರೂ ಶಿವನ ಮೇಲೆ ಬಿದ್ದರು.

೭. ಶಿವನು ಆಕಾಶವೂ ತನ್ನ ಗಣಗಳೂ ಬಾಣಗಳಿಂದ ಆವರಿಸಲ್ಪಟ್ಟಿರುವುದನ್ನು ನೋಡಿ ಆ ಬಾಣವನ್ನೆಲ್ಲಾ ನಾಶಮಾಡಿ ತನ್ನ ಬಾಣಗಳಿಂದ ಆಕಾಶವನ್ನು ತುಂಬಿದನು.

೮. ಬಾಣಗಳಿಂದ ದೈತ್ಯರನ್ನು ಬಹುವಾಗಿ ತೊಂದರೆ ಪಡಿಸಿದನು. ಮತ್ತು ಆ ಬಾಣಗಳಿಂದಲೇ ದೈತ್ಯರನ್ನು ನೆಲಕ್ಕೆ ಕೆಡವಿದನು.

ಖಡ್ಗರೋಮ್ಣಶ್ಶಿರಃ ಕೋಪಾತ್ತದಾ ಪರಶುನಾಽಚ್ಛಿನತ್ ।
ಬಲಾಹಕಸ್ಯ ಚ ಶಿರಃ ಖಟ್ವಾಂಗೇನಾಕರೋದ್ದ್ವಿಧಾ ॥ ೯ ॥

ಬದ್ಧ್ವಾ ಚ ಘಸ್ಮರಂ ದೈತ್ಯಂ ಪಾಶೇನಾಭ್ಯಹನದ್ಭುವಿ ।
ವೃಷವೇಗಹತಾಃ ಕೇಚಿತ್ಕೇಚಿದ್ಬಾಣೈರ್ನಿರಾಕೃತಾಃ ॥ ೧೦ ॥

ನ ಶೇಕುರಸುರಾ ಸ್ಥಾತುಂ ಗಜಾಸ್ಸಿಂಹಾರ್ದಿತಾ ಇವ ।
ತತಃ ಕೋಪಪರೀತಾತ್ಮಾ ವೇಗಾದ್ರುದ್ರಂ ಜಲಂಧರಃ ॥
ಆಹ್ವಯಾಮಾಸ ಸಮರೇ ತೀವ್ರಾಶನಿಸಮಸ್ವನಃ ॥ ೧೧ ॥

॥ ಜಲಂಧರ ಉವಾಚ ॥

ಯುಧ್ಯಸ್ವಾಽದ್ಯ ಮಯಾ ಸಾರ್ಧಂ ಕಿಮೇಭಿರ್ನಿಹತೈಸ್ತವ ।
ಯಚ್ಚ ಕಿಂಚಿದ್ಬಲಂ ತೇಽಸ್ತಿ ತದ್ದರ್ಶಯ ಜಟಾಧರ ॥ ೧೨ ॥

---

೯. ಖಡ್ಗರೋಮನ ತಲೆಯನ್ನು ಶಿವನು ಕೋಪದಿಂದ ಕೊಡಲಿಯಿಂದ ಕತ್ತರಿಸಿದನು. ಬಲಾಹಕನ ತಲೆಯನ್ನು ಖಟ್ವಾಂಗವೆಂಬ ಆಯುಧದಿಂದ ತುಂಡರಿಸಿದನು.

೧೦. ಘಸ್ಮರನೆಂಬ ದೈತ್ಯನನ್ನು ಪಾಶದಿಂದ ಕಟ್ಟಿ ಹೊಡೆದನು. ಬಸವನ ವೇಗದಿಂದ ಕೆಲವರು ಸತ್ತರು. ಬಾಣಗಳಿಂದ ಕೆಲವರು ಸತ್ತರು.

೧೧. ದೈತ್ಯರು ಆ ರುದ್ರನ ಮುಂದೆ ಸಿಂಹದಿಂದ ತೊಂದರೆಪಟ್ಟ ಆನೆಗಳಂತೆ ನಿಲ್ಲಲಾರದೇ ಓಡಿಹೋದರು. ಆಮೇಲೆ ಕೋಪಗೊಂಡು ಜಲಂಧರನು ರುದ್ರನನ್ನು ಯುದ್ಧಕ್ಕೆ ಕರೆದನು.

೧೨. ಜಲಂಧರನು ಹೇಳಿದನು–ಎಲೈ ಜಟಾಧರನೇ! ನನ್ನೊಡನೆ ಯುದ್ಧಮಾಡು. ಅವರಮೇಲೆ ಹೋಗಿ ಪ್ರಯೋಜನವೇನು! ನಿನಗೇನಾದರೂ ಅಲ್ಪ ಸ್ವಲ್ಪ ಬಲವಿದ್ದರೆ ಅದನ್ನು ನನ್ನಮೇಲೆ ತೋರಿಸು.

|| ನಾರದ ಉವಾಚ ||

ಇತ್ಯುಕ್ತ್ವಾ ಬಾಣಸಪ್ತತ್ಯಾ ಜಘಾನ ವೃಷಭಧ್ವಜಂ |
ತಾನಪ್ರಾಪ್ತಾನ್ ಶಿತೈರ್ಬಾಣೈಃ ಚಿಚ್ಛೇದ ಪ್ರಹಸನ್ ಶಿವಃ || ೧೩ ||

ತತೋ ಹಯಾನ್ ಧ್ವಜಂ ಛತ್ರಂ ಧನುಶ್ಚಿಚ್ಛೇದ ಸಪ್ತಭಿಃ |
ಸ ಛಿನ್ನಧನ್ವಾ ವಿರಥೋ ಗದಾಮುದ್ಯಮ್ಯ ವೇಗವಾನ್ || ೧೪ ||

ಅಭ್ಯಧಾವಚ್ಛಿವಸ್ತಾವದ್ಗದಾಂ ಬಾಣೈರ್ದ್ವಿಧಾಽಕರೋತ್ |
ತಥಾಪಿ ಮುಷ್ಟಿಮುದ್ಯಮ್ಯ ಯಯೌ ರುದ್ರಜಿಘಾಂಸಯಾ || ೧೫ ||

ತಾವಚ್ಛಿವೇನ ಬಾಣೌಘೈಃ ಕ್ರೋಶಮಾತ್ರಮುಪಾಕೃತಃ |
ತತೋ ಜಲಂಧರೋ ದೈತ್ಯೋ ಮತ್ವಾ ರುದ್ರಂ ಬಲಾಧಿಕಂ || ೧೬ ||

ಸಸರ್ಜ ಮಾಯಾಂ ಗಾಂಧರ್ವೀಂ ಅದ್ಭುತಾಂ ರುದ್ರಮೋಹಿನೀಂ |
ತತೋ ಜಗುಶ್ಚ ನನೃತುರ್ಗಂಧರ್ವಾಪ್ಸರಸಾಂ ಗಣಾಃ || ೧೭ ||

---

೧೩. ನಾರದನು ಹೇಳಿದನು–ಹೀಗೆನ್ನುತ್ತಾ ಎಪ್ಪತ್ತು ಬಾಣಗಳಿಂದ ಆ ಶಿವನನ್ನು ಹೊಡೆದನು. ಶಿವನು ಆ ಬಾಣಗಳು ತನ್ನ ಬಳಿಗೆ ಬರುವುದರೊಳಗಾಗಿ ನಗುತ್ತಲೇ ಅವನ್ನು ಕತ್ತರಿಸಿದನು.

೧೪–೧೫. ಅನಂತರ ಶಿವನು ಅವನ ಕುದುರೆಗಳನ್ನೂ ಧ್ವಜವನ್ನೂ ಛತ್ರವನ್ನೂ ಧನುಸ್ಸನ್ನೂ ಏಳು ಬಾಣಗಳಿಂದ ಕತ್ತರಿಸಿದನು. ಧನುಸ್ಸು ನಾಶವಾಗಲು ಜಲಂಧರನು ಗದೆಯನ್ನು ತೆಗೆದುಕೊಂಡು ಶಿವನಮೇಲೆ ಬಿದ್ದನು. ಆ ಗದೆಯನ್ನು ಎರಡು ತುಂಡಾಗಿ ಮಾಡಿದನು. ಆದರೂ ಜಲಂಧರನು ಮುಷ್ಟಿಯನ್ನೆತ್ತಿಕೊಂಡು ರುದ್ರನನ್ನು ಕೊಲ್ಲಲು ಬಂದನು.

೧೬–೧೭. ಆಗ ಶಿವನು ಒಂದು ಕ್ರೋಶದೂರಕ್ಕೆ ಹೋಗುವಂತೆ ಬಾಣಗಳಿಂದ ಜಲಂಧರನನ್ನು ಎಸೆದನು. ಆಗ ಜಲಂಧರನು ರುದ್ರನು ಬಲಿಷ್ಠನೆಂದು ತಿಳಿದು ಅದ್ಭುತವಾದ ರುದ್ರನಿಗೂ ಮೋಹವನ್ನುಂಟುಮಾಡುವ ಗಂಧರ್ವಮಾಯೆಯನ್ನು ಸೃಷ್ಟಿಸಿದನು. ಆಗ ಗಂಧರ್ವರೂ ಅಪ್ಸರಸ್ಸುಗಳೂ ಈ ಶಿವನನ್ನು ಹೊಗಳಿದರು. ಅವನ ಮುಂದೆ ಕುಣಿದರು.

ತಾಳವೇಣುಮೃದಂಗಾಶ್ಚ ವಾದಯನ್ತಸ್ತಥಾಽಪರೇ ।
ತದ್ದೃಷ್ಟ್ವಾ ಮಹದಾಶ್ಚರ್ಯಂ ರುದ್ರೋ ನಾದವಿಮೋಹಿತಃ ॥ ೧೮ ॥

ಪತಿತಾನ್ಯಪಿ ಶಸ್ತ್ರಾಣಿ ಕರೇಭ್ಯೋ ನ ವಿವೇದ ಸಃ ।
ಏಕಾಗ್ರೀಭೂತ ಮಾಲೋಕ್ಯ ರುದ್ರಂ ದೈತ್ಯೋ ಜಲಂಧರಃ ॥ ೧೯ ॥

ಕಾಮಾರ್ತಸ್ಸ ಜಗಾಮಾಶು ಯತ್ರ ಗೌರೀ ಸ್ಥಿತಾಽಭವತ್ ।
ಯುದ್ಧೇ ಶುಂಭನಿಶುಂಭಾಖ್ಯೌ ಸ್ಥಾಪಯಿತ್ವಾ ಮಹಾಬಲೌ ॥ ೨೦ ॥

ದಶದೋರ್ದಂಡಪಂಚಾಸ್ಯಸ್ತ್ರಿನೇತ್ರಶ್ಚ ಜಟಾಧರಃ
ಮಹಾವೃಷಭಮಾರೂಢಃ ಸ ಬಭೂವ ಜಲಂಧರಃ ॥ ೨೧ ॥

ಅಥ ರುದ್ರಂ ಸಮಾಯಾಂತಂ ಆಲೋಕ್ಯ ಭವವಲ್ಲಭಾ ।
ಅಭ್ಯಾಯಯೌ ಸಖೀಮಧ್ಯಾತ್ತದ್ದರ್ಶನಪಥೇಽಭವತ್ ॥ ೨೨ ॥

ಯಾವದ್ದದರ್ಶ ಚಾರ್ವಂಗೀಂ ಪಾರ್ವತೀಂ ದನುಜೇಶ್ವರಃ ।
ತಾವತ್ಸ ವೀರ್ಯಂ ಮುಮುಚೇ ಜಡಾಂಗಶ್ಚಾಽಭವತ್ತದಾ ॥ ೨೩ ॥

---

೧೮. ತಾಳ, ಕೊಳಲು, ಮೃದಂಗಗಳನ್ನು ಕೆಲವರು ಬಾರಿಸಿದರು. ಈ ಆಶ್ಚರ್ಯವನ್ನು ನೋಡಿ ರುದ್ರನು ಗಾನದಲ್ಲಿ ಮೈಮರೆತನು.

೧೯–೨೦. ಈ ಸಂಗೀತದ ಆನಂದದಿಂದ ಕೈಯಿಂದ ಶಸ್ತ್ರಗಳು ಬಿದ್ದು ಹೋದುದನ್ನು ಆ ಶಿವನು ತಿಳಿಯಲೇ ಇಲ್ಲ ಶಿವನು ಈ ರೀತಿ ಒಂದೇ ಮನಸ್ಸುಳ್ಳವನಾದುದನ್ನು ನೋಡಿ ಜಲಂಧರನು ಕಾಮಕ್ಕೆ ಅಧೀನನಾಗಿ ಗೌರಿಯ ಮೇಲಿನ ಮಸ್ಸಿನಿಂದ ಅವಳಿದ್ದಲ್ಲಿಗೆ ಹೊರಟುಹೋದನು. ಇತ್ತ ಯುದ್ಧದಲ್ಲಿ ಶುಂಭ ನಿಶುಂಭರನ್ನು ನಿಯಮಿಸಿದ್ದನು.

೨೧. ಪಾರ್ವತಿಯನ್ನು ಕಾಮಿಸಿಹೋಗುವಾಗ ಈ ಜಲಂಧರನು ಹತ್ತು ಕೈಯುಳ್ಳವನಾಗಿಯೂ ಮೂರುಕಣ್ಣುಗಳುಳ್ಳವನಾಗಿಯೂ ಐದು ಮುಖವುಳ್ಳವನಾಗಿಯೂ ಜಟಾಧರನಾಗಿಯೂ ಆಗಿ ದೊಡ್ಡಬಸವನಮೇಲೆ ಕುಳಿತಿದ್ದನು.

೨೨. ಪಾರ್ವತಿಯು ರುದ್ರನು ಬರುತ್ತಿರುವುದನ್ನು ನೋಡಿ ಸಖಿಯರ ಮಧ್ಯದಿಂದ ಬಂದು ಆ ಶಿವನ ಎದುರಿಗೆ ನಿಂತಳು.

೨೩. ಆ ಪಾರ್ವತಿಯನ್ನು ನೋಡಿದೊಡನೆಯೇ ಆ ದೈತ್ಯನಿಗೆ ಇಂದ್ರಿಯ ಸ್ಖಲನವಾಗಿ ಜಡನಾಗಿ ನಿಂತುಕೊಂಡನು.

ಅಥ ಜ್ಞಾತ್ವಾ ತದಾ ದೇವೀ ದಾನವಂ ಭಯವಿಹ್ವಲಾ ।
ಜಗಾಮಾಂತರ್ಹಿತಾ ವೇಗಾತ್ಸಾ ತದೋತ್ತರಮಾನಸಂ ॥ ೨೪ ॥

ತಾಮದೃಷ್ಟ್ವಾ ತತೋ ದೈತ್ಯಃ ಕ್ಷಣಾದ್ವಿದ್ಯುಲ್ಲತಾಮಿವ ।
ಜವೇನಾಗಾತ್ಪುನರ್ಯುದ್ಧೇ ಯತ್ರ ದೇವೋ ವೃಷಧ್ವಜಃ ॥ ೨೫ ॥

ಪಾರ್ವತ್ಯಪಿ ಮಹಾವಿಷ್ಣುಂ ಸಸ್ಮಾರ ಮನಸಾ ತದಾ ।
ತಾವದ್ದದರ್ಶ ತಂ ದೇವೀ ಸೋಪವಿಷ್ಟಂ ಸಮೀಪಗಂ ॥ ೨೬ ॥

॥ ಪಾರ್ವತ್ಯುವಾಚ ॥

ವಿಷ್ಣೋ ಜಲಂಧರೋ ದೈತ್ಯಃ ಕೃತವಾನ್ಪರಮಾದ್ಭುತಂ ।
ತತ್ಕಿಂ ನ ವಿದಿತಂ ತೇಽಸ್ತಿ ಚೇಷ್ಟಿತಂ ತಸ್ಯ ದುರ್ಮತೇಃ ॥ ೨೭ ॥

॥ ಶ್ರೀ ಭಗವಾನುವಾಚ ॥

ತೇನೈವ ದರ್ಶಿತಃ ಪಂಥಾ ವಯಮಪ್ಯನ್ವಯಾಮಹೇ ।
ನಾನ್ಯಥಾ ಸ ಭವೇದ್ವಧ್ಯಃ ಪಾತಿವ್ರತ್ಯಾತ್ಸುರಕ್ಷಿತಃ ॥ ೨೮ ॥

---

೨೪. ಆಮೇಲೆ ಪಾರ್ವತಿಯು ಈತನು ದಾನವನೆಂಬುದನ್ನು ತಿಳಿದು ಭಯದಿಂದ ಮರೆಯಾಗಿ ಉತ್ತರ ಮಾನಸಕ್ಕೆ ಹೊರಟು ಹೋದಳು.

೨೫. ಜಾಲಂಧರನು ಅಲ್ಲಿ ಆಕೆಯನ್ನು ಮತ್ತೆ ಕಾಣದೆ ಜಾಗ್ರತೆಯಾಗಿ ಶಿವನು ಇರುವ ಯುದ್ಧರಂಗಕ್ಕೆ ಬಂದನು.

೨೬. ಪಾರ್ವತಿಯು ತನಗೆ ಬಂದ ಕಷ್ಟದಿಂದ ಶ್ರೀ ಮಹಾವಿಷ್ಣುವನ್ನು ಸ್ಮರಿಸಿದಳು. ಒಡನೆಯೇ ಅವನು ಬಂದನು. ಪಾರ್ವತಿಯು ಹತ್ತಿರಕ್ಕೆ ಬಂದ ಆ ವಿಷ್ಣುವನ್ನು ನೋಡಿದಳು.

೨೭. ಪಾರ್ವತಿಯು ಹೇಳಿದಳು—ಎಲೈ ವಿಷ್ಣುವೇ! ದೈತ್ಯನಾದ ಜಲಂಧರನು ಅದ್ಭುತವನ್ನು ಮಾಡಿದನು. ಆ ದುಷ್ಟನ ಚೇಷ್ಟೆಯು ನಿನಗೆ ಗೊತ್ತಿಲ್ಲದಿರುವುದೆ?

೨೮. ಶ್ರೀ ಭಗವಂತನು ಹೇಳಿದನು—ಅವನು ದಾರಿಯನ್ನು ತೋರಿಸಿರುವನು. ಅದನ್ನೇ ನಾವೂ ಅನುಸರಿಸೋಣ. ಅವನ ಹೆಂಡತಿಯ ಪಾತಿವ್ರತ್ಯದಿಂದ ಅವನು ರಕ್ಷಿತನಾಗಿರುವುದರಿಂದ ಅವಳನ್ನು ಮಾಯೆಯಿಂದ ಕೆಡಿಸಿದಲ್ಲದೆ ಅವನು ಸಾಯುವುದಿಲ್ಲ.

॥ ನಾರದ ಉವಾಚ ॥

ಜಗಾಮ ವಿಷ್ಣುರಿತ್ಯುಕ್ತ್ವಾ ಪುನರ್ಜಾಲಂಧರಂ ಪುರಂ ।
ಅಥ ರುದ್ರಶ್ಚ ಗಾಂಧರ್ವಾದ್ವಿಮುಕ್ತಸ್ಸಂಗರೇ ಸ್ಥಿತಃ ॥
ಅಂತರ್ಧಾನಗತಾಂ ಮಾಯಾಂ ದೃಷ್ಟ್ವಾ ಸ ಬುಬುಧೇ ತದಾ ॥ ೨೯ ॥

ತತಶ್ಶಿವೋ ವಿಸ್ಮಿತಮಾನಸಃ ಪುನಃ
ಜಗಾಮ ಯುದ್ಧಾಯ ಜಲಂಧರಂ ರುಷಾ ।
ಸ ಚಾಽಪಿ ದೈತ್ಯಃ ಪುನರಾಗತಂ ಶಿವಂ
ದೃಷ್ಟ್ವಾ ಶರೌಘೈಃ ಸಮವಾಕಿರದ್ರಣೇ ॥ ೩೦ ॥

ಇತಿ ಶ್ರೀ ಮಹಾಪುರಾಣೇ ಪಾದ್ಮೇ ಉತ್ತರಖಂಡೇ ಶ್ರೀ ಕೃಷ್ಣ
ಸತ್ಯಭಾಮಾ ಸಂವಾದೇ ಕಾರ್ತಿಕ ಮಹಾತ್ಮ್ಯೇ ಜಲಂಧರೋ
ಪಾಖ್ಯಾನೇ ಶಿವ ಜಲಂಧರ ಸಂಗ್ರಾಮೋ ನಾಮ
ಚತುರಧಿಕಶತತಮೋಽಧ್ಯಾಯಸ್ಸಮಾಪ್ತಃ

---

೨೯. ನಾರದನು ಹೇಳಿದನು–ಈ ರೀತಿ ಹೇಳಿ ವಿಷ್ಣುವು ಜಾಲಂಧರಪುರಕ್ಕೆ ಹೊರಟುಹೋದನು. ಅನಂತರ ರುದ್ರನು ಆ ಗಾಂಧರ್ವ ಮಾಯೆಯನ್ನು ಬಿಡಿಸಿ ಕೊಂಡು ಯುದ್ಧದಲ್ಲಿ ನಿಂತನು. ಆ ಮಾಯೆಯು ಹೊರಟುಹೋದ ಮೇಲೆ ಆ ಶಿವನಿಗೆ ಎಲ್ಲವೂ ಗೊತ್ತಾಯಿತು.

೩೦. ಶಿವನು ತಾನು ಮಾಯೆಗೆ ಅಧೀನನಾಗಿದ್ದುದಕ್ಕೆ ಆಶ್ಚರ್ಯಪಡುತ್ತಾ ಕೋಪಗೊಂಡು ಜಲಂಧರನ ಮೇಲೆ ಹೋದನು. ಆ ದೈತ್ಯನೂ ಕೂಡ ಶಿವನು ಮತ್ತೆ ಬಂದುದನ್ನು ನೋಡಿ ಬಾಣಗಳಿಂದ ಹೊಡೆದನು.

ಇಂತು ಶ್ರೀ ಪದ್ಮಮಹಾಪುರಾಣದ ಉತ್ತರಖಂಡದ ಶ್ರೀ ಕೃಷ್ಣ
ಸತ್ಯಭಾಮಾ ಸಂವಾದದ ಕಾರ್ತಿಕ ಮಹಿಮೆಯಲ್ಲಿ ಜಲಂಧರೋ
ಪಾಖ್ಯಾನದಲ್ಲಿ ಶಿವ ಜಲಂಧರ ಸಂಗ್ರಾಮ ಎಂಬ
ನೂರನಾಲ್ಕನೆಯ ಅಧ್ಯಾಯವು ಮುಗಿದುದು.



॥ ಶ್ರೀಃ ॥

-X-

# ಅಥ ಶ್ರೀ ಮಹಾಪುರಾಣೇ ಪಾದ್ಮೇ ಉತ್ತರಖಂಡೇ

## ॥ ಪಂಚಾಧಿಕಶತತಮೋಽಧ್ಯಾಯಃ ॥



॥ ನಾರದ ಉವಾಚ ॥

ವಿಷ್ಣುರ್ಜಾಲಂಧರಂ ಗತ್ವಾ ತದ್ದೈತ್ಯಪುಟಭೇದನಂ ।
ಪಾತಿವ್ರತ್ಯಸ್ಯ ಭಂಗಾಯ ವೃಂದಾಯಾಶ್ಚಾಕರೋನ್ಮತಿಂ ॥ ೧ ॥

ಅಥ ವೃಂದಾ ತು ಸಾ ದೇವೀ ಸ್ವಪ್ನಮಧ್ಯೇ ದದರ್ಶ ಹ ।
ಭರ್ತಾರಂ ಮಹಿಷಾರೂಢಂ ತೈಲಾಭ್ಯಕ್ತಂ ದಿಗಂಬರಂ ॥ ೨ ॥

ಕೃಷ್ಣಪ್ರಸೂನಭೂಷಾಢ್ಯಂ ಕ್ರವ್ಯಾದಗಣಸೇವಿತಂ ।
ದಕ್ಷಿಣಾಶಾಂ ಗತಂ ಮುಂಡಂ ತಮಸಾಪ್ಯಾವೃತಂ ತದಾ ॥ ೩ ॥

---

## ನೂರ ಐದನೆಯ ಅಧ್ಯಾಯವು



೧. ನಾರದನು ಹೇಳಿದನು–ವಿಷ್ಣುವು ಜಾಲಂಧರ ಪುರಕ್ಕೆ ಹೋಗಿ ವೃಂದೆಯ ಪಾತಿವ್ರತ್ಯ ಭಂಗದಲ್ಲಿ ಮನಸ್ಸನ್ನು ಮಾಡಿದನು.

೨–೩. ಆಗ ವೃಂದೆಯು ಸ್ವಪ್ನದಲ್ಲಿ ತನ್ನ ಗಂಡನು ಕೋಣನಮೇಲೆ ಕುಳಿತುಕೊಂಡಿರುವಂತೆಯೂ ಎಣ್ಣೆ ಹಚ್ಚಿಕೊಂಡು ಬಟ್ಟೆಯಿಲ್ಲದಿರುವವನನ್ನಾಗಿಯೂ ಕಪ್ಪು ಹೂಗಳನ್ನು ಮುಡಿದುಕೊಂಡು ರಾಕ್ಷಸರಿಂದ ಸೇವಿತನಾಗಿ ದಕ್ಷಿಣದ ದಿಕ್ಕಿಗೆ ಹೋಗುತ್ತಾ ತಲೆಯನ್ನು ಬೋಳಿಸಿಕೊಂಡು ಕತ್ತಲೆಯಲ್ಲಿರುವವನಂತೆಯೂ ಕಂಡಳು.

ಸ್ವಪುರಂ ಸಾಗರೇ ಮಗ್ನಂ ಸಹಸೈವಾತ್ಮನಾ ಸಹ ।
ತತಃ ಪ್ರಬುದ್ಧಾ ಸಾ ಬಾಲಾ ತಂ ಸ್ವಪ್ನಂ ಸಮಚಿಂತಯತ್ ॥ ೪ ॥

ದದರ್ಶೋದಿತಮಾದಿತ್ಯಂ ಸಚ್ಛಿದ್ರಂ ನಿಶ್ಚಲಂ ಮುಹುಃ ।
ತದನಿಷ್ಟಮಿತಿ ಜ್ಞಾತ್ವಾ ರುದತೀ ಭಯವಿಹ್ವಲಾ ॥ ೫ ॥

ಕುತ್ರಚಿನ್ನಾಲಭಚ್ಛರ್ಮ ಗೋಪುರಾಟ್ಟಾಲಭೂಮಿಷು ।
ತತಸ್ಸಖೀದ್ವಯಯುತಾ ನಗರೋದ್ಯಾನಮಾಗಮತ್ ॥ ೬ ॥

ತತ್ರಾಪಿ ಸಾ ಗತಾ ಬಾಲಾ ನಾಲಭತ್ಕುತ್ರಚಿತ್ಸುಖಂ ।
ವನಾದ್ವನಾಂತರಂ ಯಾತಾ ನೈವ ವೇದಾತ್ಮನಸ್ತದಾ ॥ ೭ ॥

ತತೋ ಭ್ರಮಂತೀ ಸಾ ಬಾಲಾ ದದರ್ಶಾತೀವ ಭೀಷಣೌ ।
ರಾಕ್ಷಸೌ ಸಿಂಹವದನೌ ದಂಷ್ಟ್ರಾನಯನಭಾಸುರೌ ॥ ೮ ॥

---

೪. ತನ್ನ ಆ ಜಾಲಂಧರ ಪುರವು ಸಮುದ್ರದಲ್ಲಿ ತನ್ನೊಡನೆಯೇ ಮುಳುಗಿದಂತೆಯೂ ಕಂಡಳು. ಅನಂತರ ಆಕೆಯು ಎಚ್ಚರಗೊಂಡು ತಾನು ಕಂಡ ಸ್ವಪ್ನವನ್ನು ಯೋಚಿಸಿದಳು.

೫-೬. ಆಮೇಲೆ ಸೂರ್ಯನು ಹುಟ್ಟಲು ಆ ಸೂರ್ಯನು ರಂಧ್ರ ಬಿಟ್ಟಂತೆಯೂ ಅಲ್ಲಾಡುತ್ತಿರುವಂತೆಯೂ ಕಂಡಳು. ಅದು ಅನಿಷ್ಟವೆಂದು ತಿಳಿದು ಭಯದಿಂದ ಅಳುತ್ತಾ ಮಹಡಿಯ ಮೇಲಾಗಲಿ ಮಹಡಿಯ ಕೆಳಗಾಗಲಿ ಉತ್ತಮವಾದ ಜಾಗಗಳಲ್ಲಿಯಾಗಲಿ ಎಲ್ಲಿಯೂ ನೆಮ್ಮದಿಯನ್ನು ಹೊಂದಲೇ ಇಲ್ಲ. ಆಮೇಲೆ ಇಬ್ಬರು ಸಖಿಯರನ್ನು ಕರೆದುಕೊಂಡು ಪಟ್ಟಣದ ಉದ್ಯಾನ ವನಕ್ಕೆ ಹೋದಳು.

೭. ಆ ವೃಂದೆಯು ಅಲ್ಲಿಗೂ ಹೋದವಳು ಅಲ್ಲಿಯೂ ಸುಖವಾಗಲಿಲ್ಲ. ಕಾಡಿನಿಂದ ಕಾಡಿಗೆ ಹೋದಳು. ಆದರೂ ತನ್ನ ಕಷ್ಟವು ಹೋಗಲಿಲ್ಲ.

೮. ಹೀಗೆ ಸುತ್ತುತ್ತಿರಲು ಬಹು ಭಯಂಕರರಾದ ಸಿಂಹದಂತೆ ಮುಖವುಳ್ಳ ಕೋರೆದಾಡೆಯುಳ್ಳ ಇಬ್ಬರು ರಾಕ್ಷಸರನ್ನು ನೋಡಿದಳು.

ತೌ ದೃಷ್ಟ್ವಾ ವಿಹ್ವಲಾತೀವ ಪಲಾಯನಪರಾಽಭವತ್ ।
ದದರ್ಶ ತಾಪಸಂ ಶಾಂತಂ ಸಶಿಷ್ಯಂ ಮೌನಮಾಸ್ಥಿತಂ ॥ ೯ ॥

ತತಸ್ತತ್ಕಂಠ ಆಸಜ್ಯ ನಿಜಾಂ ಬಾಹುಲತಾಂ ಭಯಾತ್ ।
ಮುನೇ ಮಾಂ ರಕ್ಷ ಶರಣಮಾಗತಾಮಿತ್ಯಭಾಷತ ॥ ೧೦ ॥

ಮುನಿಸ್ತಾಂ ವಿಹ್ವಲಾಂ ದೃಷ್ಟ್ವಾ ರಾಕ್ಷಸಾನುಗತಾಂ ತದಾ ।
ಹುಂಕಾರೇಣೈವ ತೌ ಘೋರೌ ಚಕಾರ ವಿಮುಖೌ ರುಷಾ ॥ ೧೧ ॥

ತದ್ಧುಂಕಾರಭಯತ್ರಸ್ತೌ ದೃಷ್ಟ್ವಾ ತೌ ವಿಮುಖೌ ಗತೌ
ಪ್ರಣಮ್ಯ ದಂಡವದ್ಭೂಮೌ ವೃಂದಾ ವಚನಮಬ್ರವೀತ್ ॥ ೧೨ ॥

॥ ವೃಂದೋವಾಚ ॥

ರಕ್ಷಿತಾಽಹಂ ತ್ವಯಾ ಘೋರಾದ್ಭಯಾದಸ್ಮಾತ್ಕೃಪಾನಿಧೇ ।
ಕಿಂಚಿದ್ವಿಜ್ಞಪ್ತುಮಿಚ್ಛಾಮಿ ಕೃಪಯಾ ತನ್ನಿಶಾಮಯ ॥ ೧೩ ॥

---

೯. ಅವರನ್ನು ನೋಡಿ ಆಕೆಯು ಬಹುವಾಗಿ ಹೆದರಿ ಓಡುತ್ತಿರಲು ದಾರಿಯಲ್ಲಿ ಶಿಷ್ಯರೊಡನೆ ಕೂಡಿದ ಒಬ್ಬ ತಪಸ್ವಿಯನ್ನು ಕಂಡಳು.

೧೦. ಆಗ ಆಕೆಯು ತನ್ನ ತೋಳುಗಳಿಂದ ಅವನ ಕತ್ತನ್ನು ತಬ್ಬಿಕೊಂಡು ಮುನಿಯೇ! ನಾನು ಶರಣು ಬಂದಿದ್ದೇನೆ. ರಕ್ಷಿಸು. ಎಂದಳು.

೧೧. ರಾಕ್ಷಸರು ಓಡಿಸಿಕೊಂಡು ಬರಲು ಭಯಗೊಂಡಿರುವುದನ್ನು ತಿಳಿದು ಹುಂಕಾರದಿಂದಲೇ ಆ ರಾಕ್ಷಸರು ಓಡುವಂತೆ ಮಾಡಿದನು.

೧೨. ಆ ಋಷಿಯ ಹುಂಕಾರದಿಂದ ಆ ರಾಕ್ಷಸರು ಭಯಪಟ್ಟು ಓಡಿದುದನ್ನು ತಿಳಿದು ಆ ವೃಂದೆಯು ಋಷಿಗೆ ನಮಸ್ಕರಿಸಿ ಇಂತೆಂದಳು.

೧೩. ವೃಂದೆಯು ಹೇಳಿದಳು—ಎಲೈ ಕೃಪಾನಿಧಿಯೇ! ನೀನು ಘೋರವಾದ ಭಯದಿಂದ ನನ್ನನ್ನು ಕಾಪಾಡಿದೆ. ಒಂದು ವಿಷಯವನ್ನು ವಿಜ್ಞಾಪಿಸಿಕೊಳ್ಳಬೇಕೆಂದಿದ್ದೇನೆ. ಕೇಳು.

ಜಲಂಧರೋ ಹಿ ಮೇ ಭರ್ತಾ ರುದ್ರಂ ಯೋದ್ಧುಂ ಗತಃ ಪ್ರಭೋ ।
ಸ ತತ್ರಾಸ್ತಿ ಕಥಂ ಯುದ್ಧೇ ತನ್ಮೇ ಕಥಯ ಸುವ್ರತ　　॥ ೧೪ ॥

॥ ನಾರದ ಉವಾಚ ॥

ಮುನಿಸ್ತದ್ವಾಚಮಾಕರ್ಣ್ಯ ಕೃಪಯೋರ್ಧ್ವಮವೈಕ್ಷತ ।
ತಾವತ್ಕಪೀ ಸಮಾಯಾತೌ ತಂ ಪ್ರಣಮ್ಯಾಗ್ರತಃ ಸ್ಥಿತೌ　　॥ ೧೫ ॥

ತತಸ್ತದ್ಭ್ರೂಲತಾಸಂಜ್ಞಾನಿಯುಕ್ತೌ ಗಗನಂ ಗತೌ ।
ಗತ್ವಾ ಕ್ಷಣಾರ್ಧಾದಾಗತ್ಯ ವಾನರಾವಗ್ರತಃ ಸ್ಥಿತೌ　　॥ ೧೬ ॥

ಶಿರಃಕಬಂಧಹಸ್ತೌ ಚ ದೃಷ್ಟ್ವಾಬ್ಧಿತನಯಸ್ಯ ಸಾ ।
ಪಪಾತ ಮೂರ್ಛಿತಾ ಭೂಮೌ ಭರ್ತೃವ್ಯಸನದುಃಖಿತಾ　　॥ ೧೭ ॥

ಕಮಂಡಲುಜಲೈಸ್ಸಿಕ್ತ್ವಾ ಮುನಿನಾಶ್ವಾಸಿತಾ ತದಾ ।
ಸ್ವಭರ್ತೃಫಾಲೇ ಸಾ ಫಾಲಂ ಕೃತ್ವಾ ದೀನಾ ರುರೋದ ಹ　　॥ ೧೮ ॥

---

೧೪. ನನ್ನ ಗಂಡನು ಜಲಂಧರನು. ಅವನು ರುದ್ರನೊಡನೆ ಯುದ್ಧಕ್ಕೆ ಹೋಗಿರುವನು. ಅವನು ಯುದ್ಧದಲ್ಲಿ ಹೇಗಿರುವನೆಂಬುದನ್ನು ಹೇಳು.

೧೫. ನಾರದನು ಹೇಳಿದನು–ಮುನಿಯು ಆಕೆಯ ಮಾತನ್ನು ಕೇಳಿ ದಯೆಯಿಂದ ಮೇಲಕ್ಕೆ ನೋಡಲು ಎರಡು ಕಪಿಗಳು ಬಂದುವು. ಅವು ಆ ಋಷಿಗೆ ನಮಸ್ಕರಿಸಿ ಎದುರಿಗೆ ಕುಳಿತುಕೊಂಡುವು.

೧೬. ಅವನು ಹುಬ್ಬುಗಳಿಂದಲೇ ಸಂಜ್ಞೆಮಾಡಲು ಅವು ಅಂತರಿಕ್ಷಕ್ಕೆ ನೆಗೆದು ಹೋಗಿ ಕ್ಷಣಾರ್ಧದಲ್ಲಿಯೇ ಬಂದು ಅವನೆದುರಿಗೆ ನಿಂತುಕೊಂಡುವು.

೧೭. ಅವುಗಳ ಕೈಯ್ಯಲ್ಲಿ ಆ ಜಲಂಧರನ ತಲೆಯೂ ಮುಂಡವೂ ಇದ್ದುವು ಅದನ್ನು ನೋಡಿ ಆ ವೃಂದೆಯು ಮೂರ್ಛೆಗೊಂಡು ನೆಲದಮೇಲೆ ಬಿದ್ದಳು.

೧೮. ಆಕೆಯ ಮೇಲೆ ಕಮಂಡಲುವಿನಿಂದ ನೀರನ್ನು ಎರಚಿ ಜ್ಞಾನ ಬರುವಂತೆ ಋಷಿಯು ಮಾಡಲು ಆಕೆಯು ತನ್ನ ಗಂಡನ ಹಣೆಯಲ್ಲಿ ತನ್ನ ಹಣೆಯನ್ನಿಟ್ಟುಕೊಂಡು ಅಳಲು ಮೊದಲುಮಾಡಿದಳು.

|| ವೃಂದೋವಾಚ ||

ಯಃ ಪುರಾ ಸುಖಸಂವಾದೈರ್ವಿನೋದಯಸಿ ಮಾಂ ಪ್ರಭೋ ।
ಸ ಕಥಂ ನ ವದಸ್ಯದ್ಯ ವಲ್ಲಭಾಂ ಮಾಮನಾಗಸಂ || ೧೯ ||

ಯೇನ ದೇವಾಸ್ಸಗಂಧರ್ವಾ ನಿರ್ಜಿತಾ ವಿಷ್ಣುನಾ ಸಹ ।
ಸ ಕಥಂ ತಾಪಸೇನ ತ್ವಂ ತ್ರೈಲೋಕ್ಯವಿಜಯೀ ಹತಃ || ೨೦ ||

|| ನಾರದ ಉವಾಚ ||

ರುದಿತ್ವೇತಿ ತದಾ ವೃಂದಾ ತಂ ಮುನಿಂ ವಾಕ್ಯಮಬ್ರವೀತ್ || ೨೧ ||

|| ವೃಂದೋವಾಚ ||

ಕೃಪಾನಿಧೇ ಮುನಿಶ್ರೇಷ್ಠ ಜೀವಯೈನಂ ಮಮ ಪ್ರಿಯಂ ।
ತ್ವಮೇವಾಸ್ಯ ಪುನಶ್ಶಕ್ತೋ ಜೀವನಾಯ ಮತೋ ಮಮ || ೨೨ ||

|| ನಾರದ ಉವಾಚ ||

ಇತಿ ತದ್ವಾಕ್ಯ ಮಾಕರ್ಣ್ಯ ಪ್ರಹಸನ್ಮುನಿರಬ್ರವೀತ್ || ೨೩ ||

---

೧೯. ವೃಂದೆಯು ಹೇಳಿದಳು–ಎಲೈ ಪ್ರಭುವೇ ? ಹಿಂದೆ ನನ್ನನ್ನು ಸುಖಕರವಾದ ಮಾತುಗಳಿಂದ ಸಂತೋಷಪಡಿಸುತ್ತಿದ್ದೆ. ಅಂತಹ ನೀನು ಈಗ ಏನೂ ತಪ್ಪಿಲ್ಲದಿರುವ ನನ್ನೊಡನೆ ಏಕೆ ಮಾತನಾಡುವುದಿಲ್ಲ ?

೨೦. ಯಾವ ನೀನು ದೇವತೆಗಳನ್ನೂ ಗಂಧರ್ವರನ್ನೂ ವಿಷ್ಣುವನ್ನೂ ಕೂಡ ಯುದ್ಧದಲ್ಲಿ ಜಯಿಸಿ ಮೂರು ಲೋಕದಲ್ಲಿಯೂ ಜಯವನ್ನು ಸಂಪಾದಿಸಿದೆಯೋ ಅಂತಹವನು ತಾಪಸನಾದ ಶಿವನಿಂದ ಹೇಗೆ ಕೊಲ್ಲಲ್ಪಟ್ಟೆ ?

೨೧. ನಾರದನು ಹೇಳಿದನು–ಈ ರೀತಿಯಾಗಿ ವೃಂದೆಯು ಅತ್ತು ಆ ಮುನಿಯನ್ನು ಕುರಿತು ಇಂತೆಂದಳು.

೨೨. ವೃಂದೆಯು ಹೇಳಿದಳು–ಕೃಪಾಕರನಾದ ಋಷಿಯೇ ! ಈ ನನ್ನ ಪ್ರಿಯನನ್ನು ನೀನು ಬದುಕಿಸು. ನೀನು ಇವನನ್ನು ಬದುಕಿಸುವುದರಲ್ಲಿ ಶಕ್ತನೆಂದು ನನಗೆ ಕಾಣುತ್ತದೆ.

೨೩. ನಾರದನು ಹೇಳಿದನು–ಈ ರೀತಿಯಾಗಿ ಹೇಳಿದುದನ್ನು ಋಷಿಯು ಕೇಳಿ ನಗುತ್ತ ಇಂತೆಂದನು.

॥ ಮುನಿರುವಾಚ ॥

ನಾಯಂ ಜೀವಯಿತುಂ ಶಕ್ಯೋ ರುದ್ರೇಣ ನಿಹತೋ ಯುಧಿ ।
ತಥಾಪಿ ತ್ವತ್ಕೃಪಾವಿಷ್ಟ ಏನಂ ಸಂಜೀವಯಾಮ್ಯಹಂ ॥ ೨೪ ॥

॥ ನಾರದ ಉವಾಚ ॥

ಇತ್ಯುಕ್ತ್ವಾಂತರ್ದಧೇ ಯಾವತ್ತಾವತ್ಸಾಗರನಂದನಃ ।
ವೃಂದಾಮಾಲಿಂಗ್ಯ ತದ್ವಕ್ತ್ರಂ ಚುಚುಂಬೇ ಪ್ರೀತಮಾನಸಃ ॥ ೨೫ ॥

ಅಥ ವೃಂದಾಽಪಿ ಭರ್ತಾರಂ ದೃಷ್ಟ್ವಾ ಹರ್ಷಿತಮಾನಸಾ ।
ರೇಮೇ ತದ್ವನಮಧ್ಯಸ್ಥಾ ತದ್ಯುಕ್ತಾ ಬಹುವಾಸರಂ ॥ ೨೬ ॥

ಕದಾಚಿತ್ಸುರತಸ್ಯಾಂತೇ ದೃಷ್ಟ್ವಾ ವಿಷ್ಣುಂ ತಮೇವ ಹಿ ।
ನಿರ್ಭರ್ತ್ಸ್ಯ ಕ್ರೋಧಸಂಯುಕ್ತಾ ವೃಂದಾ ವಚನಮಬ್ರವೀತ್ ॥ ೨೭ ॥

---

೨೪. ಮುನಿಯು ಹೇಳಿದನು–ಯುದ್ಧದಲ್ಲಿ ರುದ್ರನಿಂದ ಕೊಲ್ಲಲ್ಪಟ್ಟ ಇವನನ್ನು ನಾನು ಬದುಕಿಸಲಾರೆ. ಆದರೂ ನಿನ್ನಲ್ಲಿರುವ ದಯೆಯಿಂದ ಈತನನ್ನು ಬದುಕಿಸುತ್ತೇನೆ.

೨೫. ನಾರದನು ಹೇಳಿದನು–ಹೀಗೆಂದು ಹೇಳಿ ಋಷಿಯು ಅಂತರ್ಧಾನನಾಗಲು ಇತ್ತ ಆ ಜಲಂಧರನು ವೃಂದೆಯನ್ನಾಲಿಂಗಿಸಿಕೊಂಡು ಪ್ರೀತಿಯಿಂದ ಆಕೆಯ ಮುಖವನ್ನು ಮುತ್ತಿಟ್ಟನು.

೨೬. ಅನಂತರ ಆ ವೃಂದೆಯು ಗಂಡನನ್ನು ನೋಡಿ ಸಂತೋಷಗೊಂಡ ಮನಸ್ಸುಳ್ಳವಳಾಗಿ ಬಹುದಿನಗಳವರಿಗೂ ಗಂಡನೊಡನೆ ಆ ಕಾಡಿನಲ್ಲಿ ರಮಿಸಿದಳು.

೨೭. ಒಂದುಸಾರಿ ಕ್ರೀಡಿಸಿಯಾದ ಮೇಲೆ ಕೆಲವು ಗುರುತುಗಳಿಂದ ಅತನು ವಿಷ್ಣುವೆಂದು ತಿಳಿದು ಕೋಪದಿಂದ ಅವನನ್ನು ಗದರಿಸಿ ಇಂತೆಂದಳು.

|| ವೃಂದೋವಾಚ ||

ಧಿಕ್ತ್ವೇದಂ ಹರೇ ಶೀಲಂ ಪರದಾರಾಭಿಗಾಮಿನಃ ।
ಜ್ಞಾತೋಽಸಿ ತ್ವಂ ಮಯಾ ಸಮ್ಯ ಙ್ಮಾಯಾಪ್ರಚ್ಛನ್ನತಾಪಸಃ || ೨೮ ||

ಯೌ ತ್ವಯಾ ಮಾಯಯಾ ದ್ವಾಃಸ್ಥೌ ಸ್ವಕೀಯೌ ದರ್ಶಿತೌ ಮಮ ।
ತಾವೇವ ರಾಕ್ಷಸೌ ಭೂತ್ವಾ ಭಾರ್ಯಾಂ ತವ ಹರಿಷ್ಯತಃ || ೨೯ ||

ತ್ವಂ ಚಾಽಪಿ ಭಾರ್ಯಾದುಃಖಾರ್ತಃ ವನೇ ಕಪಿಸಹಾಯವಾನ್ ।
ಭ್ರಮ ಸರ್ಪೇಶ್ವರೇಣಾಽಯಂ ಯತ್ತೇ ಶಿಷ್ಯತ್ವಮಾಗತಃ || ೩೦ ||

|| ನಾರದ ಉವಾಚ ||

ಇತ್ಯುಕ್ತ್ವಾ ಸಾ ತದಾ ವೃಂದಾ ಪ್ರಾವಿಶದ್ಧವ್ಯವಾಹನಂ ।
ವಿಷ್ಣುನಾ ವಾರ್ಯಮಾಣಾಽಪಿ ತಸ್ಯಾಮಾಸಕ್ತಚೇತಸಾ || ೩೧ ||

---

೨೮. ವೃಂದೆಯು ಹೇಳಿದಳು–ಎಲೈ ಹರಿಯೆ? ಈ ನಿನ್ನ ಸ್ವಭಾವವು ಕೆಟ್ಟದ್ದು. ಪರರ ಹೆಂಡತಿಯರನ್ನು ರಮಿಸುವ ನಿನಗೆ ಧಿಕ್ಕಾರವಿರಲಿ. ಮಾಯೆಯಿಂದ ತಾಪಸನ ರೂಪವನ್ನು ಹೊಂದಿದ ನಿನ್ನನ್ನು ನಾನು ತಿಳಿದೆನು.

೨೯. ಎಲೈ ವಿಷ್ಣುವೆ! ನಿನ್ನ ಬಾಗಿಲು ಕಾಯುವವರೇ ಮಾಯೆಯಿಂದ ನನಗೆ ರಾಕ್ಷಸರಾಗಿ ಕಾಣಿಸಿಕೊಂಡರು. ಅವರೇನೇ ರಾಕ್ಷಸರಾಗಿ ನಿನ್ನ ಹೆಂಡತಿಯನ್ನು ಕದ್ದುಕೊಂಡು ಹೋಗುತ್ತಾರೆ.

೩೦. ನೀನು ಹೆಂಡತಿಯ ದುಃಖದಿಂದ ಕೂಡಿಕೊಂಡು ಕಪಿಗಳ ಸಹಾಯವುಳ್ಳವನಾಗಿ ಇಲ್ಲಿ ನಿನಗೆ ಶಿಷ್ಯನಾಗಿರುವ ಈ ಆದಿಶೇಷನಿಂದ ಕೂಡಿಕೊಂಡು ಕಾಡಿನಲ್ಲಿ ಅಲೆದಾಡುತ್ತೀರು.

೩೧. ನಾರದನು ಹೇಳಿದನು–ಆ ವೃಂದೆಯು ಹೀಗೆಂದು ಹೇಳಿ ಅಗ್ನಿಪ್ರವೇಶ ಮಾಡಿದಳು. ಅವಳಲ್ಲಿ ಮೋಹಗೊಂಡ ವಿಷ್ಣುವು ಬೇಡವೆನ್ನುತ್ತಿದ್ದರೂ ನಿಲ್ಲಲಿಲ್ಲ.

ತತೋ ಹರಿಸ್ತಾಮನುಸಂಸ್ಮರನ್ಮುಹುಃ
ವೃಂದಾಚಿತಾಭಸ್ಮರಜೋವಗುಂಠಿತಃ ।
ತತ್ರೈವ ತಸ್ಥೌ ಸುರಸಿದ್ಧಸಂಘೈಃ
ಪ್ರಬೋಧ್ಯಮಾನೋಽಪಿ ಯಯೌ ನ ಶಾಂತಿಂ　　|| ೩೨ ||

ಇತಿ ಶ್ರೀ ಮಹಾಪುರಾಣೇ ಪಾದ್ಮೇ ಉತ್ತರಖಂಡೇ ಶ್ರೀ ಕೃಷ್ಣ
ಸತ್ಯಭಾಮಾ ಸಂವಾದೇ ಕಾರ್ತಿಕ ಮಾಹಾತ್ಮ್ಯೇ ಜಲಂಧರೋ
ಪಾಖ್ಯಾನೇ ವೃಂದಾಯಾವಿಷ್ಣುಸಾಕ್ಷಾತ್ಕಾರೋ ನಾಮ
ಪಂಚಾಧಿಕಶತತಮೋಽಧ್ಯಾಯಸ್ಸಮಾಪ್ತಃ

---

೩೨. ಹರಿಯು ಆಮೇಲೆ ಆಕೆಯನ್ನೇ ಸ್ಮರಿಸುತ್ತಾ ಆ ವೃಂದೆಯ ಚಿತೆಯ ಭಸ್ಮವನ್ನು ಮೈಗೆಲ್ಲಾ ತೊಡೆದುಕೊಳ್ಳುತ್ತಾ ಅಲ್ಲಿಯೇ ಕುಳಿತನು. ದೇವತೆಗಳೂ ಸಿದ್ಧರೂ ಎಷ್ಟು ಹೇಳಿದರೂ ಸಮಾಧಾನವನ್ನು ಹೊಂದಲೇ ಇಲ್ಲ.

ಇಂತು ಶ್ರೀ ಪದ್ಮಮಹಾಪುರಾಣದ ಉತ್ತರಖಂಡದ ಶ್ರೀ ಕೃಷ್ಣ
ಸತ್ಯಭಾಮೆಯರ ಸಂವಾದದ ಕಾರ್ತಿಕ ಮಹಿಮೆಯ ಜಲಂಧರೋ
ಪಾಖ್ಯಾನದಲ್ಲಿ ವೃಂದೆಗೆ ವಿಷ್ಣುಸಾಕ್ಷಾತ್ಕಾರ ಎಂಬ
ನೂರ ಐದನೆಯ ಅಧ್ಯಾಯವು ಮುಗಿದುದು.



॥ ಶ್ರೀಃ ॥

-x-

# ಅಥ ಶ್ರೀ ಮಹಾಪುರಾಣೇ ಪಾದ್ಮೇ ಉತ್ತರಖಂಡೇ

## ॥ ಷಡಧಿಕಶತತಮೋಽಧ್ಯಾಯಃ ॥



॥ ನಾರದ ಉವಾಚ ॥

ತತೋ ಜಲಂಧರೋ ದೃಷ್ಟ್ವಾ ರುದ್ರಮದ್ಭುತವಿಕ್ರಮಂ ।
ಚಕಾರ ಮಾಯಯಾ ಗೌರೀಂ ತ್ರ್ಯಂಬಕಂ ಮೋಹಯಂಸ್ತದಾ ॥ ೧ ॥

ರಥೋಪರಿ ಗತಾಂ ದೃಷ್ಟ್ವಾ ರುದತೀಂ ಪಾರ್ವತೀಂ ಶಿವಃ ।
ನಿಶುಂಭಶುಂಭಮುಖ್ಯೈಶ್ಚ ವಧ್ಯಮಾನಾಂ ದದರ್ಶ ಸಃ ॥ ೨ ॥

ಗೌರೀಂ ತಥಾವಿಧಾಂ ದೃಷ್ಟ್ವಾ ಶಿವೋಽಪ್ಯುದ್ವಿಗ್ನಮಾನಸಃ ।
ಅವಾಙ್ಮುಖಸ್ಸ್ಥಿತಸ್ತೂಷ್ಣೀಂ ವಿಸ್ಮೃತ್ಯ ಸ್ವಪರಾಕ್ರಮಂ ॥ ೩ ॥

---

## ನೂರ ಆರನೆಯ ಅಧ್ಯಾಯವು



೧. ನಾರದನು ಹೇಳಿದನು–ಇತ್ತ ಜಲಂಧರನು ರುದ್ರನು ಬಹು ಪರಾಕ್ರಮಿಯೆಂದು ತಿಳಿದು ಈಶ್ವರನನ್ನು ಬುದ್ಧಿಭ್ರಮಣೆ ಬರುವಂತೆ ಮಾಡುತ್ತ ಮಾಯೆಯಿಂದ ಗೌರಿಯನ್ನು ನಿರ್ಮಿಸಿದನು.

೨. ಆ ಪಾರ್ವತಿಯು ರಥದಮೇಲಿದ್ದು ಅಳುತ್ತಿರುವಂತೆಯೂ ಶುಂಭ ನಿಶುಂಭರು ಆಕೆಯನ್ನು ಕೊಲ್ಲುತ್ತಿರುವಂತೆಯೂ ಶಿವನು ಕಂಡನು.

೩. ಗೌರಿಯು ಹೀಗೆ ದುಃಖಪಡುತ್ತಿರುವುದನ್ನು ನೋಡಿ ತಾನು ದುಃಖಗೊಂಡು ತನ್ನ ಪರಾಕ್ರಮವನ್ನು ಮರೆತು ಮುಖವನ್ನು ತಗ್ಗಿಸಿಕೊಂಡು ನಿಂತನು.

**ತತೋ ಜಲಂಧರೋ ವೇಗಾತ್ತ್ರಿಭಿರ್ವಿವ್ಯಾಸಾಯಕೈಃ ।**
**ಆಪುಂಖಮಗ್ನೈಸ್ತಂ ರುದ್ರಂ ಶಿರಸ್ಯುರಸಿ ಚೋದರೇ ॥ ೪ ॥**

**ತತೋ ಜಜ್ಞೇ ಸ ತಾಂ ಮಾಯಾಂ ವಿಷ್ಣುನಾ ಸುಪ್ರಬೋಧಿತಃ ।**
**ರೌದ್ರರೂಪಧರೋ ಜಾತೋ ಜ್ವಾಲಾಮಾಲಾತಿಭೀಷಣಃ ॥ ೫ ॥**

**ತಸ್ಯಾತೀವ ಮಹಾರೌದ್ರರೂಪಂ ದೃಷ್ಟ್ವಾ ಮಹಾಸುರಾಃ ।**
**ನ ಶೇಕುಃ ಪ್ರಮುಖೇ ಸ್ಥಾತುಂ ಭೇಜಿರೇ ತೇ ದಿಶೋ ದಶ ॥ ೬ ॥**

**ತತಃ ಶಾಪಂ ದದೌ ರುದ್ರಃ ತಯೋಃ ಶುಂಭನಿಶುಂಭಯೋಃ ।**
**ಮಮ ಯುದ್ಧಾದಪಕ್ರಾಂತೌ ಗೌರ್ಯಾ ವಧ್ಯೌ ಭವಿಷ್ಯಥಃ ॥ ೭ ॥**

**ಪುನರ್ಜಲಂಧರೋ ವೇಗಾದ್ವವರ್ಷ ನಿಶಿತೈಶ್ಶರೈಃ ।**
**ಬಾಣಾಂಧಕಾರಸಂಛನ್ನಂ ಯಥಾಭೂತ್ತದ್ಬಲಂ ಮಹತ್ ॥ ೮ ॥**

---

೪. ಆಗ ಜಲಂಧರನು ವೇಗದಿಂದ ಮೂರು ಬಾಣಗಳನ್ನು ತೆಗೆದುಕೊಂಡು ಅವನ್ನು ಬಲವಾಗಿ ಎಳೆದು ರುದ್ರನ ತಲೆಗೂ ಎದೆಗೂ ಹೊಟ್ಟೆಗೂ ಹೊಡೆದನು

೫. ಆಮೇಲೆ ವಿಷ್ಣುವಿನಿಂದ ಎಚ್ಚರಿಸಲ್ಪಟ್ಟವನಾಗಿ ಆ ಮಾಯೆಯನ್ನು ತಿಳಿದುಕೊಂಡು ಅನಂತರ ರೌದ್ರಾಕಾರವನ್ನು ಹೊಂದಿ ಜ್ವಾಲೆಯನ್ನು ಹೊರಹೊಮ್ಮಿಸುತ್ತಿದ್ದನು.

೬. ಆ ರುದ್ರನ ಘೋರವಾದ ರೂಪವನ್ನು ನೋಡಿ ಸಹಿಸಲಾರದೆ ಆ ಆ ದೈತ್ಯರೆಲ್ಲರೂ ಅವನೆದುರಿಗೆ ನಿಲ್ಲಲಾರದೆ ಸಿಕ್ಕಿದ ಕಡೆಗೆ ಓಡಿಹೋದರು.

೭. ಆಗ ರುದ್ರನು ಆ ಶುಂಭ ನಿಶುಂಭರಿಗೆ ನೀವು ನನ್ನೆದುರಿಗೆ ನಿಲ್ಲದೆ ಯುದ್ಧಭೂಮಿಯಿಂದ ಓಡಿ ಹೋದುದರಿಂದ ಗೌರಿಯಿಂದ ನಾಶವನ್ನು ಹೊಂದುತ್ತೀರಿ. ಎಂದು ಶಪಿಸಿದನು.

೮. ಮತ್ತೆ ಜಲಂಧರನು ವೇಗದಿಂದ ಅನೇಕವಾದ ಹರಿತವಾದ ಬಾಣಗಳನ್ನು ಬಿಟ್ಟು ಆ ಸೈನ್ಯವೆಲ್ಲವನ್ನೂ ಬಾಣದಿಂದ ಮುಚ್ಚಿಕೊಳ್ಳುವಂತೆ ಮಾಡಿದನು.

ಯಾವದ್ರುದ್ರಶ್ಚ ಚಿಚ್ಛೇದ ತಸ್ಯಬಾಣಾಂಸ್ತ್ವರಾಯುತಃ ।
ತಾವತ್ಸ ಪರಿಘೇಣಾಶು ಜಘಾನ ವೃಷಭಂ ಬಲೀ ॥ ೯ ॥

ವೃಷಸ್ತೇನ ಪ್ರಹಾರೇಣ ಪರಾವೃತ್ತೋ ರಣಾಂಗಣಾತ್ ।
ರುದ್ರೇಣಾಕೃಷ್ಯಮಾಣೋಽಪಿ ನ ತಸ್ಥೌ ರಣಭೂಮಿಷು ॥ ೧೦ ॥

ತತಃ ಪರಮಸಂಕ್ರುದ್ಧೋ ರುದ್ರೋ ರೌದ್ರವಪುರ್ಧರಃ ।
ಚಕ್ರಂ ಸುದರ್ಶನಂ ವೇಗಾತ್ ಚಿಕ್ಷೇಪಾದಿತ್ಯವರ್ಚಸಂ ॥ ೧೧ ॥

ಪ್ರದಹದ್ರೋದಸೀ ವೇಗಾತ್ತದಾಸಾದ್ಯ ಜಲಂಧರಂ ।
ಜಹಾರ ತಚ್ಛಿರಃ ಕಾಯಾನ್ಮಹದಾಯತಲೋಚನಂ ॥ ೧೨ ॥

ರಥಾತ್ಕಾಯಃ ಪಪಾತೋರ್ವ್ಯಾಂ ನಾದಯನ್ವಸುಧಾತಲಂ ।
ತೇಜಶ್ಚ ನಿರ್ಗತಂ ವೇಗಾತ್ ತದ್ರುದ್ರೇ ಲಯಮಾಗತಂ ॥ ೧೩ ॥

---

೯. ಒಡನೆಯೇ ಆ ರುದ್ರನು ಆ ಜಲಂಧರನ ಬಾಣಗಳನ್ನು ಕತ್ತರಿಸಿದನು. ಇದನ್ನು ನೋಡಿ ಆ ಬಲಿಷ್ಠನಾದ ದೈತ್ಯನು ಪರಿಘವನ್ನು ತೆಗೆದುಕೊಂಡು ಬಸವನನ್ನು ಹೊಡೆದನು.

೧೦. ಆ ಏಟಿನಿಂದ ಆ ಬಸವನು ಯುದ್ಧಭೂಮಿಯಿಂದ ಓಡಿತು. ರುದ್ರನು ಎಳೆದು ನಿಲ್ಲಿಸುತ್ತಿದ್ದರೂ ಅದು ನಿಲ್ಲಲಿಲ್ಲ.

೧೧. ಒಡನೆಯೇ ರುದ್ರನು ಕೋಪಗೊಂಡು ಸೂರ್ಯನಂತೆ ಜ್ವಲಿಸುವ ಸುದರ್ಶನವನ್ನು ತೆಗೆದುಕೊಂಡು ಆ ಜಲಂಧರನ ಮೇಲೆ ಎಸೆದನು.

೧೨. ಆ ಸುದರ್ಶನ ಚಕ್ರವು ವೇಗದಿಂದ ಜ್ವಲಿಸುತ್ತಾ ಆ ಜಲಂಧರನ ಮೇಲೆ ಬಿದ್ದು ಅವನ ವಿಸ್ತಾರವಾದ ಕಣ್ಣುಗಳುಳ್ಳ ತಲೆಯನ್ನು ಕತ್ತರಿಸಿತು.

೧೩. ರಥದಿಂದ ಆ ಜಲಂಧರನ ದೇಹವು ಶಬ್ದಮಾಡುತ್ತಾ ಭೂಮಿಯಲ್ಲಿ ಬಿದ್ದಿತು. ಆಗ ಆ ದೇಹದಿಂದ ಒಂದು ತೇಜಸ್ಸು ಹೊರಟು ಆ ರುದ್ರನಲ್ಲಿ ಸೇರಿಕೊಂಡಿತು.

ವೃಂದಾದೇಹೋದ್ಭವಂ ತೇಜಃ ತದ್ಗೌರ್ಯಾಂ ವಿಲಯಂ ಗತಂ ।
ಅಥ ಬ್ರಹ್ಮಾದಯೋ ದೇವಾ ಹರ್ಷಾದುತ್ಫುಲ್ಲಲೋಚನಾಃ ॥
ಪ್ರಣಮ್ಯ ಶಿರಸಾ ರುದ್ರಂ ಶಶಂಶುರ್ವಿಷ್ಣುಚೇಷ್ಟಿತಂ ॥ ೧೪ ॥

॥ ದೇವಾ ಊಚುಃ ॥

ಮಹಾದೇವ ತ್ವಯಾ ದೇವಾ ರಕ್ಷಿತಾಶ್ಶತ್ರುಜಾದ್ಭಯಾತ್ ।
ಕಿಂಚಿದನ್ಯತ್ಸಮುದ್ಭೂತಂ ತತ್ರ ಕಿಂ ಕರವಾವಹೈ ।
ವೃಂದಾಲಾವಣ್ಯಸಂಭ್ರಾಂತೋ ವಿಷ್ಣುಸ್ತಿಷ್ಠತಿ ಮೋಹಿತಃ ॥ ೧೫ ॥

॥ ರುದ್ರ ಉವಾಚ ॥

ಗಚ್ಛಧ್ವಂ ಶರಣಂ ದೇವಾ ವಿಷ್ಣೋರ್ಮೋಹಾಪನುತ್ತಯೇ ।
ಶರಣ್ಯಾಂ ಮೋಹಿನೀಂ ಮಾಯಾಂ ಸಾ ವಃ ಕಾರ್ಯಂ ಕರಿಷ್ಯತಿ ॥ ೧೬ ॥

॥ ನಾರದ ಉವಾಚ ॥

ಇತ್ಯುಕ್ತ್ವಾಂತರ್ದಧೇ ದೇವಃ ಸಹ ಭೂತಗಣೈಸ್ತದಾ ।
ದೇವಾಶ್ಚ ತುಷ್ಟುವುರ್ಮೂಲಪ್ರಕೃತಿಂ ಭಕ್ತವತ್ಸಲಾಂ ॥ ೧೭ ॥

---

೧೪. ವೃಂದೆಯ ದೇಹದಿಂದ ಹೊರಟ ತೇಜಸ್ಸು ಪಾರ್ವತಿಯ ದೇಹದಲ್ಲಿ ಸೇರಿಕೊಂಡಿತು. ಅನಂತರ ಬ್ರಹ್ಮಾದಿ ದೇವತೆಗಳು ಸಂತೋಷಪಟ್ಟು ರುದ್ರನಿಗೆ ನಮಸ್ಕರಿಸಿ ವಿಷ್ಣುವು ಮಾಡಿದ ಕೆಲಸವನ್ನು ಹೇಳಿದರು.

೧೫. ದೇವತೆಗಳು ಹೇಳಿದರು-ಎಲೈ ಮಹಾದೇವನೆ! ನೀನು ಶತ್ರುಗಳನ್ನು ನಾಶಮಾಡಿ ಅವರಿಂದ ನಮ್ಮನ್ನು ಕಾಪಾಡಿದೆ. ಆದರೆ ಮತ್ತೊಂದು ಕಷ್ಟವು ಪ್ರಾಪ್ತವಾಗಿದೆ. ಅದಕ್ಕೆ ಏನು ಮಾಡೋಣ? ವಿಷ್ಣುವು ವೃಂದೆಯ ಸೌಂದರ್ಯದಲ್ಲಿ ಆಸಕ್ತನಾಗಿ ಮೋಹದಿಂದ ಕುಳಿತಿದ್ದಾನೆ.

೧೬. ರುದ್ರನು ಹೇಳಿದನು–ಎಲೈ ದೇವತೆಗಳಿರಾ! ನೀವು ಆ ವಿಷ್ಣುವಿನ ಮೋಹವು ಹೋಗುವುದಕ್ಕೆ ತ್ರಿಲೋಕರಕ್ಷಕಳಾದ ಮಾಯಾರೂಪಳಾದ ಮೋಹಿನಿಯನ್ನು ಮರೆಹೊಗಿರಿ. ಆಕೆಯು ನಿಮ್ಮ ಕೆಲಸವನ್ನು ಮಾಡಿಕೊಡುತ್ತಾಳೆ.

೧೭. ನಾರದನು ಹೇಳಿದನು–ಹೀಗೆಂದು ಹೇಳಿ ಆ ಶಿವನು ಗಣಗಳೊಡನೆ ಹೊರಟುಹೋದನು. ದೇವತೆಗಳು ಭಕ್ತವತ್ಸಲಳಾದ ಆ ಮೂಲಪ್ರಕೃತಿಯನ್ನು ಸ್ತುತಿಸಿದರು.

|| ದೇವಾ ಊಚುಃ ||

ಯದುದ್ಭವಾಸ್ಸತ್ವರಜಸ್ತಮೋಗುಣಾಃ
ಸರ್ಗಸ್ಥಿತಿಧ್ವಂಸನಿದಾನಕಾರಣಾಃ ।
ಯದಿಚ್ಛಯಾ ವಿಶ್ವಮಿದಂ ಭವಾಭವೌ
ತನೋತಿ ಮೂಲಪ್ರಕೃತಿಂ ನತಾಃ ಸ್ಮ ತಾಂ || ೧೮ ||

ಯಾ ಹಿ ತ್ರಯೋವಿಂಶತಿಭೇದಸಂಜ್ಞಿತಾ
ಜಗತ್ಯಶೇಷೇ ಸಮಧಿಷ್ಠಿತಾ ಪರಾ ।
ಯದ್ರೂಪಕರ್ಮಾಣಿಜಡಾಸ್ತ್ರಯೋಽಪಿ ತೇ
ದೇವಾ ನ ವಿದ್ಯುಃ ಪ್ರಕೃತಿಂ ನತಾಃ ಸ್ಮ ತಾಂ || ೧೯ ||

ಯದ್ಭಕ್ತಿಯುಕ್ತಾಃ ಪುರುಷಾಸ್ತು ನಿತ್ಯಂ-
ದಾರಿದ್ರ್ಯಭೀಮೋಹಹರಾಭವಾದೀನ್ ।
ನ ಪ್ರಾಪ್ನುವಂತ್ಯೇವ ಹಿ ಭಕ್ತವತ್ಸಲಾಂ-
ಸದೈವ ಮೂಲಪ್ರಕೃತಿಂ ನತಾ ಸ್ಮ ತಾಂ || ೨೦ ||

---

೧೮. ಸೃಷ್ಟಿ ಸ್ಥಿತಿ ನಾಶಗಳಿಗೆ ಕಾರಣವಾದ ಸತ್ವ ರಜಸ್ತಮೋ ಗುಣಗಳು ಯಾವಳ ದೆಸೆಯಿಂದ ಹುಟ್ಟಿದುವೋ ಯಾವಳ ಇಚ್ಛೆಯಿಂದ ಈ ಪ್ರಪಂಚವೆಲ್ಲವೂ ಸಂಸಾರ ಮತ್ತು ಮೋಕ್ಷಗಳನ್ನು ಹೊಂದಿರುತ್ತವೆಯೋ ಅಂತಹ ಮೂಲ ಪ್ರಕೃತಿಯನ್ನು ನಮಸ್ಕರಿಸುತ್ತೇವೆ.

೧೯. ಯಾವಳು ಇಪ್ಪತ್ತು ಮೂರು ಭೇದಗಳನ್ನು ಹೊಂದಿ ಪ್ರಪಂಚವನ್ನೆಲ್ಲಾ ವ್ಯಾಪಿಸಿರುವಳೋ ಯಾವಳ ರೂಪ ಮತ್ತು ಕೆಲಸಗಳನ್ನು ತ್ರಿಮೂರ್ತಿಗಳೂ ತಿಳಿಯಲು ಶಕ್ತರಾಗುವುದಿಲ್ಲವೋ ಅಂತಹ ಮೂಲ ಪ್ರಕೃತಿಯನ್ನು ನಮಸ್ಕರಿಸುತ್ತೇವೆ.

೨೦. ಜನರು ಯಾವಳಲ್ಲಿ ಭಕ್ತಿಯನ್ನಿಡುವುದರಿಂದ ದಾರಿದ್ರ್ಯ, ಹೆದರಿಕೆ, ಮೋಹ, ಹಟ್ಟು, ಸಾವುಗಳನ್ನು ಹೊಂದುವುದಿಲ್ಲವೋ ಅಂತಹ ಭಕ್ತವತ್ಸಲಳಾದ ಮೂಲಪ್ರಕೃತಿಯನ್ನು ನಮಸ್ಕರಿಸುತ್ತೇವೆ.

॥ ನಾರದ ಉವಾಚ ॥

ಸ್ತೋತ್ರಮೇತತ್ತ್ರಿಸಂಧ್ಯಂ ಯಃ ಪಠೇದೇಕಾಗ್ರಮಾನಸಃ ।
ದಾರಿದ್ರ್ಯಮೋಹದುಃಖಾನಿ ನ ಕದಾಚಿತ್ಸ್ಪೃಶಂತಿ ತಂ ॥ ೨೧ ॥

ಇತಿ ಸ್ತುವಂತಸ್ತೇ ದೇವಾಸ್ತೇಜೋಮಂಡಲಮಾಸ್ಥಿತಂ ।
ದದೃಶುರ್ಗಗನೇ ತತ್ರ ಜ್ವಾಲಾವ್ಯಾಪ್ತದಿಗಂತರಂ ॥
ತನ್ಮಧ್ಯಾದ್ಭಾರತೀಂ ಸರ್ವೇ ಶುಶ್ರುವುರ್ವ್ಯೋಮಚಾರಿಣೀಂ ॥ ೨೨ ॥

॥ ಆದ್ಯಶಕ್ತಿರುವಾಚ ॥

ಅಹಮೇವ ತ್ರಿಧಾ ಭಿನ್ನಾ ತಿಷ್ಠಾಮಿ ತ್ರಿವಿಧೈರ್ಗುಣೈಃ ।
ಗೌರೀ ಲಕ್ಷ್ಮೀಃ ಸ್ವರಾ ಚೇತಿ ರಜಸ್ಸತ್ವತಮೋಗುಣೈಃ
ತತ್ರ ಗಚ್ಛತ ವಃ ಕಾರ್ಯಂ ವಿಧಾಸ್ಯಂತಿ ಚ ತಾಃ ಸುರಾಃ ॥ ೨೩ ॥

---

೨೧. ನಾರದನು ಹೇಳಿದನು–ಈ ಸ್ತೋತ್ರವನ್ನು ಯಾವನು ಮೂರು ಹೊತ್ತೂ ಒಂದೇ ಮನಸ್ಸಿನಿಂದ ಹೇಳುತ್ತಾನೆಯೋ ಅವನಿಗೆ ದರಿದ್ರತನ ಮೋಹ ದುಃಖಗಳು ಯಾವಾಗಲೂ ಮುಟ್ಟುವುದೇ ಇಲ್ಲ.

೨೨. ದೇವತೆಗಳು ಹೀಗೆ ಸ್ತೋತ್ರ ಮಾಡುತ್ತಿರಲು ಅಂತರಿಕ್ಷದಲ್ಲಿ ಜ್ವಾಲೆಯನ್ನು ಎಲ್ಲ ಕಡೆಯೂ ಬೀರುತ್ತಿರುವ ಒಂದು ತೇಜಸ್ಸಿನ ಉಂಡೆಯನ್ನು ಕಂಡರು. ಅದರ ಮಧ್ಯದಿಂದ ಆ ಆಕಾಶದಲ್ಲಿ ಉಂಟಾದ ಒಂದು ಮಾತನ್ನು ಕೇಳಿದರು.

೨೩. ಆದಿಶಕ್ತಿಯು ಹೇಳಿದಳು–ಎಲೈ ದೇವತೆಗಳಿರಾ! ನಾನೇನೇ ಸತ್ವರಜಸ್ತಮೋಗುಣಗಳಿಂದ ಗೌರೀ, ಲಕ್ಷ್ಮೀ, ಸ್ವರಾ ಎಂಬುದಾಗಿ ಮೂರು ಭಾಗವಾಗಿದ್ದೇನೆ. ಮತ್ತು ಎಲ್ಲಾ ಕಡೆಯಲ್ಲಿಯೂ ಇದ್ದೇನೆ. ನೀವು ಅವರನ್ನು ಶರಣು ಹೊಂದಿರಿ. ಅಲ್ಲಿ ಅವರು ನಿಮ್ಮ ಕೆಲಸವನ್ನು ಮಾಡಿಕೊಡುತ್ತಾರೆ.

॥ ನಾರದ ಉವಾಚ ॥

ಶೃಣ್ವತಾಮಿತಿ ತಾಂ ವಾಚಮನ್ತರ್ಧಾನಮುಗಾನ್ಮಹಃ ।
ದೇವಾನಾಂ ವಿಸ್ಮಯೋತ್ಫುಲ್ಲನೇತ್ರಾಣಾಂ ತತ್ತದಾ ನೃಪ ॥ ೨೪ ॥

ತತಸ್ಸರ್ವೇಽಪಿ ತೇ ದೇವಾಃ ಶ್ರುತ್ವಾ ತದ್ವಾಕ್ಯನೋದಿತಾಃ ।
ಗೌರೀಂ ಲಕ್ಷ್ಮೀಂ ಸ್ವರಾಂ ಚೈವ ಪ್ರಣೇಮುರ್ಭಕ್ತಿತತ್ಪರಾಃ ॥ ೨೫ ॥

ತತಸ್ತಾಸ್ತಾನ್ಸುರಾನ್ದೃಷ್ಟ್ವಾ ಪ್ರಣತಾನ್ಭಕ್ತವತ್ಸಲಾಃ ।
ಬೀಜಾನಿ ಪ್ರದದುಸ್ತೇಭ್ಯೋ ವಾಕ್ಯಾನ್ಯೂಚುಶ್ಚ ಭೂಮಿಪ ॥ ೨೬ ॥

॥ ದೇವ್ಯ ಊಚುಃ ॥

ಇಮಾನಿ ತತ್ರ ಬೀಜಾನಿ ವಿಷ್ಣುರ್ಯತ್ರಾವತಿಷ್ಠತೇ ।
ನಿರ್ವಪಧ್ವಂ ತತಃ ಕಾರ್ಯಂ ಭವತಾಂ ಸಿದ್ಧಿಮೇಷ್ಯತಿ ॥ ೨೭ ॥

---

೨೪. ನಾರದನು ಹೇಳಿದನು–ಆ ಮಾತನ್ನು ಕೇಳುತ್ತಾ ದೇವತೆಗಳು ಆಶ್ಚರ್ಯದಿಂದ ನೋಡುತ್ತಿರುವಂತೆಯೇ ಆ ತೇಜಸ್ಸು ಮಾಯವಾಯಿತು.

೨೫. ಅನಂತರ ಆ ದೇವತೆಗಳು ಆ ಪ್ರಕೃತಿಯ ಮಾತಿನಿಂದ ಪ್ರೇರಿತರಾಗಿ ಆಮಾತನ್ನು ಕೇಳಿ, ಗೌರೀ, ಲಕ್ಷ್ಮೀ, ಸ್ವರಾ ಇವರುಗಳನ್ನು ಭಕ್ತಿ ಪೂರ್ವಕ ವಾಗಿ ನಮಸ್ಕರಿಸಿದರು.

೨೬. ಆಗ ಆ ಮೂವರೂ ನಮಸ್ಕರಿಸುತ್ತಿರುವ ದೇವತೆಗಳನ್ನು ನೋಡಿ ಭಕ್ತರಲ್ಲಿ ವಾತ್ಸಲ್ಯದಿಂದ ಅವರೆಲ್ಲರಿಗೂ ಬೀಜಗಳನ್ನು ಕೊಟ್ಟು ಇಂತೆಂದರು.

೨೭. ದೇವಿಯರು ಹೇಳಿದರು-ನೀವು ವಿಷ್ಣುವಿರುವಲ್ಲಿ ಈ ಬೀಜಗಳನ್ನು ನೆಡಿರಿ. ಅನಂತರ ನಿಮ್ಮ ಕೆಲಸವು ಕೈಗೂಡುತ್ತದೆ.

|| ನಾರದ ಉವಾಚ ||

ತತಸ್ಸುಹೃಷ್ಟಾಸ್ಸುರಸಿದ್ಧಸಂಘಾಃ-
ಪ್ರಗೃಹ್ಯ ಬೀಜಾನಿ ವಿಚಿಕ್ಷಿಪುಶ್ಚ ।
ವೃಂದಾಚಿತಾಭೂಮಿತಲೇ ಸ ಯತ್ರ-
ವಿಷ್ಣುಸ್ಸದಾ ತಿಷ್ಠತಿ ಸೌಖ್ಯವೃತ್ತಿಃ || ೨೮ ||

ಇತಿ ಶ್ರೀ ಮಹಾಪುರಾಣೇ ಪಾದ್ಮೇ ಉತ್ತರಖಂಡೇ ಶ್ರೀ ಕೃಷ್ಣ ಸತ್ಯಭಾಮಾ ಸಂವಾದೇ ಕಾರ್ತಿಕ ಮಾಹಾತ್ಮ್ಯೇ ಜಲಂಧರೋಪಾಖ್ಯಾನೇ ಜಲಂಧರ ವಧೋ ನಾಮ ಷಡಧಿಕಶತತಮೋಽಧ್ಯಾಯಸ್ಸಮಾಪ್ತಃ

---

೨೮. ನಾರದನು ಹೇಳಿದನು-ಆ ಬೀಜವನ್ನು ತಂದು ಆ ದೇವತೆಗಳು ಸಂತೋಷದಿಂದ ವೃಂದೆಯ ಚಿತೆಯಿರುವ ಭೂಮಿ ಪ್ರದೇಶದಲ್ಲಿ ನೆಟ್ಟರು. ಅಲ್ಲಿ ವಿಷ್ಣುವು ಯಾವಾಗಲೂ ಸೌಖ್ಯದಿಂದಿರುವನು.

ಇಂತು ಶ್ರೀ ಪದ್ಮಮಹಾಪುರಾಣದ ಉತ್ತರಖಂಡದ ಶ್ರೀ ಕೃಷ್ಣ ಸತ್ಯಭಾಮೆಯರ ಸಂವಾದದ ಕಾರ್ತಿಕ ಮಹಿಮೆಯ ಜಲಂಧರೋಪಾಖ್ಯಾನದಲ್ಲಿ ಜಲಂಧರನ ವಧ ಎಂಬ ನೂರಆರನೆಯ ಅಧ್ಯಾಯವು ಮುಗಿದುದು.



|| ಶ್ರೀಃ ||

-x-

# ಅಥ ಶ್ರೀ ಮಹಾಪುರಾಣೇ ಪಾದ್ಮೇ ಉತ್ತರಖಂಡೇ

## || ಸಪ್ತಾಧಿಕಶತತಮೋऽಧ್ಯಾಯಃ ||



|| ನಾರದ ಉವಾಚ ||

ಕ್ಷಿಪ್ತೇಭ್ಯಸ್ತತ್ರ ಬೀಜೇಭ್ಯೋ ವನಸ್ಪತ್ಯಸ್ತ್ರಯೋऽಭವನ್ ।
ಧಾತ್ರೀ ಚ ಮಾಲತೀ ಚೈವ ತುಲಸೀ ಚ ನೃಪೋತ್ತಮ || ೧ ||

ಧಾತ್ರ್ಯುದ್ಭವಾ ಸ್ಮೃತಾ ಧಾತ್ರೀ ಮಾಭವಾ ಮಾಲತೀ ಸ್ಮೃತಾ ।
ಗೌರೀಭವಾ ಚ ತುಳಸೀ ತಮುಸ್ಸತ್ವರಜೋಗುಣಾಃ || ೨ ||

ಸ್ತ್ರೀರೂಪಿಣೀರ್ವನಸ್ಪತೀರ್ದೃಷ್ಟ್ವಾ ವಿಷ್ಣುಸ್ತದಾ ನೃಪ ।
ಉತ್ತಸ್ಥೌ ಸಂಭ್ರಮಾದ್ವೃಂದಾರೂಪಾತಿಶಯಮೋಹಿತಃ || ೩ ||

---

## ನೂರಏಳನೆಯ ಅಧ್ಯಾಯವು



೧. ನಾರದನು ಹೇಳಿದನು-ಅಲ್ಲಿ ಹಾಕಿದ ಆ ಬೀಜಗಳಿಂದ ನೆಲ್ಲಿ, ಜಾಜಿ, ತುಳಸಿಯೆಂಬ ಮೂರು ಗಿಡಗಳು ಹುಟ್ಟಿದುವು.

೨. ಸ್ವರೆಯು ಕೊಟ್ಟ ಬೀಜದಿಂದ ನೆಲ್ಲಿಯೂ, ಲಕ್ಷ್ಮಿಯು ಕೊಟ್ಟ ಬೀಜದಿಂದ ಜಾಜಿಯೂ, ಗೌರಿಯು ಕೊಟ್ಟ ಬೀಜದಿಂದ ತುಲಸಿಯೂ ಹುಟ್ಟಿದುವು. ನೆಲ್ಲಿಯು ತಮೋಗುಣವುಳ್ಳದ್ದಾಗಿಯೂ, ಜಾಜಿಯು ಸತ್ವಗುಣವುಳ್ಳದ್ದಾಗಿಯೂ, ತುಲಸಿಯು ರಜೋಗುಣವುಳ್ಳದ್ದಾಗಿಯೂ ಆದುವು.

೩. ಹೆಂಗಸರ ರೂಪವಾದ ಆ ಮರಗಳನ್ನು ನೋಡಿ ವೃಂದೆಯ ರೂಪಿನಲ್ಲಿ ಮೋಹಗೊಂಡಿದ್ದ ಆ ವಿಷ್ಣುವು ಅವಸರದಿಂದ ಎದ್ದನು.

ದೃಷ್ಟ್ವಾಶ್ಚ ತೇನ ತಾ ರಾಗಾತ್ಕಾಮಾಸಕ್ತೇನ ಚೇತಸಾ ।
ತಂ ಚಾಪಿ ತುಳಸೀ ಧಾತ್ರೀ ರಾಗೇಣೈವ ವ್ಯಲೋಕಯತ್ ॥ ೪ ॥

ಯಚ್ಚ ಲಕ್ಷ್ಮ್ಯಾ ಪುರಾ ಬೀಜಮೀರ್ಷ್ಯಯೈವ ಸಮರ್ಪಿತಂ ।
ತಸ್ಮಾತ್ತದುದ್ಭವಾ ನಾರೀ ತಸ್ಮಿನ್ನೀರ್ಷ್ಯಾಯುತಾಽಭವತ್ ॥ ೫ ॥

ಅತಸ್ಸಾ ಬರ್ಬರೀತ್ಯಾಖ್ಯಾಮವಾಪ ಚಾತಿಗರ್ಹಿತಾಂ ।
ಧಾತ್ರೀತುಲಸ್ಯೌ ತದ್ರಾಗಾತ್ತಸ್ಯ ಪ್ರೀತಿಪದೇ ಸದಾ ॥ ೬ ॥

ತತೋ ವಿಸ್ಮೃತದುಃಖೋಽಸೌ ವಿಷ್ಣುಸ್ತಾಭ್ಯಾಂ ಸಹೈವ ತು ।
ವೈಕುಂಠಮಗಮದ್ಧೃಷ್ಟಃ ಸರ್ವದೇವನಮಸ್ಕೃತಃ ॥ ೭ ॥

ಕಾರ್ತಿಕೋದ್ಯಾಪನೇ ವಿಷ್ಣೋಸ್ತಸ್ಮಾತ್ಪೂಜಾ ವಿಧೀಯತೇ ।
ತುಲಸೀಮೂಲದೇಶೇ ತು ಪ್ರೀತಿದಾ ಸಾಯತಃ ಸ್ಮೃತಾ ॥ ೮ ॥

---

೪. ಕಾಮಾಸಕ್ತವಾದ ಮನಸ್ಸುಳ್ಳ ಆ ವಿಷ್ಣುವು ಅವನ್ನು ಅಕ್ಕರೆಯಿಂದ ನೋಡಿದನು. ಆ ವಿಷ್ಣುವನ್ನೂ ಆ ತುಳಸಿ ನೆಲ್ಲಿಗಳೂ ಪ್ರೀತಿಯಿಂದ ನೋಡಿದುವು.

೫. ಲಕ್ಷ್ಮಿಯು ತಾನು ಆ ಬೀಜವನ್ನು ಹೊಟ್ಟೆಕಿಚ್ಚಿನಿಂದ ಹಾಕಿದುದರಿಂದ ಅದರಿಂದ ಹುಟ್ಟಿದ ಸ್ತ್ರೀ ರೂಪವಾದ ಗಿಡವು ಹೊಟ್ಟೆಕಿಚ್ಚುಳ್ಳದ್ದಾಯಿತು.

೬. ಆದುದರಿಂದಲೇ ಅದಕ್ಕೆ ಬರ್ಬರವೆಂಬ ಹೆಸರು ಬಂದಿತು. ಧಾತ್ರಿ ತುಳಸಿಗಳು ಅವನನ್ನು ಪ್ರೀತಿಯಿಂದ ನೋಡಿದುದರಿಂದ ಅವನ ಪ್ರೀತಿಗೆ ಪಾತ್ರವಾದುವು.

೭. ಆಗ ವಿಷ್ಣುವು ದುಃಖವನ್ನು ಮರೆತು ಆ ನೆಲ್ಲಿ ತುಳಸಿಯರೊಡನೆ ಕೂಡಿಕೊಂಡು ದೇವತೆಗಳಿಂದ ಹೊಗಳಲ್ಪಡುತ್ತಾ ವೈಕುಂಠಕ್ಕೆ ಹೋದನು.

೮. ಆದುದರಿಂದಲೇ ಕಾರ್ತಿಕದ ಉದ್ಯಾಪನೆಯಲ್ಲಿ ವಿಷ್ಣುವಿಗೆ ಪೂಜೆಯನ್ನು ಮಾಡಲೇ ಬೇಕು. ಆ ಪೂಜೆಯು ತುಳಸಿಯ ಬುಡದಲ್ಲಿ ಆದರೆ ಬಹು ಪ್ರೀತಿಯನ್ನುಂಟುಮಾಡುತ್ತದೆ.

ತುಳಸೀಕಾನನಂ ರಾಜನ್ ಗೃಹೇ ಯಸ್ಯಾವತಿಷ್ಠತೇ ।
ತದ್ಗೃಹಂ ತೀರ್ಥರೂಪಂ ತು ನ ಯಾಂತಿ ಯಮಕಿಂಕರಾಃ ॥ ೯ ॥

ಸರ್ವಪಾಪಹರಂ ಪುಣ್ಯಂ ಕಾಮದಂ ತುಳಸೀವನಂ ।
ರೋಪಯಂತಿ ನರಶ್ರೇಷ್ಠಾಸ್ತೇ ನ ಪಶ್ಯಂತಿ ಭಾಸ್ಕರಿಂ ॥ ೧೦ ॥

ದರ್ಶನಂ ನರ್ಮದಾಯಾಸ್ತು ಗಂಗಾಸ್ನಾನಂ ತಥೈವ ಚ ।
ತುಲಸೀವನಸಂಸರ್ಗಃ ಸಮಮೇತತ್ತ್ರಯಂ ಸ್ಮೃತಂ ॥ ೧೧ ॥

ರೋಪಣಾತ್ಪಾಲನಾತ್ಸೇಕಾದ್ದರ್ಶನಾತ್ಸ್ಪರ್ಶನಾನ್ನೃಣಾಂ ।
ತುಳಸೀ ದಹತೇ ಪಾಪಂ ವಾಙ್ಮನಃಕಾಯಸಂಚಿತಂ ॥ ೧೨ ॥

ತುಳಸೀಮಂಜರೀಭಿರ್ಯಃ ಕುರ್ಯಾದ್ಧರಿಹರಾರ್ಚನಂ ।
ನ ಸ ಗರ್ಭಗೃಹಂ ಯಾತಿ ಮುಕ್ತಿಭಾಗೀ ನ ಸಂಶಯಃ ॥ ೧೩ ॥

---

೯. ಎಲೈ ದೊರೆಯೆ ! ತುಳಸಿಯ ವನವು ಯಾವನ ಮನೆಯಲ್ಲಿ ಇರುತ್ತದೆಯೋ ಅವನ ಮನೆಯು ತೀರ್ಥರೂಪವಾದುದು. ಅಲ್ಲಿಗೆ ಯಮನ ಆಳುಗಳು ಬರುವುದಿಲ್ಲ.

೧೦. ಆ ತುಳಸಿಯು ಪಾಪವನ್ನು ನಾಶಮಾಡುತ್ತದೆ. ಇಷ್ಟವಾದುದನ್ನು ಕೊಡುತ್ತದೆ. ಈ ತುಳಸಿಯ ವನವನ್ನು ಬೆಳೆಸುವವರು ಯಮನನ್ನು ನೋಡುವುದಿಲ್ಲ.

೧೧. ನರ್ಮದಾ ದರ್ಶನ, ಗಂಗಾ ಸ್ನಾನ, ತುಲಸಿಯ ವನದಲ್ಲಿ ಸಂಬಂಧ ಇವು ಮೂರು ಒಂದೇ ರೀತಿಯಾದ ಪುಣ್ಯವನ್ನು ಕೊಡುತ್ತವೆ.

೧೨. ತುಳಸಿಯನ್ನು ಬೆಳಸುವುದರಿಂದಲೂ, ಕಾಪಾಡುವುದರಿಂದಲೂ, ನೋಡುವುದರಿಂದಲೂ, ನೀರು ಹಾಕುವುದರಿಂದಲೂ, ಮುಟ್ಟುವುದರಿಂದಲೂ, ಮನುಷ್ಯನು ಮನೋ ವಾಕ್ಕಾಯಗಳಿಂದ ಮಾಡಿದ ಪಾಪಗಳೆಲ್ಲವನ್ನೂ ನಾಶಮಾಡಿಕೊಳ್ಳುತ್ತಾನೆ.

೧೩. ತುಳಸಿಯ ಗೊಂಚಲುಗಳಿಂದ ಯಾವನು ಶಿವನ ಮತ್ತು ವಿಷ್ಣುವಿನ ಪೂಜೆಯನ್ನು ಮಾಡುತ್ತಾನೆಯೋ ಅವನು ಮತ್ತೆ ಜನ್ಮವನ್ನು ಎತ್ತುವುದಿಲ್ಲ. ಮುಕ್ತಿಯನ್ನು ಹೊಂದುತ್ತಾನೆ.

ಪುಷ್ಕರಾದೀನಿ ತೀರ್ಥಾನಿ ಗಂಗಾದ್ಯಾಸ್ಸರಿತಸ್ತಥಾ ।
ವಾಸುದೇವಾದಯೋ ದೇವಾಸ್ತಿಷ್ಠಂತಿ ತುಳಸೀದಳೇ ॥ ೧೪ ॥

ತುಳಸೀಮಂಜರೀಯುಕ್ತೋ ಯಸ್ತು ಪ್ರಾಣಾನ್ವಿಮುಂಚತಿ ।
ವಿಷ್ಣೋಸ್ಸಾಯುಜ್ಯಮಾಪ್ನೋತಿ ಸತ್ಯಂ ಸತ್ಯಂ ನೃಪೋತ್ತಮ ॥ ೧೫ ॥

ತುಳಸೀಮೃತ್ತಿಕಾಲಿಪ್ತೋ ಯಸ್ತು ಪ್ರಾಣಾನ್ವಿಮುಂಚತಿ ।
ಯಮೋಽಪಿ ನೇಕ್ಷಿತುಂ ಶಕ್ತೋ ಯುಕ್ತಂ ಪಾಪಶತೈರಪಿ ॥ ೧೬ ॥

ತುಳಸೀಕಾಷ್ಠಜಂ ಯಸ್ತು ಚಂದನಂ ಧಾರಯೇನ್ನರಃ ।
ತದ್ದೇಹಂ ನ ಸ್ಪೃಶೇತ್ಪಾಪಂ ಕ್ರಿಯಮಾಣಮಿಹೇಹ ಯತ್ ॥ ೧೭ ॥

ತುಳಸೀವಿಪಿನಚ್ಛಾಯಾ ಯತ್ರ ಯತ್ರ ಭವೇನ್ನೃಪ ।
ತತ್ರ ಶ್ರಾದ್ಧಂ ಪ್ರಕುರ್ವೀತ ಪಿತೃಣಾಂ ದತ್ತಮಕ್ಷಯಂ ॥ ೧೮ ॥

---

೧೪. ಪುಷ್ಕರವೇ ಮುಂತಾದ ತೀರ್ಥಗಳೂ, ಗಂಗೆಯೇ ಮುಂತಾದ ನದಿಗಳೂ, ವಾಸುದೇವನೇ ಮೊದಲಾದ ದೇವರೂ ಇವರುಗಳು ಯಾವಾಗಲೂ ತುಳಸಿಯ ದಳದಲ್ಲಿರುತ್ತಾರೆ.

೧೫. ತುಳಸಿಯ ಮಂಜರಿಯನ್ನು ಹಾಕಿಕೊಂಡು ಯಾವನು ಪ್ರಾಣಗಳನ್ನು ಬಿಡುತ್ತಾನೆಯೋ ಅವನು ವಿಷ್ಣುವಿನ ಸಾಯುಜ್ಯವನ್ನು ಹೊಂದುತ್ತಾನೆ. ಇದು ಸತ್ಯವಾದ ಮಾತು.

೧೬. ತುಳಸಿಯ ಬುಡದ ಮಣ್ಣನ್ನು ಯಾವನು ಮೈಗೆ ಬಳಿದುಕೊಂಡು ಪ್ರಾಣಗಳನ್ನು ಬಿಡುವನೋ ಅವನು ಅನೇಕ ಪಾಪಗಳನ್ನು ಮಾಡಿದ್ದರೂ ಕೂಡ ಯಮನು ಅವನನ್ನು ನೋಡಲಾರನು.

೧೭. ತುಳಸಿಯ ಕಾಷ್ಠದಿಂದ ಗಂಧವನ್ನು ತೇದು ಧರಿಸಿಕೊಂಡರೆ ಆ ಮನುಷ್ಯನು ಪಾಪವನ್ನು ಮಾಡುತ್ತಿದ್ದರೂ ಆ ಪಾಪಗಳು ಅವನಿಗೆ ಅಂಟುವುದಿಲ್ಲ.

೧೮. ತುಳಸಿಯ ಗಿಡಗಳ ನೆರಳು ಇದ್ದಲ್ಲಿ ಶ್ರಾದ್ಧವನ್ನು ಮಾಡಿದರೆ ಅದು ಪಿತೃಗಳಿಗೆ ಬಹುವಾಗಿ ಅಕ್ಷಯವಾಗುತ್ತದೆ.

ಧಾತ್ರೀಚ್ಛಾಯಾಸು ಯಃ ಕುರ್ಯಾತ್ಪಿಂಡದಾನಂ ನೃಪೋತ್ತಮ ।
ಮುಕ್ತಿಂ ಪ್ರಯಾಂತಿ ಪಿತರಃ ತಸ್ಯ ಯೇ ನರಕೇ ಸ್ಥಿತಾಃ ॥ ೧೯ ॥

ಮೂರ್ಧ್ನಿ ಪಾಣೌ ಮುಖೇ ಚೈವ ದೇಹೇ ಚ ನೃಪಸತ್ತಮ ।
ಧತ್ತೇ ಧಾತ್ರೀಫಲಂ ಯಸ್ತು ಸ ವಿಜ್ಞೇಯೋ ಹರಿಸ್ಸ್ವಯಂ ॥ ೨೦ ॥

ಧಾತ್ರೀಫಲಂ ಚ ತುಳಸೀ ಮೃತ್ತಿಕಾ ದ್ವಾರಕೋದ್ಭವಾ ।
ಯಸ್ಯ ದೇಹೇ ಸ್ಥಿತಾ ನಿತ್ಯಂ ಸ ಜೀವನ್ಮುಕ್ತ ಉಚ್ಯತೇ ॥ ೨೧ ॥

ಧಾತ್ರೀಫಲವಿಮಿಶ್ರೈಸ್ತು ತುಳಸೀಪತ್ರಮಿಶ್ರಿತೈಃ ।
ಜಲೈಸ್ಸ್ನಾತಿ ನರಸ್ತಸ್ಯ ಗಂಗಾಸ್ನಾನಫಲಂ ಸ್ಮೃತಂ ॥ ೨೨ ॥

ದೇವಾರ್ಚನಂ ತತಃ ಕುರ್ಯಾದ್ಧಾತ್ರೀಪತ್ರೈಃ ಫಲೈರಪಿ ।
ಸುವರ್ಣಪುಷ್ಪೈರ್ವಿವಿಧೈರರ್ಚನಸ್ಯಾಪ್ನುಯಾತ್ ಫಲಂ ॥ ೨೩ ॥

---

೧೯. ನೆಲ್ಲಿಯ ಗಿಡದ ಕೆಳಗಡೆ ಶ್ರಾದ್ಧವನ್ನು ಮಾಡಿ ಪಿಂಡ ದಾನವನ್ನು ಮಾಡಿದರೆ ಅವನ ಪಿತೃಗಳು ನರಕದಲ್ಲಿದ್ದರೂ ಮುಕ್ತಿಯನ್ನು ಹೊಂದುತ್ತಾರೆ.

೨೦. ತಲೆ, ಕೈ, ಮುಖ, ದೇಹ ಇವುಗಳಲ್ಲಿ ಯಾವನು ನೆಲ್ಲಿಯಕಾಯಿಯನ್ನು ಧರಿಸಿರುವನೋ ಅವನು ಪ್ರತ್ಯಕ್ಷನಾದ ವಿಷ್ಣುವೆಂದೇ ತಿಳಿಯಬೇಕು.

೨೧. ನೆಲ್ಲಿಯಕಾಯಿ, ತುಳಸೀ, ದ್ವಾರಕೆಯ ಮೃತ್ತಿಕೆ ಇವುಗಳು ಯಾವನ ದೇಹದಲ್ಲಿ ನಿತ್ಯವೂ ಇರುತ್ತವೆಯೋ ಅವನು ಜೀವನ್ಮುಕ್ತನೆಂದು ಹೇಳಿಸಿಕೊಳ್ಳುತ್ತಾನೆ.

೨೨. ನೆಲ್ಲಿಯಕಾಯಿ ಮತ್ತು ತುಳಸಿಯ ದಳಗಳನ್ನು ಹಾಕಿದ ನೀರಿನಿಂದ ಸ್ನಾನಮಾಡಿದವನು ಗಂಗೆಯಲ್ಲಿ ಸ್ನಾನವನ್ನು ಮಾಡಿದ ಫಲವನ್ನು ಹೊಂದುತ್ತಾನೆ.

೨೩. ನೆಲ್ಲಿಯ ಎಲೆಗಳಿಂದಲೂ ಕಾಯಿಗಳಿಂದಲೂ ದೇವರನ್ನು ಪೂಜಿಸಿದರೆ ಚಿನ್ನದ ಹೂವಿನಿಂದ ಪೂಜೆಮಾಡಿದ ಫಲವನ್ನು ಹೊಂದುತ್ತಾನೆ.

ತೀರ್ಥಾನಿ ಮುನಯೋ ದೇವಾ ಯಜ್ಞಾಸ್ಸರ್ವೇಽಪಿ ಕಾರ್ತಿಕೇ ।
ನಿತ್ಯಂ ಧಾತ್ರೀಂ ಸಮಾಶ್ರಿತ್ಯ ತಿಷ್ಠಂತ್ಯರ್ಕೇ ತುಲಾಸ್ಥಿತೇ ॥ ೨೪ ॥

ದ್ವಾದಶ್ಯಾಂ ತುಳಸೀಪತ್ರಂ ಧಾತ್ರೀಪತ್ರಂ ತು ಕಾರ್ತಿಕೇ ।
ಲುನಾತಿ ಸ ನರೋ ಗಚ್ಛೇನ್ನಿರಯಾನತಿಗರ್ಹಿತಾನ್ ॥ ೨೫ ॥

ಧಾತ್ರೀಛಾಯಾಂ ಸಮಾಶ್ರಿತ್ಯ ಕಾರ್ತಿಕೇಽನ್ನಂ ಭುನಕ್ತಿ ಯಃ ।
ಅನ್ನಸಂಸರ್ಗಜಂ ಪಾಪಂ ಆವರ್ಷಂ ತಸ್ಯ ಗಚ್ಛತಿ ॥ ೨೬ ॥

ಧಾತ್ರೀಮೂಲೇ ತು ಯೋ ವಿಷ್ಣುಂ ಕಾರ್ತಿಕೇಽರ್ಚಯತೇ ನರಃ ।
ವಿಷ್ಣೋಃ ಕ್ಷೇತ್ರೇಷು ಸರ್ವೇಷು ಪೂಜಿತಸ್ತೇನ ಸರ್ವದಾ ॥ ೨೭ ॥

ಧಾತ್ರೀತುಲಸ್ಯೋರ್ಮಾಹಾತ್ಮ್ಯಮಪಿ ದೇವಶ್ಚತುರ್ಮುಖಃ ।
ನ ಸಮರ್ಥೋ ಭವೇದ್ವಕ್ತುಂ ಯಥಾ ದೇವಸ್ಯ ಶಾರ್ಙ್ಗಿಣಃ ॥ ೨೮ ॥

---

೨೪. ತೀರ್ಥಗಳು, ಮುನಿಗಳು, ದೇವತೆಗಳು, ಯಜ್ಞಗಳು ಇವುಗಳೆಲ್ಲಾ ಸೂರ್ಯನು ತುಲಾರಾಶಿಯನ್ನು ಹೊಂದಿ ಕಾರ್ತಿಕ ಮಾಸ ಬಂದಿರುವಾಗ ನೆಲ್ಲಿಯನ್ನು ಆಶ್ರಯಿಸಿಕೊಂಡಿರುತ್ತಾರೆ.

೨೫. ದ್ವಾದಶಿಯದಿನ ತುಳಸಿಯ ಎಲೆಯನ್ನೂ ಕಾರ್ತಿಕದಲ್ಲಿ ನೆಲ್ಲಿಯ ಎಲೆಯನ್ನೂ ಕೀಳುವ ಮನುಷ್ಯನು ಬಹು ಉಗ್ರವಾದ ನರಕಗಳನ್ನು ಹೊಂದುತ್ತಾನೆ.

೨೬. ನೆಲ್ಲಿಯ ನೆರಳಲ್ಲಿ ಕಾರ್ತಿಕ ಮಾಸದಲ್ಲಿ ಊಟಮಾಡುವವನು ಅನ್ನದ ಸಂಬಂಧದಿಂದ ಬಂದಿರುವ ಆ ವರ್ಷದ ಪಾಪಗಳೆಲ್ಲವನ್ನೂ ಕಳೆದು ಕೊಳ್ಳುತ್ತಾನೆ.

೨೭. ಕಾರ್ತಿಕ ಮಾಸದಲ್ಲಿ ನೆಲ್ಲಿಯ ಮರದ ಕೆಳಗಡೆ ವಿಷ್ಣುವನ್ನು ಪೂಜಿಸಿದರೆ ಎಲ್ಲಾ ಕ್ಷೇತ್ರದಲ್ಲಿಯೂ ಆತನನ್ನು ಪೂಜಿಸಿದ ಫಲವುಂಟಾಗುತ್ತದೆ.

೨೮. ನೆಲ್ಲಿ ತುಳಸಿಗಳ ಮಹಿಮೆಯನ್ನು ನಾಲ್ಕು ಮುಖವುಳ್ಳ ಬ್ರಹ್ಮನೂ ಕೂಡ ವಿಷ್ಣುವಿನ ಮಹಿಮೆಯನ್ನು ಹೇಗೆ ವರ್ಣಿಸಲಾರನೋ ಹಾಗೆಯೇ ವರ್ಣಿಸಲಾರನು.

ಧಾತ್ರೀತುಲಸ್ಯುದ್ಭವಕಾರಣಂ ಯಃ-
ಶೃಣೋತಿ ಯಃ ಶ್ರಾವಯತೇ ಚ ಭಕ್ತ್ಯಾ ।
ವಿಧೂತಪಾಪ್ಮಾ ಸಹ ಪೂರ್ವಜೈಸ್ಸಃ-
ಸ್ವರ್ಗಂ ವ್ರಜತ್ಯಗ್ರವಿಮಾನಸಂಸ್ಥಃ ॥ ೨೯ ॥

ಇತಿ ಶ್ರೀ ಮಹಾಪುರಾಣೇ ಪಾದ್ಮೇ ಉತ್ತರಖಂಡೇ ಶ್ರೀ ಕೃಷ್ಣ ಸತ್ಯಭಾಮಾ ಸಂವಾದೇ ಕಾರ್ತಿಕ ಮಾಹಾತ್ಮ್ಯೇ ಜಲಂಧರೋಪಾಖ್ಯಾನೇ ಧಾತ್ರೀ ತುಲಸ್ಯೋರ್ಮಹಿಮ ಕಥನಂ ನಾಮ ಸಪ್ತಾಧಿಕಶತತಮೋಽಧ್ಯಾಯಸ್ಸಮಾಪ್ತಃ

---

೨೯. ಧಾತ್ರೀ ತುಳಸಿಗಳ ಹುಟ್ಟುವಿಕೆಯ ಕಾರಣವನ್ನು ಯಾವನು ಕೇಳುತ್ತಾನೆಯೋ ಮತ್ತು ಯಾವನು ಹೇಳುತ್ತಾನೆಯೋ ಅವರುಗಳು ತಮ್ಮ ಪಾಪಗಳನ್ನೆಲ್ಲಾ ಕಳೆದುಕೊಂಡು ತಮ್ಮ ಪೂರ್ವದವರೊಡನೆ ವಿಮಾನದಲ್ಲಿ ಸ್ವರ್ಗಕ್ಕೆ ಹೋಗುತ್ತಾರೆ.

ಇಂತು ಶ್ರೀ ಪದ್ಮಮಹಾಪುರಾಣದ ಉತ್ತರಖಂಡದ ಶ್ರೀ ಕೃಷ್ಣ ಸತ್ಯಭಾಮೆಯರ ಸಂವಾದದ ಕಾರ್ತಿಕ ಮಹಿಮೆಯ ಜಲಂಧರೋಪಾಖ್ಯಾನದಲ್ಲಿ ನೆಲ್ಲಿ ಮತ್ತು ತುಳಸಿಯರ ಮಹಿಮೆಯ ವರ್ಣನ ಎಂಬ ನೂರ ಏಳನೆಯ ಅಧ್ಯಾಯವು ಮುಗಿದುದು.



॥ ಶ್ರೀಃ ॥

-X-

# ಅಥ ಶ್ರೀ ಮಹಾಪುರಾಣೇ ಪಾದ್ಮೇ ಉತ್ತರಖಂಡೇ

## ॥ ಅಷ್ಟಾಧಿಕಶತತಮೋಽಧ್ಯಾಯಃ ॥



॥ ಪೃಥುರುವಾಚ ॥

ಸೇತಿಹಾಸಮಿದಂ ಬ್ರಹ್ಮನ್ ಮಾಹಾತ್ಮ್ಯಂ ಕಥಿತಂ ತ್ವಯಾ ।
ಅತ್ಯಾಶ್ಚರ್ಯಕರಂ ಸಮ್ಯಕ್ ತುಲಸ್ಯಾಸ್ತು ಶ್ರುತಂ ಮಯಾ ॥ ೧ ॥

ಯದೂರ್ಜವ್ರತಿನಃ ಪುಂಸಃ ಫಲಂ ಮಹದುದೀರಿತಂ ।
ತನ್ಮೇ ಬ್ರೂಹಿ ಮುನಿಶ್ರೇಷ್ಠ ಕೇನ ಚೀರ್ಣಮಿದಂ ವ್ರತಂ ॥ ೨ ॥

॥ ನಾರದ ಉವಾಚ ॥

ಆಸೀತ್ಸಹ್ಯಾದ್ರಿವಿಷಯೇ ಕರವೀರಪುರೇ ಪುರಾ ।
ಬ್ರಾಹ್ಮಣೋ ಧರ್ಮವಿತ್ಕಶ್ಚಿದ್ಧರ್ಮದತ್ತ ಇತಿ ಸ್ಮೃತಃ ॥ ೩ ॥

---

## ನೂರ ಎಂಟನೆಯ ಅಧ್ಯಾಯವು



೧. ಪೃಥುವು ಹೇಳಿದನು–ಎಲೈ ನಾರದನೆ! ಇತಿಹಾಸದೊಡನೆ ಕೂಡಿದ ಈ ಮಹಿಮೆಗಳನ್ನು ನೀನು ಹೇಳಿದೆ. ಅತ್ಯಾಶ್ಚರ್ಯಕರವಾದ ಈ ತುಲಸಿಯ ಮಹಿಮೆಯನ್ನು ನಾನು ಕೇಳಿದೆನು.

೨. ಕಾರ್ತಿಕದ ವ್ರತಮಾಡಿದವನಿಗೆ ಯಾವ ಫಲವನ್ನು ಹೇಳಿದೆಯೋ ಅದನ್ನೂ ಈ ವ್ರತವನ್ನು ಪೂರ್ವದಲ್ಲಿ ಯಾರು ಮಾಡಿದರೆಂಬುದನ್ನೂ ದಯವಿಟ್ಟು ನನಗೆ ಹೇಳು.

೩. ನಾರದನು ಹೇಳಿದನು–ಸಹ್ಯ ಪರ್ವತದ ಬಳಿಯಿರುವ ಕರವೀರಪುರದಲ್ಲಿ ಧರ್ಮವನ್ನು ಬಲ್ಲ ಒಬ್ಬ ಬ್ರಾಹ್ಮಣನಿದ್ದನು. ಅವನ ಹೆಸರು ಧರ್ಮದತ್ತನೆಂದು.

ವಿಷ್ಣುವ್ರತಕರಸ್ಸಮ್ಯಗ್ವಿಷ್ಣುಪೂಜಾರತಸ್ಸದಾ ।
ದ್ವಾದಶಾಕ್ಷರವಿದ್ಯಾಯಾಂ ಜಪನಿಷ್ಠೋಽತಿಥಿಪ್ರಿಯಃ ॥ ೪ ॥

ಕದಾಚಿತ್ಕಾರ್ತಿಕೇ ಮಾಸಿ ಹರಿಜಾಗರಣಾಯ ಸಃ ।
ರಾತ್ರ್ಯಾಂ ತುರ್ಯಾಂಶಶೇಷಾಯಾಂ ಜಗಾಮ ಹರಿಮಂದಿರಂ ॥ ೫ ॥

ಹರಿಪೂಜೋಪಕರಣಾನ್ ಪ್ರಗೃಹ್ಯ ವ್ರಜತಾ ತದಾ ।
ತೇನ ದೃಷ್ಟಾ ಸಮಾಯಾತಾ ರಾಕ್ಷಸೀ ಭೀಮನಿಸ್ವನಾ ॥ ೬ ॥

ವಜ್ರದಂಷ್ಟ್ರಾ ಲಲಜ್ಜಿಹ್ವಾ ನಿಮಗ್ನಾ ರಕ್ತಲೋಚನಾ ।
ದಿಗಂಬರಾ ಶುಷ್ಕಮಾಂಸಾ ಲಂಬೋಷ್ಠೀ ಘರ್ಘರಸ್ವನಾ ॥ ೭ ॥

ತಾಂ ದೃಷ್ಟ್ವಾ ಭಯವಿತ್ರಸ್ತಃ ಕಂಪಿತಾಽವಯವಸ್ತದಾ ।
ಪೂಜೋಪಕರಣೈಸ್ಸರ್ವೈಃ ಪಯೋಭಿಶ್ಚಾಹನದ್ರುಷಾ ॥ ೮ ॥

---

೪. ಯಾವಾಗಲೂ ವಿಷ್ಣುವಿನ ಸಂಬಂಧನಾದ ವ್ರತಗಳನ್ನೇ ಆಚರಿಸುತ್ತಿದ್ದನು ವಿಷ್ಣು ಪೂಜೆಯನ್ನು ನಿತ್ಯವೂ ಮಾಡುತ್ತಾ ದ್ವಾದಶಾಕ್ಷರೀ ಜಪವನ್ನು ಮಾಡುತ್ತಾ ಅತಿಥಿ ಸತ್ಕಾರವನ್ನು ಮಾಡುತ್ತಿದ್ದನು.

೫. ಹೀಗಿರಲು ಒಂದು ಸಾರಿ ಕಾರ್ತಿಕ ಮಾಸದಲ್ಲಿ ಜಾಗರಣೆಗೋಸ್ಕರ ರಾತ್ರಿಯ ನಾಲ್ಕನೆಯ ಜಾವದಲ್ಲಿ ಹರಿಮಂದಿರಕ್ಕೆ ಜಾಗರಣೆಗೋಸ್ಕರ ಹೋದನು.

೬. ಹರಿಯ ಪೂಜೆಗೆ ಬೇಕಾದ ಪದಾರ್ಥಗಳನ್ನು ತೆಗೆದುಕೊಂಡು ಹೋಗುತ್ತಿರಲು ಒಬ್ಬ ರಾಕ್ಷಸಿಯು ಭಯಂಕರವಾಗಿ ಕೂಗುತ್ತಾ ಬರುವುದನ್ನು ಕಂಡನು.

೭. ಅವಳ ಕೋರೆ ದಾಡೆಗಳು ಗಟ್ಟಿಯಾಗಿದ್ದುವು. ನಾಲಗೆಯು ಅಲ್ಲಾಡುತ್ತಿದ್ದಿತು. ಕಣ್ಣುಗಳು ಕೆಂಪಗಿದ್ದುವು. ಬೆತ್ತಲೆಯಾಗಿದ್ದಳು. ಬಡಕಲಾಗಿದ್ದಳು. ತುಟಿಗಳು ಜೋತಾಡುತ್ತಿದ್ದುವು. ಸ್ವರವು ಕಠಿಣವಾಗಿದ್ದಿತು.

೮. ಆಕೆಯನ್ನು ನೋಡಿ ಭಯಪಟ್ಟು ನಡುಗುತ್ತ ಕೊನೆಗೆ ಧೈರ್ಯಮಾಡಿಕೊಂಡು ಆ ಪೂಜೆಯ ಪದಾರ್ಥಗಳಿಂದಲೂ ನೀರಿನಿಂದಲೂ ಕೋಪದಿಂದ ಹೊಡೆದನು.

**ಸಂಸ್ಮೃತ್ಯ ಚ ಹರೇರ್ನಾಮ ತುಳಸೀಯುಕ್ತವಾರಿಣಾ ।**
**ಸೋಽಹನತ್ಪಾತಕಂ ಯಸ್ಮಾತ್ತಸ್ಮಾತ್ತಸ್ಯಾ ಹ್ಯಗಾಲ್ಲಯಂ ॥ ೯ ॥**

**ಅಥ ಸಂಸ್ಮೃತ್ಯ ಸಾ ಪೂರ್ವಜನ್ಮಕರ್ಮವಿಪಾಕಜಾಂ ।**
**ಸ್ವಾಂ ದಶಾಮಬ್ರವೀದ್ವಿಪ್ರಂ ದಂಡವಚ್ಚ ಪ್ರಣಮ್ಯ ಸಾ ॥ ೧೦ ॥**

**॥ ಕಲಹೋವಾಚ ॥**

**ಪೂರ್ವಕರ್ಮವಿಪಾಕೇನ ದಶಾಮೇತಾಂ ಗತಾಸ್ಮ್ಯಹಂ ।**
**ತತ್ಕಥಂ ತು ಪುನರ್ವಿಪ್ರ ಯಾಸ್ಯಾಮ್ಯಹಂ ಗತಿಮುತ್ತಮಾಂ ॥ ೧೧ ॥**

**॥ ನಾರದ ಉವಾಚ ॥**

**ತಾಂ ದೃಷ್ಟ್ವಾ ಪ್ರಣತಾಮಗ್ರೇ ವದಮಾನಾಂ ಸ್ವಕರ್ಮ ತತ್ ।**
**ಅತೀವ ವಿಸ್ಮಿತೋ ವಿಪ್ರಃ ತದಾ ವಚನಮಬ್ರವೀತ್ ॥ ೧೨ ॥**

---

೯. ಆ ಧರ್ಮದತ್ತನು ಶ್ರೀ ಹರಿಯ ನಾಮವನ್ನು ಹೇಳುತ್ತಾ ತುಳಸಿಯಿಂದ ಕೂಡಿದ ನೀರನ್ನು ಮೇಲೆರಚಿದುದರಿಂದ ಅವಳ ಪಾಪವೆಲ್ಲವೂ ನಾಶವಾಯಿತು.

೧೦ ಅನಂತರ ಆಕೆಯು ಪೂರ್ವ ಕರ್ಮದ ಫಲವನ್ನು ಸ್ಮರಿಸಿಕೊಂಡು ಆತನಿಗೆ ದೀರ್ಘದಂಡ ಪ್ರಣಾಮ ಮಾಡಿ ತನ್ನ ಸ್ಥಿತಿಯನ್ನು ಹೇಳಿಕೊಂಡಳು.

೧೧. ಕಲಹೆಯು ಹೇಳಿದಳು-ಎಲೈ ಬ್ರಾಹ್ಮಣನೇ! ಹಿಂದಿನ ಜನ್ಮದ ಪಾಪದಿಂದ ಈ ರೀತಿಯಾದ ಸ್ಥಿತಿಯನ್ನು ಹೊಂದಿದ್ದೇನೆ. ಆದುದರಿಂದ ನಾನು ಏನು ಮಾಡಿದರೆ ಉತ್ತಮವಾದ ಗತಿಯನ್ನು ಹೊಂದುತ್ತೇನೆ ?

೧೨. ನಾರದನು ಹೇಳಿದನು-ಆಕೆಯು ಎದುರಿಗೆ ನಮಸ್ಕಾರ ಮಾಡುತ್ತಾ ತನ್ನ ವಿಷಯವನ್ನು ಹೇಳಿಕೊಳ್ಳುತ್ತಿರುವುದನ್ನು ಕೇಳಿ ಆ ಬ್ರಾಹ್ಮಣನು ಆಶ್ಚರ್ಯಪಟ್ಟು ಆಕೆಯನ್ನು ಕುರಿತು ಇಂತೆಂದನು.

॥ ಧರ್ಮದತ್ತ ಉವಾಚ ॥

ಕೇನ ಕರ್ಮವಿಪಾಕೇನ ತ್ವಂ ದಶಾಮೀದೃಶೀಂ ಗತಾ ।
ಕುತಸ್ತ್ವಂ ಕಾ ಚ ಕಿಂ ಶೀಲಾ ತತ್ಸರ್ವಂ ಕಥಯಸ್ವ ಮೇ ॥ ೧೩ ॥

॥ ಕಲಹೋವಾಚ ॥

ಸೌರಾಷ್ಟ್ರನಗರೇ ಬ್ರಹ್ಮನ್ ಭಿಕ್ಷುನಾಮಾಽಭವದ್ದ್ವಿಜಃ ।
ತಸ್ಯಾಽಹಂ ಗೃಹಿಣೀ ಪೂರ್ವಂ ಕಲಹಾಖ್ಯಾಽತಿಭೀಷಣಾ ॥ ೧೪ ॥

ನ ಕದಾಚಿನ್ಮಯಾ ಭರ್ತುರ್ವಚಸಾಽಪಿ ಶುಭಂ ಕೃತಂ ।
ನಾಽರ್ಪಿತಂ ತಸ್ಯ ಮೃಷ್ಟಾನ್ನಂ ಭರ್ತುರ್ವಚನಭಂಗಯಾ ॥ ೧೫ ॥

ಕಲಹಪ್ರಿಯಯಾ ನಿತ್ಯಂ ಮಯೋದ್ವಿಗ್ನಸ್ತದಾ ದ್ವಿಜಃ ।
ಪರಿಣೇತುಂ ತದಾನ್ಯಾಂ ಸಃ ಮತಿಂ ಚಕ್ರೇ ಪತಿರ್ಮಮ ॥ ೧೬ ॥

---

೧೩. ಧರ್ಮದತ್ತನು ಹೇಳಿದನು–ಯಾವ ಪಾಪ ಶೇಷದಿಂದ ನೀನು ಈ ರೀತಿಯಾದಂತಹ ಸ್ಥಿತಿಯನ್ನು ಹೊಂದಿದೆ. ನೀನು ಎಲ್ಲಿಂದ ಬಂದೆ ? ನೀನಾರು? ನಿನ್ನ ನಡತೆಯೇನು ? ಅದೆಲ್ಲವನ್ನೂ ನನಗೆ ಹೇಳು.

೧೪. ಕಲಹೆಯು ಹೇಳಿದಳು-ಎಲೈ ಬ್ರಾಹ್ಮಣನೆ! ಸೌರಾಷ್ಟ್ರ ದೇಶದಲ್ಲಿ ಭಿಕ್ಷುವೆಂಬ ಬ್ರಾಹ್ಮಣನಿದ್ದನು. ನಾನು ಅವನ ಹೆಂಡತಿಯಾಗಿದ್ದೆನು. ನನ್ನ ಹೆಸರು ಕಲಹೆಯೆಂದು.

೧೫. ನಾನು ಒಂದು ಸಾರಿಯಾದರೂ ಗಂಡನಿಗೆ ಬಾಯಿಮಾತಿನಿಂದಲಾದರೂ ಒಳ್ಳೆಯದನ್ನಾಡಲಿಲ್ಲ. ಅವನಿಗೆ ಒಳ್ಳೆಯ ರುಚಿಯಾದ ಅನ್ನವನ್ನೂ ಹಾಕಲಿಲ್ಲ. ಯಾವಾಗಲೂ ಅವನ ಮಾತನ್ನು ಕೇಳದೆ ತಿರಸ್ಕರಿಸುತ್ತಿದ್ದೆನು

೧೬. ಯಾವಾಗಲೂ ನಾನು ಜಗಳವಾಡುತ್ತಿದ್ದುದರಿಂದ ನನ್ನಿಂದ ಆತನು ದುಃಖಗೊಂಡು ಮತ್ತೊಬ್ಬಳನ್ನು ಮದುವೆಯಾಗಲು ಮನಸ್ಸು ಮಾಡಿದನು.

**ತತೋ ಗರಂ ಸಮಾದಾಯ ಪ್ರಾಣಾಸ್ತ್ಯಕ್ತಾ ಮಯಾ ದ್ವಿಜ ।**
**ಅಥ ಬಧ್ವಾ ವಧ್ಯಮಾನಾಂ ಮಾಂ ಚ ನಿನ್ಯುರ್ಯಮಾನುಗಾಃ ॥**
**ಯಮಶ್ಚ ಮಾಂ ತದಾ ದೃಷ್ಟ್ವಾ ಚಿತ್ರಗುಪ್ತಮಪೃಚ್ಛತ ॥ ೧೭ ॥**

**॥ ಯಮ ಉವಾಚ ॥**

**ಅನಯಾ ಕಿಂ ಕೃತಂ ಕರ್ಮ ಚಿತ್ರಗುಪ್ತ ವಿಲೋಕಯ ।**
**ಪ್ರಾಪ್ನೋತ್ಯೇಷಾ ಕರ್ಮಫಲಂ ಶುಭಂ ವಾಪ್ಯಥವಾಽಶುಭಂ ॥ ೧೮ ॥**

**॥ ಕಲಹೋವಾಚ ॥**

**ಚಿತ್ರಗುಪ್ತಸ್ತದಾ ವಾಕ್ಯಂ ಭರ್ತ್ಸಯನ್ಮಾಮುವಾಚ ಹ ॥ ೧೯ ॥**

**॥ ಚಿತ್ರಗುಪ್ತ ಉವಾಚ ॥**

**ಅನಯಾ ತು ಶುಭಂ ಕರ್ಮ ಕೃತಂ ಕಿಂಚಿನ್ನ ವಿದ್ಯತೇ ।**
**ಮಿಷ್ಟಾನ್ನಂ ಭುಂಜಮಾನೇಯಂ ನ ಭರ್ತರಿ ತದರ್ಪಿತಂ ॥ ೨೦ ॥**

---

೧೭. ಆಗ ನಾನು ವಿಷವನ್ನು ತೆಗೆದುಕೊಂಡು ಪ್ರಾಣವನ್ನು ಬಿಟ್ಟೆನು. ಅನಂತರ ಯಮನ ಆಳುಗಳು ನನ್ನನ್ನು ಕಟ್ಟಿ ಹೊಡೆಯುತ್ತಾ ಯಮನ ಬಳಿಗೆ ಕರೆದುಕೊಂಡು ಹೋದರು. ಅಲ್ಲಿ ಯಮನು ನನ್ನನ್ನು ನೋಡಿ ಚಿತ್ರಗುಪ್ತನನ್ನು ಕೇಳಿದನು.

೧೮. ಯಮನು ಹೇಳಿದನು-ಎಲೈ ಚಿತ್ರಗುಪ್ತನೆ! ಇವಳು ಮಾಡಿರುವ ಕರ್ಮವೇನು ? ನೋಡು. ಈಕೆಯು ಒಳ್ಳೆಯ ಕರ್ಮ ಫಲವನ್ನೋ ಅಥವಾ ಕೆಟ್ಟಕರ್ಮಗಳ ಫಲವನ್ನೋ ಯಾವುದನ್ನು ಹೊಂದಬೇಕೋ ಹೇಳು.

೧೯. ಕಲಹೆಯು ಹೇಳಿದಳು-ಚಿತ್ರಗುಪ್ತನು ನನ್ನನ್ನು ಹೆದರಿಸುತ್ತ ಯಮನನ್ನು ಕುರಿತು ಇಂತೆಂದನು

೨೦. ಚಿತ್ರಗುಪ್ತನು ಹೇಳಿದನು- ಇವಳು ಒಂದು ಶುಭಕರ್ಮವನ್ನೂ ಮಾಡಿಯೇ ಇಲ್ಲ. ಒಳ್ಳೆಯ ಉತ್ತಮವಾದ ಅನ್ನವನ್ನು ಇವಳು ಊಟಮಾಡಿದರೂ ಗಂಡನಿಗೆ ಅದನ್ನು ಸ್ವಲ್ಪವೂ ಹಾಕುತ್ತಲೇ ಇರಲಿಲ್ಲ.

ಅತಸ್ತು ವಲ್ಗುಲೀಯೋನ್ಯಾಂ ಸ್ವವಿಷ್ಠಾದಾವತಿಷ್ಠತು ।
ಭರ್ತುರ್ದ್ವೇಷ ಕರೀ ತ್ವೇಷಾ ನಿತ್ಯಂ ಕಲಹಕಾರಿಣೀ ॥ ೨೧ ॥

ವಿಷ್ಠಾದಾ ಸೂಕರೀಯೋನ್ಯಾಂ ತಸ್ಮಾತ್ತಿಷ್ಠತ್ವಿಯಂ ಹರೇ ।
ಪಾಕಭಾಂಡೇ ಸದಾ ಭುಂಕ್ತೇ ನಿತ್ಯಂ ಚೈಷಾ ಯತಸ್ತತಃ ॥ ೨೨ ॥

ತಸ್ಮಾದ್ದೋಷಾದ್ಬಿಡಾಲೀ ತು ಸ್ವಜಾತಾಽಪತ್ಯಭಕ್ಷಿಣೀ ।
ಭರ್ತಾರಮಪಿ ಚೋದ್ದಿಶ್ಯ ಹ್ಯಾತ್ಮಘಾತಃ ಕೃತೋಽನಯಾ ॥ ೨೩ ॥

ತಸ್ಮಾತ್ಪ್ರೇತಶರೀರೇಽಪಿ ತಿಷ್ಠತ್ವೇಷಾಽತಿನಿಂದಿತಾ ।
ಅತಶ್ಚೈಷಾ ಮರುದೇಶಂ ಪ್ರಾಪಿತವ್ಯಾ ಭಟೈಸ್ಸಹ ॥ ೨೪ ॥

ತತ್ರ ಪ್ರೇತಶರೀರಸ್ಥಾ ಚಿರಂ ತಿಷ್ಠತ್ವಿಯಂ ತತಃ ।
ಇತ್ಥಂ ಯೋನಿತ್ರಯಂ ಚೈಷಾ ಭುನಕ್ತ್ಯಶುಭಕಾರಿಣೀ ॥ ೨೫ ॥

---

೨೧. ಆದುದರಿಂದ ಈಕೆಯು ಹಲ್ಲಿಯ ಯೋನಿಯಲ್ಲಿ ಹುಟ್ಟಿ ತನ್ನ ಅಮೇಧ್ಯವನ್ನೇ ತಾನು ತಿನುತ್ತಾ ಇರಲಿ. ಈಕೆಯು ಗಂಡನೊಡನೆ ಯಾವಾಗಲೂ ದ್ವೇಷವನ್ನು ಮಾಡುತ್ತಾ ಜಗಳವಾಡುತ್ತಿದ್ದಳು.

೨೨-೨೫. ಆದುದರಿಂದ ಈಕೆಯು ಅಮೇಧ್ಯವನ್ನು ತಿನ್ನುತ್ತಾ ಹಂದಿಯ ಜಾತಿಯಲ್ಲಿ ಹುಟ್ಟಬೇಕು. ಈಕೆಯು ನಿತ್ಯವೂ ಅಡಿಗೆಯ ಪಾತ್ರೆಯಲ್ಲಿಯೇ ತಿನ್ನುತ್ತಿದ್ದುದರಿಂದ ಆ ದೋಷಕ್ಕೀಡಾಗಿ ಬೆಕ್ಕಾಗಿ ಹುಟ್ಟಲಿ. ಮತ್ತು ತನ್ನಮರಿಗಳನ್ನು ತಾನೇ ತಿನ್ನಲಿ. ಗಂಡನನ್ನು ದ್ವೇಶಿಸಿ ಈಕೆಯು ಪ್ರಾಣವನ್ನು ಕಳೆದುಕೊಂಡುದುದರಿಂದ ಪ್ರೇತ ಶರೀರದಲ್ಲಿಯೂ ಕೂಡ ಬಹು ನಿಂದಿತವಾದ ದೇಹವನ್ನು ಹೊಂದಿರಲಿ. ಆದುದರಿಂದ ಈಕೆಯನ್ನು ಭಟರೊಡನೆ ಮರು ಪ್ರದೇಶಕ್ಕೆ ಕಳುಹಿಸು. ಅಲ್ಲಿ ಪ್ರೇತ ಶರೀರದಿಂದ ಬಹುಕಾಲವಿರಲಿ. ಈ ರೀತಿ ಮೂರು ಜನ್ಮಗಳಲ್ಲಿ ಹುಟ್ಟಿ ತನ್ನ ಪಾಪಗಳನ್ನು ಈಕೆಯು ಅನುಭವಿಸಲಿ.

॥ ಕಲಹೋವಾಚ ॥

ಸಾಽಹಂ ಪಂಚಶತಾಬ್ದಾನಿ ಪ್ರೇತದೇಹಸ್ಥಿತಾ ಕಿಲ ।
ಕ್ಷುತ್ತೃಡ್ಭ್ಯಾಂ ಪೀಡಿತಾ ನಿತ್ಯಂ ದುಃಖಿತಾ ಸ್ವೇನ ಕರ್ಮಣಾ ॥ ೨೬ ॥

ತತಃ ಕ್ಷುತ್ಪೀಡಿತಾಽಽವಿಶ್ಯ ಶರೀರಂ ವಣಿಜಸ್ತ್ವಹ ।
ಆಯಾತಾ ದಕ್ಷಿಣಂ ದೇಶಂ ಕೃಷ್ಣಾವೇಣ್ಯೋಸ್ತು ಸಂಗಮೇ ॥ ೨೭ ॥

ತತ್ತೀರೇ ಸಂಸ್ಥಿತಾ ಯಾವತ್ತಾವತ್ತಸ್ಯ ಶರೀರತಃ ।
ಶಿವವಿಷ್ಣುಗಣೈರ್ದೂರಮಪಾಕೃಷ್ಟಾ ಬಲಾದಹಂ ॥ ೨೮ ॥

ತತಃ ಕ್ಷುತ್ಕ್ಷಾಮಯಾ ದೃಷ್ಟೋ ಮಯಾ ಹಿ ತ್ವಂ ದ್ವಿಜೋತ್ತಮ ।
ತ್ವದ್ಧಸ್ತತುಲಸೀವಾರಿಸಂಸರ್ಗಹತಪಾಪಯಾ ॥ ೨೯ ॥

ತತ್ಕೃಪಾಂ ಕುರು ವಿಪ್ರೇಂದ್ರ ಕಥಂ ಮುಕ್ತಾ ಭವಾಮ್ಯಹಂ ।
ಯೋನಿತ್ರಯಾದುಗ್ರಭಾವಾದಸ್ಮಾಚ್ಚ ಪ್ರೇತದೇಹತಃ ॥ ೩೦ ॥

---

೨೬. ಕಲಹೆಯು ಹೇಳಿದಳು–ಅಂತಹ ನಾನು ನನ್ನ ಕರ್ಮದ ದುಃಖದಿಂದ ಹಸಿವು ಬಾಯಾರಿಕೆಗಳಿಂದ ಕೂಡಿದವಳಾಗಿ ಈ ಪ್ರೇತದೇಹವನ್ನು ಐನೂರು ವರ್ಷಗಳವರೆಗೆ ಅನುಭವಿಸಿದೆನು.

೨೭. ಆಗ ಹಸಿವಿನಿಂದ ಕೂಡಿ ಒಬ್ಬ ವರ್ತಕನ ದೇಹವನ್ನು ಹೊಂದಿ ಈ ದಕ್ಷಿಣದೇಶದ ಕೃಷ್ಣವೇಣಿಯಸಂಗಮಕ್ಕೆ ಬಂದೆನು.

೨೮. ಅವನ ಶರೀರವನ್ನು ಆವರಿಸಿಕೊಂಡು ಆ ಕೃಷ್ಣವೇಣಿಯ ತೀರದಲ್ಲಿದ್ದುಕೊಂಡಿರಲು ಶಿವಗಣಗಳೂ ವಿಷ್ಣುಗಣಗಳೂ ನನ್ನನ್ನು ಬಲಾತ್ಕಾರದಿಂದ ದೂರಕ್ಕೊಯ್ದರು.

೨೯. ಆಗ ಹಸಿವುಬಾಯಾರಿಕೆಗಳಿಂದ ಕೂಡಿದ ನಾನು ನಿನ್ನನ್ನು ನೋಡಿ ಹಿಡಿಯಲು ಬಂದೆನು. ನಿನ್ನ ಕೈಯ್ಯಲ್ಲಿದ್ದ ಈ ತುಲಸಿಯ ನೀರನ್ನು ಎರಚಿದುದರಿಂದ ನನ್ನ ಪಾಪವು ನಾಶವಾಯಿತು.

೩೦. ಎಲೈ ಬ್ರಾಹ್ಮಣನೆ ಆದುದರಿಂದ ಈ ಬಹು ಕೆಟ್ಟದಾದ ಪ್ರೇತಭಾವದಿಂದಲೂ ಮೂರು ವಿಧವಾದ ಜನ್ಮಗಳಿಂದಲೂ ಹೇಗೆ ಮುಕ್ತಳಾಗಲಿ ? ಎಂಬುದನ್ನು ದಯಮಾಡಿ ಹೇಳು.

|| ನಾರದ ಉವಾಚ ||

ಇತ್ಥಂ ನಿಶಮ್ಯ ಕಲಹಾವಚನಂ ದ್ವಿಜಾಗ್ರಣೀಃ
ಸತ್ಕರ್ಮಪಾಕಭಯವಿಸ್ಮಯದುಃಖಯುಕ್ತಃ ।
ತದ್ಗ್ಲಾನಿದರ್ಶನಕೃಪಾಚಲಚಿತ್ತವೃತ್ತಿಃ
ಧ್ಯಾತ್ವಾ ಚಿರಂ ಸ ವಚನಂ ನಿಜಗಾದ ದುಃಖಾತ್ || ೩೧ ||

ಇತಿ ಶ್ರೀ ಮಹಾಪುರಾಣೇ ಪಾದ್ಮೇ ಉತ್ತರಖಂಡೇ ಶ್ರೀ ಕೃಷ್ಣ ಸತ್ಯಭಾಮಾ ಸಂವಾದೇ ಕಾರ್ತಿಕ ಮಹಾತ್ಮ್ಯೇ ಕಲಹೋಪಾಖ್ಯಾನಂ ನಾಮ ಅಷ್ಟಾಧಿಕಶತತಮೋಽಧ್ಯಾಯಸ್ಸಮಾಪ್ತಃ

---

೩೧. ನಾರದನು ಹೇಳಿದು—ಈ ರೀತಿಯಾಗಿ ಕಲಹೆಯು ಹೇಳಿದ ಮಾತನ್ನು ಆ ಬ್ರಾಹ್ಮಣನುಕೇಳಿ ಆಕೆಯ ಪಾಪದಿಂದ ಉಂಟಾದ ಆಶ್ಚರ್ಯ ದುಃಖಗಳೊಡನೆ ಕೂಡಿದವನಾಗಿ ಆಕೆಯ ದುಃಖವನ್ನು ನೋಡಿ ಮನಸ್ಸು ಕರಗಿದವನಾಗಿ ಕೊಂಚ ಹೊತ್ತು ಯೋಚಿಸಿ ದುಃಖದಿಂದ ಇಂತೆಂದನು.

ಇಂತು ಶ್ರೀ ಪದ್ಮಮಹಾಪುರಾಣದ ಉತ್ತರಖಂಡದ ಶ್ರೀ ಕೃಷ್ಣ ಸತ್ಯಭಾಮಾ ಸಂವಾದದ ಕಾರ್ತಿಕ ಮಹಿಮೆಯಲ್ಲಿ ಕಲಹೋಪಾಖ್ಯಾನ ಎಂಬ ನೂರಎಂಟನೆಯ ಅಧ್ಯಾಯವು ಮುಗಿದುದು.



॥ ಶ್ರೀಃ ॥

-X-

# ಅಥ ಶ್ರೀ ಮಹಾಪುರಾಣೇ ಪಾದ್ಮೇ ಉತ್ತರಖಂಡೇ

## ॥ ನವಾಽಧಿಕಶತತಮೋಽಧ್ಯಾಯಃ ॥



॥ ಧರ್ಮದತ್ತ ಉವಾಚ ॥

**ವಿಲಯಂ ಯಾಂತಿ ಪಾಪಾನಿ ತೀರ್ಥದಾನವ್ರತಾದಿಭಿಃ ।**
**ಪ್ರೇತದೇಹಸ್ಥಿತಾಯಾಸ್ತೇ ತೇಷು ನೈವಾಧಿಕಾರಿತಾ ॥ ೧ ॥**

**ತ್ವದ್ಗ್ಲಾನಿದರ್ಶನಾದಸ್ಮಾತ್ಖಿನ್ನಂ ಚ ಮಮ ಮಾನಸಂ ।**
**ನೈವ ನಿರ್ವೃತಿಮಾಯಾತಿ ತ್ವಾಮನುದ್ಧೃತ್ಯ ದುಃಖಿತಾಂ ॥ ೨ ॥**

**ಪಾತಕಂ ಚ ತವಾತ್ಯುಗ್ರಂ ಯೋನಿತ್ರಯವಿಪಾಕದಂ ।**
**ನೈವಾನ್ಯೈಃ ಕ್ಷೀಯತೇ ಪುಣ್ಯೈಃ ಪ್ರೇತತ್ವಂ ಚಾತಿಗರ್ಹಿತಂ ॥ ೩ ॥**

---

## ನೂರ ಒಂಭತ್ತನೆಯ ಅಧ್ಯಾಯವು



೧. ಧರ್ಮದತ್ತನು ಹೇಳಿದನು–ತೀರ್ಥಸೇವೆ, ದಾನ ಕೊಡುವುದು, ವ್ರತ ಮಾಡುವುದು, ಇವುಗಳಿಂದ ಪಾಪಗಳು ಹೋಗುತ್ತವೆ. ಆದರೆ ನೀನು ಪ್ರೇತಳಾಗಿರುವುದರಿಂದ ನಿನಗೆ ಅವುಗಳಲ್ಲಿ ಅಧಿಕಾರವಿಲ್ಲ.

೨. ನಿನ್ನ ಕಷ್ಟವನ್ನು ನೋಡಿ ನನ್ನ ಮನಸ್ಸು ಖೇದಗೊಂಡಿದೆ. ನಿನ್ನನ್ನು ಈ ಕಷ್ಟದಿಂದ ಪಾರುಮಾಡದಿದ್ದರೆ ನನ್ನ ಮನಸ್ಸು ಸಂತೋಷಹೊಂದುವುದಿಲ್ಲ.

೩. ಮೂರು ಜನ್ಮದಲ್ಲಿ ಹುಟ್ಟಬೇಕಾದ ನಿನ್ನ ಪಾಪವು ಬಹು ಕೆಟ್ಟದ್ದು. ಬೇರೆಯಾದ ಪುಣ್ಯಗಳಿಂದ ಇದು ಹೋಗುವುದಿಲ್ಲ. ಈ ಪ್ರೇತಭಾವವು ಬಹು ನಿಂದಿತವಾದುದು.

ತಸ್ಮಾದಾಜನ್ಮಜನಿತಂ ಯನ್ಮಯಾ ಕಾರ್ತಿಕವ್ರತಂ ।
ತತ್ಪುಣ್ಯಸ್ಯಾರ್ಧಭಾಗೇನ ಪರಾಂ ಗತಿಮವಾಪ್ನುಹಿ ॥ ೪ ॥

ಕಾರ್ತಿಕವ್ರತಪುಣ್ಯೇನ ನ ಸಾಮ್ಯಂ ಯಾಂತಿ ಸರ್ವಥಾ ।
ಯಜ್ಞದಾನಾನಿ ತೀರ್ಥಾನಿ ವ್ರತಾನ್ಯಪಿ ಯತೋ ಧ್ರುವಂ ॥ ೫ ॥

॥ ನಾರದ ಉವಾಚ ॥

ಇತ್ಯುಕ್ತ್ವಾ ಧರ್ಮದತ್ತೋಽಸೌ ಯಾವತ್ತಾಮಭ್ಯಷೇಚಯತ್ ।
ತುಳಸೀಮಿಶ್ರತೋಯೇನ ಶ್ರಾವಯದ್ದ್ವಾದಶಾಕ್ಷರಂ ॥ ೬ ॥

ತಾವತ್ಪ್ರೇತತ್ವನಿರ್ಮುಕ್ತಾ ಜ್ವಲದಗ್ನಿಶಿಖೋಪಮಾ ।
ದಿವ್ಯರೂಪಧರಾ ಜಾತಾ ಲಾವಣ್ಯೇನ ಯಥೇಂದಿರಾ ॥ ೭ ॥

ತತಸ್ಸಾ ದಂಡವದ್ಭೂಮೌ ಪ್ರಣನಾಮಾಥ ತಂ ದ್ವಿಜಂ ।
ಉವಾಚ ಸಾ ತದಾ ವಾಕ್ಯಂ ಹರ್ಷಗದ್ಗದಭಾಷಿಣೀ ॥ ೮ ॥

---

೪. ನಾನು ಹುಟ್ಟಿದ ಮೊದಲುಗೊಂಡು ಈ ಕಾರ್ತಿಕ ವ್ರತವನ್ನು ಮಾಡುತ್ತಿದ್ದೇನೆ. ಅದರ ಅರ್ಧಭಾಗದ ಪುಣ್ಯವನ್ನು ಕೊಡುತ್ತೇನೆ. ಅದರಿಂದ ನೀನು ಉತ್ತಮವಾದ ಗತಿಯನ್ನು ಹೊಂದು.

೫. ಯಜ್ಞಗಳು, ದಾನಗಳು, ತೀರ್ಥಗಳು, ವ್ರತಗಳು, ಇವೆಲ್ಲವೂ ಕೂಡ ಕಾರ್ತಿಕ ವ್ರತ. ಪುಣ್ಯದೊಡನೆ ಸ್ವಲ್ಪವೂ ಸಮಾನವಾಗುವುದಿಲ್ಲ.

೬. ನಾರದನು ಹೇಳಿದನು- ಹೀಗೆಂದು ಹೇಳಿ ಆ ಧರ್ಮದತ್ತನು ತುಳಸಿಯೊಡನೆ ಮಿಶ್ರವಾದನೀರಿನಿಂದ ಅಭಿಷೇಕಮಾಡಿದನು. ಮತ್ತು ದ್ವಾದಶಾಕ್ಷರಿಯನ್ನು ಅವಳಿದುರಿಗೇಹೇಳಿದನು.

೭. ಆಗ ಪ್ರೇತತನವು ಹೋಗಿ ಅಗ್ನಿಯಂತೆ ಪ್ರಕಾಶಮಾನಳಾಗಿ ಒಳ್ಳೆಯ ರೂಪವನ್ನು ಹೊಂದಿ ಸೌಂದರ್ಯದಲ್ಲಿ ಲಕ್ಷ್ಮಿಯಂತಾದಳು.

೮. ಆಮೇಲೆ ಆಕೆಯು ಆ ಬ್ರಾಹ್ಮಣನಿಗೆ ದೀರ್ಘದಂಡ ನಮಸ್ಕಾರವನ್ನು ಮಾಡಿದಳು. ಮತ್ತು ಸಂತೋಷದಿಂದ ಇಂತೆಂದಳು.

॥ ಕಲಹೋವಾಚ ॥

ತ್ವತ್ಪ್ರಸಾದಾದ್ದ್ವಿಜಶ್ರೇಷ್ಠ ವಿಮುಕ್ತಾ ನಿರಯಾದಹಂ ।
ಪಾಪಾಬ್ಧೌ ಮಗ್ನಮಾನಾಯಾಃ ತ್ವಂ ಸಂಭೂತೋಽಸಿ
ಮೇ ಧ್ರುವಂ ॥ ೯ ॥

॥ ನಾರದ ಉವಾಚ ॥

ಇತ್ಥಂ ಸಾ ವದತೀ ವಿಪ್ರಂ ದದರ್ಶಾಯಾಂತಮಂಬರಾತ್ ।
ವಿಮಾನಂ ಭಾಸ್ವರಂ ಯುಕ್ತಂ ವಿಷ್ಣುರೂಪಧರೈರ್ಗಣೈಃ ॥ ೧೦ ॥

ಅಥ ಸಾ ತದ್ವಿಮಾನಾಗ್ರ್ಯಂ ದ್ವಾಸ್ಥಾಭ್ಯಾಮಧಿರೋಹಿತಾ ।
ಪುಣ್ಯಶೀಲಸುಶೀಲಾಭ್ಯಾಂ ಅಪ್ಸರೋಗಣಸೇವಿತಂ ॥ ೧೧ ॥

ತದ್ವಿಮಾನಂ ತದಾಪಶ್ಯದ್ಧರ್ಮದತ್ತಸ್ಸವಿಸ್ಮಯಃ ।
ಪಪಾತ ದಂಡವದ್ಭೂಮೌ ದೃಷ್ಟ್ವಾ ತೌ ವಿಷ್ಣುರೂಪಿಣೌ ॥ ೧೨ ॥

---

೯. ಕಲಹೆಯು ಹೇಳಿದಳು–ಎಲೈ ಬ್ರಾಹ್ಮಣಶ್ರೇಷ್ಠನೆ ! ನಿನ್ನ ಅನುಗ್ರಹದಿಂದ ನರಕದಿಂದ ನಾನು ಮುಕ್ತಿ ಹೊಂದಿದೆನು. ಪಾಪವೆಂಬ ಸಮುದ್ರದಲ್ಲಿ ಮುಳುಗುತ್ತಿದ್ದ ನನಗೆ ನೀನು ದೋಣಿಯಾದೆ ಇದು ಖಂಡಿತವು.

೧೦. ನಾರದನು ಹೇಳಿದನು–ಈ ರೀತಿಯಾಗಿ ಆಕೆಯು ಬ್ರಾಹ್ಮಣನೊಡನೆ ಮಾತನಾಡುತ್ತಿರಲು ಅಂತರಿಕ್ಷದಿಂದ ವಿಷ್ಣುವಿನ ಗಣಗಳೊಡನೆ ಕೂಡಿದ ಒಂದು ಪ್ರಕಾಶಮಾನವಾದ ವಿಮಾನವು ಬರುತ್ತಿದ್ದುದನ್ನು ಕಂಡಳು.

೧೧. ಆ ವಿಮಾನದಲ್ಲಿ ವಿಷ್ಣುರೂಪಿಗಳಾದ ಇಬ್ಬರು ಬಾಗಿಲಿನಲ್ಲಿ ಕುಳಿತಿದ್ದರು. ಅವರ ಹೆಸರು ಪುಣ್ಯಶೀಲ ಸುಶೀಲರೆಂದು ಮತ್ತು ಆ ವಿಮಾನದಲ್ಲಿ ಅಪ್ಸರರೂ ಇದ್ದರು. ಆ ಪುಣ್ಯಶೀಲ ಸುಶೀಲರು ಇವಳನು ವಿಮಾನಕ್ಕೆ ಹತ್ತಿಸಿದರು.

೧೨. ಧರ್ಮದತ್ತನು ಆ ವಿಮಾನವನ್ನು ಆಶ್ಚರ್ಯದಿಂದ ನೋಡಿದನು. ಅದರಲ್ಲಿದ್ದ ಆ ವಿಷ್ಣುವಿನ ಆಕಾರದವರನ್ನು ನೋಡಿ ಭೂಮಿಯಲ್ಲಿ ಸಾಷ್ಟಾಂಗ ವೆರಗಿದನು.

ಪುಣ್ಯಶೀಲಸುಶೀಲೌ ಚ ಹ್ಯುತ್ಥಾಪ್ಯ ಪ್ರಣತಂ ದ್ವಿಜಂ ।
ತಮುಭ್ಯವಂದತಾಂ ವಾಕ್ಯಮೂಚತುರ್ಧರ್ಮಸಂಯುತಂ ॥ ೧೩ ॥

॥ ಗಣಾವೂಚತುಃ ॥

ಸಾಧು ಸಾಧು ದ್ವಿಜಶ್ರೇಷ್ಠ ಯಸ್ತ್ವಂ ವಿಷ್ಣುರತಸ್ಸದಾ ।
ದೀನಾನುಕಂಪೀ ಧರ್ಮಾತ್ಮಾ ವಿಷ್ಣುವ್ರತಪರಾಯಣಃ ॥ ೧೪ ॥

ಆಬಾಲತ್ವಾಚ್ಛುಭಂ ಹ್ಯೇತದ್ಯತ್ತ್ವಯಾ ಕಾರ್ತಿಕಂ ವ್ರತಂ ।
ಕೃತಂ ತಸ್ಯಾರ್ಧದಾನೇನ ಪುಣ್ಯಂ ದ್ವೈಗುಣ್ಯಮಾಗತಂ ॥ ೧೫ ॥

ತ್ವತ್ಪುಣ್ಯಸ್ಯಾರ್ಧಭಾಗೇನ ಯದಸ್ಯಾಃ ಪೂರ್ವಕರ್ಮಜಂ ।
ಜನ್ಮಾಂತರ ಶತೋದ್ಭೂತಂ ಪಾಪಂ ತದ್ವಿಲಯಂ ಗತಂ ॥ ೧೬ ॥

ಸ್ನಾನೈರೇವ ಗತಂ ಪಾಪಂ ಯದಸ್ಯಾಃ ಪೂರ್ವಕರ್ಮಜಂ ।
ಹರಿಜಾಗರಣಾದ್ಯೈಸ್ತು ವಿಮಾನಮಿದಮಾಸ್ಥಿತಾ ॥ ೧೭ ॥

---

೧೩. ಆ ಪುಣ್ಯಶೀಲ ಸುಶೀಲರು ನಮಸ್ಕರಿಸುತ್ತಿರುವ ಆ ಬ್ರಾಹ್ಮಣನನ್ನು ಮೇಲಕ್ಕೆಬ್ಬಿಸಿದರು. ಅವನನ್ನುಪಚರಿಸುತ್ತ ಧರ್ಮದ ಸಂಬಂಧವಾದ ಮಾತುಗಳನ್ನು ಹೀಗೆ ಹೇಳಿದರು.

೧೪. ಎಲೈ ಬ್ರಾಹ್ಮಣನೆ! ಬಹು ಚೆನ್ನಾಗಿದೆ. ಬಹು ಒಳ್ಳೆಯವನು. ನೀನು ಯಾವಾಗಲೂ ವಿಷ್ಣುವಿನಲ್ಲಿಯೇ ಆಸಕ್ತನಾಗಿದ್ದೀಯೆ. ಮತ್ತು ದೀನರ ಮೇಲೆ ಕೃಪೆಯಿಟ್ಟಿರುತ್ತೀಯೆ.

೧೫. ನೀನು ಚಿಕ್ಕಂದಿನಿಂದಲೂ ಈ ಉತ್ತಮವಾದ ಕಾರ್ತಿಕ ವ್ರತವನ್ನು ಮಾಡುತ್ತಾ ಬಂದಿದ್ದೀಯೆ. ಅದು ಬಹು ಉತ್ತಮವಾದುದು. ಆಗ ಅದರ ಅರ್ಧ ಭಾಗವನ್ನು ದಾನಮಾಡಿದ್ದೀಯೆ. ಈ ದಾನದಿಂದ ನಿನಗೆ ಅದರ ಎರಡರಷ್ಟು ಫಲವು ಹೆಚ್ಚಿತು.

೧೬. ನಿನ್ನ ಪುಣ್ಯದ ಅರ್ಧಭಾಗದಿಂದ ಈಕೆಯ ನೂರಾರು ಪೂರ್ವಜನ್ಮಗಳ ಪಾಪಗಳನ್ನು ಹಾಳುಮಾಡಿದ್ದೀಯೆ.

೧೭. ಇವಳ ಪೂರ್ವ ಜನ್ಮಗಳ ಪಾಪಗಳು ಸ್ನಾನದಿಂದಲೇ ಹೊರಟು ಹೋದುವು. ಹರಿಜಾಗರಣೆ ಮುಂತಾದುವುಗಳಿಂದ ಈ ವಿಮಾನವು ಸಿಕ್ಕಿಕುಳಿತಿರುವಳು.

ವೈಕುಂಠಂ ನೀಯತೇ ಸಾಧೋ ನಾನಾಭೋಗಯುತಾ ತ್ವಿಯಂ ।
ದೀಪದಾನಭವೈಃ ಪುಣ್ಯೈಃ ತೈಜಸಂ ರೂಪಮಾಸ್ಥಿತಾ ॥ ೧೮ ॥

ತುಳಸೀಪೂಜನಾದ್ಯೈಸ್ತು ಕಾರ್ತಿಕವ್ರತಕೈಶ್ಶುಭೈಃ ।
ವಿಷ್ಣುಸಾನ್ನಿಧ್ಯಗಾ ಜಾತಾ ತ್ವಯಾ ದತ್ತೈಃ ಕೃಪಾಳುನಾ ॥ ೧೯ ॥

ತ್ವಮಪ್ಯಸ್ಯ ಭವಸ್ಯಾಂತೇ ಭಾರ್ಯಾಭ್ಯಾಂ ಸಹ ಯಾಸ್ಯಸಿ ।
ವೈಕುಂಠಭವನಂ ವಿಷ್ಣೋಃ ಸಾನ್ನಿಧ್ಯಂ ಚ ಸರೂಪತಾಂ ॥ ೨೦ ॥

ತೇ ಧನ್ಯಾಃ ಕೃತಕೃತ್ಯಾಸ್ತೇ ತೇಷಾಂ ಚ ಸಫಲೋ ಭವಃ ।
ಯೈರ್ಭಕ್ತ್ಯಾರಾಧಿತೋ ವಿಷ್ಣುರ್ಧರ್ಮದತ್ತ ಯಥಾ ತ್ವಯಾ ॥ ೨೧ ॥

ಸಮ್ಯಗಾರಾಧಿತೋ ವಿಷ್ಣುಃ ಕಿಂ ನ ಯಚ್ಛತಿ ದೇಹಿನಾಂ ।
ಔತ್ತಾನಪಾದಿರ್ಯೇನ ಧ್ರುವತ್ವೇ ಸ್ಥಾಪಿತಃ ಪುರಾ ॥ ೨೨ ॥

---

೧೮. ಆದ್ದರಿಂದ ಈಕೆಯನ್ನು ಅನೇಕ ಭೋಗಗಳುಳ್ಳ ವೈಕುಂಠಕ್ಕೆ ಒಯ್ಯುತ್ತಿದ್ದೇವೆ. ದೀಪ ದಾನದಿಂದ ಉಂಟಾದ ಪುಣ್ಯದಿಂದ ಈಕೆಗೆ ಉತ್ತಮವಾದ ತೇಜಸ್ಸು ಬಂದಿದೆ.

೧೯ ತುಳಸಿಯ ಪೂಜೆಯೇ ಮುಂತಾದ ಕಾರ್ತಿಕ ವ್ರತಗಳ ದಾನದಿಂದ ನೀನು ಕೊಟ್ಟ ಪುಣ್ಯಗಳಿಂದ ವಿಷ್ಣುವಿನ ಸಾನ್ನಿಧ್ಯವು ಈಕೆಗೆ ಸಿಕ್ಕಿತು.

೨೦. ನೀನೂ ಕೂಡ ಈ ಜನ್ಮದ ಕೊನೆಯಲ್ಲಿ ಇಬ್ಬರು ಹೆಂಡತಿಯರನ್ನೂ ಜೊತೆಯಲ್ಲಿ ಕರೆದುಕೊಂಡು ವೈಕುಂಠದಲ್ಲಿ ವಿಷ್ಣುವಿನ ಸಾನ್ನಿಧ್ಯವನ್ನು ಹೊಂದುತ್ತೀಯೆ. ಕೊನೆಗೆ ಅವನಲ್ಲಿಯೇ ಐಕ್ಯನೂ ಆಗುತ್ತೀಯೆ.

೨೧. ಎಲೈ ಧರ್ಮದತ್ತನೆ! ನಿನ್ನಂತೆ ಯಾರು ವಿಷ್ಣುವನ್ನು ಆರಾಧಿಸುತ್ತಾರೆಯೋ ಅವರೇ ಧನ್ಯರು. ಅವರೇ ಕೃತಕೃತ್ಯರು. ಅವರೇ ಹುಟ್ಟಿದುವಕ್ಕೆ ಜನ್ಮವನ್ನು ಸಾರ್ಥಕ ಮಾಡಿಕೊಳ್ಳತಕ್ಕವರು.

೨೨. ವಿಷ್ಣುವನ್ನು ಚೆನ್ನಾಗಿ ಪೂಜಿಸಿದರೆ ಏನನ್ನು ತಾನೆ ಅವನು ಕೊಡುವುದಿಲ್ಲ. ಪೂರ್ವದಲ್ಲಿ ಉತ್ತಾನಪಾದರಾಯನ ಮಗನು ತನ್ನನ್ನು ಭಜಿಸಿದುದಕ್ಕೆ ಅವನನ್ನು ಧ್ರುವ ಪದವಿಯಲ್ಲಿಟ್ಟನು.

ಯನ್ನಾಮ ಸ್ಮರಣೇನೈವ ದೇಹಿನೋ ಯಾಂತಿ ಸದ್ಗತಿಂ ।
ಗ್ರಾಹಗೃಹೀತೋ ನಾಗೇಂದ್ರೋ ಯನ್ನಾಮಸ್ಮರಣಾತ್ಪರಾ ॥ ೨೩ ॥

ವಿಮುಕ್ತಸ್ಸನ್ನಿಧಿಂ ಪ್ರಾಪ್ತೋಽಜಾತೋಽಯಂ ಜಯಸಂಜ್ಞಕಃ ।
ಅತಸ್ತ್ವಯಾರ್ಚಿತೋ ವಿಷ್ಣುಃ ಸ್ವಸಾನ್ನಿಧ್ಯಂ ಪ್ರದಾಸ್ಯತಿ ॥ ೨೪ ॥

ಬಹೂನ್ಯಬ್ದಸಹಸ್ರಾಣಿ ಭಾರ್ಯಾದ್ವಯಯುತಸ್ಯ ತೇ ।
ತತಃ ಪುಣ್ಯೇಃ ಕ್ಷಯಂ ಯಾತೇ ಯದಾ ಯಾಸ್ಯಸಿ ಭೂತಲೇ ॥ ೨೫ ॥

ಸೂರ್ಯವಂಶೋದ್ಭವೋ ರಾಜಾ ವಿಖ್ಯಾತಸ್ತ್ವಂ ಭವಿಷ್ಯಸಿ ।
ನಾಮ್ನಾ ದಶರಥಸ್ತತ್ರ ಭಾರ್ಯಾದ್ವಯಯುತಃ ಪುನಃ ॥ ೨೬ ॥

ತೃತೀಯಯಾನಯಾ ಚಾಪಿ ಯಾತೇ ಪುಣ್ಯಾರ್ಧಭಾಗಿನೀ ।
ತತ್ರಾಪಿ ತವ ಸಾನ್ನಿಧ್ಯಂ ವಿಷ್ಣುರ್ಯಾಸ್ಯತಿ ಭೂತಲೇ ॥ ೨೭ ॥

---

೨೩–೨೪. ಆ ಸ್ವಾಮಿಯ ನಾಮಸ್ಮರಣೆಯನ್ನು ಮಾಡಿದರೇನೇ ಪ್ರಾಣಿಗಳು ಒಳ್ಳೆಯ ಗತಿಯನ್ನು ಹೊಂದುತ್ತಾರೆ. ಮೊಸಳೆಯು ಹಿಡಿದಿರುವಾಗ ಆ ಆನೆಯು ಸ್ವಾಮಿಯನ್ನು ಧ್ಯಾನಮಾಡಿದುದರಿಂದ ತಾನು ಆ ಮೊಸಳೆಯಿಂದ ತಪ್ಪಿಸಿಕೊಂಡು ಜಯನೆಂಬುವ ಆ ಸ್ವಾಮಿಯ ಕಾವಲುಗಾರನಾದನು. ನೀನು ಆ ಸ್ವಾಮಿಯನ್ನು ಪೂಜಿಸಿದುದರಿಂದ ನಿನಗೆ ತನ್ನ ಸಾನ್ನಿಧ್ಯವನ್ನು ಕೊಡುತ್ತಾನೆ.

೨೫–೨೬. ನೀನು ಇಬ್ಬರು ಹೆಂಡತಿಯರನ್ನೂ ಕರೆದುಕೊಂಡು ಹೋಗಿ ಬಹುಕಾಲ ವೈಕುಂಠದಲ್ಲಿ ಸುಖಿಸುತ್ತೀಯೆ. ಪುಣ್ಯವು ಕಳೆದಮೇಲೆ ಭೂಮಿಗೆ ಬಂದು ಆ ಇಬ್ಬರು ಹೆಂಡಿರೊಡನೆಯೂ ಸೂರ್ಯವಂಶದಲ್ಲಿ ಪ್ರಸಿದ್ಧನಾದ ಧಶರಥನೆಂಬ ರಾಜನಾಗಿ ಹುಟ್ಟುತ್ತೀಯೆ.

೨೭. ಈಕೆಯು ನಿನ್ನ ಅರ್ಧ ಪುಣ್ಯವನ್ನು ಹೊಂದಿದುದರಿಂದ ಮೂರನೆಯ ಹೆಂಡತಿಯಾಗಿ ಹುಟ್ಟುತ್ತಾಳೆ. ಆ ದಶರಥನ ಜನ್ಮದಲ್ಲಿಯೂ ಕೂಡ ವಿಷ್ಣುವು ನಿನ್ನ ಸಾನ್ನಿಧ್ಯವನ್ನು ಹೊಂದುತ್ತಾನೆ.

ಆತ್ಮಾನಂ ತವ ಪುತ್ರತ್ವೇ ಪ್ರಕಲ್ಪ್ಯಾಸುರಕಾರ್ಯಕೃತ್ ।
ತವಾಜನ್ಮವ್ರತಾದಸ್ಮಾದ್ವಿಷ್ಣು ಸಂತುಷ್ಟಿಕಾರಣಾತ್ ॥
ನ ಯಜ್ಞಾ ನ ಚ ದಾನಾನಿ ನ ತೀರ್ಥಾನ್ಯಧಿಕಾನಿ ತೇ　　　　॥ ೨೮ ॥

ಧನ್ಯೋಽಸಿ ವಿಪ್ರಾಗ್ರ್ಯ ಯತಸ್ತ್ವಯೈತತ್-
ವ್ರತಂ ಕೃತಂ ಪ್ರೀತಿಕರಂ ಜಗದ್ಗುರೋಃ ।
ಯಸ್ಯಾರ್ಧಭಾಗಾಪ್ತಫಲಾನ್ಮುರಾರೇಃ-
ಪ್ರಣೀಯತೇಽಸ್ಮಾಭಿರಿಯಂ ಸಲೋಕತಾಂ　　　　॥ ೨೯ ॥

ಇತಿ ಶ್ರೀ ಮಹಾಪುರಾಣೇ ಪಾದ್ಮೇ ಉತ್ತರಖಂಡೇ ಶ್ರೀ ಕೃಷ್ಣ ಸತ್ಯಭಾಮಾ ಸಂವಾದೇ ಕಾರ್ತಿಕ ಮಾಹಾತ್ಮ್ಯೇ ಕಲಹೋಪಾಖ್ಯಾನಂ ನಾಮ ನವಾಧಿಕಶತತಮೋಽಧ್ಯಾಯಸ್ಸಮಾಪ್ತಃ

---

೨೮. ಆಗ ವಿಷ್ಣುವು ನಿನ್ನ ಮಗನಾಗಿ ಹುಟ್ಟಿ ದೇವತೆಗಳ ಕೆಲಸವನ್ನೂ ಮಾಡಿ ಕೊಡುತ್ತಾನೆ. ನೀನು ಹುಟ್ಟಿದ ಮೊದಲಿನಿಂದ ಈ ವ್ರತವನ್ನು ಮಾಡಿ ವಿಷ್ಣುವಿಗೆ ತೃಪ್ತಿಪಡಿಸಿರುವುದರಿಂದ ಯಜ್ಞ, ದಾನ, ತೀರ್ಥಗಳೊಂದೂ ನಿನಗ ಇದಕ್ಕಿಂತ ಉತ್ತಮಗಳಾಗಿಲ್ಲ.

೨೯. ಎಲೈ ಬ್ರಾಹ್ಮಣನೆ! ಜಗದ್ಗುರುವಾದ ಸ್ವಾಮಿಗೆ ಪ್ರೀತಿಕರವಾದ ಈ ವ್ರತವನ್ನು ಮಾಡಿದುದರಿಂದ ನೀನೇ ಧನ್ಯನು. ನೀನು ಮಾಡಿದ ಅರ್ಧಪುಣ್ಯ ದಿಂದ ಈಕೆಯೂ ಹರಿಯ ಸಾನ್ನಿಧ್ಯವನ್ನು ಹೊಂದುತ್ತಾಳೆಯಷ್ಟೆ! ನಿನ್ನ ಪುಣ್ಯವೆಂಥಾದ್ದಿರಬಹುದು!

ಇಂತು ಶ್ರೀ ಪದ್ಮಮಹಾಪುರಾಣದ ಉತ್ತರಖಂಡದ ಶ್ರೀ ಕೃಷ್ಣ ಸತ್ಯಭಾಮೆಯರ ಸಂವಾದದ ಕಾರ್ತಿಕ ಮಹಿಮೆಯಲ್ಲಿ ಕಲಹೋಪಾಖ್ಯಾನ ಎಂಬ ನೂರ ಒಂಭತ್ತನೆಯ ಅಧ್ಯಾಯವು ಮುಗಿದುದು.



॥ ಶ್ರೀಃ ॥

–X–

## ಅಥ ಶ್ರೀ ಮಹಾಪುರಾಣೇ ಪಾದ್ಮೇ ಉತ್ತರಖಂಡೇ

## ॥ ದಶಾಧಿಕಶತತಮೋಽಧ್ಯಾಯಃ ॥



॥ ನಾರದ ಉವಾಚ ॥

ಇತ್ಥಂ ತದ್ವಚನಂ ಶ್ರುತ್ವಾ ಧರ್ಮದತ್ತಸ್ಸವಿಸ್ಮಯಃ ।
ಪ್ರಣಮ್ಯ ದಂಡವದ್ಭೂಮೌ ವಾಕ್ಯಂ ಚೇದಮುವಾಚ ಹ ॥ ೧ ॥

॥ ಧರ್ಮದತ್ತ ಉವಾಚ ॥

ಆರಾಧಯಂತಿ ಸರ್ವೇಽಪಿ ವಿಷ್ಣುಂ ಭಕ್ತಾರ್ತಿನಾಶನಂ ।
ಯಜ್ಞೈರ್ದಾನೈರ್ವ್ರತೈಸ್ತೀರ್ಥೈಸ್ತಪೋಭಿಶ್ಚ ಯಥಾವಿಧಿ ॥ ೨ ॥

ವಿಷ್ಣುಪ್ರೀತಿಕರಂ ತೇಷಾಂ ಕಿಂ ವಾ ಸಾನ್ನಿಧ್ಯಕಾರಕಂ ।
ಯತ್ಕೃತ್ವಾ ತಾನಿ ಚೀರ್ಣಾನಿ ಸರ್ವಾಣ್ಯಪಿ ಭವಂತಿ ಹಿ ॥ ೩ ॥

---

## ನೂರ ಹತ್ತನೆಯ ಅಧ್ಯಾಯವು



೧. ನಾರದನು ಹೇಳಿದನು–ಆ ವಿಷ್ಣುಭಕ್ತರು ಹೇಳಿದ ಈ ಮಾತನ್ನು ಕೇಳಿ ಧರ್ಮದತ್ತನು ಆಶ್ಚರ್ಯಪಡುತ್ತ ಭೂಮಿಯಲ್ಲಿ ದಂಡಪ್ರಣಾಮವನ್ನು ಮಾಡುತ್ತಾ ಇಂತೆಂದನು.

೨. ಧರ್ಮದತ್ತನು ಹೇಳಿದನು–ಭಕ್ತರ ಕಷ್ಟಗಳನ್ನು ನಾಶಮಾಡುವ ಆ ವಿಷ್ಣುವನ್ನು ಯಜ್ಞ, ದಾನ, ವ್ರತ, ತೀರ್ಥ, ತಪಸ್ಸುಗಳಿಂದ ಎಲ್ಲರೂ ಕ್ರಮವಾಗಿ ಪೂಜಿಸುತ್ತಾರೆ.

೩. ಇವುಗಳಲ್ಲಿ ಯಾವುದನ್ನು ಮಾಡಿದರೆ ವಿಷ್ಣುವಿನ ಸಾನ್ನಿಧ್ಯವು ಸಿಕ್ಕುತ್ತದೆ ? ಯಾವುದನ್ನು ಮಾಡಿದರೆ ಎಲ್ಲವನ್ನೂ ಆಚರಿಸಿದ ಫಲವು ಸಿಕ್ಕುತ್ತದೆ?

|| ಗಣಾವೂಚತುಃ ||

ಸಾಧು ಪೃಷ್ಟಂ ತ್ವಯಾ ವಿಪ್ರ ಶೃಣುಷ್ವೈಕಾಗ್ರಮಾನಸಃ ।
ಸೇತಿಹಾಸಂ ಪುರಾವೃತ್ತಂ ಕಥ್ಯಮಾನಂ ಮಯಾಽನಘ || ೪ ||

ಕಾಂಚೀಪುರ್ಯಾಂ ಪುರಾ ಚೋಳಶ್ಚಕ್ರವರ್ತೀ ನೃಪೋಽಭವತ್ ।
ತಸ್ಯಾಶ್ರಯೇಣ ತೇ ದೇಶಾಶ್ಚೋಳಾ ಇತಿ ಪ್ರಥಾಂ ಗತಾಃ || ೫ ||

ಯಸ್ಮಿನ್ ಶಾಸತಿ ಭೂಚಕ್ರಂ ದರಿದ್ರೋ ನಾಽಪಿ ದುಃಖಿತಃ ।
ಪಾಪಬುದ್ಧಿಸ್ಸರುಗ್ವಾಪಿ ನೈವ ಕಶ್ಚಿದಭೂನ್ನರಃ || ೬ ||

ಯಸ್ಯಾಪ್ಯನಂತಯಜ್ಞಸ್ಯ ತಾಮ್ರಪರ್ಣ್ಯಾಸ್ತಟಾವುಭೌ ।
ಸುವರ್ಣಯೂಪೈಶ್ಶೋಭಾಢ್ಯೌ ರಾಸ್ತಾಂ ಚೈತ್ರರಥೋಪಮೌ || ೭ ||

ಸ ಕದಾಚಿದಗಾದ್ರಾಜಾ ಹ್ಯನಂತಶಯನಂ ದ್ವಿಜ ।
ಯತ್ರಾಸೌ ಜಗತಾಂ ನಾಥೋ ಯೋಗನಿದ್ರಾಮುಪಾಶ್ರಿತಃ || ೮ ||

---

೪. ಗಣಗಳು ಹೇಳಿದರು—ಎಲೈ ಬ್ರಾಹ್ಮಣನೆ! ನೀನು ಕೇಳಿದುದು ಒಳ್ಳೆಯದು. ಒಂದೇ ಮನಸ್ಸಿನಿಂದ ಕೇಳು. ಹಿಂದೆ ನಡೆದ ಒಂದು ಕಥೆಯೊಡನೆ ಅದನ್ನು ಹೇಳುತ್ತೇನೆ.

೫. ಪೂರ್ವದಲ್ಲಿ ಕಾಂಚೀಪಟ್ಟಣದಲ್ಲಿ ಚೋಳನೆಂಬ ಚಕ್ರವರ್ತಿಯಿದ್ದನು. ಅವನನ್ನು ಆಶ್ರಯಿಸಿದುದರಿಂದ ಆ ದೇಶವು ಚೋಳದೇಶವೆಂದು ಪ್ರಸಿದ್ಧವಾಯಿತು.

೬. ಅವನು ರಾಜ್ಯವಾಳುತ್ತಿರಲು ಅವನ ರಾಜ್ಯದಲ್ಲಿ ದರಿದ್ರನಾಗಲಿ, ದುಃಖಿಯಾಗಲಿ, ಪಾಪಬುದ್ಧಿಯುಳ್ಳವನಾಗಲಿ, ರೋಗಿಯಾಗಲಿ, ಒಬ್ಬನೂ ಇರಲಿಲ್ಲ.

೭. ಅವನು ಬಹುವಾಗಿ ಯಜ್ಞಗಳನ್ನು ಮಾಡುತ್ತಿರಲು ತಾಮ್ರಪರ್ಣಿಯೆಂಬ ನದಿಯ ಎರಡು ದಡಗಳೂ ಯಜ್ಞದ ಯೂಪಸ್ತಂಭಗಳಿಂದ ಕೂಡಿಕೊಂಡು ಕುಬೇರನ ಚೈತ್ರರಥವೆಂಬ ಉದ್ಯಾನದಂತೆ ಇದ್ದುವು.

೮. ಒಂದುಸಾರಿ ಆ ಶ್ರೀವಿಷ್ಣುವು ಯೋಗನಿದ್ರೆಯನ್ನು ಹೊಂದಿರುವ ಅನಂತಶಯನಕ್ಕೆ ಹೋದನು.

ತತ್ರ ಶ್ರೀರಮಣಂ ದೇವಂ ಸಂಪೂಜ್ಯ ವಿಧಿವನ್ನೃಪಃ ।
ಮಣಿಮುಕ್ತಾಫಲೈರ್ದಿವ್ಯೈಃ ಸ್ವರ್ಣಪುಷ್ಪೈಶ್ಚ ಶೋಭಿತೈಃ ॥ ೯ ॥

ಪ್ರಣಮ್ಯ ದಂಡವದ್ಭ್ಯಾವದುಪವಿಷ್ಟಸ್ಸ ತತ್ರ ವೈ ।
ತಾವದ್ಬ್ರಾಹ್ಮಣಮಾಯಾಂತಮಪಶ್ಯದ್ದೇವಸನ್ನಿಧೌ ॥ ೧೦ ॥

ದೇವಾರ್ಚನಾರ್ಥಂ ಪಾಣೌ ತು ತುಳಸ್ಯುದಕಧಾರಿಣಂ ।
ಸ್ವಪುರೀವಾಸಿನಂ ತತ್ರ ವಿಷ್ಣುದಾಸಾಹ್ವಯಂ ದ್ವಿಜಂ ॥ ೧೧ ॥

ತತ್ರಾಭ್ಯೇತ್ಸ ಸ ವಿಪ್ರರ್ಷಿರ್ದೇವದೇವಮಪೂಜಯುತ್ ।
ವಿಷ್ಣುಸೂಕ್ತೇನ ಸಂಸ್ನಾಪ್ಯ ತುಳಸೀಮಂಜರೀದಳೈಃ ॥ ೧೨ ॥

ತುಲಸೀಪೂಜಯಾ ತಸ್ಯ ರತ್ನಪೂಜಾಂ ಪುರಾ ಕೃತಾಂ ।
ಆಚ್ಛಾದಿತಾಂ ಸಮಾಲೋಕ್ಯ ರಾಜಾ ಕ್ರುದ್ಧೋಽಬ್ರವೀದಿದಂ ॥ ೧೩ ॥

---

೯. ಅಲ್ಲಿ ಆ ರಾಜನು ಮಣಿ, ಮುತ್ತು, ಚಿನ್ನದ ಹೂ ಮುಂತಾದವುಗಳಿಂದ ಆ ಸ್ವಾಮಿಯನ್ನು ವಿಧಿವತ್ತಾಗಿ ಪೂಜಿಸಿದನು.

೧೦ ಭೂಮಿಯಲ್ಲಿ ದಂಡನಮುಸ್ಕಾರ ಮಾಡಿ ಕೆಳಗೆ ಕುಳಿತುಕೊಳ್ಳುವಷ್ಟರಲ್ಲಿಯೇ ದೇವರ ಸಮೀಪಕ್ಕೆ ಬರುತ್ತಿರುವ ಒಬ್ಬ ಬ್ರಾಹ್ಮಣನನ್ನು ಕಂಡನು.

೧೧. ದೇವರ ಪೂಜೆಗೋಸ್ಕರ ಕೈಯಲ್ಲಿ ತುಳಸಿಯನ್ನೂ, ನೀರನ್ನೂ ಹಿಡಿದಿದ್ದನು. ಅವನು ಆ ರಾಜನ ಊರಿನವನು. ಅವನ ಹೆಸರು ವಿಷ್ಣುದಾಸನೆಂದು.

೧೨. ಅಲ್ಲಿಗೆ ಬಂದ ಆ ಬ್ರಾಹ್ಮಣನು ಪುರುಷಸೂಕ್ತ ಶ್ರೀಸೂಕ್ತಗಳಿಂದ ಆ ದೇವರಿಗೆ ಸ್ನಾನಮಾಡಿಸಿ ತುಳಸಿಯ ದಳಗಳಿಂದ ಪೂಜಿಸಿದನು.

೧೩. ರಾಜನು ಆ ಸ್ವಾಮಿಗೆ ಮಾಡಿದ್ದ ರತ್ನದ ಪೂಜೆಯು ಈ ಬ್ರಾಹ್ಮಣನು ಮಾಡಿದ ತುಳಸಿಯ ಪೂಜೆಯಿಂದ ಮುಚ್ಚಿಹೋಗಲು ರಾಜನಿಗೆ ಕೋಪಬಂದು ಇಂತೆಂದನು.

॥ ರಾಜೋವಾಚ ॥

ಮಾಣಿಕ್ಯಸ್ವರ್ಣಪೂಜಾತ್ರ ಶೋಭಾಢ್ಯಾ ಯಾ ಮಯಾ ಕೃತಾ ।
ವಿಷ್ಣುದಾಸ ಕಥಂ ಸೇಯಮಾಚ್ಛಿನ್ನಾ ತುಳಸೀದಳೈಃ ॥ ೧೪ ॥

ವಿಷ್ಣುಭಕ್ತಿಂ ನ ಜಾನಾಸಿ ವರಾಕೋಽಸಿ ಮತೋ ಮಮ ।
ಯಸ್ತ್ವಮಾಮತಿಶೋಭಾಢ್ಯಾಂ ಪೂಜಾಮಾಚ್ಛಾದಯಸ್ಯಹೋ ॥ ೧೫ ॥

॥ ಗಣಾವೂಚತುಃ ॥

ಇತಿ ತಸ್ಯ ವಚಶ್ಶ್ರುತ್ವಾ ಸಕ್ರೋಧೋ ದ್ವಿಜಸತ್ತಮಃ ।
ರಾಜ್ಞೋ ಗೌರವಮುಲ್ಲಂಘ್ಯ ಜಗಾದ ವಚನಂ ತದಾ ॥ ೧೬ ॥

॥ ವಿಷ್ಣುದಾಸ ಉವಾಚ ॥

ರಾಜನ್ ಭಕ್ತಿಂ ನ ಜಾನಾಸಿ ಗರ್ವಿತೋಽಸಿ ನೃಪಶ್ರಿಯಾ ।
ಕಿಯದ್ವಿಷ್ಣುವ್ರತಂ ಪೂರ್ವಂ ತ್ವಯಾ ಚೀರ್ಣಂ ವದಸ್ವ ತತ್ ॥ ೧೭ ॥

---

೧೪. ರಾಜನು ಹೇಳಿದನು–ಎಲೈ ವಿಷ್ಣುದಾಸನೆ! ಮಾಣಿಕ್ಯ ಸ್ವರ್ಣಗಳಿಂದ ಮಾಡಿರುವ ಚೆನ್ನಾಗಿ ಪ್ರಕಾಶಿಸುತ್ತಿರುವ ನನ್ನ ಪೂಜೆಯನ್ನು ನಿನ್ನ ತುಳಸೀದಳದ ಪೂಜೆಯಿಂದ ಏಕೆ ಮುಚ್ಚಿದೆ?

೧೫. ನಿನಗೆ ವಿಷ್ಣುಭಕ್ತಿಯು ಗೊತ್ತಿರುವುದಿಲ್ಲ. ನೀನು ಅಯೋಗ್ಯನೆಂದು ನನಗೆ ಕಾಣುತ್ತದೆ. ಶೋಭೆಯಿಂದ ಕೂಡಿದ ನನ್ನ ಈ ರತ್ನದ ಪೂಜೆಯನ್ನು ತುಳಸಿಯ ಪೂಜೆಯಿಂದ ಮುಚ್ಚಿದೆಯಲ್ಲ!

೧೬. ಗಣಗಳು ಹೇಳಿದುವು–ಈ ಮಾತನ್ನು ಕೇಳಿ ವಿಷ್ಣುದಾಸನು ಕೋಪಗೊಂಡು ರಾಜನಲ್ಲಿರುವ ಗೌರವವನ್ನು ಬಿಟ್ಟು ಇಂತೆಂದನು.

೧೭. ವಿಷ್ಣುದಾಸನು ಹೇಳಿದನು– ಎಲೈ ರಾಜನೆ? ಭಕ್ತಿಯೆಂಬುದೇ ನಿನಗೆ ಗೊತ್ತಿಲ್ಲ. ರಾಜ್ಯಶ್ರೀಯಿಂದ ಮದಿಸಿ ಹೋಗಿದ್ದೀಯೆ. ನೀನು ಹಿಂದೆ ಎಷ್ಟು ವಿಷ್ಣು ವ್ರತಗಳನ್ನು ಮಾಡಿದ್ದೀಯೆ? ಹೇಳು.

॥ ಗಣಾವೂಚತುಃ ॥

ತದ್ಬ್ರಾಹ್ಮಣವಚಶ್ಶ್ರುತ್ವಾ ಪ್ರಹಸ್ಯ ಸ ನೃಪೋತ್ತಮಃ ।
ವಿಷ್ಣುದಾಸಂ ತದಾ ಗರ್ವಾದುವಾಚ ವಚನಂ ದ್ವಿಜ ॥ ೧೮ ॥

॥ ರಾಜೋವಾಚ ॥

ಇತ್ಥಂ ಚೇದ್ವದಸೇ ವಿಪ್ರ ವಿಷ್ಣುಭಕ್ತ್ಯಾಽತಿಗರ್ವಿತಃ ।
ಭಕ್ತಿಸ್ತೇ ಕಿಯತೀ ವಿಷ್ಣೋರ್ದರಿದ್ರಸ್ಯಾಽಧನಸ್ಯ ಚ ॥ ೧೯ ॥

ಯಜ್ಞದಾನಾದಿಕಂ ನೈವ ವಿಷ್ಣೋಸ್ತುಷ್ಟಿಕರಂ ಕೃತಂ ।
ನಾಪಿ ದೇವಾಲಯಂ ಪೂರ್ಣಂ ಕೃತಂ ವಿಪ್ರ ತ್ವಯಾ ಕ್ವಚಿತ್ ॥ ೨೦ ॥

ಈದೃಶಸ್ಯಾಪಿ ತೇ ಗರ್ವಃ ಏಷ ತಿಷ್ಠತಿ ಭಕ್ತಿಜಃ ।
ತಚ್ಛೃಣ್ವಂ ತು ವಚೋ ಮೇಽದ್ಯ ಸರ್ವೇಪ್ಯೇತೇ ದ್ವಿಜೋತ್ತಮಾಃ॥ ೨೧ ॥

ಸಾಕ್ಷಾತ್ಕಾರಮಹಂ ವಿಷ್ಣೋರೇಷ ವಾದೌ ಗಮಿಷ್ಯತಿ ।
ಪಶ್ಯಂತು ಸರ್ವೇಽಪಿ ತತೋ ಭಕ್ತಿಂ ಜ್ಞಾಸ್ಯಂತಿ ಚಾವಯೋಃ ॥ ೨೨ ॥

---

೧೮. ಗಣಗಳು ಹೇಳಿದುವು– ಆ ಬ್ರಾಹ್ಮಣನ ಮಾತನ್ನು ಕೇಳಿ ರಾಜನು ನಕ್ಕು ಗರ್ವದಿಂದ ವಿಷ್ಣುದಾಸನನ್ನು ಕುರಿತು ಇಂತೆಂದನು.

೧೯. ರಾಜನು ಹೇಳಿದನು- ಎಲೈ ಬ್ರಾಹ್ಮಣನೆ! ನೀನು ವಿಷ್ಣುಭಕ್ತಿಯಿಂದ ಗರ್ವಿತನಾಗಿ ಹೀಗೆ ಹೇಳಿದರೆ ಹಣವಿಲ್ಲದ ದರಿದ್ರನಾದ ನಿನ್ನ ಭಕ್ತಿಯು ಎಷ್ಟರ ಮಾತ್ರದ್ದಾಗಿರಬೇಕು.

೨೦. ವಿಷ್ಣುವಿಗೆ ಪ್ರೀತಿಯನ್ನುಂಟುಮಾಡುವ ಯಜ್ಞ, ದಾನ ಮುಂತಾದುವುಗಳೊಂದನ್ನೂ ಮಾಡಿಲ್ಲ. ನೀನೆಲ್ಲಿಯೂ ವಿಷ್ಣುವಿಗೆ ಒಂದು ದೇವಸ್ಥಾನವನ್ನೂ ಕೂಡ ಕಟ್ಟಿಸಿಲ್ಲ.

೨೧. ಇಂತಹ ಬಡವನಾದ ನಿನಗೂ ಈ ರೀತಿಯಾದ ಭಕ್ತಿಯು ಗರ್ವವಿರುವುದಲ್ಲ? ಎಲೈ ಬ್ರಾಹ್ಮಣರಿರಾ? ನೀವೆಲ್ಲರೂ ಈಗ ನನ್ನ ಮಾತನ್ನು ಕೇಳಿರಿ.

೨೨. ಈಗ ನಾನು ವಿಷ್ಣುಸಾಕ್ಷಾತ್ಕಾರವನ್ನು ಮೊದಲು ಹೊಂದುತ್ತೇನೆಯೆ? ಅಥವಾ ಇವನು ಮೊದಲು ಹೊಂದುತ್ತಾನೆಯೇ? ನೀವೆಲ್ಲರೂ ನೋಡಿರಿ. ಆಮೇಲೆ ನಮ್ಮಗಳ ಭಕ್ತಿಯನ್ನು ನಿವೇ ಗೊತ್ತುಮಾಡಿರಿ.

|| ಗಣಾವೂಚತುಃ ||

ಇತ್ಯುಕ್ತ್ವಾ ಸ ನೃಪೋಽಗಚ್ಛನ್ನಿಜರಾಜಗೃಹಂ ದ್ವಿಜ ।
ಆರಭದ್ವೈಷ್ಣವಂ ಸತ್ರಂ ಕೃತ್ವಾಚಾರ್ಯಂ ಚ ಮುದ್ಗಲಂ || ೨೩ ||

ಋಷಿಸಂಘಸಮಾಜುಷ್ಟಂ ಬಹ್ವನ್ನಂ ಬಹುದಕ್ಷಿಣಂ ।
ಯದ್ವದ್ಬ್ರಹ್ಮಕೃತಂ ಪೂರ್ವಂ ಗಯಾಕ್ಷೇತ್ರೇ ಸಮೃದ್ಧಿದಂ || ೨೪ ||

ವಿಷ್ಣುದಾಸೋಽಪಿ ತತ್ರೈವ ತಸ್ಥೌ ದೇವಾಲಯೇ ವ್ರತೀ ।
ಯಥೋಕ್ತಾನ್ನಿಯಮಾನ್ಕೃತ್ವಾ ವಿಷ್ಣುತುಷ್ಟಿಕರಾನ್ಸದಾ || ೨೫ ||

ಮಾಘೋರ್ಜಯೋರ್ವ್ರತಂ ಸಮ್ಯಕ್ ತುಲಸೀವನಪಾಲನಂ ।
ಏಕಾದಶೀವ್ರತಂ ಜಾಪ್ಯಂ ದ್ವಾದಶಾಕ್ಷರವಿದ್ಯಯಾ || ೨೬ ||

ಉಪಚಾರೈಷೋಡಶಭಿಃ ಗೀತನೃತ್ಯಾದಿಮಂಗಳೈಃ ।
ನಿತ್ಯಂ ವಿಷ್ಣೋಸ್ತಥಾ ಪೂಜಾಂ ವ್ರತಾನ್ಯೇತಾನಿ ಸೋಽಕರೋತ್|| ೨೭ ||

---

೨೩. ಗಣಗಳು ಹೇಳಿದರು- ಹೀಗೆಂದು ಹೇಳಿ ಆ ರಾಜನು ತನ್ನ ಅರಮನೆಗೆ ಹೋಗಿ ಮುದ್ಗಲನೆಂಬ ಬ್ರಾಹ್ಮಣನನ್ನು ಆಚಾರ್ಯನನ್ನಾಗಿ ಇಟ್ಟುಕೊಂಡು ವೈಷ್ಣವ ಯಾಗವನ್ನು ಮೊದಲು ಮಾಡಿದನು.

೨೪. ಋಷಿಗಳೆಲ್ಲರನ್ನೂ ಬರಮಾಡಿದನು. ಬಹಳವಾಗಿ ಅನ್ನದಾನ ಮಾಡಿದನು. ಬಹುವಾಗಿ ದಕ್ಷಿಣೆಯನ್ನು ಕೊಟ್ಟನು. ಪೂರ್ವದಲ್ಲಿ ಗಯೆಯಲ್ಲಿ ಬ್ರಹ್ಮನು ಮಾಡಿದಂತೆಯೇ ಮಾಡಿದನು.

೨೫. ವಿಷ್ಣುದಾಸನು ಆ ದೇವಸ್ಥಾನದಲ್ಲಿಯೇ ನಿಂತು ವಿಷ್ಣುವಿಗೆ ಸಂತೋಷವನ್ನುಂಟುಮಾಡುವ ನಿಯಮಗಳನ್ನು ಆಚರಿಸುತ್ತಾ ಬಂದನು.

೨೬. ಮಾಘ ಕಾರ್ತಿಕ ವ್ರತವನ್ನು ಮಾಡುತ್ತಾ ತುಳಸಿಯ ವನವನ್ನು ಬೆಳೆಸುತ್ತಾ ಏಕಾದಶೀ ವ್ರತವನ್ನಾಚರಿಸುತ್ತಾ ದ್ವಾದಶಾಕ್ಷರವನ್ನು ಜಪಿಸಿದನು.

೨೭. ಹದಿನಾರು ಉಪಚಾರಗಳಿಂದಲೂ ನೃತ್ಯ, ಗೀತ, ಮಂಗಳವಾದ್ಯಗಳಿಂದಲೂ ಪೂಜಿಸುತ್ತಾ ಬಂದನು. ಈ ರೀತಿಯಾಗಿ ಆತನೂ ವ್ರತವನ್ನಾಚರಿಸಿದನು.

ನಿತ್ಯಂ ಸಂಸ್ಮರಣಂ ವಿಷ್ಣೋರ್ಗಚ್ಛನ್ಭುಂಜನ್ ಸ್ವಪನ್ನಪಿ ॥
ಸರ್ವಭೂತಸ್ಥಿತಂ ವಿಷ್ಣುಂ ಅಪಶ್ಯತ್ಸಮದರ್ಶನಃ ॥ ೨೮ ॥

ಮಾಘಕಾರ್ತಿಕಯೋರ್ನಿತ್ಯಂ ವಿಶೇಷನಿಯಮಾನಪಿ ।
ಅಕರೋದ್ವಿಷ್ಣುತುಷ್ಟ್ಯರ್ಥಂ ಸೋದ್ಯಾಪನವಿಧಿಂ ತಥಾ ॥ ೨೯ ॥

ಏವಂಸಮಾರಾಧಯತೋಃ ಶ್ರಿಯಃ ಪತಿಂ
ತಯೋಸ್ತು ಚೋಳೇಶ್ವರವಿಷ್ಣುದಾಸಯೋಃ ।
ಅಗಾದನೇಹಾ ಬಹು ತದ್ವ್ರತಸ್ಥಯೋಃ
ತನ್ನಿಷ್ಠಸರ್ವೇಂದ್ರಿಯಕರ್ಮಣೋಸ್ತಯೋಃ ॥ ೩೦ ॥

ಇತಿ ಶ್ರೀ ಮಹಾಪುರಾಣೇ ಪಾದ್ಮೇ ಉತ್ತರಖಂಡೇ ಶ್ರೀ ಕೃಷ್ಣ ಸತ್ಯಭಾಮಾ ಸಂವಾದೇ ಕಾರ್ತಿಕೆ ಮಾಹಾತ್ಮ್ಯೇ ಧರ್ಮದತ್ತದೂತ ಸಂವಾದೋ ನಾಮ ದಶಾಧಿಕಶತತಮೋಽಧ್ಯಾಯಸ್ಸಮಾಪ್ತಃ

---

೨೮. ಹೋಗುತ್ತಾ ಬರುತ್ತಾ ಊಟಮಾಡುತ್ತಾ ಮಲಗುತ್ತಾ ಯಾವಾಗಲೂ ವಿಷ್ಣುವನ್ನು ಸ್ಮರಿಸುತ್ತಾ ಸಮದರ್ಶಿಯಾಗಿ ವಿಷ್ಣುವನ್ನು ಎಲ್ಲಾ ಪ್ರಾಣಿಗಳಲ್ಲಿಯೂ ಇರುವನನ್ನಾಗಿ ತಿಳಿದನು.

೨೯. ಮಾಘ ಕಾರ್ತಿಕಗಳ ವಿಶೇಷ ನಿಯಮಗಳನ್ನು ಆಚರಿಸಿದನು. ವಿಷ್ಣುವಿನ ಪ್ರೀತ್ಯರ್ಥವಾಗಿ ಉದ್ಯಾಪನೆಯನ್ನೂ ಆತನು ಮಾಡಿದನು.

೩೦. ಈ ರೀತಿಯಾಗಿ ಆ ಚೋಳರಾಜ ವಿಷ್ಣುದಾಸರು ವಿಷ್ಣುವನ್ನು ಪೂಜಿಸುತ್ತಿರಲು ಅನೇಕ ಕಾಲಗಳು ಕಳೆದುವು. ಅವರೂ ಸರ್ವಪ್ರಕಾರದಿಂದಲೂ ವಿಷ್ಣುವನ್ನೇ ಪೂಜಿಸುತ್ತಿದ್ದರು.

ಇಂತು ಶ್ರೀ ಪದ್ಮಮಹಾಪುರಾಣದ ಉತ್ತರಖಂಡದ ಶ್ರೀ ಕೃಷ್ಣ ಸತ್ಯಭಾಮೆಯರ ಸಂವಾದದ ಕಾರ್ತಿಕ ಮಹಿಮೆಯಲ್ಲಿ ಧರ್ಮದತ್ತದೂತ ಸಂವಾದ ಎಂಬ ನೂರ ಹತ್ತನೆಯ ಅಧ್ಯಾಯವು ಮುಗಿದುದು.



॥ ಶ್ರೀಃ ॥

-X-

# ಅಥ ಶ್ರೀ ಮಹಾಪುರಾಣೇ ಪಾದ್ಮೇ ಉತ್ತರಖಂಡೇ

## ॥ ಏಕಾದಶಾಧಿಕಶತತಮೋಽಧ್ಯಾಯಃ ॥



**॥ ಗಣಾವೂಚತುಃ ॥**

**ಕದಾಚಿದ್ವಿಷ್ಣುದಾಸೋಽಥ ಕೃತ್ವಾ ನಿತ್ಯವಿಧಿಂ ದ್ವಿಜ ।**
**ಸ ಪಾಕಮಕರೋತ್ತಾವದಹರತ್ಕೋಽಪ್ಯಲಕ್ಷಿತಃ ॥ ೧ ॥**

**ತಮದೃಷ್ಟ್ವಾಪ್ಯಸೌ ಪಾಕಂ ಪುನರ್ನೈವಾಕರೋತ್ತದಾ ।**
**ಸಾಯಂಕಾಲಾರ್ಚನಸ್ಯಾಸೌ ವ್ರತಭಂಗಭಯಾರ್ದಿತಃ ॥ ೨ ॥**

**ದ್ವಿತೀಯೇಽಹ್ನಿ ತತಃ ಪಾಕಂ ಕೃತ್ವಾ ಯಾವತ್ಸ ವಿಷ್ಣವೇ ।**
**ಉಪಹಾರಾರ್ಪಣಂ ಕರ್ತುಂ ಗತಃ ಕೋಽಪ್ಯಹರತ್ಪುನಃ ॥ ೩ ॥**

---

## ನೂರ ಹನ್ನೊಂದನೆಯ ಅಧ್ಯಾಯವು



೧. ಗಣಗಳು ಹೇಳಿದರು–ಒಂದು ಸಾರಿ ವಿಷ್ಣುದಾಸನು ನಿತ್ಯಕರ್ಮಗಳನ್ನು ಮಾಡಿಕೊಂಡು ಅಡಿಗೆಯನ್ನು ಮಾಡಿ ಇಟ್ಟಿದ್ದನು. ಅದನ್ನು ಅವನಿಗೆ ತಿಳಿಯದಂತೆ ಯಾವನೋ ಕದ್ದುಕೊಂಡು ಹೋದನು.

೨ ಹಾಗೆ ಆ ಅಡಿಗೆಯನ್ನು ಕದ್ದುಕೊಂಡು ಹೋದುದನ್ನು ತಿಳಿದು ಸಾಯಂಕಾಲ ಸ್ವಾಮಿಗೆ ಅರ್ಚನೆ ಮಾಡಲು ಸಾವಕಾಶವಾದೀತಲ್ಲ! ಎಂಬ ಭಯದಿಂದ ಆತನು ಮತ್ತೆ ಅಡಿಗೆಯನ್ನು ಮಾಡಲೇ ಇಲ್ಲ.

೩. ಮತ್ತೆ ಎರಡನೆಯ ದಿನವೂ ಹಾಗೆಯೇ ವಿಷ್ಣುವಿನ ನಿವೇದನಕ್ಕೋಸ್ಕರ ಅಡಿಗೆಯನ್ನು ಮಾಡಿಟ್ಟು ಪೂಜೆಮಾಡಲು ಮತ್ತೆ ಹೋದನು. ಮತ್ತೆ ಅದನ್ನು ಯಾರೋ ಕದ್ದರು.

ಏವಂ ಸಪ್ತದಿನಂ ತಸ್ಯ ಪಾಕಂ ಕೋಽಪ್ಯಹರದ್ದ್ವಿಜಃ ।
ತತಸ್ಸ ವಿಸ್ಮಯಸ್ತ್ವೋಽಥ ಮನಸ್ಯೇವಮುಧಾರಯತ್ ॥ ೪ ॥

ಅಹೋ ನಿತ್ಯಂ ಸಮುಭ್ಯೇತ್ಯ ಕಃ ಪಾಕಂ ಹರತೇ ಮಮ ।
ಕ್ಷೇತ್ರಸನ್ಯಾಸಿನಸ್ಥಾನಮುತ್ಯಾಜ್ಯಂ ಮಮ ಸರ್ವಥಾ ॥ ೫ ॥

ಪುನಃ ಪಾಕಂ ವಿಧಾಯಾತ್ರ ಭುಜ್ಯತೇ ಯದಿ ಚೇನ್ಮಯಾ ।
ಸಾಯಂಕಾಲಾರ್ಚನಂ ಚೈತತ್ಪರಿತ್ಯಾಜ್ಯಂ ಕಥಂ ಮಯಾ ॥ ೬ ॥

ಕಿಂಚಿತ್ಪಾಕಂ ವಿಧಾಯೈವ ಭೋಕ್ತವ್ಯಂ ತು ಮಯಾ ನ ಹಿ ।
ಅನಿವೇದ್ಯಂ ಮಯಾ ಸರ್ವಂ ವಿಷ್ಣವೇ ನೈವ ಭುಜ್ಯತೇ ॥ ೭ ॥

ಉಪೋಷಿತೋಽಹಂ ಚ ಕಥಂ ತಿಷ್ಠಾಮ್ಯತ್ರ ವ್ರತೇ ಸ್ಥಿತಃ ।
ಅದ್ಯ ಸಂರಕ್ಷಣಂ ಸಮ್ಯಕ್ಪಾಕಸ್ಯಾಽತ್ರ ಕರೋಮ್ಯಹಂ ॥ ೮ ॥

---

೪. ಈ ರೀತಿಯಾಗಿ ಏಳು ದಿನಗಳವರೆಗೂ ಅವನು ಮಾಡಿಟ್ಟ ಅಡಿಗೆಯನ್ನು ಯಾರೋ ಕದಿಯುತ್ತಿದ್ದರು. ಆಗ ಅವನಿಗೆ ಆಶ್ಚರ್ಯವಾಗಿ ಹೀಗೆ ಮನಸ್ಸಿನಲ್ಲಿ ಯೋಚಿಸಿದನು.

೫. ಇದು ಬಹು ಆಶ್ಚರ್ಯವಾಗಿದೆ. ಯಾವನೋ ನಿತ್ಯವೂ ಬಂದು ನಾನು ಮಾಡಿದ ಅಡಿಗೆಯನ್ನು ಕದಿಯುತ್ತಿರುವನಲ್ಲ? ಇಲ್ಲೇ ನಾನು ಜಾಗ ಮಾಡಿಕೊಂಡು ಪೂಜೆಮಾಡುತ್ತಿರುವುದರಿಂದ ಈ ಜಾಗವನ್ನು ನಾನು ಬಿಡಲೇ ಕೂಡದು.

೬. ಮತ್ತೆ ಎರಡನೆ ಬಾರಿ ಅಡಿಗೆಮಾಡಿ ಊಟಮಾಡಿದರೆ ಸಾಯಂಕಾಲದ ಅರ್ಚನೆಯು ನಿಂತುಹೋಗುತ್ತದೆ. ಅದನ್ನು ನಾನು ಬಿಡುವುದು ತಾನೇ ಹೇಗೆ ?

೭. ಯಾವ ಅಡಿಗೆಯನ್ನೂ ಮಾಡಿ ನಾನು ಊಟಮಾಡಬಾರದು ವಿಷ್ಣುವಿಗೆ ನಿವೇದನ ಮಾಡದೆ ನಾನು ಯಾವುದನ್ನೂ ತಿನ್ನುವುದೇ ಇಲ್ಲ.

೮. ಈ ವ್ರತವನ್ನು ಮಾಡುತ್ತಾ ನಾನು ಹೇಗೆ ತಾನೆ ಉಪವಾಸವಿರಲಿ ? ಈದಿನ ಅಡಿಗೆ ಮಾಡಿ ಅದನ್ನು ಯಾರೂ ಕದಿಯದಂತೆ ನೋಡಿಕೊಳ್ಳುತ್ತೇನೆ.

ಇತಿ ಪಾಕಂ ವಿಧಾಯಾಸೌ ತತ್ರೈವಾಲಕ್ಷಿತ ಸ್ಥಿತಃ ।
ತಾವದ್ದದರ್ಶ ಚಾಂಡಾಲಂ ಪಾಕಾನ್ನಹರಣೇ ಸ್ಥಿತಂ ॥ ೯ ॥

ಕ್ಷುತ್‌ಕ್ಷಾಮಂ ದೀನವದನಂ ಅಸ್ಥಿಚರ್ಮಾವಶೇಷಿತಂ ।
ತಮಾಲೋಕ್ಯ ದ್ವಿಜಾಗ್ರ್ಯೋಽಭೂತ್ಕೃಪಯಾ ಖಿನ್ನಮಾನಸಃ ॥ ೧೦ ॥

ವಿಲೋಕ್ಯಾನ್ನಹರಂ ವಿಪ್ರಸ್ತಿಷ್ಠ ತಿಷ್ಠೇತಿ ಚಾಬ್ರವೀತ್ ।
ಕಥಮತ್ತಿ ಭವಾನ್ರೂಕ್ಷಂ ಘೃತಮೇತದ್ಗೃಹಾಣ ಮೇ ॥ ೧೧ ॥

ಇತ್ಥಂ ಬ್ರುವಂತಂ ವಿಪ್ರಾಗ್ರ್ಯಂ ಆಯಾಂತಂ ಸ ವಿಲೋಕ್ಯ ಚ ।
ವೇಗಾದಧಾವದ್ಭೀತ್ಯಾ ಸ ಮೂರ್ಛಿತಸ್ಸ ಪಪಾತ ಹ ॥ ೧೨ ॥

ಭೀತಂ ಸಮ್ಮೂರ್ಛಿತಂ ದೃಷ್ಟ್ವಾ ಚಾಂಡಾಲಂ ಸ ದ್ವಿಜಾಗ್ರಣೀಃ ।
ವೇಗಾದಭ್ಯೇತ್ಯ ಕೃಪಯಾ ಸ್ವವಸ್ತ್ರಾಂತೈರವೀಜಯತ್ ॥ ೧೩ ॥

---

೯. ಈ ರೀತಿ ಯೋಚಿಸಿ ಆತನು ಅಡಿಗೆಯನ್ನು ಮಾಡಿ ಅಲ್ಲಿಯೇ ಮರೆಯಾಗಿ ನಿಂತಿರಲು ಒಬ್ಬ ಚಂಡಾಲನು ಅಡಿಗೆಯನ್ನು ಕದಿಯಲು ಬಂದಿರುವುದನ್ನು ಕಂಡನು.

೧೦. ಅವನು ಹಸಿವಿನಿಂದ ಬಡನಾಗಿದ್ದನು. ಮುಖವು ಕಂಗೆಟ್ಟಿದ್ದಿತು. ಮೂಳೆ ಚರ್ಮಗಳೆರಡೇ ಇದ್ದುವು. ಅವನನ್ನು ನೋಡಿ ಈ ಬ್ರಾಹ್ಮಣನಿಗೆ ಕನಿಕರವು ಹುಟ್ಟಿ ಬಹು ದುಃಖವುಂಟಾಯಿತು.

೧೧. ಆ ಬ್ರಾಹ್ಮಣನು ಆ ಅನ್ನಗಳ್ಳನನ್ನು ನೋಡಿ ನಿಲ್ಲು! ನಿಲ್ಲು. ಎಂದು ಕೂಗಿದನು. ಮತ್ತು ಈ ಬರಿಯ ಒರಟಾದ ಅನ್ನವನ್ನು ಹೇಗೆತಾನೆ ತಿನ್ನುತ್ತೀಯೆ? ಇಗೋ ತುಪ್ಪವನ್ನು ಕೊಡುತ್ತೇನೆ. ತೆಗೆದುಕೋ.

೧೨. ಆ ಬ್ರಾಹ್ಮಣನು ಹೀಗೆ ಹೇಳುತ್ತಾ ಬರುತ್ತಿರಲು ಹೆದರಿಕೆಯಿಂದ ಆ ಕಳ್ಳನು ಜಾಗ್ರತೆಯಾಗಿ ಓಡಿಹೋಗಿ ಎಡವಿ ಬಿದ್ದು ಮೂರ್ಛೆ ಹೋದನು.

೧೩. ಎಡವಿ ಬಿದ್ದು ಮೂರ್ಛೆಗೊಂಡಿರುವ ಆ ಚಂಡಾಲನನ್ನು ಬ್ರಾಹ್ಮಣನು ನೋಡಿ ಬೇಗ ಅಲ್ಲಿಗೆ ಹೋಗಿ ದಯೆಯುಂಟಾಗಿ ತನ್ನ ಬಟ್ಟೆಯ ಸೆರಗಿನಿಂದ ಬೀಸಿದನು.

ಅಥೋತ್ಥಿತಂ ತಮೇವಾಸೌ ವಿಷ್ಣುದಾಸೋ ವ್ಯಲೋಕಯತ್ ।
ಸಾಕ್ಷಾನ್ನಾರಾಯಣಂ ದೇವಂ ಶಂಖಚಕ್ರಗದಾಧರಂ ॥ ೧೪ ॥

ಪೀತಾಂಬರಂ ಚತುರ್ಬಾಹುಂ ಶ್ರೀವತ್ಸಾಂಕಂ ಕಿರೀಟಿನಂ ।
ಅತಸೀಪುಷ್ಪಸಂಕಾಶಂ ಕೌಸ್ತುಭೋರಸ್ಥಳಂ ವಿಭುಂ ॥ ೧೫ ॥

ತಂ ದೃಷ್ಟ್ವಾ ಸಾತ್ತ್ವಿಕೈರ್ಭಾವೈಃ ಆವೃತೋ ದ್ವಿಜಸತ್ತಮಃ ।
ಸ್ತೋತುಂ ಚಾಽಪಿ ನಮಸ್ಕರ್ತುಂ ತದಾನಾಽಲಂ ಬಭೂವ ಸಃ ॥ ೧೬ ॥

ಅಥ ಶಕ್ರಾದಯೋ ದೇವಾ ತತ್ರೈವಾಭ್ಯಯಯುಸ್ತದಾ ।
ಗಂಧರ್ವಾಪ್ಸರಸಶ್ಚೈವ ಜಗುಶ್ಚ ನನೃತುಸ್ತಥಾ ॥ ೧೭ ॥

ವಿಮಾನ ಶತಸಂಕೀರ್ಣಂ ದೇವರ್ಷಿಗಣಸೇವಿತಂ ।
ಗೀತವಾದಿತ್ರನಿರ್ಘೋಷಂ ಸ್ಥಾನಂ ತದಭವತ್ತದಾ ॥ ೧೮ ॥

---

೧೪ ೧೫. ಅನಂತರ ಅವನು ಎಚ್ಚೆತ್ತು ಮೇಲಕ್ಕೇಳಲು ಅವನು ವಿಷ್ಣುವಾಗಿದ್ದನು. ಶಂಖಚಕ್ರಗದೆಗಳನ್ನು ಧರಿಸಿ ಪೀತಾಂಬರವನ್ನುಟ್ಟು ನಾಲ್ಕುತೋಳುಗಳನ್ನು ಹೊಂದಿ ಶ್ರೀವತ್ಸವೆಂಬ ಮಚ್ಚೆಯನ್ನು ತೋರಿಸುತ್ತಾ ಕಿರೀಟಧಾರಿಯಾಗಿದ್ದನು. ಕಪ್ಪಗಸೆಯ ಹೂವಿನಂತೆ ಕಾಂತಿಯುಳ್ಳವನಾಗಿ ಕೌಸ್ತುಭವೆಂಬ ಮಣಿಯನ್ನು ಎದೆಯಲ್ಲಿ ಅಳವಡಿಸಿಕೊಂಡಿದ್ದನು.

೧೬. ಆ ಸ್ವಾಮಿಯನ್ನು ನೋಡಿ ಭಕ್ತಿಭಾವದಿಂದ ಕೂಡಿದವನಾಗಿ ಆ ಬ್ರಾಹ್ಮಣನು ಸ್ತೋತ್ರಮಾಡುವುದಕ್ಕೂ ನಮಸ್ಕರಿಸುವುದಕ್ಕೂ ಕೂಡ ತಿಳಿಯದೆ ಸುಮ್ಮನೆ ನಿಂತನು.

೧೭. ಆಗ ಇಂದ್ರಾದಿ ದೇವತೆಗಳು ಅಲ್ಲಿಗೆ ಬಂದರು. ಗಂಧರ್ವರೂ ಅಪ್ಸರರೂ ಬಂದು ಹಾಡುವುದಕ್ಕೂ ಕುಣಿಯುವುದಕ್ಕೂ ಮೊದಲು ಮಾಡಿದರು.

೧೮. ಆ ಜಾಗದಲ್ಲಿ ದೇವತೆಗಳೂ ಋಷಿಗಳೂ ಬಂದಿದ್ದರಲ್ಲದೆ ಅನೇಕ ವಿಮಾನಗಳೂ ಬಂದುವು. ಗಾನವಾದ್ಯಗಳಿಂದ ಆ ಜಾಗವು ತುಂಬಿತು.

ತತೋ ವಿಷ್ಣುಸ್ಸಮಾಲಿಂಗ್ಯ ಸ್ವಭಕ್ತಂ ಸಾತ್ವಿಕವ್ರತಂ ।
ಸಾರೂಪ್ಯಮಾತ್ಮನೋ ದತ್ವಾಽನಯದ್ವೈಕುಂಠಮಂದಿರಂ । ॥ ೧೯ ॥

ವಿಮಾನವರಸಂಸ್ಥಂ ತಂ ಗಚ್ಛಂತಂ ವಿಷ್ಣುಸನ್ನಿಧಿಂ ।
ದೀಕ್ಷಿತಶ್ಚೋಳಭೂಪಶ್ಚ ವಿಷ್ಣುದಾಸಂ ದದರ್ಶ ಹ ॥ ೨೦ ॥

ವೈಕುಂಠಭವನಂ ಯಾಂತಂ ವಿಷ್ಣುದಾಸಂ ವಿಲೋಕ್ಯ ಸಃ ।
ಸ್ವಗುರುಂ ಮುದ್ಗಲಂ ವೇಗಾದಾಹೂಯೇತ್ಥಂ ವಚೋಽಬ್ರವೀತ್ ॥ ೨೧ ॥

॥ ರಾಜೋವಾಚ ॥

ಯತ್ ಸ್ಪರ್ಧಯಾ ಮಯಾ ಚೈತದ್ಯಜ್ಞದಾನಾದಿಕಂ ಕೃತಂ ।
ಸ ವಿಷ್ಣುರೂಪಧೃಗ್ವಿಪ್ರೋ ಯಾತಿ ವೈಕುಂಠಮಂದಿರಂ ॥ ೨೨ ॥

ದೀಕ್ಷಿತೇನ ಮಯಾ ಸಮ್ಯಕ್ಸತ್ರೇಽಸ್ಮಿನ್ ವೈಷ್ಣವೇ ತ್ವಯಾ ।
ಹುತಮಗ್ನೌ ಕೃತಾ ವಿಪ್ರಾ ದಾನಾದ್ಯೈಃ ಪೂರ್ಣಮಾನಸಾಃ ॥ ೨೩ ॥

---

೧೯. ಆಗ ವಿಷ್ಣುವು ಸ್ವಭಕ್ತನೂ ಸಾತ್ವಿಕವ್ರತವನ್ನು ಮಾಡಿದವನೂ ಆದ ಆ ಬ್ರಾಹ್ಮಣನನ್ನು ಆಲಿಂಗಿಸಿಕೊಂಡು ತನ್ನ ಸಾರೂಪ್ಯವನ್ನು ಕೊಟ್ಟು ವೈಕುಂಠಕ್ಕೆ ಕರೆದುಕೊಂಡು ಹೋದನು.

೨೦. ವಿಮಾನದಲ್ಲಿ ಕುಳಿತು ವಿಷ್ಣುವಿನ ಸನ್ನಿಧಿಗೆ ಹೋಗುತ್ತಿರುವ ಆ ವಿಷ್ಣುದಾಸನನ್ನು ಯಾಗದಲ್ಲಿ ದೀಕ್ಷೆಗೊಂಡಿದ್ದ ಈ ಚೋಳರಾಜನು ನೋಡಿದನು.

೨೧. ವೈಕುಂಠಕ್ಕೆ ಹೋಗುತ್ತಿರುವ ವಿಷ್ಣುದಾಸನನ್ನು ನೋಡಿ ಈ ರಾಜನು ತನ್ನ ಗುರುವಾದ ಮುದ್ಗಲನನ್ನು ಕರೆದು ಈರೀತಿಯಾಗಿ ಹೇಳಿದನು.

೨೨. ರಾಜನು ಹೇಳಿದನು–ಎಲೈ ಮುದ್ಗಲನೆ ? ಯಾವನ ಮೇಲಿನ ಹಟದಿಂದ ಈಯಜ್ಞ ದಾನಾದಿಗಳನ್ನು ನಾನು ಮಾಡಿದೆನೋ ಆಬ್ರಾಹ್ಮಣನು ವಿಷ್ಣುವಿನ ರೂಪವನ್ನು ಹೊಂದಿ ವೈಕುಂಠಕ್ಕೆ ಹೋಗುತ್ತಿರುವನು. ನೋಡು.

೨೩. ನಾನು ದೀಕ್ಷೆಯನ್ನು ಹೊಂದಿ ಈ ಯಾಗವನ್ನು ಮಾಡುತ್ತ ಹೋಮವನ್ನು ಮಾಡಿ ದಾನ ಮುಂತಾದವುಗಳಿಂದ ಬ್ರಾಹ್ಮಣರನ್ನು ತೃಪ್ತಿಪಡಿಸಿದೆನು.

ನ್ನೈವಾದ್ಯಾಪಿ ಸ ಮೇ ದೇವಃ ಪ್ರಸನ್ನೋ ಜಾಯತೇ ಧ್ರುವಂ ।
ಭಕ್ತ್ಯೈವ ತಸ್ಯ ವಿಪ್ರಸ್ಯ ಸಾಕ್ಷಾತ್ಕಾರಂ ದದೌ ಹರಿಃ ॥ ೨೪ ॥

ತಸ್ಮಾದ್ದಾನೈಶ್ಚ ಯಜ್ಞೈಶ್ಚ ನೈವ ವಿಷ್ಣುಃ ಪ್ರಸೀದತಿ ।
ಭಕ್ತಿರೇವ ಪರಂ ತಸ್ಯ ನಿದಾನಂ ದರ್ಶನೇ ವಿಭೋಃ ॥ ೨೫ ॥

॥ ಗಣಾವೂಚತುಃ ॥

ಇತ್ಯುಕ್ತ್ವಾ ಭಾಗಿನೇಯಂ ಸ್ವಮಭಿಷಿಚ್ಯ ನೃಪಾಸನೇ ।
ಆಬಾಲ್ಯಾದ್ದೀಕ್ಷಿತೋ ಯಜ್ಞೇ ಹ್ಯಪುತ್ರತ್ವಮುಗಾದ್ಯತಃ ॥ ೨೬ ॥

ತಸ್ಮಾದದ್ಯಾಪಿ ತದ್ದೇಶೇ ಸದಾ ರಾಜ್ಯಾಂಶಭಾಗಿನಃ ।
ಸ್ವಸ್ರೀಯಾ ಏವ ಜಾಯಂತೇ ತತ್ಕೃತಾಚಾರವರ್ತಿನಃ ॥ ೨೭ ॥

ಯಜ್ಞವಾಟಂ ತತೋಽಭ್ಯೇತ್ಯ ವಹ್ನಿಕುಂಡಾಗ್ರತಃ ಸ್ಥಿತಃ ।
ತ್ರಿರುಚ್ಚೈರ್ವ್ಯಾಜಹಾರಾಶು ವಿಷ್ಣುಂ ಸಂಬೋಧಯಂಸ್ತದಾ ॥ ೨೮ ॥

---

೨೪ ಈಗಲೂಕೂಡ ಆ ಸ್ವಾಮಿಯು ನನಗೆ ಪ್ರಸನ್ನನಾಗಲೇ ಇಲ್ಲ ಆ ಬ್ರಾಹ್ಮಣನ ಭಕ್ತಿಯಿಂದಲೇ ಅವನಿಗೆ ಸ್ವಾಮಿಯು ಪ್ರಸನ್ನನಾಗಿ ತನ್ನ ಸಾಕ್ಷಾತ್ಕಾರವನ್ನು ಕೊಟ್ಟಿರುವನು.

೨೫. ಆದುದರಿಂದ ದಾನಗಳಿಂದಾಗಲಿ, ಯಜ್ಞಗಳಿಂದಾಗಲಿ, ವಿಷ್ಣುವು ಪ್ರಸನ್ನನಾಗುವುದಿಲ್ಲ. ಭಕ್ತಿಯೊಂದರಿಂದಲೇ ಆ ಸ್ವಾಮಿಯನ್ನು ನೋಡಬಹುದು. ಅದೇ ಕಾರಣವು.

೨೬. ಗಣಗಳು ಹೇಳಿದರು—ಹೀಗೆಂದು ಹೇಳಿ ಅವನು ತನ್ನ ಸೋದರಿಯ ಮಗನನ್ನು ರಾಜ್ಯದಲ್ಲಿ ಅಭಿಷೇಕ ಮಾಡಿದನು. ಯಾತಕ್ಕೆಂದರೆ ಅವನಿಗೆ ಮಕ್ಕಳಿರಲಿಲ್ಲ.

೨೭. ಈಗಲೂ ಕೂಡ ಆ ದೇಶದಲ್ಲಿ ರಾಜ್ಯದ ಹಕ್ಕನ್ನು ಹೊಂದಿರುವವರು ಸೋದರಿಯರ ಮಕ್ಕಳು ಅದೇ ಆಚಾರವನ್ನು ಈಗಲೂ ಅನುಸರಿಸುತ್ತಿರುವರು

೨೮. ಅನಂತರ ಯಜ್ಞದ ಮನೆಗೆ ಹೋಗಿ ಅಗ್ನಿಕುಂಡದ ಮುಂದೆ ಕುಳಿತು ವಿಷ್ಣುವನ್ನು ದ್ದೇಶಿಸಿ ಮೂರುಬಾರಿ ಗಟ್ಟಿಯಾಗಿ ಕೂಗಿದನು.

॥ ರಾಜೋವಾಚ ॥

ವಿಷ್ಣೋ ಭಕ್ತಿಂ ಸ್ಥಿರಾಂ ದೇಹಿ ಮನೋವಾಕ್ಕಾಯಕರ್ಮಭಿಃ ॥ ೨೯ ॥

॥ ಗಣಾವೂಚತುಃ ॥

ಇತ್ಯುಕ್ತ್ವಾ ಸೋಽಪತದ್ವಹ್ನೌ ಸರ್ವೇಷಾಮೇವ ಪಶ್ಯತಾಂ ।
ಮುದ್ಗಲಸ್ತು ತದಾ ಕ್ರೋಧಾಚ್ಛಿಖಾಮುತ್ಪಾಟಯತ್ಸ್ವಕಾಂ ॥ ೩೦ ॥

ತತಸ್ತ್ವದ್ಯಾಪಿ ತದ್ಗೋತ್ರೇ ಮುದ್ಗಲಾ ವಿಶಿಖಾಽಭವನ್ ।
ತಾವದಾವಿರಭೂದ್ವಿಷ್ಣುಃ ಕುಂಡಾಗ್ನೌ ಭಕ್ತವತ್ಸಲಃ ॥ ೩೧ ॥

ತಮಾಲಿಂಗ್ಯ ವಿಮಾನಾಗ್ರ್ಯಂ ಸಮಾರೋಹಯದಚ್ಯುತಃ ।
ತಮಾಲಿಂಗ್ಯಾತ್ಮಸಾರೂಪ್ಯಂ ದತ್ವಾ ವೈಕುಂಠಮಂದಿರಂ ॥
ತೇನೈವ ಸಹ ದೇವೇಶೋ ಜಗಾಮ ತ್ರಿದಶೈರ್ವೃತಃ ॥ ೩೨ ॥

---

೨೯. ರಾಜನು ಹೇಳಿದನು—ಎಲೈ ವಿಷ್ಣುವೇ ! ಮನಸ್ಸು, ಮಾತು, ದೇಹಗಳಿಂದಲೂ ಸ್ಥಿರವಾದ ಭಕ್ತಿಯನ್ನು ಕೊಡು.

೩೦. ಗಣಗಳು ಹೇಳಿದರು—ಹೀಗೆಂದು ಹೇಳಿ ಎಲ್ಲರೂ ನೋಡುತ್ತಿರುವಂತೆಯೇ ಅವನು ಆ ಬೆಂಕಿಯಲ್ಲಿ ಬಿದ್ದನು. ಇದನ್ನು ನೋಡಿ ಮುದ್ಗಲನು ಕೋಪದಿಂದ ತನ್ನ ಜುಟ್ಟನ್ನು ಕಿತ್ತೆಸೆದನು.

೩೧. ಆಗನಿಂದಲೂ ಆ ಮುದ್ಗಲನ ಗೋತ್ರದವರು ಜುಟ್ಟಿಲ್ಲದವರಾದರು. ಇತ್ತ ವಿಷ್ಣುವು ಆ ಅಗ್ನಿಕುಂಡದಲ್ಲಿಯೇ ಭಕ್ತರಲ್ಲಿ ಪ್ರೀತಿಯನ್ನು ತೋರಿಸುತ್ತಾ ಪ್ರಸನ್ನನಾಗಿ ಕಾಣಿಸಿಕೊಂಡನು.

೩೨. ಆ ಚೋಳನನ್ನು ಆಲಿಂಗಿಸಿಕೊಂಡು ತನ್ನ ವಿಮಾನವನ್ನು ಹತ್ತಿಸಿದನು. ಮತ್ತು ತನ್ನ ಸಾರೂಪ್ಯವನ್ನು ಅವನಿಗೆ ಕೊಟ್ಟು ದೇವತೆಗಳೊಡನೆಯೂ ಅವನೊಡನೆಯೂ ವೈಕುಂಠಕ್ಕೆ ಹೋದನು.

ಯೋ ವಿಷ್ಣುದಾಸಸ್ಸ ತು ಪುಣ್ಯಶೀಲೋ-
ಯಶ್ಚೋಳಭೂಪಃ ಸ ಸುಶೀಲನಾಮಾ ।
ಆವಾಮುಭೌ ತತ್ಸಮರೂಪಭಾಜೌ-
ದ್ವಾಃಸ್ಥೌ ಕೃತೌ ತೇನ ರಮಾಪ್ರಿಯೇಣ ॥ ೩೩ ॥

ಇತಿ ಶ್ರೀ ಮಹಾಪುರಾಣೇ ಪಾದ್ಮೇ ಉತ್ತರಖಂಡೇ ಶ್ರೀ ಕೃಷ್ಣ ಸತ್ಯಭಾಮಾ ಸಂವಾದೇ ಕಾರ್ತಿಕ ಮಹಾತ್ಮ್ಯೇ ಕಲಹೋಪಾಖ್ಯಾನಂ ನಾಮ ಏಕಾದಶಾಧಿಕಶತತಮೋಽಧ್ಯಾಯಸ್ಸಮಾಪ್ತಃ

---

೩೩. ವಿಷ್ಣುದಾಸನೆಂಬುವನೇ ಪುಣ್ಯಶೀಲನು. ಚೋಳರಾಜನೇ ಸುಶೀಲನು. ನಮ್ಮಿಬ್ಬರಿಗೂ ಆ ಸ್ವಾಮಿಯು ತನ್ನ ರೂಪವನ್ನು ಕೊಟ್ಟು ಬಾಗಿಲು ಕಾಯುವವರನ್ನಾಗಿ ಮಾಡಿರುವನು.

ಇಂತು ಶ್ರೀ ಪದ್ಮಮಹಾಪುರಾಣದ ಉತ್ತರಖಂಡದ ಶ್ರೀ ಕೃಷ್ಣ ಸತ್ಯಭಾಮಾ ಸಂವಾದದ ಕಾರ್ತಿಕ ಮಹಿಮೆಯಲ್ಲಿ ಕಲಹೋಪಾಖ್ಯಾನ ಎಂಬ ನೂರಹನ್ನೊಂದನೆಯ ಅಧ್ಯಾಯವು ಮುಗಿದುದು.



॥ ಶ್ರೀಃ ॥

-X-

## ಅಥ ಶ್ರೀ ಮಹಾಪುರಾಣೇ ಪಾದ್ಮೇ ಉತ್ತರಖಂಡೇ

## ॥ ದ್ವಾದಶಾಧಿಕಶತತಮೋಽಧ್ಯಾಯಃ ॥



॥ ಧರ್ಮದತ್ತ ಉವಾಚ ॥

ಜಯಶ್ಚ ವಿಜಯಶ್ಚೈವ ವಿಷ್ಣೋರ್ದ್ವಾಸ್ಥೌ ಪುರಾ ಕೃತೌ ।
ಕಿಂ ತು ತಾಭ್ಯಾಂ ಪುರಾಚೀರ್ಣಂ ಯಸ್ಮಾತ್ತದ್ರೂಪಧಾರಿಣೌ ॥ ೧ ॥

॥ ಗಣಾವೂಚತುಃ ॥

ತೃಣಬಿಂದೋಸ್ತು ಕನ್ಯಾಯಾಂ ದೇವಹೂತ್ಯಾಂ ಪುರಾ ದ್ವಿಜ ।
ಕರ್ದಮಸ್ಯ ತು ದೃಷ್ಟ್ಯೈವ ಪುತ್ರೌ ದ್ವೌ ಸಂಬಭೂವತುಃ ॥ ೨ ॥

ಜ್ಯೇಷ್ಠೋ ಜಯಃ ಕನಿಷ್ಠೋಽಭೂದ್ವಿಜಯಶ್ಚೇತಿ ನಾಮತಃ ।
ತಸ್ಯಾಮೇವಾಭವತ್ಪಶ್ಚಾತ್ಕಪಿಲೋ ಯೋಗಧರ್ಮವಿತ್ ॥ ೩ ॥

---

## ನೂರ ಹನ್ನೆರಡನೆಯ ಅಧ್ಯಾಯವು



೧. ಧರ್ಮದತ್ತನು ಹೇಳಿದನು–ಜಯನೂ ವಿಜಯನೂ ವಿಷ್ಣುವಿನ ಮನೆಯ ಬಾಗಿಲು ಕಾಯುವವರಾಗಿರುವರು. ಅವರು ಆ ರೀತಿಯವರಾಗಿರಬೇಕಾಗಿದ್ದರೆ ಪೂರ್ವಜನ್ಮದಲ್ಲಿ ಏನು ಪುಣ್ಯಮಾಡಿರಬೇಕು ?

೨. ಗಣಗಳುಹೇಳಿದರು–ತೃಣ ಬಿಂದುವಿನ ಮಗಳಾದ ದೇವಹೂತಿಯನ್ನು ಕರ್ದಮ ಋಷಿಯು ದೃಷ್ಟಿಸಿ ನೋಡಲು ಇಬ್ಬರು ಮಕ್ಕಳು ಹುಟ್ಟಿದರು.

೩. ಮೊದಲು ಜಯನೂ ಅನಂತರ ವಿಜಯನೂ ಹುಟ್ಟಿದರು. ಅನಂತರ ಅವಳಲ್ಲಿಯೇ ಯೋಗವನ್ನು ಬಲ್ಲ ಕಪಿಲನೂ ಹುಟ್ಟಿದನು.

ಜಯಶ್ಚ ವಿಜಯಶ್ಚೈವ ವಿಷ್ಣುಭಕ್ತಿರತೌ ಸದಾ ।
ತೌ ತನ್ನಿಷ್ಠೇಂದ್ರಿಯಗ್ರಾಮೌ ಧರ್ಮಶೀಲೌ ಬಭೂವತುಃ ॥ ೪ ॥

ನಿತ್ಯಮಷ್ಟಾಕ್ಷರೀಜಾಪ್ಯೌ ವಿಷ್ಣುವ್ರತಕರಾಪ್ರಭೌ ।
ಸಾಕ್ಷಾತ್ಕಾರಂ ತದಾ ವಿಷ್ಣುಸ್ತಯೋರ್ನಿತ್ಯಾರ್ಚನೇ ಸದಾ ॥ ೫ ॥

ಮರುತ್ತೇನ ಕದಾಚಿತ್ತಾವಾಹೂತೌ ಯಜ್ಞಕರ್ಮಣಿ ।
ಜಗ್ಮತುರ್ಯಜ್ಞಕುಶಲೌ ದೇವರ್ಷಿಗಣಪೂಜಿತೌ ॥ ೬ ॥

ಜಯಸ್ತತ್ರಾಽಭವದ್ಬ್ರಹ್ಮಾ ವಿಜಯೋ ಯಾಜಕೋಽಭವತ್ ।
ತತೋ ಯಜ್ಞವಿಧಿಂ ಕೃತ್ಸ್ನಂ ಪರಿಪೂರ್ಣಂ ಚ ಚಕ್ರತುಃ ॥ ೭ ॥

ಮರುತ್ತೋಽವಭೃತಸ್ನಾತಸ್ತಾಭ್ಯಾಂ ವಿತ್ತಂ ದದೌ ಬಹು ।
ತತ್ಸಮಾದಾಯ ತೌ ವಿತ್ತಂ ಜಗ್ಮತುಃ ಸ್ವಾಶ್ರಮಂ ಪ್ರತಿ ॥ ೮ ॥

---

೪. ಜಯನೂ ವಿಜಯನೂ ವಿಷ್ಣುಭಕ್ತರಾಗಿದ್ದರು. ಆ ವಿಷ್ಣುವಿನಲ್ಲಿಯೇ ಯಾವಾಗಲೂ ಮನಸ್ಸನ್ನಿಟ್ಟಿದ್ದುದಲ್ಲದೆ ಧರ್ಮವಂತರೂ ಆಗಿದ್ದರು.

೫. ನಿತ್ಯವೂ ಅಷ್ಟಾಕ್ಷರಿಯ ಮಂತ್ರವನ್ನು ಜಪಿಸುತ್ತಾ ವಿಷ್ಣುವಿನ ವ್ರತವನ್ನೇ ಮಾಡುತ್ತಿದ್ದರು. ಅವರುಗಳಿಗೆ ಪ್ರತಿದಿನದ ಅರ್ಚನೆಯಲ್ಲಿಯೂ ವಿಷ್ಣುವು ಪ್ರತ್ಯಕ್ಷನಾಗುತ್ತಿದ್ದನು.

೬. ಮರುತ್ತು ಎಂಬುವನು ಅವರಿಬ್ಬರನ್ನೂ ಒಂದುಸಾರಿ ಯಜ್ಞಕ್ಕೆ ಕರೆದನು. ಅವರಿಬ್ಬರೂ ಯಾಗ ಪ್ರಕ್ರಿಯೆಯಲ್ಲಿ ಬುದ್ಧಿವಂತರು. ದೇವರ್ಷಿಗಳಿಂದ ಗೌರವಿಸಲ್ಪಟ್ಟವರಾಗಿ ಯಜ್ಞಕ್ಕೆ ಹೋದರು.

೭. ಜಯನು ಬ್ರಹ್ಮನಾದನು. ವಿಜಯನು ಯಾಜಕನಾದನು. ಯಜ್ಞದ ಕೆಲಸವನ್ನೆಲ್ಲಾ ಪೂರ್ತಿಯಾಗಿ ನೆರವೇರಿಸಿದರು.

೮. ಮರುದ್ರಾಜನು ಅವಭೃತಸ್ನಾನ ಮಾಡಿ ಅವರಿಗೆ ಬಹುವಾಗಿ ಹಣವನ್ನು ಕೊಟ್ಟನು. ಅದನ್ನು ತೆಗೆದುಕೊಂಡು ಆಶ್ರಮಕ್ಕೆ ಹೋದರು.

ಯಜನಾಯ ತತೋ ವಿಷ್ಣೋಃ ತುಷ್ಟ್ಯರ್ಥಂ ತೌ ತದಾ ಮುನೇ ।
ತದ್ಧನಂ ವಿಭಜಂತೌ ತೌ ಸಸ್ಪರ್ಧಾತೇ ಪರಸ್ಪರಂ ॥ ೯ ॥

ಜಯೋಽಬ್ರವೀತ್ಸ ಮೇ ಭಾಗಃ ಕ್ರಿಯತಾಮಿತಿ ತತ್ರ ಸಃ ।
ವಿಜಯಶ್ಚಾಬ್ರವೀತ್ತತ್ರ ಯಲ್ಲಬ್ಧಂ ಯೇನ ತತ್ರ ತತ್ ॥ ೧೦ ॥

ತತೋಽಶಪಜ್ಜಯಃ ಕ್ರೋಧಾದ್ವಿಜಯಂ ಕ್ಷುಬ್ಧಮಾನಸಃ ।
ಗೃಹೀತ್ವಾ ನ ದದಾಸ್ಯೈತತ್ತಸ್ಮಾದ್ಗ್ರಾಹೋ ಭವೇತಿ ತಂ ॥ ೧೧ ॥

ವಿಜಯಸ್ತಸ್ಯ ತಂ ಶಾಪಂ ಶ್ರುತ್ವಾ ಸೋಽಸ್ಯಶಪಚ್ಚ ತಂ ।
ಮದಭ್ರಾಂತೋಽಶಪಸ್ತ್ವಮ್ಮಾಂ ತಸ್ಮಾನ್ಮಾತಂಗತಾಂ ವ್ರಜ ॥ ೧೨ ॥

ತತ್ತದಾಚಖ್ಯತುರ್ವಿಷ್ಣುಂ ದೃಷ್ಟ್ವಾ ನಿತ್ಯಾರ್ಚನೇ ವಿಭುಂ ।
ಶಾಪಯೋಶ್ಚ ನಿವೃತ್ತಿಂ ತೌ ಯಯಾಚಾತೇ ರಮಾಪತಿಂ ॥ ೧೩ ॥

---

೯. ಅವರಿಬ್ಬರೂ ವಿಷ್ಣು ಪೂಜೆಗೋಸ್ಕರ ಉಪಯೋಗಿಸಲು ಆ ಹಣವನ್ನು ಭಾಗಮಾಡಿಕೊಳ್ಳುತ್ತಾ ಒಬ್ಬರಿಗೊಬ್ಬರು ಜಗಳವಾಡಲು ಮೊದಲಿಟ್ಟರು.

೧೦. ಬಂದ ಹಣವೆಲ್ಲವನ್ನೂ ಎರಡು ಭಾಗವಾಗಿ ಮಾಡಬೇಕೆಂದು ಜಯನು ಹೇಳಿದನು. ಆದಕ್ಕೆ ವಿಜಯನು ಯಾರು ಯಾರಿಗೆ ಎಷ್ಟೆಷ್ಟು ಹಣ ಬಂದಿದೆಯೋ ಅವರವರಿಗೇ ಆ ಹಣವು ಎಂದನು.

೧೧. ಆಗ ಜಯನಿಗೆ ಕೋಪ ಬಂದು ನೀನು ಹಣವನ್ನು ತೆಗೆದುಕೊಂಡು ಕೊಡದೇ ಹೋಗುವುದರಿಂದ ಮೊಸಳೆಯಾಗು. ಎಂದು ಶಪಿಸಿದನು.

೧೨. ವಿಜಯನೂ ಕೂಡ ಆ ಜಯನ ಶಾಪವನ್ನು ಕೇಳಿ ಎಲೈ ಜಯನೆ ? ನೀನು ಮದದಿಂದ ಕೂಡಿ ಈ ರೀತಿಯಾಗಿ ಶಪಿಸಿರುವುದರಿಂದ ಆನೆಯಾಗಿ ಹುಟ್ಟು. ಎಂದು ಶಪಿಸಿದನು.

೧೩. ನಿತ್ಯಾರ್ಚನೆ ಮಾಡುತ್ತಿರುವಾಗ ಸ್ವಾಮಿಯು ಪ್ರತ್ಯಕ್ಷನಾಗಿ ಬರಲು ಅವರಿಬ್ಬರೂ ತಮ್ಮ ವಿಷಯಗಳನ್ನು ಹೇಳಿಕೊಂಡು ಶಾಪದ ನಿವೃತ್ತಿಯನ್ನು ಕೇಳಿಕೊಂಡರು.

॥ ಜಯವಿಜಯಾವೂಚತುಃ ॥

ಭಕ್ತಾವಾವಾಂ ಕಥಂ ದೇವ ಗ್ರಾಹಮಾತಂಗಯೋನಿಗೌ ।
ಭವಿಷ್ಯಾವಃ ಕೃಪಾಸಿಂಧೋ ತಚ್ಛಾಪೋ ವಿನಿವರ್ತ್ಯತಾಂ ॥ ೧೪ ॥

॥ ಶ್ರೀ ಭಗವಾನುವಾಚ ॥

ಮದ್ಭಕ್ತಯೋರ್ವಚೋಽಸತ್ಯಂ ನ ಕದಾಚಿದ್ಭವಿಷ್ಯತಿ ।
ಮಯಾಪಿ ನಾಽನ್ಯಥಾಕರ್ತುಂ ಶಕ್ಯತೇ ತತ್ಕದಾಚನ ॥ ೧೫ ॥

ಪ್ರಹ್ಲಾದವಚಸಾ ಸ್ತಂಭೇಷ್ವಾವಿರ್ಭೂತೋ ಹ್ಯಹಂ ಪುರಾ ।
ತಥಾಂಽಬರೀಷವಾಕ್ಯೇನ ಜಾತೋ ಗರ್ಭೇಷ್ವಹಂ ಕಿಲ ॥ ೧೬ ॥

ತಸ್ಮಾದ್ಯುವಾಮಿಮೌ ಶಾಪಾವನುಭೂಯ ಸ್ವಯಂಕೃತೌ ।
ಲಭೇಥಾಂ ಮತ್ಪದಂ ನಿತ್ಯಂ ಇತ್ಯುಕ್ತ್ವಾಂತರ್ದಧೇ ಹರಿಃ ॥ ೧೭ ॥

---

೧೪. ಜಯವಿಜಯರು ಹೇಳಿದರು—ಎಲೈ ಸ್ವಾಮಿಯೆ! ನಾವಿಬ್ಬರೂ ನಿನ್ನ ಭಕ್ತರು. ಇಂತಹ ನಾವು ಆನೆ ಮೊಸಳೆಗಳ ಜನ್ಮದಲ್ಲಿ ಹುಟ್ಟುವುದೆಂದರೇನು? ದಯವಿಟ್ಟು ಆ ಶಾಪವನ್ನು ತಪ್ಪಿಸಬೇಕು.

೧೫. ಶ್ರೀ ಭಗವಂತನು ಹೇಳಿದನು—ನನ್ನ ಭಕ್ತರ ಮಾತು ಯಾವಾಗಲೂ ಸುಳ್ಳಾಗಕೂಡದು. ಅದನ್ನು ತಪ್ಪಿಸಲು ನನ್ನಿಂದಲೂ ಆಗುವುದಿಲ್ಲ.

೧೬. ಪ್ರಹ್ಲಾದನ ಮಾತಿನಂತೆ ನಾನು ಕಂಬದಲ್ಲಿ ಹುಟ್ಟಿದೆನು. ಅಂಬರೀಷನ ಮಾತಿನಂತೆ ಗರ್ಭದಲ್ಲಿಯೂ ಹುಟ್ಟಿದೆನು.

೧೭. ಆದುದರಿಂದ ನೀವು ನೀವು ಕೊಟ್ಟುಕೊಂಡಿರುವ ಈ ಶಾಪವನ್ನು ನೀವು ಅನುಭವಿಸಿದ ಮೇಲೆ ನನ್ನ ಜಾಗಕ್ಕೆ ಬನ್ನಿರಿ. ಎಂದು ಹೇಳಿ ಹರಿಯು ಹೊರಟುಹೋದನು.

|| ಗಣಾವೂಚತುಃ ||

ತತಸ್ತೌ ಗ್ರಾಹಮಾತಂಗಾವಭೂತಾಂ ಗಂಡಕೀತಟೇ |
ಜಾತಿಸ್ಮರೌ ತು ತದ್ಯೋನ್ಯಾಮಪಿ ವಿಷ್ಣುವ್ರತೇ ಸ್ಥಿತೌ || ೧೮ ||

ಕದಾಚಿತ್ಸ ಗಜ ಸ್ನಾತುಂ ಕಾರ್ತಿಕೇ ಗಂಡಕೀಂ ಗತಃ |
ತಾವಜ್ಜಗ್ರಾಹ ತಂ ಗ್ರಾಹಃ ಸಂಸ್ಮರನ್ ಶಾಪಕಾರಣಂ || ೧೯ ||

ಗ್ರಾಹಗ್ರಹೀತೋಽಸೌ ನಾಗಃ ಸಸ್ಮಾರ ಶ್ರೀಪತಿಂ ತದಾ |
ತಾವದಾವಿರಭೂದ್ವಿಷ್ಣುಃ ಶಂಖಚಕ್ರಗದಾಧರಃ || ೨೦ ||

ತತಸ್ತೌ ಗ್ರಾಹಮಾತಂಗೌ ಚಕ್ರಂ ಕ್ಷಿಪ್ತ್ವಾ ಸಮುದ್ಧೃತೌ |
ದತ್ವಾ ಚ ನಿಜಸಾರೂಪ್ಯಂ ವೈಕುಂಠಮನಯದ್ವಿಭುಃ || ೨೧ ||

ತದಾಪ್ರಭೃತಿ ತತ್ ಸ್ಥಾನಂ ಹರಿಕ್ಷೇತ್ರಮಿತಿ ಶ್ರುತಂ |
ಚಕ್ರಸಂಘರ್ಷಣಾದ್ಯಸ್ಮಿನ್ ಗ್ರಾವಾಣೋಽಪಿ ಹಿ ಲಾಂಛಿತಾಃ || ೨೨ ||

---

೧೮. ಗಣಗಳು ಹೇಳಿದರು-ಅನಂತರ ಅವರಿಬ್ಬರೂ ಗಂಡಕೀ ನದಿಯ ದಡದಲ್ಲಿ ಆನೆ ಮೊಸಳೆಗಳಾಗಿ ಹುಟ್ಟಿದರು. ಆ ಜನ್ಮದಲ್ಲಿಯೂ ಕೂಡ ಹಿಂದಿನ ಜಾತಿಯನ್ನು ಸ್ಮರಿಸಿಕೊಳ್ಳುತ್ತಾ ವಿಷ್ಣುವನ್ನೇ ಪೂಜಿಸಿದರು.

೧೯. ಒಂದು ದಿನ ಆ ಆನೆಯು ಸ್ನಾನಕ್ಕೋಸ್ಕರ ಕಾರ್ತಿಕ ಮಾಸದಲ್ಲಿ ಆ ಗಂಡಕೀ ನದಿಗೆ ಹೋಯಿತು. ಆಗ ಅದರಲ್ಲಿದ್ದ ಮೊಸಳೆಯು ಶಾಪದ ಕಾರಣವನ್ನು ಸ್ಮರಿಸಿಕೊಳ್ಳುತ್ತಾ ಅದನ್ನು ಹಿಡಿದುಕೊಂಡಿತು.

೨೦-೨೧. ಮೊಸಳೆಯು ಹಿಡಿದುಕೊಳ್ಳಲು ಆ ಆನೆಯು ಶ್ರೀ ವಿಷ್ಣುವನ್ನು ಸ್ಮರಿಸಿಕೊಂಡಿತು. ಆಗ ವಿಷ್ಣುವು ಶಂಖ, ಚಕ್ರ, ಗದೆಗಳನ್ನು ಧರಿಸಿ ಅಲ್ಲಿಗೆ ಬಂದನು. ಆಗ ಆ ವಿಷ್ಣುವು ಚಕ್ರವನ್ನು ಬಿಟ್ಟು ಅವುಗಳನ್ನು ಉದ್ಧಾರ ಮಾಡಿದನು. ಅನಂತರ ಅವಕ್ಕೆ ತನ್ನ ರೂಪವನ್ನು ಕೊಟ್ಟು ವೈಕುಂಠಕ್ಕೆ ಕರೆದುಕೊಂಡು ಹೋದನು.

೨೨. ಅದು ಮೊದಲುಗೊಂಡು ಆ ಜಾಗವನ್ನು ಹರಿಕ್ಷೇತ್ರವೆಂದು ಕರೆಯುತ್ತಾರೆ. ಆಗ ಆ ಚಕ್ರದ ಹೊಡೆತದಿಂದ ಕಲ್ಲುಗಳೂ ಕೂಡ ಗುರುತು ಮಾಡಲ್ಪಟ್ಟವು.

ತಾವುಭೌ ವಿಶ್ರುತೌ ಲೋಕೇ ಜಯಶ್ಚ ವಿಜಯಶ್ಚ ಹ ।
ನಿತ್ಯಂ ವಿಷ್ಣುಪ್ರಿಯೌ ದ್ವಾಸ್ಸ್ಥೌ ಪೃಷ್ಟೌ ಯೌ ಹಿ ತ್ವಯಾ ದ್ವಿಜ॥ ೨೩ ॥

ಅತಸ್ತ್ವಮಪಿ ಧರ್ಮಜ್ಞ ನಿತ್ಯಂ ವಿಷ್ಣುವ್ರತೇ ಸ್ಥಿತಃ ।
ತ್ಯಕ್ತ್ವಾಮಾತ್ಸರ್ಯದಂಭೋಽಪಿ ಭವಸ್ವ ಸಮದರ್ಶನಃ ॥ ೨೪ ॥

ತುಲಾಮಕರಮೇಷೇಷು ಪ್ರಾತಸ್ನಾಯೀ ಸದಾ ಭವ ।
ಏಕಾದಶೀವ್ರತೇ ತಿಷ್ಠ ತುಳಸೀವನಪಾಲಕಃ ॥ ೨೫ ॥

ಬ್ರಾಹ್ಮಣಾನಥ ಗಾಶ್ಚಾಪಿ ವೈಷ್ಣವಾಂಶ್ಚ ಸದಾ ಭಜ ।
ಮಸೂರಿಕಾಮಾರನಾಳಂ ವೃಂತಾಕಮಪಿ ವೈ ತ್ಯಜ ॥ ೨೬ ॥

ಏವಂ ತ್ವಮಪಿ ದೇಹಾಂತೇ ತದ್ವಿಷ್ಣೋಃ ಪರಮಂ ಪದಂ ।
ಪ್ರಾಪ್ಸ್ಯೋಽಸಿ ಧರ್ಮದತ್ತ ತ್ವಂ ತದ್ಭಕ್ತ್ಯೈವ ಯಥಾ ವಯಂ ॥ ೨೭ ॥

---

೨೩. ಅವರಿಬ್ಬರೂ ಜಯವಿಜಯರೆನಿಸಿಕೊಂಡು ಲೋಕದಲ್ಲಿ ಪ್ರಸಿದ್ಧರಾಗಿ ವಿಷ್ಣುವಿಗೆ ಪ್ರೀತಿಪಾತ್ರರಾಗಿದ್ದಾರೆ. ಅವರು ಯಾವಾಗಲೂ ವಿಷ್ಣುಪ್ರಿಯರು. ಅವರೇ ನೀನು ಕೇಳಿದ ದ್ವಾರಪಾಲಕರು.

೨೪. ಎಲೈ ಧರ್ಮಜ್ಞನೆ! ನೀನು ವಿಷ್ಣುವ್ರತದಲ್ಲಿಯೇ ಇದ್ದೀಯೆ. ಮಾತ್ಸರ್ಯ ದಂಭಗಳನ್ನು ಬಿಟ್ಟಿದ್ದೀಯೆ. ಆದರೂ ಸಮದೃಷ್ಟಿಯುಳ್ಳವನಾಗು.

೨೫. ತುಲಾ, ಮಕರ, ಮೇಷ ಮಾಸಗಳಲ್ಲಿ ಯಾವಾಗಲೂ ಪ್ರಾತಃಸ್ನಾನ ಮಾಡು. ಏಕಾದಶೀ ವ್ರತವನ್ನಾಚರಿಸುತ್ತ ತುಳಸಿಯ ವನವನ್ನು ಕಾಪಾಡು.

೨೬. ಬ್ರಾಹ್ಮಣರು, ಗೋವುಗಳು, ವೈಷ್ಣವರು ಇವರನ್ನು ಯಾವಾಗಲೂ ಪೂಜಿಸು ಹಾರಕ, ಜೋಳ, ಬದನೇಕಾಯಿಗಳನ್ನು ಯಾವಾಗಲೂ ತಿನ್ನಬೇಡ.

೨೭. ಈರೀತಿ ಮಾಡಿದರೆ ನೀನು ಈ ದೇಹವನ್ನು ಬಿಟ್ಟಮೇಲೆ ಆ ಸ್ವಾಮಿಯಲ್ಲಿ ಭಕ್ತರಾದ ನಮ್ಮಂತೆ ನೀನೂ ಆ ವಿಷ್ಣುಪದವನ್ನು ಹೊಂದುತ್ತೀಯೆ.

ತವಾಜನ್ಮ ವ್ರತಾದಸ್ಮಾದ್ವಿಷ್ಣು ಸಂತುಷ್ಟಿಕಾರಕಾತ್ ।
ನ ಯಜ್ಞಾ ನ ಚ ದಾನಾನಿ ನ ತೀರ್ಥಾನ್ಯಧಿಕಾನಿ ವೈ ॥ ೨೮ ॥

ಧನ್ಯೋಽಸಿ ವಿಪ್ರಾಗ್ರ್ಯ ಯತಸ್ತ್ವಯೈತತ್
ವ್ರತಂ ಕೃತಂ ತುಷ್ಟಿಕರಂ ಜಗದ್ಗುರೋಃ ।
ಯದ್ಧರ್ಮಭಾಗಾತ್ಪ್ರಯತಾ ಮುರಾರೇಃ
ಪ್ರಣೀಯತೇಽಸ್ಮಾಭಿರಿಯಂ ಸಲೋಕತಾ ॥ ೨೯ ॥

॥ ನಾರದ ಉವಾಚ ॥

ಇತ್ಥಂ ತೌ ಧರ್ಮದತ್ತಂ ತಂ ಉಪದಿಶ್ಯ ವಿಮಾನ ಗೌ ।
ತಯಾ ಕಲಹಯಾ ಸಾರ್ಧಂ ವೈಕುಂಠಭವನಂ ಗತೌ ॥ ೩೦ ॥

ಧರ್ಮದತ್ತೋಽಪ್ಯಸೌ ಜಾತಪ್ರತ್ಯಯಸ್ತದ್ವ್ರತೇ ಸ್ಥಿತಃ ।
ದೇಹಾಂತೇ ತದ್ವಿಭೋಸ್ಸ್ಥಾನಂ ಭಾರ್ಯಾಭ್ಯಾಮನ್ವಿತೋಽಭ್ಯಗಾತ್॥ ೩೧ ॥

---

೨೮. ವಿಷ್ಣು ತೃಪ್ತಿಕರವಾದ ನೀನು ಮಾಡಿದ ಈ ವ್ರತಕ್ಕಿಂತಲೂ ಯಜ್ಞವಾಗಲಿ, ದಾನವಾಗಲಿ, ತೀರ್ಥಗಳಾಗಲಿ ಶ್ರೇಷ್ಠಗಳಲ್ಲ.

೨೯. ಎಲೈ ಧರ್ಮಜ್ಞನೆ! ವಿಷ್ಣುತುಷ್ಟಿಕರವಾದ ಈ ವ್ರತವನ್ನು ಮಾಡಿದುದರಿಂದ ನೀನೇ ಧನ್ಯನು. ಅಂತಹ ಸ್ವಾಮಿಯ ವ್ರತಗಳನ್ನು ಮಾಡಿದುದರಿಂದಲೇ ನಾವೂ ಕೂಡ ಈ ಸ್ವಾಮಿಯ ಸಾಲೋಕ್ಯವನ್ನು ಹೊಂದಿರುವುದು.

೩೦. ನಾರದನು ಹೇಳಿದನು–ಈ ರೀತಿಯಾಗಿ ಅವರಿಬ್ಬರೂ ಧರ್ಮದತ್ತನಿಗೆ ಧರ್ಮವನ್ನು ಉಪದೇಶಮಾಡಿ ವಿಮಾನದಲ್ಲಿ ಹತ್ತಿ ಆ ಕಲಹೆಯೊಡನೆ ವೈಕುಂಠಕ್ಕೆ ಹೋದರು.

೩೧. ಧರ್ಮದತ್ತನೂ ಕೂಡ ನಂಬಿಕೆಯುಳ್ಳವನಾಗಿ ಆ ವ್ರತವನ್ನೇ ಮಾಡುತ್ತಿದ್ದು ದೇಹವನ್ನು ಬಿಟ್ಟಮೇಲೆ ಇಬ್ಬರು ಹೆಂಡಿರೊಡನೆಯೂ ಕೂಡಿದವನಾಗಿ ವೈಕುಂಠಕ್ಕೆ ಹೋದನು.

ಇತಿಹಾಸಮಿಮಂ ಪುರಾಭವಂ
ಶೃಣುತೇ ಶ್ರಾವಯತೇ ಚ ಯಃ ಪುಮಾನ್ ।
ಹರಿಸನ್ನಿಧಿಕಾರಿಣೀಂ ಗತಿಂ
ಲಭತೇಽಸೌ ಕೃಪಯಾ ಜಗದ್ಗುರೋಃ ॥ ೩೨ ॥

ಇತಿ ಶ್ರೀ ಮಹಾಪುರಾಣೇ ಪಾದ್ಮೇ ಉತ್ತರಖಂಡೇ ಶ್ರೀ ಕೃಷ್ಣ ಸತ್ಯಭಾಮಾ ಸಂವಾದೇ ಕಾರ್ತಿಕ ಮಾಹಾತ್ಮ್ಯೇ ಕಲಹೋಪಾಖ್ಯಾನೇ ಕಲಹಾ ವೈಕುಂಠ ಗಮನಂ ನಾಮ ದ್ವಾದಶಾಧಿಕಶತತಮೋಽಧ್ಯಾಯಸ್ಸಮಾಪ್ತಃ

---

೩೨. ಹಿಂದಿನ ಈ ಇತಿಹಾಸವನ್ನು ಕೇಳಿದವನು ಹೇಳಿದವನು ಇಬ್ಬರೂ ಹರಿಯ ಸ್ಥಾನವನ್ನು ಹೊಂದುವ ಸ್ಥಿತಿಯನ್ನು ಆ ಸ್ವಾಮಿಯ ದಯೆಯಿಂದ ಹೊಂದುತ್ತಾರೆ.

ಇಂತು ಶ್ರೀ ಪದ್ಮಮಹಾಪುರಾಣದ ಉತ್ತರಖಂಡದ ಶ್ರೀ ಕೃಷ್ಣ ಸತ್ಯಭಾಮೆಯರ ಸಂವಾದದ ಕಾರ್ತಿಕ ಮಹಿಮೆಯ ಕಲಹೋಪಾಖ್ಯಾನದಲ್ಲಿ ಕಲಹೆಯು ವೈಕುಂಠಕ್ಕೆ ಹೋದುದು ಎಂಬ ನೂರ ಹನ್ನೆರಡನೆಯ ಅಧ್ಯಾಯವು ಮುಗಿದುದು.



|| ಶ್ರೀಃ ||

–X–

# ಅಥ ಶ್ರೀ ಮಹಾಪುರಾಣೇ ಪಾದ್ಮೇ ಉತ್ತರಖಂಡೇ

## || ತ್ರಯೋದಶಾಧಿಕಶತತಮೋಽಧ್ಯಾಯಃ ||



|| ಪೃಥುರುವಾಚ ||

ಕೃಷ್ಣವೇಣ್ಯಾತಟಾದ್ಯಸ್ಮಾಚ್ಛಿವವಿಷ್ಣುಗಣೈಃ ಪುರಾ |
ವಣಿಕ್ಶರೀರಾತ್ಕಲಹಾ ನಿರಸ್ತಾ ಕಥಿತಾ ತ್ವಯಾ || ೧ ||

ಪ್ರಭಾವೋಽಯಂ ತಯೋರ್ನದ್ಯೋಃ ಕಿಂ ವಾ ಕ್ಷೇತ್ರಸ್ಯ ತಸ್ಯ ಚ |
ತನ್ಮೇ ಕಥಯ ಧರ್ಮಜ್ಞ ವಿಸ್ಮಯೋತ್ರ ಮಹಾನ್ಮಮ || ೨ ||

|| ನಾರದ ಉವಾಚ ||

ಕೃಷ್ಣಾ ಕೃಷ್ಣತನುಸ್ಸಾಕ್ಷಾದ್ವೇಣ್ಯಾ ದೇವೋ ಮಹೇಶ್ವರಃ |
ತತ್ಸಂಗಮಪ್ರಭಾವಂ ತು ನಾಲಂ ವಕ್ತುಂ ಚತುರ್ಮುಖಃ || ೩ ||

---

## ನೂರ ಹದಿಮೂರನೆಯ ಅಧ್ಯಾಯವು



೧. ಪೃಥುವು ಹೇಳಿದನು–ಶಿವ ಮತ್ತು ವಿಷ್ಣುವಿನ ಗಣಗಳು ಆ ಕಲಹೆಯು ವರ್ತಕನ ದೇಹದಿಂದ ಕೃಷ್ಣವೇಣಿಯ ದಡದಲ್ಲಿ ಓಡಿಸಲ್ಪಟ್ಟಳು. ಎಂದು ಹೇಳಿದೆಯಷ್ಟೆ ?

೨. ಆ ನದಿಗಳ ಪ್ರಭಾವವು ಎಂಥಾದ್ದು ? ಆ ಕ್ಷೇತ್ರದ ಮಹಿಮೆಯೇನು ? ಇದು ಬಹು ಆಶ್ಚರ್ಯವಾಗಿದೆ. ಅದನ್ನು ವಿಸ್ತಾರವಾಗಿ ಹೇಳು.

೩. ನಾರದನು ಹೇಳಿದನು-ಕೃಷ್ಣಾನದಿಯು ಪ್ರತ್ಯಕ್ಷವಾದ ಕೃಷ್ಣನ ಶರೀರವೆಂದೇ ತಿಳಿ. ವೇಣೀ ನದಿಗೆ ಅಧಿಪತಿಯು ಮಹಾದೇವನು. ಅವುಗಳ ಸಂಗಮದ ಪ್ರಭಾವವನ್ನು ನಾಲ್ಕು ಮುಖವಿದ್ದರೂ ಕೂಡ ಬ್ರಹ್ಮನೂ ಹೇಳಲಾರನು.

ತಥಾಪಿ ತತ್ಸಮುತ್ಪತ್ತಿಂ ಕೀರ್ತಯಿಷ್ಯಾಮಿ ತಾಂ ಶೃಣು ।
ಚಾಕ್ಷುಷಸ್ಯಾಂತರೇ ಪೂರ್ವಂ ಮನೋರ್ದೇವಃ ಪಿತಾಮಹಃ ॥ ೪ ॥

ಸಹ್ಯಾದ್ರಿಶಿಖರೇ ರಮ್ಯೇ ಯಜನಾಯೋದ್ಯತೋಽಭವತ್ ।
ಸ ಕೃತ್ವಾ ಯಜ್ಞಸಂಭಾರಾನ್ ಸರ್ವದೇವಗಣೈರ್ವೃತಃ ।
ಯುಕ್ತೋ ಹರಿಹರಾಭ್ಯಾಂ ಹಿ ತದ್ಗಿರೇಶ್ಶಿಖರಂ ಯಯೌ ॥ ೫ ॥

ಭೃಗ್ವಾದಯೋ ಮುನಿಗಣಾ ಮುಹೂರ್ತೇ ಬ್ರಹ್ಮದೈವತೇ ।
ತಸ್ಯ ದೀಕ್ಷಾವಿಧಾನಾಯ ಸಮಾಜಂ ಚಕ್ರುರಾದೃತಾಃ ॥ ೬ ॥

ಅಥ ಜ್ಯೇಷ್ಠಾಂ ಸ್ವರಾಂ ಪತ್ನೀಂ ವಿಷ್ಣುರಾನಾಹಯತ್ತದಾ ।
ಸಾ ಶನೈರಾಯಯೌ ತಾವದ್ಭೃಗುರ್ವಿಷ್ಣುಮುವಾಚ ಹ ॥ ೭ ॥

॥ ಭೃಗುರುವಾಚ ॥

ವಿಷ್ಣೋ ಸ್ವರಾ ತ್ವಯಾಹೂತಾಽಪ್ಯಾಯಾತಿ ನ ಹಿ ಸತ್ವರಂ ।
ಮುಹೂರ್ತಾತಿಕ್ರಮಶ್ಚಾಯಂ ಕಾರ್ಯೋ ದೀಕ್ಷಾವಿಧಿಃ ಕಥಂ ॥ ೮ ॥

---

೪. ಆದರೂ ಅದರ ಉತ್ಪತ್ತಿಯನ್ನು ಹೇಳುತ್ತೇನೆ. ಕೇಳು. ಚಾಕ್ಷುಷ ಮನ್ವಂತರದಲ್ಲಿ ಬ್ರಹ್ಮನು ಸಹ್ಯಪರ್ವತದಲ್ಲಿ ಯಾಗಮಾಡಲು ಪ್ರಯತ್ನಿಸಿದನು

೫. ಆ ಬ್ರಹ್ಮನು ಯಜ್ಞದ ಸಾಮಗ್ರಿಗಳೆಲ್ಲವನ್ನೂ ಸಿದ್ಧಮಾಡಿಕೊಂಡು ದೇವತೆಗಳೊಡನೆ ಹರಿಹರರನ್ನು ಕರೆದುಕೊಂಡು ಆ ಸಹ್ಯಾದ್ರಿಯ ಶಿಖರಕ್ಕೆ ಹೋದನು.

೬. ಬ್ರಹ್ಮ ದೈವತಕವಾದ ಮುಹೂರ್ತದಲ್ಲಿ ಭೃಗುವೇ ಮುಂತಾದ ಋಷಿಗಳು ಆ ಬ್ರಹ್ಮನಿಗೆ ದೀಕ್ಷೆಯನ್ನು ಕೊಡಲು ಸಭೆಯನ್ನು ಮಾಡಿದರು.

೭. ಬ್ರಹ್ಮನ ಮೊದಲನೆ ಹೆಂಡತಿಯಾದ ಸ್ವರಾ ಎಂಬುವಳನ್ನು ವಿಷ್ಣುವು ಕರೆದನು. ಆಕೆಯು ಬರುವುದು ಸಾವಕಾಶವಾಗಲು ಭೃಗುವು ವಿಷ್ಣುವನ್ನು ಕುರಿತು ಇಂತೆಂದನು.

೮. ಭೃಗುವು ಹೇಳಿದನು-ಎಲೈ ವಿಷ್ಣುವೆ! ನೀನು ಸ್ವರೆಯನ್ನು ಕರೆದರೂ ಆಕೆಯು ಜಾಗ್ರತೆಯಾಗಿ ಬರಲಿಲ್ಲ. ಮುಹೂರ್ತವು ಮೀರುತ್ತಿರುವುದು. ದೀಕ್ಷೆಯನ್ನು ಹೇಗೆ ಮಾಡುವುದು?

|| ಶ್ರೀ ವಿಷ್ಣುರುವಾಚ ||

ನಾಯಾತಿ ಚೇತ್ಸ್ವರಾ ಶೀಘ್ರಂ ಗಾಯತ್ರ್ಯತ್ರ ವಿಧೀಯತಾಂ ।
ಏಷಾಪಿ ನ ಭವೇದಸ್ಯ ಭಾರ್ಯಾ ಕಿಂ ಪುಣ್ಯಕರ್ಮಣಿ || ೯ ||

|| ನಾರದ ಉವಾಚ ||

ಏವಮೇವ ಹಿ ರುದ್ರೋಽಪಿ ವಿಷ್ಣೋರ್ವಾಕ್ಯಮನುಸ್ಮೃತ ।
ತಚ್ಛ್ರುತ್ವಾ ಸಭೃಗುರ್ವಾಕ್ಯಂ ಗಾಯತ್ರೀಂ ಬ್ರಹ್ಮಣಸ್ತದಾ || ೧೦ ||

ನಿವೇಶ್ಯ ದಕ್ಷಿಣೇ ಭಾಗೇ ದೀಕ್ಷಾವಿಧಿಮಕಾರಯತ್ ।
ಯಾವದ್ದೀಕ್ಷಾವಿಧಿಂ ಸಮ್ಯಗ್ವಿಧೇಶ್ಚಕ್ರುರ್ಮುನೀಶ್ವರಾಃ || ೧೧ ||

ತಾವದಭ್ಯಾಯಯೌ ತತ್ರ ಸ್ವರಾ ಯಜ್ಞಸ್ಥಲಂ ನೃಪ ।
ತತಸ್ತಾಂ ದೀಕ್ಷಿತಾಂ ದೃಷ್ಟ್ವಾ ಗಾಯತ್ರೀಂ ಬ್ರಹ್ಮಣಾ ಸಹ ।
ಸಪತ್ನೀಷ್ಯಾರ್ಭವಾತ್ಕ್ರೋಧಾತ್ಸ್ವರಾ ವಚಸಮಬ್ರವೀತ್ || ೧೨ ||

---

೯. ಶ್ರೀ ವಿಷ್ಣುವು ಹೇಳಿದನು– ಸ್ವರೆಯು ಜಾಗ್ರತೆಯಾಗಿ ಬರದಿದ್ದರೆ ಗಾಯತ್ರಿಯನ್ನೇ ಕೂರಿಸಿ ದೀಕ್ಷೆಯನ್ನು ನಿರ್ವಹಿಸು. ಈಕೆಯೂ ಕೂಡ ಬ್ರಹ್ಮನ ಪುಣ್ಯಕರ್ಮಗಳಲ್ಲಿ ಏಕೆ ಭಾಗಿನಿಯಾಗಬಾರದು ?

೧೦. ನಾರದನು ಹೇಳಿದನು–ರುದ್ರನೂ ಕೂಡ ವಿಷ್ಣುವಿನ ಮಾತನ್ನೇ ಒಪ್ಪಿಕೊಂಡನು. ಅದನ್ನು ಕೇಳಿ ಭೃಗುವು ಗಾಯತ್ರಿಯನ್ನೇ ಬ್ರಹ್ಮನ ಬಲಗಡೆ ಯಲ್ಲಿ ಕೂರಿಸಿ ದೀಕ್ಷಾವಿಧಿಯನ್ನು ನೆರವೇರಿಸಿದನು.

೧೧. ಋಷಿಗಳೆಲ್ಲರೂ ದೀಕ್ಷಾವಿಧಿಯನ್ನು ಮಾಡುತ್ತಿರುವಷ್ಟರಲ್ಲಿಯೇ ಆ ಯಜ್ಞಸ್ಥಳಕ್ಕೆ ಸ್ವರೆಯು ಬಂದಳು.

೧೨. ಗಾಯಿತ್ರಿಯು ಬ್ರಹ್ಮನೊಡನೆ ದೀಕ್ಷೆಯನ್ನು ಹೊಂದಿರುವುದನ್ನು ನೋಡಿ ಸವತಿಯ ಮತ್ಸರದಿಂದ ಕೋಪಗೊಂಡು ಆ ಸ್ವರೆಯು ಇಂತೆಂದಳು.

॥ ಸ್ವರೋವಾಚ ॥

ಅಪೂಜ್ಯಾ ಯತ್ರ ಪೂಜ್ಯಂತೇ ಪೂಜ್ಯಾನಾಂ ಚ ವ್ಯತಿಕ್ರಮಃ ।
ತ್ರೀಣಿ ತತ್ರ ಭವಿಷ್ಯಂತಿ ದುರ್ಭಿಕ್ಷಂ ಮರಣಂ ಭಯಂ ॥ ೧೩ ॥

ಇಯಂ ಚ ದಕ್ಷಿಣೇ ಭಾಗೇ ಉಪವಿಷ್ಟಾ ಮದಾಸನೇ ।
ತಸ್ಮಾಲ್ಲೋಕೇ ಸದಾಽದೃಶ್ಯಾ ತನುರೂಪಾ ತು ನಿಮ್ನಗಾ ॥ ೧೪ ॥

ಮದಾಸನೇ ಕನಿಷ್ಠೇಯಂ ಭವದ್ಭಿಸ್ಸನ್ನಿವೇಶಿತಾ ।
ತಸ್ಮಾತ್ಸರ್ವೇ ಜಡೀಭೂತಾ ನದೀರೂಪಾ ಭವಿಷ್ಯಥ ॥ ೧೫ ॥

॥ ನಾರದ ಉವಾಚ ॥

ತತಸ್ತಚ್ಛಾಪಮಾಕರ್ಣ್ಯ ಗಾಯತ್ರೀ ಕಂಪಿತಾ ತದಾ ।
ಸಮುತ್ಥಾಯಾಶಪದ್ದೇವೈರ್ವಾರ್ಯಮಾಣಾಪಿ ತಾಂ ಸ್ವರಾಂ ॥ ೧೬ ॥

---

೧೩. ಸ್ವರೆಯು ಹೇಳಿದಳು–ಯಾವ ಜಾಗದಲ್ಲಿ ಪೂಜೆಗೆ ಯೋಗ್ಯರಲ್ಲದವರನ್ನು ಪೂಜಿಸುತ್ತಾರೆಯೋ ಅಥವಾ ಪೂಜೆಗೆ ಯೋಗ್ಯರಾದವರಿಗೆ ಪೂಜೆಯು ನಡೆಯುವುದಿಲ್ಲವೋ ಆ ಜಾಗದಲ್ಲಿ ದುರ್ಭಿಕ್ಷ ಮರಣ ಭಯ ಈ ಮೂರೂ ಉಂಟಾಗುತ್ತವೆ.

೧೪. ಈಕೆಯು ಬ್ರಹ್ಮನ ಬಲಭಾಗದಲ್ಲಿ ನನ್ನ ಜಾಗದಲ್ಲಿ ಕುಳಿತುಕೊಂಡುದ್ದರಿಂದ ಲೋಕದಲ್ಲಿ ಜನಗಳಿಗೆ ಕಾಣದ ರೀತಿಯಲ್ಲಿ ಸೂಕ್ಷ್ಮಳಾದ ನದಿಯಾಗಿ ಹೋಗಲಿ.

೧೫. ನನಗಿಂತಲೂ ಚಿಕ್ಕವಳಾದ ಈಕೆಯನ್ನು ನೀವೆಲ್ಲರೂ ಸೇರಿ ಕೂರಿಸಿರುವುದರಿಂದ ನೀವೆಲ್ಲರೂ ಜಡರಾಗಿ ನದಿಯ ರೂಪವನ್ನು ಹೊಂದಿರಿ.

೧೬. ನಾರದನು ಹೇಳಿದನು–ಗಾಯತ್ರಿಯು ಸ್ವರೆಯ ಶಾಪವನ್ನು ಕೇಳಿ ನಡುಗಿದವಳಾಗಿ ದೇವತೆಗಳು ಬೇಡ ಬೇಡವೆಂದೆನ್ನುತ್ತಿದ್ದರೂ ಮೇಲಕ್ಕೆದ್ದು ಆಕೆಯನ್ನು ಶಪಿಸಿದಳು.

|| ಗಾಯಿತ್ರ್ಯುವಾಚ ||

ತವ ಭರ್ತಾ ಯಥಾ ಬ್ರಹ್ಮಾ ಮಮಾಪ್ಯೇಷ ತಥಾ ಖಲು |
ವೃಥಾಽಶಪಸ್ತ್ವಂ ಯಸ್ಮಾನ್ಮಾಂ ಭವ ತ್ವಮಪಿ ನಿಮ್ನಗಾ || ೧೭ ||

|| ನಾರದ ಉವಾಚ ||

ತತೋ ಹಾ ಹಾ ಕೃತಾಸ್ಸರ್ವೇ ಶಿವವಿಷ್ಣುಮುಖಾಸ್ಸುರಾಃ |
ಪ್ರಣಮ್ಯ ದಂಡವದ್ಭೂಮೌ ಸ್ವರಾಂ ತತ್ರ ವ್ಯಜಿಜ್ಞಪುಃ || ೧೮ ||

|| ದೇವಾ ಊಚುಃ ||

ದೇವಿ ಸರ್ವೇ ವಯಂ ಶಪ್ತಾ ಬ್ರಹ್ಮಾದ್ಯಾ ಯತ್ತ್ವಯಾಽಧುನಾ |
ಯದಿ ಸರ್ವೇ ಜಡೀಭೂತಾ ಭವಿಷ್ಯಾಮೋಽತ್ರನಿಮ್ನಗಾಃ || ೧೯ ||

ತದಾ ಲೋಕತ್ರಯಂ ಹ್ಯೇತದ್ವಿನಶ್ಯತಿ ವಿನಿಶ್ಚಿತಂ |
ಅವಿವೇಕಃ ಕುತಸ್ತಸ್ಮಾಚ್ಛಾಪೋಽಯಂ ವಿನಿವರ್ತ್ಯತಾಂ || ೨೦ ||

---

೧೭. ಗಾಯಿತ್ರಿಯು ಹೇಳಿದಳು–ಬ್ರಹ್ಮನು ನಿನಗೆ ಹೇಗೆ ಗಂಡನೋ ಹಾಗೆಯೇ ನನಗೂ ಗಂಡನು. ನೀನು ನನ್ನನ್ನು ಕಾರಣವಿಲ್ಲದೆ ಶಪಿಸಿದುದರಿಂದ ನೀನೂ ಕೂಡ ನದಿಯಾಗಿ ಆಗು.

೧೮. ನಾರದನು ಹೇಳಿದನು–ಶ್ರೀ ವಿಷ್ಣು ಮುಂತಾದ ದೇವತೆಗಳೆಲ್ಲರೂ ಹಾಹಾಕಾರ ಮಾಡಿದರು. ಅವರೆಲ್ಲರೂ ಸ್ವರೆಗೆ ದಂಡ ನಮಸ್ಕಾರ ಮಾಡಿ ಇಂತು ವಿಜ್ಞಾಪಿಸಿಕೊಂಡರು.

೧೯-೨೦. ದೇವತೆಗಳು ಹೇಳಿದರು–ಎಲೈ ದೇವಿಯೆ! ಬ್ರಹ್ಮನೇ ಮುಂತಾದ ದೇವತೆಗಳಾದ ನಮ್ಮೆಲ್ಲರನ್ನೂ ಶಪಿಸಿದ್ದೀಯೆ. ನಾವು ನದಿಗಳಾಗಿ ಜ್ಞಾನಶೂನ್ಯರಾಗಿ ಆದರೆ ಆಗ ಮೂರು ಲೋಕವೂ ನಾಶವಾಗುತ್ತದೆ. ಇದು ನಿಶ್ಚಯವು. ಈ ಅವಿವೇಕದ ಕೆಲಸವನ್ನು ಮಾಡಬೇಡ. ಶಾಪವನ್ನು ಹಿಂದಕ್ಕೆ ತೆಗೆದುಕೋ

॥ ಸ್ವರೋವಾಚ ॥

ನಾರ್ಚಿತೋ ಹಿ ಗಣಾಧ್ಯಕ್ಷೋ ಯಜ್ಞಾದೌ ಯತ್ಸುರೋತ್ತಮಾಃ ।
ತಸ್ಮಾದ್ವಿಘ್ನಂ ಸಮುತ್ಪನ್ನಂ ಮತ್ಕ್ರೋಧಜಮಿದಂ ಖಲು ॥ ೨೧ ॥

ನಾಪಿ ಮದ್ವಚನಂ ಹ್ಯೇತದಸತ್ಯಂ ಖಲು ಜಾಯತೇ ।
ತಸ್ಮಾತ್ಸ್ವಾಂಶೈರ್ಜಡೀಭೂತಾ ಯೂಯಂ ಭವತ ನಿಮ್ನಗಾಃ ॥ ೨೨ ॥

ಆವಾಮಪಿ ಸಪತ್ನ್ಯೌ ಚ ಸ್ವಾಂಶಾಭ್ಯಾಮಪನಿಮ್ನಗೇ ।
ಭವಿಷ್ಯಾವೋಽತ್ರ ಭೋ ದೇವಾಃ ಪಶ್ಚಿಮಾಭಿಮುಖಾ ವಹೇ ॥ ೨೩ ॥

॥ ನಾರದ ಉವಾಚ ॥

ಇತಿ ತದ್ವಚನಂ ಶ್ರುತ್ವಾ ಬ್ರಹ್ಮಾವಿಷ್ಣುಮಹೇಶ್ವರಾಃ ।
ಜಡೀಭೂತಾಽಭವನ್ನದ್ಯಃ ಸ್ವಾಂಶೈರೇವ ತದಾ ನೃಪ ॥ ೨೪ ॥

ತತ್ರ ವಿಷ್ಣುರಭೂತ್ಕೃಷ್ಣಾ ವೇಣ್ಯಾ ದೇವೋ ಮಹೇಶ್ವರಃ ।
ಬ್ರಹ್ಮಾ ಕಕುದ್ಮತೀ ಚಾಸೀತ್ಪೃಥುವೇಗಾಽಭವತ್ತದಾ ॥ ೨೫ ॥

---

೨೧. ಎಲೈ ದೇವತೆಗಳಿರ! ಯಜ್ಞದ ಆದಿಯಲ್ಲಿ ನೀವು ಗಣಪತಿಯನ್ನು ಪೂಜಿಸಲಿಲ್ಲ. ಆದುದರಿಂದಲೇ ನನ್ನ ಕೋಪರೂಪವಾದ ವಿಘ್ನವು ಇಲ್ಲಿ ಉಂಟಾಯಿತು.

೨೨. ಎಲೈ ದೇವತೆಗಳಿರ! ನನ್ನ ಮಾತು ಸುಳ್ಳಾಗುವುದಿಲ್ಲ. ಆದುದರಿಂದ ನೀವು ನಿಮ್ಮ ಅಂಶಗಳಿಂದ ಜಡರಾದ ನದಿಗಳಾಗಿರಿ.

೨೩. ಸವತಿಯರಾದ ನಾವೂ ಕೂಡ ನಮ್ಮ ಅಂಶದಿಂದ ಜಡರಾದ ನದಿಗಳಾಗಿ ಪಶ್ಚಿಮಾಭಿಮುಖವಾಗಿ ಹರಿಯುತ್ತೇವೆ.

೨೪. ನಾರದನು ಹೇಳಿದನು–ಬ್ರಹ್ಮಾ ವಿಷ್ಣು ಮಹೇಶ್ವರರು ಈ ಮಾತನ್ನು ಕೇಳಿ ತಮ್ಮ ತಮ್ಮ ಅಂಶಗಳಿಂದಲೇ ಜಡರಾದ ನದಿಗಳಾಗಿ ಹರಿದರು.

೨೫. ಆಗ ವಿಷ್ಣುವು ಕೃಷ್ಣಾನದಿಯಾಗಿಯೂ ಮಹೇಶ್ವರನು ವೇಣೀ ನದಿಯಾಗಿಯೂ ಬ್ರಹ್ಮನು ಕಕುದ್ಮತೀ ನದಿಯಾಗಿಯೂ ಆದರು. ಆಗ ಈ ಕುಕುದ್ಮತಿಯು ಬಹು ವೇಗವುಳ್ಳದ್ದಾಯಿತು.

ದೇಹಾಸ್ತಾನಪಿ ತಾನಂಶಾನ್ ಜಡೀಕೃತ್ಯಾವಿಚಿಕ್ಷಿಪುಃ ।
ಸಹ್ಯಾದ್ರಿಶಿಖರೇಭ್ಯಸ್ತಾಃ ಪೃಥಗಾಸಂಸ್ತು ನಿಮ್ನಗಾಃ ॥ ೨೬ ॥

ದೇವಾಂಶೈಃ ಪೂರ್ವವಾಹಿನ್ಯೋ ಬಭೂವುಃ ಪಶ್ಚಿಮಾವಹಾಃ ।
ತತ್ಪತ್ನ್ಯಂಶೈಃ ಪೃಥಕ್ ತತ್ರ ಶತಶೋಽಥ ಸಹಸ್ರಶಃ ॥ ೨೭ ॥

ಗಾಯತ್ರೀ ಚ ಸ್ವರಾ ಚೈವ ಪಶ್ಚಿಮಾಭಿಮುಖೇ ತದಾ ।
ಯೋಗೇನಾಭವತಾಂ ನದ್ಯೌ ಸಾವಿತ್ರೀತಿ ಪ್ರಥಾಂ ಗತೇ ॥ ೨೮ ॥

ಬ್ರಹ್ಮಣಾ ಸ್ಥಾಪಿತೌ ತತ್ರ ಯಜ್ಞೇ ಹರಿಹರಾವುಭೌ ।
ಮಹಾಬಲಾತಿಬಲಿನೌ ನಾಮ್ನಾ ದೇವೌ ಬಭೂವತುಃ ॥ ೨೯ ॥

ತಯೋರ್ನದ್ಯೋಸ್ತು ಮಾಹಾತ್ಮ್ಯಂ ನಾಹಂ ವಕ್ತುಂ ಕ್ಷಮೋ ನೃಪ ।
ಯಯುರ್ಬ್ರಹ್ಮಾದಯೋ ದೇವಾಃ ಸ್ವಾಂಶೈಸ್ತಿಷ್ಠನ್ತಿ ಚಾಪಗಾಃ ॥ ೩೦ ॥

---

೨೬. ದೇವತೆಗಳೂ ತಮ್ಮ ತಮ್ಮ ಅಂಶಗಳನ್ನು ಜಡವನ್ನಾಗಿ ಮಾಡಿ ಎಸೆಯಲು ಅವೆಲ್ಲವೂ ಸಹ್ಯಪರ್ವತದ ಶಿಖರದಿಂದ ಬೇರೆ ಬೇರೆ ನದಿಗಳಾಗಿ ಹರಿದುವು.

೨೭. ದೇವಾಂಶದಿಂದ ಹುಟ್ಟಿದ ನದಿಗಳು ಪೂರ್ವವಾಹಿನಿಗಳಾಗಿಯೂ ಅವರ ಹೆಂಡತಿಯರ ಅಂಶದಿಂದ ಹುಟ್ಟಿದುವು. ಪಶ್ಚಿಮಾಭಿಮುಖವಾಗಿಯೂ ಆಗಿ ಬಹುದೂರವಾಗಿ ಹರಿದುವು.

೨೮. ಗಾಯತ್ರಿಯೂ ಸ್ವರೆಯೂ ಯೋಗದಿಂದ ನದಿಗಳಾಗಿ ಪಶ್ಚಿಮ ಮುಖವಾಗಿ ಹರಿದುವು. ಸಾವಿತ್ರೀ ಎಂಬುದಾಗಿ ಪ್ರಸಿದ್ಧವೂ ಆದುವು.

೨೯. ಆ ಯಜ್ಞದಲ್ಲಿ ಹರಿಹರರಿಬ್ಬರನ್ನೂ ಬ್ರಹ್ಮನು ಸ್ಥಾಪಿಸಿದನು. ಪ್ರೋಕ್ಷಿಸಿದುದರಿಂದ ಅವರು ಮಹಾಬಲ ಅತಿಬಲರೆಂದು ಹೆಸರನ್ನೂ ಹೊಂದಿದರು.

೩೦. ಆ ನದಿಗಳ ಮಹಿಮೆಯನ್ನು ಹೇಳಲು ನನಗೆ ಶಕ್ತಿಸಾಲದು. ಅನಂತರ ಆ ಬ್ರಹ್ಮಾದಿಗಳು ಹೊರಟುಹೋದರು. ಅವರ ಅಂಶಗಳಿಂದ ಆ ನದಿಗಳು ಮಾತ್ರ ಇವೆ.

ಕೃಷ್ಣೋದ್ಭವಂ ಪಾಪಹರಂ ಶಿವಂ ಚ-
ಶೃಣೋತಿ ಯಶ್ಶ್ರಾವಯತೇ ಚ ಭಕ್ತ್ಯಾ ।
ಸ್ಯಾತ್ತಸ್ಯ ಪುಂಸಃ ಸಕಲಂ ಫಲಂ ಯತ್-
ತದ್ದರ್ಶನಸ್ನಾನಸಮುದ್ಭವಂ ಸ್ಮೃತಂ ॥ ೩೧ ॥

ಇತಿ ಶ್ರೀ ಮಹಾಪುರಾಣೇ ಪಾದ್ಮೇ ಉತ್ತರಖಂಡೇ ಕಾರ್ತಿಕ ಮಾಹಾತ್ಮ್ಯೇ ಶ್ರೀ ಕೃಷ್ಣ ಸತ್ಯಭಾಮಾ ಸಂವಾದೇ ಕೃಷ್ಣವೇಣ್ಯಾ ಮಹಿಮಾ ವರ್ಣನಂ ನಾಮ ತ್ರಯೋದಶಾಧಿಕಶತತಮೋಽಧ್ಯಾಯಸ್ಸಮಾಪ್ತಃ

---

೩೧. ಈ ಪಾಪಹರ ಮತ್ತು ಪುಣ್ಯಪ್ರದವಾದ ಕೃಷ್ಣಚರಿತ್ರೆಯನ್ನು ಯಾವನು ಕೇಳುತ್ತಾನೆಯೋ, ಹೇಳುತ್ತಾನೆಯೋ ಅವರಿಬ್ಬರೂ ಆ ನದಿಯ ದರ್ಶನ ಸ್ನಾನಗಳಿಂದ ಹೊಂದುವ ಫಲಗಳನ್ನು ಹೊಂದುತ್ತಾರೆ.

ಇಂತು ಶ್ರೀ ಪದ್ಮಮಹಾಪುರಾಣದ ಉತ್ತರಖಂಡದ ಕಾರ್ತಿಕ ಮಹಿಮೆಯ ಶ್ರೀ ಕೃಷ್ಣ ಸತ್ಯಭಾಮೆಯರ ಸಂವಾದದಲ್ಲಿ ಕೃಷ್ಣವೇಣಿಯ ಮಹಿಮೆ ಎಂಬ ನೂರ ಹದಿಮೂರನೆಯ ಅಧ್ಯಾಯವು ಮುಗಿದುದು.



॥ ಶ್ರೀಃ ॥

-X-

# ಅಥ ಶ್ರೀ ಮಹಾಪುರಾಣೇ ಪಾದ್ಮೇ ಉತ್ತರಖಂಡೇ

## ॥ ಚತುರ್ದಶಾಧಿಕಶತತಮೋऽಧ್ಯಾಯಃ ॥



॥ ಶ್ರೀಕೃಷ್ಣ ಉವಾಚ ॥

**ಇತಿ ತದ್ವಚನಂ ಶ್ರುತ್ವಾ ಪೃಥುರ್ವಿಸ್ಮಯಮಾನಸಃ ।**
**ಸಂಪೂಜ್ಯ ನಾರದಂ ಭಕ್ತ್ಯಾ ವಿಸಸರ್ಜ ತದಾ ಪ್ರಿಯೇ ॥ ೧ ॥**

**ತಸ್ಮಾದ್ವ್ರತತ್ರಯಂ ಹ್ಯೇನ್ಮಮಾತೀವ ಪ್ರಿಯಂಕರಂ ।**
**ಮಾಘಕಾರ್ತಿಕಯೋಸ್ತದ್ವತ್ತಥೈವೈಕಾದಶೀವ್ರತಂ ॥ ೨ ॥**

**ವನಸ್ಪತೀನಾಂ ತುಳಸೀ ಮಾಸಾನಾಂ ಕಾರ್ತಿಕಃ ಪ್ರಿಯಃ ।**
**ಏಕಾದಶೀ ತಿಥೀನಾಂ ಚ ಕ್ಷೇತ್ರಾಣಾಂ ದ್ವಾರಕಾ ಮಮ ॥ ೩ ॥**

---

## ನೂರ ಹದಿನಾಲ್ಕನೆಯ ಅಧ್ಯಾಯವು



೧. ಶ್ರೀ ಕೃಷ್ಣನು ಹೇಳಿದನು–ನಾರದನ ಈ ಮಾತನ್ನು ಕೇಳಿ ಪೃಥುವು ಆಶ್ಚರ್ಯಪಟ್ಟು ಭಕ್ತಿಯಿಂದ ಆ ನಾರದನನ್ನು ಗೌರವಿಸಿ ಕಳುಹಿಸಿಬಿಟ್ಟನು.

೨. ಆದುದರಿಂದ ಮಾಘ ಕಾರ್ತಿಕ ವ್ರತಗಳು ಅಂತೆಯೇ ಏಕಾದಶೀ ವ್ರತವು. ಈ ಮೂರೂ ನನಗೆ ಪ್ರಿಯವಾದುವು.

೩. ವನಸ್ಪತಿಗಳಲ್ಲಿ ತುಳಸಿಯೂ, ಮಾಸಗಳಲ್ಲಿ ಕಾರ್ತಿಕವೂ, ತಿಥಿಗಳಲ್ಲಿ ಏಕಾದಶಿಯೂ, ಕ್ಷೇತ್ರಗಳಲ್ಲಿ ದ್ವಾರಕೆಯೂ ನನಗೆ ಪ್ರಿಯವಾದುವು.

ಏತೇಷಾಂ ಸೇವನಂ ಯಸ್ತು ಕರೋತಿ ನಿಯತೇಂದ್ರಿಯಃ ।
ಸ ಮೇ ವಲ್ಲಭತಾಮೇತಿ ನ ತಥಾ ಯಜನಾದಿಭಿಃ ॥ ೪ ॥

ಪಾಪೇಭ್ಯೋ ನ ಭಯಂ ತೇನ ಕರ್ತವ್ಯಂ ನ ಯಮಾದಪಿ ।
ಏತೇಷಾಂ ಸೇವನಂ ಕಾಂತೇ ಕುರ್ವತಾ ಮತ್ಪ್ರಸಾದತಃ ॥ ೫ ॥

॥ ಸತ್ಯಭಾಮೋವಾಚ ॥

ವಿಸ್ಮಾಪನೀಯಂ ತನ್ನಾಥ ಯತ್ತ್ವಯಾ ಕಥಿತಂ ಮಮ ।
ಪರದತ್ತೇನ ಪುಣ್ಯೇನ ಕಲಹಾ ಮುಕ್ತಿಮಾಗತಾ ॥ ೬ ॥

ಇತ್ಥಂ ಪ್ರಭಾವೋ ಮಾಸೋಽಯಂ ಕಾರ್ತಿಕಸ್ತೇ ಪ್ರಿಯಂಕರಃ ।
ಸ್ವಾಮಿದ್ರೋಹಾದಿಪಾಪಾನಿ ಸ್ನಾನದಾನೈರ್ಗತಾನಿ ಯತ್ ॥ ೭ ॥

ದತ್ತಂ ಚ ಲಭತೇ ಪುಣ್ಯಂ ಯತ್ಪರೇಣ ಕೃತಂ ಪ್ರಭೋ ।
ಅದತ್ತಂ ಕೇನ ಮಾರ್ಗೇಣ ಲಭತೇ ನಾಽಪಿ ಮಾನವಃ ॥ ೮ ॥

---

೪. ಜಿತೇಂದ್ರಿಯನಾಗಿ ಇವುಗಳನ್ನು ಸೇವಿಸುವವನು ನನಗೆ ಪ್ರಿಯನಾಗುತ್ತಾನೆ. ಯಜ್ಞಯಾಗಾದಿಗಳನ್ನು ಮಾಡಿದವನೂ ಕೂಡ ಅಷ್ಟು ಪ್ರಿಯನಾಗುವುದಿಲ್ಲ.

೫. ಇವುಗಳನ್ನು ಸೇವಿಸುವವನು ನನ್ನ ಅನುಗ್ರಹಕ್ಕೆ ಪಾತ್ರನಾಗಿ ಪಾಪಗಳಿಗೂ, ಯಮನಿಗೂ ಹೆದರಬೇಕಾಗಿರುವುದಿಲ್ಲ.

೬. ಸತ್ಯಭಾಮೆಯು ಹೇಳಿದಳು–ಎಲೈ ನಾಥನೆ! ನೀನು ಹೇಳಿದುದು ನನಗೆ ಆಶ್ಚರ್ಯವಾಗಿದೆ. ಪರರು ಕೊಟ್ಟ ಪುಣ್ಯದಿಂದ ಆ ಕಲಹೆಯು ಮುಕ್ತಿ ಹೊಂದಿದಳಲ್ಲ!

೭. ಸ್ವಾಮಿದ್ರೋಹವೇ ಮುಂತಾದ ಪಾಪಗಳು ಕಾರ್ತಿಕಮಾಸದ ಸ್ನಾನ ದಾನಗಳಿಂದ ಹೋಗುತ್ತವೆ ಎಂದ ಮೇಲೆ ಆ ಮಾಸದ ಪ್ರಭಾವವು ಯಾವ ರೀತಿಯಾದುದು ?

೮. ಎಲೈ ಪ್ರಭುವೇ ! ಪರರು ಕೊಟ್ಟರೆ ಆ ಪುಣ್ಯವನ್ನು ಹೊಂದುತ್ತಾನೆ. ಯಾರೂ ಕೊಡದಿದ್ದರೆ ಆ ಪುಣ್ಯವನ್ನು ಹೊಂದುವುದು ಹೇಗೆ ?

|| ಶ್ರೀಕೃಷ್ಣ ಉವಾಚ ||

ಅದತ್ತಾನ್ಯಪಿ ಪುಣ್ಯಾನಿ ಪಾಪಾನಿ ಚ ತಥಾ ಪರೈಃ ।
ಪ್ರಾಪ್ಯಂತೇ ಕರ್ಮಣಾ ಯೇನ ತದ್ಯಥಾವನ್ನಿಶಾಮಯ || ೯ ||

ದೇಶಗ್ರಾಮಕುಲಾನಿ ಸ್ಯುರ್ಭಾಗಭಾಂಜಿ ಕೃತಾದಿಷು ।
ಕಲೌ ತು ಕೇವಲಂ ಕರ್ತಾ ಫಲಭುಕ್ ಪುಣ್ಯಪಾಪಯೋಃ || ೧೦ ||

ಅಕೃತೇ ಚ ಹಿ ಸಂಸರ್ಗೇ ವ್ಯವಸ್ಥೇಯಮುದಾಹೃತಾ ।
ಸಂಸರ್ಗಾತ್ಪುಣ್ಯಪಾಪಾನಿ ಯಥಾಯಾಂತಿ ನಿಬೋಧ ತತ್ || ೧೧ ||

ಏಕತ್ರ ಮೈಥುನಾದ್ಯೋನೌ ಏಕಪಾತ್ರಸ್ಥ ಭೋಜನಾತ್ ।
ಫಲಾರ್ಧಂ ಪ್ರಾಪ್ನುಯಾನ್ಮರ್ತ್ಯಃ ಯಥಾವತ್ಪುಣ್ಯಪಾಪಯೋಃ || ೧೨ ||

ಅಧ್ಯಾಪನಾದ್ಯಾಜನಾದ್ವಾ ಹ್ಯೇಕಪಂಕ್ತ್ಯಶನಾದಪಿ ।
ತುರ್ಯಾಂಶಂ ಪುಣ್ಯಪಾಪಾನಾಂ ಪರೋಕ್ಷಂ ಲಭತೇ ನರಃ || ೧೩ ||

---

೯. ಶ್ರೀಕೃಷ್ಣನು ಹೇಳಿದನು–ಪರರು ತಾವು ಇತರರಿಗೆ ಪುಣ್ಯವನ್ನಾಗಲಿ, ಪಾಪವನ್ನಾಗಲಿ ಕೊಡದಿದ್ದರೂ ಅವು ಬರುವ ಬಗೆಯನ್ನು ಹೇಳುತ್ತೇನೆ. ಕೇಳು.

೧೦. ಕೃತಯುಗ, ತ್ರೇತಾಯುಗ, ದ್ವಾಪರಯುಗಗಳಲ್ಲಿ ಮನುಷ್ಯನು ಮಾಡಿದ ಪಾಪದಲ್ಲಿ ದೇಶ, ಗ್ರಾಮ, ವಂಶಗಳೂ ಭಾಗಿಗಳಾಗುತ್ತವೆ. ಕಲಿಯುಗದಲ್ಲಿ ಆ ಪುಣ್ಯ ಪಾಪಗಳನ್ನು ಮಾಡಿದವನೊಬ್ಬನೇ ಅನುಭವಿಸಬೇಕು.

೧೧. ಮತ್ತೊಬ್ಬನ ಜೊತೆಯಿಲ್ಲದೆ ಮನುಷ್ಯನು ಒಬ್ಬಂಟಿಗನಾಗಿದ್ದರೆ ಮೇಲೆ ಹೇಳಿದ ಈ ವ್ಯವಸ್ಥೆಯು. ಸಹವಾಸವಿದ್ದರೆ ಆಗ ಈ ಪುಣ್ಯ ಪಾಪಗಳ ವ್ಯವಸ್ಥೆಯನ್ನು ಹೇಳುತ್ತೇನೆ ಕೇಳು.

೧೨. ಒಂದೇ ಪಾತ್ರದಲ್ಲಿ ಮೈಥುನ ಮಾಡುವುದರಿಂದಲೂ, ಒಂದೇ ಪಾತ್ರೆಯಲ್ಲಿ ಊಟಮಾಡುವುದರಿಂದಲೂ ಮನುಷ್ಯನು ಪುಣ್ಯ ಪಾಪಗಳಲ್ಲಿ ಅರ್ಧ ಭಾಗವನ್ನು ಹೊಂದುತ್ತಾನೆ.

೧೩. ಅಧ್ಯಯನವನ್ನು ಮಾಡಿಸುವುದರಿಂದಲೂ, ಗುರುವಾಗಿ ಪೂಜೆ ಮುಂತಾದುವುಗಳನ್ನು ಮಾಡುವುದರಿಂದಲೂ, ಒಂದೇ ಪಂಕ್ತಿಯಲ್ಲಿ ಊಟ ಮಾಡುವುದರಿಂದಲೂ ಮನುಷ್ಯನು ಪರೋಕ್ಷವಾಗಿ ಪುಣ್ಯ ಪಾಪಗಳ ನಾಲ್ಕನೆಯ ಒಂದಂಶವನ್ನು ಹೊಂದುತ್ತಾನೆ

ಏಕಾಸನಾದೇಕಯಾನಾನ್ನಿಶ್ವಾಸಸ್ಯಾಂಗಸಂಗತಃ ।
ಷಡಂಶಫಲಭಾಗೀಸ್ಯಾನ್ನಿಯತಂ ಪುಣ್ಯಪಾಪಯೋಃ ॥ ೧೪ ॥

ಸ್ಪರ್ಶನಾದ್ಭಾಷಣಾದ್ವಾಪಿ ಪರಸ್ಯ ಸ್ತವನಾದಪಿ ।
ದಶಾಂಶಂ ಪುಣ್ಯಪಾಪಾನಾಂ ನಿತ್ಯಂ ಪ್ರಾಪ್ನೋತಿ ಮಾನವಃ ॥ ೧೫ ॥

ದರ್ಶನಶ್ರವಣಾಭ್ಯಾಂ ಚ ಮನೋಧ್ಯಾನಾತ್ತಥೈವ ಚ ।
ಪರಸ್ಯ ಪುಣ್ಯಪಾಪಾನಾಂ ಶತಾಂಶಂ ಪ್ರಾಪ್ನುಯಾನ್ನರಃ ॥ ೧೬ ॥

ಪರಸ್ಯ ನಿಂದಾಂ ಪೈಶುನ್ಯಂ ಧಿಕ್ಕಾರಂ ಚ ಕರೋತಿ ಯಃ ।
ತತ್ಕೃತಂ ಪಾತಕಂ ಪ್ರಾಪ್ಯ ಸ್ವಪುಣ್ಯಂ ಪ್ರದದಾತಿ ಸಃ ॥ ೧೭ ॥

ಕುರ್ವತಃ ಪುಣ್ಯಕರ್ಮಾಣಿ ಸೇವಾಂ ಯಃ ಕುರುತೇ ನರಃ ।
ಪತ್ನೀಭೃತಕಶಿಷ್ಯೇಭ್ಯೋ ಯದನ್ಯಃ ಕೋಽಪಿ ಮಾನವಃ ॥ ೧೮ ॥

---

೧೪. ಒಂದೇ ಪೀಠದಲ್ಲಿ ಕುಳಿತುಕೊಳ್ಳುವುದು, ಒಂದೇ ಗಾಡಿ ಮುಂತಾದುವುಗಳಲ್ಲಿ ಕುಳಿತುಕೊಳ್ಳುವುದು, ಅವರು ಬಿಡುವ ಉಸಿರು ಮೈಮೇಲೆ ಸೋಕುವುದು, ಉಗುಳಿದರೆ ತಗಲುವುದು ಇದರಿಂದ ಪ್ರಾಣಿಗಳು ಅವರ ಪಾಪ ಪುಣ್ಯಗಳಲ್ಲಿ ಆರನೆಯ ಒಂದಂಶವನ್ನು ಹೊಂದುತ್ತಾರೆ.

೧೫. ಮುಟ್ಟುವುದರಿಂದಲೂ, ಮಾತಾಡುವುದರಿಂದಲೂ, ಮತ್ತೊಬ್ಬರನ್ನು ಹೊಗಳುವುದರಿಂದಲೂ, ಅವನ ಪುಣ್ಯ ಪಾಪಗಳಲ್ಲಿ ಮನುಷ್ಯನು ಹತ್ತನೆಯ ಒಂದು ಭಾಗವನ್ನು ಹೊಂದುತ್ತಾನೆ.

೧೬. ನೋಡುವಿಕೆ, ಕೇಳುವಿಕೆ, ಮನಸ್ಸಿನಲ್ಲಿಯೇ ಧ್ಯಾನಮಾಡುವಿಕೆ, ಇವುಗಳಿಂದ ಮನುಷ್ಯನಿಗೆ ಪುಣ್ಯ ಪಾಪಗಳ ನೂರರಲ್ಲಿ ಒಂದು ಭಾಗವು ಬರುತ್ತದೆ.

೧೭. ಯಾವನು ಪರನಿಂದೆಯನ್ನು ಮಾಡುವನೋ, ಚಾಡಿ ಹೇಳುವನೋ, ತಿರಸ್ಕರಿಸುವನೋ ಅವನು ತನಗೆ ವಿಷಯನಾದವನ ಪಾತಕವನ್ನು ತಾನು ತೆಗೆದುಕೊಂಡು ಅವನಿಗೆ ತನ್ನ ಪುಣ್ಯವನ್ನು ಕೊಟ್ಟುಬಿಡುತ್ತಾನೆ.

೧೮–೧೯. ಯಾವನಾದರೂ ಪುಣ್ಯ ಕೆಲಸವನ್ನು ಮಾಡುತ್ತಿದ್ದಾಗ ಹೆಂಡತಿ, ಆಳು, ಶಿಷ್ಯರಲ್ಲದವರು ಯಾರಾದರೂ ಸೇವೆ ಮಾಡಿದರೆ ಆ ಸೇವೆಗೆ ಯೋಗ್ಯವಾಗಿ

**ತಸ್ಯ ಸೇವಾನುರೂಪಂ ಚೇದ್ದ್ರವ್ಯಂ ಕಿಂಚಿನ್ನ ದೀಯತೇ ।**
**ತಸ್ಯ ಸೇವಾನುರೂಪ್ಯೇಣ ತತ್ಪುಣ್ಯಫಲಭಾಗ್ಭವೇತ್ ॥ ೧೯ ॥**

**ಏಕಪಂಕ್ತ್ಯಶ್ನತಾಂ ಯಸ್ತು ಲಂಘಯೇತ್ಪರಿವೇಷಣಂ ।**
**ತಸ್ಯ ಪುಣ್ಯಂ ಷಡಂಶಂ ತು ಲಭೇದ್ಯಸ್ತು ವಿಲಂಘಿತಃ ॥ ೨೦ ॥**

**ಸ್ನಾನಂ ಸಂಧ್ಯಾಧಿಕಂ ಕುರ್ವನ್ಯಃ ಸ್ಪೃಶೇದ್ವಾ ಪ್ರಭಾಷತೇ ।**
**ಸ ಕರ್ಮ ಪುಣ್ಯಷಷ್ಠಾಂಶಂ ದದ್ಯಾತ್ತಸ್ಮೈ ಸ ಕರ್ಮಕೃತ್ ॥ ೨೧ ॥**

**ಧರ್ಮೋದ್ದೇಶೇನ ಯೋ ದ್ರವ್ಯಂ ಪರಂ ಚ ಯಾಚತೇ ನರಃ ।**
**ತತ್ಪುಣ್ಯಕರ್ಮಣಸ್ತಸ್ಯ ಧನದಸ್ತ್ವಪ್ನುಯಾತ್ಫಲಂ ॥ ೨೨ ॥**

**ಅಪಹೃತ್ಯ ಪರದ್ರವ್ಯಂ ಪುಣ್ಯಕರ್ಮ ಕರೋತಿ ಯಃ ।**
**ಕರ್ಮಕರ್ತಾ ನ ಚಾಪ್ನೋತಿ ಧನಿನಸ್ತದ್ಭವಂ ಫಲಂ ॥ ೨೩ ॥**

---

ಕೂಲಿಯನ್ನು ಕೊಡಬೇಕು. ಹಾಗೆ ಕೊಡದಿದ್ದರೆ ಅವನು ಮಾಡಿದ ಸೇವೆಗೆ ಅನುರೂಪವಾಗಿ ಪುಣ್ಯವನ್ನು ಹೊಂದುತ್ತಾನೆ.

೨೦. ಒಂದೇ ಸಾಲಿನಲ್ಲಿ ಕುಳಿತುಕೊಂಡು ಊಟಮಾಡುತ್ತಿರುವಾಗ ಬಡಿಸುವಿಕೆಯಲ್ಲಿ ಯಾವನು ವ್ಯತ್ಯಾಸವನ್ನು ತೋರಿಸುವನೋ, ವ್ಯತ್ಯಾಸ ಮಾಡಿದವನ ಆರಥೇ ಒಂದಂಶ ಪುಣ್ಯವನ್ನು ವ್ಯತ್ಯಾಸ ಹೊಂದಿದವನು ಹೊಂದುತ್ತಾನೆ.

೨೧. ಸ್ನಾನ ಸಂಧ್ಯಾವಂದನೆಗಳನ್ನು ಮಾಡುತ್ತಿರುವಾಗ ಯಾರನ್ನು ಮುಟ್ಟುತ್ತಾನೆಯೋ ಅವನಿಗೆ ತಾನು ಮಾಡುವ ಪುಣ್ಯಕೆಲಸದ ಆರನೇ ಒಂದಂಶವನ್ನು ಕೊಡುತ್ತಾನೆ.

೨೨. ಧರ್ಮ ಕೆಲಸಕ್ಕೆಂದು ಯಾವನು ಹಣವನ್ನು ಯಾಚಿಸುತ್ತಾನೆಯೋ ಆ ಪುಣ್ಯ ಕೆಲಸದಲ್ಲಿ ಆ ಹಣಕೊಟ್ಟವನೂ ಭಾಗಿಯಾಗುತ್ತಾನೆ.

೨೩. ಪರರ ಹಣವನ್ನು ಕದ್ದು ಯಾವನು ಪುಣ್ಯಕರ್ಮವನ್ನು ಮಾಡುತ್ತಾನೆಯೋ ಆ ಫಲವನ್ನು ಪುಣ್ಯಕೆಲಸವನ್ನು ಮಾಡಿದವನು ಹೊಂದುವುದಿಲ್ಲ. ಆ ಹಣದವನಿಗೆ ಆ ಫಲವು ಬರುತ್ತದೆ.

ನಾಪನುತ್ಯ ಋಣಂ ಯಸ್ತು ಪರಸ್ಯ ಮ್ರಿಯತೇ ನರಃ ।
ಧನೀ ತತ್ಪುಣ್ಯಮಾಪ್ನೋತಿ ಸ್ವಧನಸ್ಯಾನುರೂಪತಃ ॥ ೨೪ ॥

ಬುದ್ಧಿದಸ್ತ್ವನುಮಂತಾ ಚ ಯಶ್ಚೋಪಕರಣಪ್ರದಃ ।
ಬಲಕೃಚ್ಚಾಪಿ ಷಷ್ಠಾಂಶಂ ಪ್ರಾಪ್ನುಯಾತ್ಪುಣ್ಯಪಾಪಯೋಃ ॥ ೨೫ ॥

ಪ್ರಜಾಭ್ಯಃ ಪುಣ್ಯಪಾಪಾನಾಂ ರಾಜಾ ಷಷ್ಠಾಂಶಮುದ್ಧರೇತ್ ।
ಶಿಷ್ಯಾದ್ಗುರುಃ ಸ್ತ್ರಿಯಾ ಭರ್ತಾ ಪಿತಾ ಪುತ್ರಾತ್ತಥೈವ ಚ ॥ ೨೬ ॥

ಸ್ವಪತೇರಪಿ ಪುಣ್ಯಸ್ಯ ಯೋಷಿದರ್ಧಮವಾಪ್ನುಯಾತ್ ।
ಚಿತ್ತಸ್ಯಾನುವ್ರತಾ ಶಶ್ವತ್ ವರ್ತತೇ ತುಷ್ಟಿಕಾರಿಣೀ ॥ ೨೭ ॥

ಪರಹಸ್ತೇನ ದಾನಾನಿ ಕುರ್ವತಃ ಪುಣ್ಯಕರ್ಮಣಾಂ ।
ವಿನಾ ಭೃತಕಪುತ್ರಾಭ್ಯಾಂ ಕರ್ತಾ ಷಷ್ಠಾಂಶಮುದ್ಧರೇತ್ ॥ ೨೮ ॥

---

೨೪. ಸಾಲಮಾಡಿ ಆ ಸಾಲವನ್ನು ತೀರಿಸದೆ ಸತ್ತರೆ ಧನಿಕನು ಆ ಸಾಲ ತೆಗೆದುಕೊಂಡವನ ಪುಣ್ಯವನ್ನು ತನ್ನ ಹಣಕ್ಕೆ ಅನುಗುಣವಾಗಿ ಪಡೆಯುತ್ತಾನೆ.

೨೫ ಬುದ್ಧಿ ಹೇಳಿದವನು, ಒಪ್ಪಿಕೊಳ್ಳುವವನು, ಸಾಮಾನುಗಳನ್ನು ಕೊಡುವವನು, ಬಲ ಬರುವಂತೆ ಮಾಡುವವನು ಇವರು ಅವನ ಪುಣ್ಯ ಪಾಪಗಳಲ್ಲಿ ಆರನೆಯ ಒಂದಂಶವನ್ನು ಹೊಂದುತ್ತಾರೆ.

೨೬. ರಾಜನು ಪ್ರಜೆಗಳು ಮಾಡಿದ ಪಾಪ ಪುಣ್ಯಗಳಲ್ಲಿ ಆರನೆಯ ಒಂದಂಶ ವನ್ನು ಹೊಂದುತ್ತಾನೆ. ಅದೇ ರೀತಿಯಾಗಿ ಶಿಷ್ಯನಿಂದ ಗುರುವೂ, ಹೆಂಗಸಿನಿಂದ ಯಜಮಾನನೂ, ಮಗನಿಂದ ತಂದೆಯೂ ಕೂಡ ಆರನೆಯ ಒಂದಂಶವನ್ನು ಹೊಂದುತ್ತಾರೆ.

೨೭. ಗಂಡನ ಚಿತ್ತವನ್ನು ಅನುಸರಿಸಿಕೊಂಡಿದ್ದು ಗಂಡನಿಗೆ ಸಂತೋಷ ಕರವಾದ ಕೆಲಸಗಳನ್ನು ಮಾಡುವ ಹೆಂಡತಿಯು ತನ್ನ ಗಂಡನ ಪುಣ್ಯದಲ್ಲಿ ಅರ್ಧ ವನ್ನು ಹೊಂದುತ್ತಾಳೆ.

೨೮. ಪುಣ್ಯ ಕೆಲಸವಾದ ದಾನ ಮುಂತಾದುವುಗಳನ್ನು ಇನ್ನೊಬ್ಬರ ಕೈಯ್ಯಿಂದ ಮಾಡಿಸಿದರೆ ಆಳು, ಮಗ ಹೊರತಾಗಿ ಮಿಕ್ಕವರು ಆ ಪುಣ್ಯದ ಆರನೇ ಒಂದು ಭಾಗವನ್ನು ಹೊಂದುತ್ತಾರೆ.

ವೃತ್ತಿದೋ ವೃತ್ತಿಸಂಭೋಕ್ತುಃ ಪುಣ್ಯಷಷ್ಠಾಂಶಮುದ್ಧರೇತ್ ।
ಆತ್ಮನೋ ವಾ ಪರಸ್ಯಾಪಿ ಯದಿ ಸೇವಾಂ ನ ಕಾರಯೇತ್ ॥ ೨೯ ॥

॥ ಶ್ರೀಕೃಷ್ಣ ಉವಾಚ ॥

ಇತ್ಥಂ ಹ್ಯದತ್ತಾನ್ಯಪಿ ಪುಣ್ಯಪಾಪಾ
ನ್ಯಾಯಾಂತಿ ನಿತ್ಯಂ ಪರಸಂಚಿತಾನಿ ।
ಕಲೌ ತ್ವಯಂ ನೈ ನಿಯಮೋನ ಕಾರ್ಯಃ
ಕರ್ತೈವ ಭೋಕ್ತಾ ಖಲು ಪುಣ್ಯಪಾಪಯೋಃ ॥ ೩೦ ॥

ಶೃಣುಷ್ವ ಚಾಸ್ಮಿನ್ನಿತಿಹಾಸಮುಗ್ರ್ಯಂ
ಪುರಾ ಭವಂ ಪುಣ್ಯಮತಿಪ್ರದಂ ಚ ॥ ೩೧ ॥

ಇತಿ ಶ್ರೀ ಮಹಾಪುರಾಣೇ ಪಾದ್ಮೇ ಉತ್ತರಖಂಡೇ ಕಾರ್ತಿಕ ಮಾಹಾತ್ಮ್ಯೇ
ಶ್ರೀ ಕೃಷ್ಣ ಸತ್ಯಭಾಮಾ ಸಂವಾದೇ ಪುಣ್ಯಪಾಪಾಂಶ ಪ್ರಾಪ್ತಿ ಕಥನಂ
ನಾಮ ಚತುರ್ದಶಾಧಿಕಶತತಮೋಽಧ್ಯಾಯಸ್ಸಮಾಪ್ತಃ

---

೨೯. ಯಾವನಾದರೂ ಒಂದು ಧರ್ಮಕೆಲಸಕ್ಕೆಂದು ವೃತ್ತಿಯನ್ನು ಕೊಟ್ಟಿದ್ದರೆ ಆ ವೃತ್ತಿ ತೆಗೆದುಕೊಂಡವನು, ವೃತ್ತಿ ಕೊಟ್ಟವನು ಅತಿಥಿ ಮುಂತಾದವರ ಸೇವೆಯನ್ನು ಮಾಡದಿದ್ದಲ್ಲಿ ಅವನ ಪುಣ್ಯದ ಆರನೆಯ ಒಂದಂಶವನ್ನು ವೃತ್ತಿಯನ್ನು ಕೊಟ್ಟವನು ಹೊಂದುತ್ತಾನೆ.

೩೦-೩೧. ಶ್ರೀ ಕೃಷ್ಣನು ಹೇಳಿದನು—ಈ ರೀತಿಯಾಗಿ ಪರರು ಮಾಡಿದ ಪುಣ್ಯ ಪಾಪಗಳು ಪರರಿಂದಲೂ ಬರುತ್ತಿರುತ್ತವೆ. ಕಲಿಯುಗದಲ್ಲಿ ಈ ನಿಯಮವಿಲ್ಲ. ಪುಣ್ಯ ಪಾಪಗಳನ್ನು ಮಾಡಿದವನೇ ಅನುಭವಿಸುತ್ತಾನೆ. ಈ ವಿಷಯದಲ್ಲಿ ಮುಂದೊಂದು ಇತಿಹಾಸವನ್ನು ಹೇಳುತ್ತೇನೆ. ಅದು ಪುಣ್ಯವನ್ನೂ ಕೊಡುತ್ತದೆ. ಅದನ್ನು ಕೇಳು.

ಇಂತು ಶ್ರೀ ಪದ್ಮಮಹಾಪುರಾಣದ ಉತ್ತರಖಂಡದ ಕಾರ್ತಿಕ ಮಹಾತ್ಮ್ಯೆಯ
ಶ್ರೀ ಕೃಷ್ಣ ಸತ್ಯಭಾಮೆಯರ ಸಂವಾದದಲ್ಲಿ ಪುಣ್ಯ ಪಾಪಾಂಶಗಳ ಪ್ರಾಪ್ತಿ
ಎಂಬ ನೂರ ಹದಿನಾಲ್ಕನೆಯ ಅಧ್ಯಾಯವು ಮುಗಿದುದು.



॥ ಶ್ರೀಃ ॥

-X-

ಅಥ ಶ್ರೀ ಮಹಾಪುರಾಣೇ ಪಾದ್ಮೇ ಉತ್ತರಖಂಡೇ

॥ ಪಂಚದಶಾಧಿಕಶತತಮೋಽಧ್ಯಾಯಃ ॥



॥ ಶ್ರೀಕೃಷ್ಣ ಉವಾಚ ॥

ಪುರಾಽವಂತೀಪುರೀವಾಸೀ ವಿಪ್ರ ಆಸೀದ್ಧನೇಶ್ವರಃ ।
ಬ್ರಹ್ಮಕರ್ಮಪರಿಭ್ರಷ್ಟಃ ಪಾಪನಿಷ್ಠಸ್ಸದುರ್ಮತಿಃ ॥ ೧ ॥

ರಸಕಂಬಳಚರ್ಮಾದಿವಿಕ್ರಯಾನ್ಯತವರ್ತನಃ ।
ಸ್ತೇಯವೇಶ್ಯಾಸುರಾಪಾನದ್ಯೂತಸಂಸಕ್ತಮಾನಸಃ ॥ ೨ ॥

ದೇಶಾದ್ದೇಶಾಂತರಂ ಗಚ್ಛನ್ಕ್ರಯವಿಕ್ರಯಕಾರಣಾತ್ ।
ಮಾಹಿಷ್ಮತೀಂ ಪುರೀಂ ಯಾತಃ ಕದಾಚಿತ್ಸಧನೇಶ್ವರಃ ॥ ೩ ॥

---

## ನೂರ ಹದಿನೈದನೆಯ ಅಧ್ಯಾಯವು



೧. ಶ್ರೀ ಕೃಷ್ಣನು ಹೇಳಿದನು–ಪೂರ್ವದಲ್ಲಿ ಅವಂತೀ ಪಟ್ಟಣದಲ್ಲಿ ಧನೇಶ್ವರನೆಂಬ ಬ್ರಾಹ್ಮಣನೊಬ್ಬನಿದ್ದನು. ಅವನು ಬ್ರಾಹ್ಮಣ ಕರ್ಮವನ್ನು ಮಾಡುತ್ತಿರಲಿಲ್ಲ. ಕೆಟ್ಟಬುದ್ಧಿಯಿಂದ ಕೂಡಿ ಯಾವಾಗಲೂ ಪಾಪವನ್ನೇ ಮಾಡುತ್ತಿದ್ದನು.

೨. ರಸ, ಕಂಬಳಿ, ಚರ್ಮ, ಇವುಗಳೆನ್ನು ಮಾರುತ್ತ ಸುಳ್ಳು ಹೇಳುತ್ತಿದ್ದನು. ಮತ್ತು ಕಳ್ಳತನ, ಸೂಳೆತನ, ಹೆಂಡಕುಡುಕತನ ಇವುಗಳಲ್ಲಿಯೂ ಜೂಜುಗಳಲ್ಲಿಯೂ ಆಸಕ್ತನಾಗಿದ್ದನು.

೩. ವ್ಯಾಪಾರದ ದೆಸೆಯಿಂದ ದೇಶದಿಂದ ದೇಶಕ್ಕೆ ಸುತ್ತುತ್ತಾ ಬಂದು ಒಂದು ಸಾರಿ ಈ ಧನೇಶ್ವರನು ಮಾಹಿಷ್ಮತೀ ಪಟ್ಟಣಕ್ಕೆ ಹೋದನು.

**ಮಹಿಷೇಣ ಕೃತಾ ಪೂರ್ವಂ ತಸ್ಮಾನ್ಮಾಹಿಷ್ಮತೀ ಸ್ಮೃತಾ ।**
**ಯಸ್ಯಾ ವಪ್ರಗತಾ ಭಾತಿ ನರ್ಮದಾ ಪಾಪನಾಶಿನೀ ॥ ೪ ॥**

**ಕಾರ್ತಿಕವ್ರತಿನಸ್ತತ್ರ ನಾನಾಗ್ರಾಮಗತಾನ್ನರಾನ್ ।**
**ಸ ದೃಷ್ಟ್ವಾ ವಿಕ್ರಯಂ ಕುರ್ವನ್ ಮಾಸಮೇಕಮುವಾಸ ಹ ॥ ೫ ॥**

**ಸ ನಿತ್ಯಂ ನರ್ಮದಾತೀರೇ ಭ್ರಮನ್ವಿಕ್ರಯಕಾರಣಾತ್ ।**
**ದದರ್ಶ ಬ್ರಾಹ್ಮಣಾನ್ ಸ್ನಾತಾನ್ ಯಜ್ಞದೇವಾರ್ಚನೇ ರತಾನ್ ॥ ೬ ॥**

**ಕಾಂಶ್ಚಿತ್ಪುರಾಣಂ ಪಠತಃ ಕಾಂಶ್ಚಿತ್ತಚ್ಛ್ರವಣೇ ರತಾನ್ ।**
**ನೃತ್ಯಗಾಯನವಾದಿತ್ರವಿಷ್ಣುಸ್ತವನತತ್ಪರಾನ್ ॥ ೭ ॥**

**ವಿಷ್ಣುಮುದ್ರಾಂಕಿತಾನ್ ಕಾಂಶ್ಚಿನ್ಮಾಲಾತುಲಸಿಧಾರಿಣಃ ।**
**ದದರ್ಶ ಕೌತುಕಾವಿಷ್ಟಃ ತತ್ರ ತತ್ರ ಧನೇಶ್ವರಃ ॥ ೮ ॥**

---

೪. ಹಿಂದೆ ಮಹಿಷಾಸುರನಿಂದ ಆ ಪಟ್ಟಣವು ಕಟ್ಟಲ್ಪಟ್ಟುದರಿಂದ ಅದಕ್ಕೆ ಮಾಹಿಷ್ಮತಿಯೆಂದು ಹೆಸರು ಬಂದಿತು. ಅದರ ಹತ್ತಿರದಲ್ಲಿಯೇ ಪಾಪನಾಶಕರವಾದ ನರ್ಮದೆಯು ಇರುವುದು.

೫. ಅನೇಕ ಊರುಗಳಿಂದ ಬಂದು ಅಲ್ಲಿ ಕಾರ್ತಿಕ ವ್ರತವನ್ನು ಮಾಡುತ್ತಿರುವ ಜನರನ್ನು ನೋಡಿ ವ್ಯಾಪಾರವನ್ನು ಮಾಡುತ್ತಾ ಒಂದು ತಿಂಗಳವರೆಗೂ ಅಲ್ಲಿದ್ದನು.

೬. ಅವನು ನಿತ್ಯವೂ ವ್ಯಾಪಾರಕ್ಕೋಸ್ಕರ ಈ ನರ್ಮದೆಯ ತೀರದಲ್ಲಿ ಸುತ್ತುತ್ತ ಸ್ನಾನಮಾಡಿ ಯಜ್ಞಮಾಡುತ್ತಿರುವ ದೇವತಾರ್ಚನೆ ಮಾಡುತ್ತಿರುವ ಬ್ರಾಹ್ಮಣರನ್ನು ನೋಡುತ್ತಿದ್ದನು.

೭. ಕೆಲವರು ಪುರಾಣವನ್ನು ಹೇಳುತ್ತಿದ್ದರು. ಮತ್ತೆ ಕೆಲವರು ಅದನ್ನು ಕೇಳುತ್ತಿದ್ದರು ಕೆಲವರು ನೃತ್ಯವನ್ನೂ, ಕೆಲವರು ಗಾನವನ್ನೂ ಮಾಡುತ್ತಿದ್ದರು. ಕೆಲವರು ವಾದ್ಯವನ್ನು ಬಾರಿಸುತ್ತಿದ್ದರು. ಈ ರೀತಿಯಾಗಿ ವಿಷ್ಣುವಿನ ಸ್ತೋತ್ರದಲ್ಲಿರುವವರನ್ನು ನೋಡಿದನು.

೮. ಕೆಲವರು ವಿಷ್ಣುವಿನ ಶಂಖ, ಚಕ್ರ ರೂಪವಾದ ಮುದ್ರೆಗಳನ್ನು ಹಾಕಿಕೊಂಡಿದ್ದರು. ಕೆಲವರು ತುಳಸಿಯ ಮಾಲೆಯನ್ನು ಹಾಕಿಕೊಂಡಿದ್ದರು. ಇಂತಹವರನ್ನೂ ಅವನು ಆಶ್ಚರ್ಯದಿಂದ ನೋಡಿದನು.

ನಿತ್ಯಂ ಪರಿಭ್ರಮಂಸ್ತತ್ರ ದರ್ಶನಸ್ಪರ್ಶಭಾಷಣಾತ್ ।
ವೈಷ್ಣವಾನಾಂ ತಥಾ ವಿಷ್ಣೋರ್ನಾಮಸಂಶ್ರಾವಿತೋಽಭವತ್ ॥ ೯ ॥

ಏವಂ ಮಾಸಂ ಸ್ಥಿತಸ್ತೋಽಥ ಕಾರ್ತಿಕೋದ್ಯಾಪನೇ ವಿಧೌ ।
ಕ್ರಿಯಮಾಣಂ ದದರ್ಶಾಸೌ ಭಕ್ತ್ಯೈರ್ಜಾಗರಣಂ ಹರೇಃ ॥ ೧೦ ॥

ಪೌರ್ಣಮಾಸ್ಯಾಂ ತತೋಽಪಶ್ಯತ್ ವಿಪ್ರಗೋಪೂಜನಾದಿಕಂ ।
ದಕ್ಷಿಣಾಭೋಜನಾದ್ಯಂ ಚ ದೀಯಮಾಸಂ ವ್ರತಸ್ಥಿತೈಃ ॥ ೧೧ ॥

ತತೋರ್ಕಾಸ್ತ ಮಯೇ ಚೈವ ದೀಪೋತ್ಸರ್ಗವಿಧಿಂ ತದಾ ।
ಕ್ರಿಯಾಮಾಣಂ ದದರ್ಶಾಸೌ ಪ್ರೀತ್ಯರ್ಥಂ ತ್ರಿಪುರದ್ವಿಷಃ ॥ ೧೨ ॥

ತ್ರಿಪುರಾಣಾಂ ಕೃತೋ ದಾಹೋ ಯತಸ್ತಸ್ಯಾಂ ಶಿವೇನ ತು ।
ಅತಸ್ತು ಕ್ರಿಯತೇ ತಸ್ಯಾಂ ತಿಥೌ ಭಕ್ತ್ಯೈರ್ಮಹೋತ್ಸವಃ ॥ ೧೩ ॥

---

೯. ಹೀಗೆ ದಿನವೂ ಅಲ್ಲಿ ಸುತ್ತುತ್ತ ಅವರನ್ನು ನೋಡುವುದು, ಅವರನ್ನು ಮುಟ್ಟುವುದು, ಅವರೊಡನೆ ಮಾತನಾಡುವುದು ಈ ರೀತಿಯಾಗಿ ಮಾಡುತ್ತ ವಿಷ್ಣುಭಕ್ತರ ಮತ್ತು ವಿಷ್ಣುವಿನ ನಾಮಸ್ಮರಣೆಯನ್ನು ಕೇಳುತ್ತಿದ್ದನು.

೧೦. ಈ ರೀತಿಯಾಗಿ ಅಲ್ಲಿ ಒಂದು ತಿಂಗಳಿದ್ದು ಕಡೆಯಲ್ಲಿ ಕಾರ್ತಿಕ ವ್ರತದ ಉದ್ಯಾಪನೆಯಲ್ಲಿ ಆಸಕ್ತರಾಗಿ ಪೂಜಿಸುತ್ತಾ ಜಾಗರಣೆ ಮಾಡುತ್ತಿರುವ ಭಕ್ತರನ್ನು ನೋಡಿದನು.

೧೧. ಅನಂತರ ಹುಣ್ಣಿಮೆಯ ದಿನ ಬ್ರಾಹ್ಮಣ, ಗೋವುಗಳನ್ನು ಪೂಜಿಸುತ್ತಿರುವ, ದಕ್ಷಿಣೆಯನ್ನು ಕೊಡುತ್ತಿರುವ, ಭೋಜನವನ್ನು ಮಾಡಿಸುತ್ತಿರುವ ವ್ರತಿಗಳನ್ನು ನೋಡಿದನು.

೧೨. ಅನಂತರ ಪರಮೇಶ್ವರನ ಪ್ರೀತ್ಯರ್ಥವಾಗಿ ಸಾಯಂಕಾಲದಲ್ಲಿ ದೀಪವನ್ನು ಹಚ್ಚುತ್ತಿರುವುದನ್ನು ನೋಡಿದನು.

೧೩. ಆದಿನ ಶಿವನು ತ್ರಿಪುರದಹನವನ್ನು ಮಾಡಿದನು. ಆದುದರಿಂದ ಆ ತಿಥಿಯಲ್ಲಿ ಈ ರೀತಿಯಾದ ದೀಪ ಮಹೋತ್ಸವವನ್ನು ಮಾಡುತ್ತಾರೆ.

ಮಮ ರುದ್ರಸ್ಯ ಯಃ ಕಶ್ಚಿದನ್ತರಂ ಪರಿಕಲ್ಪಯೇತ್ ।
ತಸ್ಯ ಪುಣ್ಯಕ್ರಿಯಾಸ್ಸರ್ವಾ ನಿಷ್ಫಲಾಸ್ಯುರ್ನ ಸಂಸಯಃ ॥ ೧೪ ॥

ತತ್ರ ನೃತ್ಯಾದಿಕಂ ಪಶ್ಯನ್ಬಭ್ರಾಮ ಸ ಧನೇಶ್ವರಃ ।
ತಾವತ್ಕೃಷ್ಣಾಹಿನಾ ದಷ್ಟೋ ವಿಹ್ವಲಸ್ಸ ಪಪಾತ ಹ ॥ ೧೫ ॥

ಜನಾಸ್ತಂ ಪತಿತಂ ವೀಕ್ಷ್ಯ ಪರಿವವ್ರುಃ ಕೃಪಾನ್ವಿತಾಃ ।
ತುಳಸೀ ಮಿಶ್ರಿತೈಸ್ತೋಯೈಃ ತನ್ಮುಖಂ ಸಿಷಿಚುಸ್ತದಾ ॥ ೧೬ ॥

ಅಥ ದೇಹೇ ಪರಿತ್ಯಕ್ತೇ ತಂ ಬಧ್ವಾ ಯಮಕಿಂಕರಾಃ ।
ತಾಡ್ಯಮಾನಂ ಕಶೌಘಾದ್ಯೈರ್ನಿನ್ಯುಸ್ಸಂಯಮಿನೀಂ ರುಷಾ ॥ ೧೭ ॥

ಚಿತ್ರಗುಪ್ತಸ್ತು ತಂ ದೃಷ್ಟ್ವಾ ನಿರ್ಭರ್ತ್ಸ್ಯಾವೇದಯತ್ತದಾ ।
ಯಮಾಯ ತೇನ ಬಾಲ್ಯಾತ್ತು ಕರ್ಮ ಯದ್ದುಷ್ಕೃತಂ ಕೃತಂ ॥ ೧೮ ॥

---

೧೪. ನನಗೂ ರುದ್ರನಿಗೂ ಯಾರು ವ್ಯತ್ಯಾಸವನ್ನು ಕಲ್ಪಿಸುವರೋ ಅವರ ಪುಣ್ಯ ಕ್ರಿಯೆಗಳೆಲ್ಲವೂ ಫಲವಿಲ್ಲದೇ ಹೋಗುತ್ತವೆ. ಸಂಶಯವಿಲ್ಲ.

೧೫. ಅಲ್ಲಿ ನರ್ತನಾದಿಗಳನ್ನು ನೋಡುತ್ತಾ ಆ ಧನೇಶ್ವರನು ಸುತ್ತಾಡುತ್ತಿರಲು ಆಗ ಒಂದು ಕೃಷ್ಣಸರ್ಪವು ಅವನನ್ನು ಕಚ್ಚಿತು. ಅವನೂ ಕೈಕಾಲುಗಳಲ್ಲಿ ಸ್ವಾಧೀನ ತಪ್ಪಿ ಬಿದ್ದುಬಿಟ್ಟನು.

೧೬. ಅವನು ಬಿದ್ದುದನ್ನು ನೋಡಿ ಜನಗಳು ದಯೆಯಿಂದ ಅವನ ಸುತ್ತಲೂ ಸುತ್ತಿಕೊಂಡರು. ಮತ್ತು ತುಳಸಿಯಿಂದ ಮಿಶ್ರವಾದ ನೀರನ್ನು ಅವನ ಮುಖಕ್ಕೆಚಿಮುಕಿಸಿದರು.

೧೭. ಅವನು ಪ್ರಾಣಬಿಡಲು ಯಮ ಕಿಂಕರರು ಅವನನ್ನು ಕಟ್ಟಿ ಚಾವಟಿಗಳಿಂದ ಹೊಡೆಯುತ್ತಾ ಯಮನ ಪಟ್ಟಣವಾದ ಸಂಯಮಿನಿಗೆ ಕರೆದು ಕೊಂಡು ಹೋದರು.

೧೮. ಚಿತ್ರಗುಪ್ತನು ಅವನನ್ನು ನೋಡಿ ಗದರಿಸಿ ಯಮನಿಗೆ ಬಾಲ್ಯದಿಂದಲೂ ಅವನು ಮಾಡಿದ ಪಾಪವೆಲ್ಲವನ್ನೂ ಹೇಳಿದನು.

|| ಚಿತ್ರಗುಪ್ತ ಉವಾಚ ||

ನೈವಾಸ್ಯ ದೃಶ್ಯತೇ ಕಿಂಚಿತ್ ಆಬಾಲ್ಯಾತ್ಸುಕೃತಂ ಕ್ವಚಿತ್ ।
ದುಷ್ಕೃತಂ ಶಕ್ಯತೇ ವಕ್ತುಂ ವರ್ಷೇಣಾಪಿ ನ ಭಾಸ್ಕರೇ || ೧೯ ||

ಪಾಪಮೂರ್ತಿರಯಂ ದುಷ್ಟಃ ಕೇವಲಂ ದೃಶ್ಯತೇ ವಿಭೋ ।
ತಸ್ಮಾದಾಕಲ್ಪಮರ್ಯಾದಂ ನಿರಯೇ ಪರಿಪಚ್ಯತಾಂ || ೨೦ ||

|| ಶ್ರೀಕೃಷ್ಣ ಉವಾಚ ||

ನಿಶಮ್ಯೇತ್ಥಂ ವಚಃ ಕ್ರೋಧಾದ್ಯಮಃ ಪ್ರಾಹ ಸ್ವಕಿಂಕರಾನ್ ।
ದರ್ಶಯನ್ನಾತ್ಮನೋ ರೂಪಂ ಕಾಲಾಗ್ನಿ ಸದೃಶಪ್ರಭಂ || ೨೧ ||

|| ಯಮ ಉವಾಚ ||

ಭೋ ಪ್ರೇತಪ ನಯಸ್ವೈನಂ ವಧ್ಯಮಾನಂ ಸ್ವಮುದ್ಗರೈಃ ।
ಕುಂಭೀಪಾಕೇ ಕ್ಷಿಪಸ್ವಾಶು ದುಷ್ಟಂ ಕಲ್ಮಷದರ್ಶನಂ || ೨೨ ||

---

೧೯. ಚಿತ್ರಗುಪ್ತನು ಹೇಳಿದನು–ಇವನ ಬಾಲ್ಯದಿಂದಲೂ ಒಂದು ಒಳ್ಳೆಯ ಕೆಲಸವನ್ನೂ ಮಾಡಿಲ್ಲ. ಇವನು ಮಾಡಿರುವ ಕೆಟ್ಟ ಕೆಲಸವನ್ನು ಒಂದು ವರ್ಷ ಹೇಳಿದರೂ ತೀರುವುದಿಲ್ಲ.

೨೦. ಎಲೈ ವಿಭುವೆ ! ಇವನು ಕೇವಲ ಪಾಪಮೂರ್ತಿಯಾದ ದುಷ್ಟನು. ಆದುದರಿಂದ ಕಲ್ಪದ ಕಡೆಯವರೆಗೂ ನರಕದಲ್ಲಿ ಹಾಕಿ ತೊಂದರೆ ಪಡಿಸಬೇಕು.

೨೧. ಶ್ರೀ ಕೃಷ್ಣನು ಹೇಳಿದನು-ಈ ರೀತಿಯಾದ ಮಾತನ್ನು ಕೇಳಿ ಯಮನು ಕೋಪದಿಂದ ತನ್ನ ಕಲಾಗ್ನಿ ಸದೃಶವಾದ ರೂಪವನ್ನು ತೋರಿಸುತ್ತಾ ತನ್ನ ಆಳುಗಳಿಗೆ ಹೀಗೆಂದು ಹೇಳಿದನು.

೨೨. ಯಮನು ಹೇಳಿದನು–ಎಲೈ ಪ್ರೇತಗಳನ್ನು ಕಾಪಾಡತಕ್ಕವರೆ ! ನೀವು ನಿಮ್ಮ ಮುದ್ಗರಗಳಿಂದ ಇವನನ್ನು ಹೊಡೆಯುತ್ತಾ ಕರೆದುಕೊಂಡು ಹೋಗಿ ದುಷ್ಟನೂ ಪಾಪಿಯೂ ಆದ ಇವನನ್ನು ಕುಂಭೀಪಾಕದಲ್ಲಿ ಹಾಕಿರಿ.

॥ ಶ್ರೀಕೃಷ್ಣ ಉವಾಚ ॥

ತತೋ ಮುದ್ಗರನಿರ್ಭಿನ್ನಮೂರ್ಧಾನಂ ಪ್ರೇತಪೋಽನಯತ್ ।
ಕುಂಭೀಪಾಕೇಽಕ್ಷಿಪಚ್ಚಾಶು ತೈಲಕ್ವಥನಶಬ್ದಿತೇ ॥ ೨೩ ॥

ಯಾವತ್ಕ್ಷಿಪ್ತಸ್ತು ತತ್ರಾಸೌ ತಾವಚ್ಛೀತಲತಾಂ ಯಯೌ ।
ಕುಂಭೀಪಾಕೇ ಯಥಾ ವಹ್ನಿಃ ಪ್ರಹ್ಲಾದಕ್ಷೇಪಣಾತ್ಪುರಾ ॥ ೨೪ ॥

ತದ್ದೃಷ್ಟ್ವಾ ಮಹದಾಶ್ಚರ್ಯಂ ಪ್ರೇತಪೋ ವಿಸ್ಮಯಾನ್ವಿತಃ ।
ವೇಗಾದಾಗತ್ಯ ತತ್ಸರ್ವಂ ಯಮಾಯಾಕಥಯತ್ತದಾ ॥ ೨೫ ॥

ಯಮಸ್ತು ಕೌತುಕಂ ಶ್ರುತ್ವಾ ಪ್ರೇತಪೇನ ನಿವೇದಿತಂ ।
ಆಃ ಕಿಮೇತದಿತಿ ಪ್ರೋಚ್ಯ ತಮಾನೀಯಾಽವಿಚಾರಯತ್ ॥ ೨೬ ॥

ತಾವದಭ್ಯಾಗತಸ್ತತ್ರ ನಾರದಃ ಪ್ರಹಸಂಸ್ತ್ವರಾ ।
ಯಮೇನ ಪೂಜಿತಸ್ಸಮ್ಯಕ್ ತಂ ದೃಷ್ಟ್ವಾ ವಾಕ್ಯಮಬ್ರವೀತ್ ॥ ೨೭ ॥

---

೨೩. ಶ್ರೀ ಕೃಷ್ಣನು ಹೇಳಿದನು-ಅನಂತರ ಪ್ರೇತಪನು ತಲೆಯಮೇಲೆ ಒಡೆಯುವಂತೆ ಹೊಡೆಯುತ್ತಾ ಕುತಕುತ ಎಂದು ಎಣ್ಣೆಯು ಕುದಿಯುತ್ತಿರುವ ಕುಂಭೀಪಾಕದಲ್ಲಿ ತಳ್ಳಿದನು.

೨೪. ಇವನನ್ನು ಕುಂಭೀಪಾಪಕ್ಕೆ ತಳ್ಳಿದ ಕೂಡಲೇ ಪೂರ್ವದಲ್ಲಿ ಪ್ರಹ್ಲಾದನನ್ನು ಕಾದ ಎಣ್ಣೆಯೊಳಕ್ಕೆ ತಳ್ಳಿದಾಗ ಎಣ್ಣೆಯು ತಣ್ಣಗಾದಂತೆ ಈ ಕುಂಭೀಪಾಕದ ಎಣ್ಣೆಯೂ ಕೂಡ ತಣ್ಣಗಾಯಿತು.

೨೫. ಆ ಆಶ್ಚರ್ಯವನ್ನು ನೋಡಿ ಪ್ರೇತಪನು ಆಶ್ಚರ್ಯಪಟ್ಟು ಬೇಗನೆ ಯಮನ ಬಳಿಗೆ ಬಂದು ಅದೆಲ್ಲವನ್ನೂ ಹೇಳಿದನು.

೨೬. ಯಮನು ಇದನ್ನು ಕೇಳಿ ಓಹೋ ಇದೇನು ! ಎಂದು ಹೇಳುತ್ತಾ ಅವನನ್ನು ಕರೆಯಿಸಿ ವಿಚಾರಿಸಿದನು.

೨೭. ಅಷ್ಟರಲ್ಲಿಯೇ ನಾರದನು ಅಲ್ಲಿಗೆ ನಗುತ್ತ ಬಂದನು. ಯಮನು ಅವನನ್ನು ಪೂಜಿಸಿದನು. ಅನಂತರ ಯಮನನ್ನು ಕುರಿತು ನಾರದನು ಇಂತೆಂದನು.

|| ನಾರದ ಉವಾಚ ||

ನೈವಾಽಯಂ ನಿರಯಾನ್ಭೋಕ್ತುಂ ಕ್ಷಮಸ್ಸವಿತೃನಂದನ ।
ಯಸ್ಮಾದೇತಸ್ಯ ಸಂಜಾತಂ ಕರ್ಮ ಯನ್ನಿರಯಾಽಪಹಂ || ೨೮ ||

ಯಃ ಪುಣ್ಯಕರ್ಮಣಾಂ ಕುರ್ಯಾದ್ದರ್ಶನ ಸ್ಪರ್ಶ ಭಾಷಣಂ ।
ತತಷ್ಷಡಂಶಮಾಪ್ನೋತಿ ಪುಣ್ಯಸ್ಯ ನಿಯತಂ ನರಃ || ೨೯ ||

ಸಂಖ್ಯಾತೀತೈಸ್ತು ಸಂಸರ್ಗಂ ಕೃತವಾನೇವ ಯದ್ಧರೇಃ ।
ಕಾರ್ತಿಕವ್ರತಿಭಿರ್ಮಾಸಂ ತಸ್ಮಾತ್ಪುಣ್ಯಾಂಶ ಭಾಗಯಂ || ೩೦ ||

ಪರಿಚರ್ಯಾಕರಸ್ತೇಷಾಂ ಸಂಪೂರ್ಣವ್ರತಪುಣ್ಯಭಾಕ್ ।
ಅತೋಽಸ್ಯೋರ್ಜವ್ರತೋದ್ಭೂತಪುಣ್ಯಸಂಖ್ಯಾ ನ ವಿದ್ಯತೇ || ೩೧ ||

ಕಾರ್ತಿಕವ್ರತಿನಾಂ ಪುಂಸಾಂ ಪಾತಕಾನಿ ಮಹಾಂತ್ಯಪಿ ।
ನಾಶಯತ್ಯೇವ ಸರ್ವಾಣಿ ವಿಷ್ಣುಸ್ಸದ್ಭಕ್ತವತ್ಸಲಃ || ೩೨ ||

---

೨೮. ನಾರದನು ಹೇಳಿದನು–ಎಲೈ ಯಮನೆ! ಇವನು ನರಕವನ್ನು ಅನುಭವಿಸಲು ಯೋಗ್ಯನಲ್ಲ. ಅವನಿಗೆ ನರಕವನ್ನು ನಾಶಮಾಡುವ ಪುಣ್ಯವು ಬಂದಿದೆ.

೧೯. ಪುಣ್ಯ ಮಾಡಿದವರ ದರ್ಶನ, ಸ್ಪರ್ಶನ, ಭಾಷಣಗಳನ್ನು ಯಾವನು ಮಾಡುತ್ತಾನೋ ಅವನು ಅವನ ಪುಣ್ಯದ ಆರನೆಯ ಒಂದಂಶವನ್ನು ಹೊಂದುತ್ತಾನೆ. ಖಂಡಿತವು.

೩೦. ಕಾರ್ತಿಕ ವ್ರತವನ್ನು ಮಾಡಿದವರೊಡನೆ ಆ ಮಾಸ ಪೂರ್ತಿಯಾಗಿ ಇವನ್ನು ಸಂಸರ್ಗವನ್ನು ಮಾಡಿರುವನು. ಆದುದರಿಂದ ಅವರ ಪುಣ್ಯದ ಅಂಶವನು ಹೊಂದಿರುವನು.

೩೧. ಆ ವ್ರತ ಮಾಡುವವರ ಸೇವೆಯನ್ನು ಮಾಡಿದವನು ಅವರ ಪೂರ್ಣ ಪುಣ್ಯವನ್ನು ಹೊಂದುತ್ತಾನೆ. ಆದುದರಿಂದ ಇವನಿಗೆ ಕಾರ್ತಿಕ ಮಾಸ ವ್ರತದ ಪುಣ್ಯವು ಲೆಕ್ಕವಿಲ್ಲದಷ್ಟು ಬಂದಿದೆ.

೩೨. ಕಾರ್ತಿಕ ವ್ರತ ಮಾಡುವವರಿಗೆ ಬಹುವಾಗಿ ಪಾಪಗಳಿದ್ದರೂ ಅವೆಲ್ಲವನ್ನೂ ಭಕ್ತವತ್ಸಲನಾದ ವಿಷ್ಣುವು ನಾಶಮಾಡುತ್ತಾನೆ.

ಅಂತೇ ಚ ನಾರ್ಮದೈಸ್ತೋಯೈಸ್ತುಲಸೀಮಿಶ್ರಿತೈಸ್ತ್ವಯಂ ।
ವೈಷ್ಣವೈಃ ಸ್ನಾಪಿತೋ ವಿಷ್ಣೋಃ ನಾಮ ಸಂಶ್ರಾವಿತೋಽಪಿ ಚ ॥ ೩೩ ॥

ತಸ್ಮಾನ್ನಿಹತಪಾಪೋಽಯಂ ಸದ್ಗತಿಂ ಪ್ರಾಪ್ತುಮರ್ಹತಿ ।
ವೈಷ್ಣವಾನುಗೃಹೀತೋಽಸೌ ನಿರಯೇ ನೈವ ಪಚ್ಯತಾಂ ॥ ೩೪ ॥

ಆರ್ದ್ರಶುಷ್ಕೈರ್ಯಥಾ ಪಾಪೈರ್ನಿರಯೇ ಭೋಗಸನ್ನಿಧಿಃ ।
ಪ್ರಾಪ್ಯತೇ ಸುಕೃತೈಸ್ತದ್ವತ್ಸ್ವರ್ಗಭೋಗಸ್ಯ ಸನ್ನಿಧಿಃ ॥ ೩೫ ॥

ತಸ್ಮಾದಕಾಮ ಪುಣ್ಯೋ ಹಿ ಯಕ್ಷಯೋನಿಸ್ಥಿತಸ್ತ್ವಯಂ ।
ವಿಲೋಕ್ಯ ನಿರಯಾನ್ಸರ್ವಾನ್ ಪಾಪಭೋಗಮವಾಪ್ನುಯಾತ್ ॥ ೩೬ ॥

---

೩೩. ಸಾಯುವಾಗ ವೈಷ್ಣವರು ತುಳಸೀ ಮಿಶ್ರಿತವಾದ ನರ್ಮದೆಯ ನೀರಿನಿಂದ ಇವನಿಗೆ ಸ್ನಾನಮಾಡಿಸಿದರು. ಅಲ್ಲದೆ ವಿಷ್ಣುವಿನ ಹೆಸರನ್ನು ಕೇಳಿಸಿದರು.

೩೪. ಆದುದರಿಂದ ಇವನ ಪಾಪವೆಲ್ಲವೂ ಹೋಗಿದೆ. ಒಳ್ಳೆಯ ಗತಿಯು ಇವನಿಗೆ ಬರಬೇಕು. ವೈಷ್ಣವರಿಂದ ಅನುಗೃಹೀತನಾದ ಇವನನ್ನು ನರಕದಲ್ಲಿ ತೊಂದರೆಪಡಿಸಬೇಡ.

೩೫. ಸಿತಾಸಿತವಾದ ಪಾಪಪುಣ್ಯಗಳು ನರಕದಲ್ಲಿಯೂ ಭೋಗಗಳನ್ನು ಅವಕ್ಕೆ ಅನುಗುಣವಾಗಿ ಕೊಡುತ್ತವೆ. ಹಾಗೆಯೇ ಈ ನರಕದಲ್ಲಿಯೂ ಕೊಡುತ್ತವೆ. ಅರ್ಧ ಪಕ್ವವಾಗಿರುವ ಪಾಪಗಳು ಹೇಗೆ ನರಕದಲ್ಲಿ ಭೋಗಗಳನ್ನು ಕೊಡುತ್ತವೆಯೋ ಹಾಗೆ ಅರ್ಧ ಪಕ್ವ ಸುಕೃತಗಳೂ ಸ್ವರ್ಗದಲ್ಲಿ ಅನುಭವವನ್ನು ಕೊಡುತ್ತವೆ.

೩೬. ಈತನು ಪುಣ್ಯವನ್ನು ಮಾಡದೆ ಸಂಪಾದಿಸಿದುದರಿಂದ ಯಕ್ಷರ ಯೋನಿಯಲ್ಲಿ ಸೇರಿಸು. ಎಲ್ಲಾ ನರಕಗಳನ್ನೂ ನೋಡಿಸಿದರೆ ಇವನು ಪಾಪವನ್ನು ಅನುಭವಿಸಿದಂತೆ ಆಯಿತು.

॥ ಶ್ರೀಕೃಷ್ಣ ಉವಾಚ ॥

ಇತ್ಯುಕ್ತ್ವಾ ಗತವತಿ ನಾರದೇಽಥ ಸೌರಿಃ-
ತದ್ವಾಕ್ಯಶ್ರವಣವಿಬುದ್ಧ ತತ್ಸುಕರ್ಮಾ ।
ತಂ ವಿಪ್ರಂ ಪುನರನಯತ್ ಸ್ವಕಿಂಕರೇಣ-
ತಾನ್ಸರ್ವಾನ್ನಿರಯ ಗಣಾನ್ ಪ್ರದರ್ಶಯಿಷ್ಯನ್ ॥ ೩೭ ॥

ಇತಿ ಶ್ರೀ ಮಹಾಪುರಾಣೇ ಪಾದ್ಮೇ ಉತ್ತರಖಂಡೇ ಕಾರ್ತಿಕ ಮಹಾತ್ಮ್ಯೇ
ಶ್ರೀ ಕೃಷ್ಣ ಸತ್ಯಭಾಮಾ ಸಂವಾದೇ ಧನೇಶ್ವರೋಪಾಖ್ಯಾನಂ
ನಾಮ ಪಂಚದಶಾಧಿಕಶತತಮೋಽಧ್ಯಾಯಸ್ಸಮಾಪ್ತಃ

---

೩೭. ಶ್ರೀ ಕೃಷ್ಣನು ಹೇಳಿದನು-ನಾರದನು ಹೀಗೆಂದು ಹೇಳಿ ಹೊರಟು ಹೋಗಲು ಯಮನು ಆತನ ಮಾತಿನಿಂದ ಆ ಬ್ರಾಹ್ಮಣನ ಧರ್ಮವನ್ನು ತಿಳಿದವನಾಗಿ ಅವನಿಗೆ ತನ್ನ ಆಳಿನಿಂದ ಎಲ್ಲಾ ನರಕಗಳನ್ನೂ ತೋರಿಸಿ ಮತ್ತೆ ಕರೆಸಿದನು.

ಇಂತು ಶ್ರೀ ಪದ್ಮಮಹಾಪುರಾಣದ ಉತ್ತರಖಂಡದ ಕಾರ್ತಿಕ ಮಹಾತ್ಮ್ಯೆಯ
ಶ್ರೀ ಕೃಷ್ಣ ಸತ್ಯಭಾಮೆಯರ ಸಂವಾದದಲ್ಲಿ ಧನೇಶ್ವರೋಪಾಖ್ಯಾನ
ಎಂಬ ನೂರ ಹದಿನೈದನೆಯ ಅಧ್ಯಾಯವು ಮುಗಿದುದು.



|| ಶ್ರೀಃ ||

–X–

# ಅಥ ಶ್ರೀ ಮಹಾಪುರಾಣೇ ಪಾದ್ಮೇ ಉತ್ತರಖಂಡೇ

## || ಷೋಡಶಾಧಿಕಶತತಮೋಽಧ್ಯಾಯಃ ||



|| ಶ್ರೀಕೃಷ್ಣ ಉವಾಚ ||

ತತೋ ಧನೇಶ್ವರಂ ನೀತ್ವಾ ನಿರಯಾನ್ಪ್ರೇತಪೋಽಬ್ರವೀತ್ |
ಪ್ರದರ್ಶಯಿಷ್ಯನ್ ತಾನ್ ಸರ್ವಾನ್ ಯಮಾನುಜ್ಞಾಕರಸ್ತದಾ || ೧ ||

|| ಪ್ರೇತಪ ಉವಾಚ ||

ಪಶ್ಯೇಮಾನ್ನಿರಯಾನ್ಘೋರಾನ್ಧನೇಶ್ವರ ಮಹಾಭಯಾನ್ |
ಯೇಷು ಪಾಪಕರಾ ನಿತ್ಯಂ ಪಚ್ಯಂತೇ ಯಮಕಿಂಕರೈಃ || ೨ ||

ತಪ್ತವಾಲುಕನಾಮಾಯಂ ನಿರಯೋ ಘೋರದರ್ಶನಃ |
ಯಸ್ಮಿನ್ನೇತೇ ದಗ್ಧದೇಹಾ ಕ್ರಂದಂತೇ ಪಾಪಕಾರಿಣಃ || ೩ ||

---

## ನೂರ ಹದಿನಾರನೆಯ ಅಧ್ಯಾಯವು



೧. ಶ್ರೀಕೃಷ್ಣನು ಹೇಳಿದನು–ಆಮೇಲೆ ಯಮನ ಅಪ್ಪಣೆಯಂತೆ ಪ್ರೇತಪನು ಆ ಧನೇಶ್ವರನಿಗೆ ನರಕಗಳನ್ನೆಲ್ಲಾ ತೋರಿಸುತ್ತಾ ಇಂತೆಂದನು.

೨. ಪ್ರೇತಪನು ಹೇಳಿದನು–ಎಲೈ ಧನೇಶ್ವರನೇ! ಘೋರವಾದ ಮತ್ತು ಬಹು ಭಯಂಕರಗಳೂ ಆದ ಈ ನರಕಗಳನ್ನು ನೋಡು. ಇವುಗಳಲ್ಲಿಯೇ ಪಾಪಿಗಳನ್ನು ಹಾಕಿ ಯಮಕಿಂಕರರು ತೊಂದರೆ ಪಡಿಸುವುದು.

೩. ಇದು ತಪ್ತವಾಲುಕವೆಂಬ ಹೆಸರುಳ್ಳ ನರಕವು. ಭಯಂಕರವಾದುದು. ಇದರಲ್ಲಿ ಬಿದ್ದಿರುವ ಇವರ ಮೈಯೆಲ್ಲವೂ ಸುಡುತ್ತಿರುವುದರಿಂದ ದುಃಖ ಪಡುತ್ತಿದ್ದಾರೆ.

ಅತಿಥೀನ್ವೈಶ್ವದೇವಾಂತೇ ಕ್ಷುತ್ಕ್ಷಾಮಾನಾಗತಾನ್ನ ಯೇ ।
ಪೂಜಯಂತಿ ನರಾಸ್ತೇ ಹಿ ಪಚ್ಯಂತೇ ಸ್ವೇನ ಕರ್ಮಣಾ ॥ ೪ ॥

ಗುರ್ವಗ್ನಿಬ್ರಾಹ್ಮಣಾನ್ ಗಾಶ್ಚ ದೇವಾನ್ಮೂರ್ಧಾಭಿಷಿಕ್ತಕಾನ್ ।
ತಾಡಯಂತಿ ಪದಾ ಯೇ ವೈ ತೇ ನಿರ್ದಗ್ಧಾಂಘ್ರಯಸ್ತ್ವಮೀ ॥ ೫ ॥

ಷಡ್ಭೇದಸ್ತ್ವೇಷ ನಿರಯೋ ನಾನಾಪಾಪೈಃ ಪ್ರಪದ್ಯತೇ ।
ತತ್ರೈವಾಂಧತಮಿಸ್ರೋಽಯಂ ದ್ವಿತೀಯೋ ನಿರಯೋ ಮಹಾನ್ ॥ ೬ ॥

ಪಶ್ಯ ಸೂಚೀಮುಖೈರ್ದೇಹೋ ಭಿದ್ಯತೇ ಪಾಪಕರ್ಮಣಾಂ ।
ಕ್ರಿಮಿಭಿರ್ಘೋರವಕ್ತ್ರೈಶ್ಚ ಹ್ಯನೇಕೈಶ್ಚ ನಿರಂತರಂ ॥ ೭ ॥

ತೃತೀಯಃ ಕ್ರಕಚೋ ಹ್ಯೇಷಃ ನಿರಯೋ ಘೋರದರ್ಶನಃ ।
ಯತ್ರೇಮೇ ಕ್ರಕಚೈರ್ಮರ್ತ್ಯಾಃ ಪಚ್ಯಂತೇ ಪಾಪಕಾರಿಣಃ ॥ ೮ ॥

---

೪. ವೈಶ್ವದೇವವನ್ನು ಮಾಡಿದ ಕೂಡಲೆ ಹಸಿವಿನಿಂದ ಬಂದ ಅತಿಥಿಗಳನ್ನು ಯಾರು ಪೂಜಿಸುವುದಿಲ್ಲವೋ ಅವರು ತಮ್ಮ ಕರ್ಮವನ್ನು ಇಲ್ಲಿ ಅನುಭವಿಸುತ್ತಾರೆ.

೫. ಗುರು, ಅಗ್ನಿ, ಬ್ರಾಹ್ಮಣರು, ಗೋವುಗಳು, ದೇವರು, ರಾಜರು ಇವರನ್ನು ಕಾಲಿನಿಂದ ಯಾರು ಒದೆಯುವರೋ ಅವರೇ ಇವರು. ಇವರ ಕಾಲುಗಳೆಲ್ಲವೂ ಸುಟ್ಟುಹೋಗುತ್ತಿವೆ. ನೋಡು.

೬. ಈ ತಪ್ತವಾಲುಕವೆಂಬ ನರಕವು ಆರು ಭೇದಗಳುಳ್ಳದ್ದು. ಅನೇಕ ಬಗೆಯ ಪಾಪಿಗಳು ಕರ್ಮವನ್ನು ಇಲ್ಲಿ ಅನುಭವಿಸುತ್ತಾರೆ. ಇಲ್ಲಿರುವುದು ಅಂಧತಾಮಿಸ್ರವೆಂಬ ನರಕವು. ಇದೂ ಭಯಂಕರವು.

೭. ಇಲ್ಲಿ ಪಾಪಿಗಳ ದೇಹವನ್ನು ಸೂಜಿಗಳ ತುದಿಯಿಂದ ಚುಚ್ಚುತ್ತಾರೆ. ಮತ್ತು ಸೂಜಿಯಂತೆ ಮುಖವುಳ್ಳ ಹುಳುಗಳು ಯಾವಾಗಲೂ ಚುಚ್ಚುತ್ತ ಕೀಳುತ್ತಿರುತ್ತವೆ.

೮. ಇದು ಕ್ರಕಚವೆಂಬ ಮೂರನೆಯ ನರಕವು. ಮತ್ತು ಭಯಂಕರವಾದುದು. ಇಲ್ಲಿ ಪಾಪಿಗಳನ್ನು ನಿತ್ಯವೂ ಗರಗಸದಿಂದ ಸೀಳುತ್ತಿರುತ್ತಾರೆ.

ಅಸಿಪತ್ರವನಾದ್ಯೈಶ್ಚ ಷಟ್‌ಪ್ರಕಾರೋ ಹ್ಯಯಂ ಸ್ಥಿತಃ ।
ಪತ್ನೀಪುತ್ರಾದಿಭಿರ್ಯೋ ವೈ ವಿಯೋಗಂ ಕಾರಯಂತಿ ಹಿ ॥ ೯ ॥

ಇಷ್ಟೈರನ್ಯೈರಪಿ ಪರಾನ್ ಪಚ್ಯಂತೇ ತ ಇಮೇ ನರಾಃ ।
ಅಸಿಪತ್ರೈಶ್ಛಿದ್ಯಮಾನಾಶ್ಛೇದಭೀತ್ಯಾ ಪಲಾಯಿತಾಃ ॥ ೧೦ ॥

ಪಚ್ಯಂತೇ ಪಾಪಿನಃ ಪಶ್ಯ ಕ್ರಂದಮಾನಾ ಇತಸ್ತತಃ ।
ಅರ್ಗಲಾಖ್ಯೋ ಮಹಾಘೋರಶ್ಚತುರ್ಥೋ ನಿರಯೋ ಹ್ಯಯಂ ॥ ೧೧ ॥

ಪಶ್ಯ ನಾನಾವಿಧೈಃ ಪಾಶೈರಾಬಧ್ಯ ಯಮಕಿಂಕರೈಃ ।
ಮುದ್ಗರಾದ್ಯೈರ್ವಧ್ಯಮಾನಾಃ ಕ್ರಂದಂತೇ ತೇ ಚ ಪಾಪಿನಃ ॥ ೧೨ ॥

ಸಜ್ಜನಾನ್ಬ್ರಾಹ್ಮಣಾದ್ಯಾಂಶ್ಚ ನಿರುಂಧಂತೀಹ ಯೇ ನರಾಃ ।
ಕಂಠಗ್ರಹಾದ್ಯೈಸ್ತೇ ಪಾಪಾಃ ಪಚ್ಯಂತೇ ಯಮಕಿಂಕರೈಃ ॥ ೧೩ ॥

ಅಸಾವಪಿ ಹಿ ಷಡ್ಭೇದೋ ವಧಭೇದಾದಿಭಿಃ ಸ್ಥಿತಃ ।
ಕೂಟಶಾಲ್ಮಲಿನಾಮಾನಂ ನಿರಯಂ ಪಶ್ಯ ಪಂಚಮಂ ॥ ೧೪ ॥

---

೯-೧೨. ಈ ನರಕವು ಅಸಿಪತ್ರ ನರಕವೇ ಮುಂತಾದ ಭೇದಗಳಿಂದ ಆರು ಪ್ರಕಾರವಾಗಿದೆ. ಹೆಂಡತಿ ಮಕ್ಕಳೊಡನೆಯೂ, ಇಷ್ಟರಾದ ಮಿಕ್ಕವರೊಡನೆಯೂ ಯಾರು ಅಗಲಿಕೆಯನ್ನುಂಟುಮಾಡುವರೋ ಅವರನ್ನು ಇಲ್ಲಿ ಶಿಕ್ಷಿಸುತ್ತಾರೆ. ಅಸಿಪತ್ರದಿಂದ ಕತ್ತರಿಸಲ್ಪಡುತ್ತಿರುವ ಮತ್ತು ಆ ಏಟಿನ ಹೆದರಿಕೆಯಿಂದ ಅತ್ತಿತ್ತ ಓಡಿಯಾಡುತ್ತಲಿರುತ್ತ ತೊಂದರೆ ಪಡುತ್ತಿದ್ದಾರೆ. ಇದು ಅರ್ಗಳವೆಂಬ ಮಹಾ ಘೋರವಾದ ನರಕವು. ಇಲ್ಲಿ ನೋಡು. ಯಮಕಿಂಕರರು ನಾನಾ ವಿಧವಾದ ಹಗ್ಗಗಳಿಂದ ಪಾಪಿಗಳನ್ನು ಕಟ್ಟಿ ಮುದ್ಗರ ಮುಂತಾದ ಆಯುಧಗಳಿಂದ ಹೊಡೆಯುತ್ತಿದ್ದಾರೆ. ಅವರು ದುಃಖಪಡುತ್ತಿದ್ದಾರೆ.

೧೩. ಸಜ್ಜನರನ್ನೂ ಬ್ರಾಹ್ಮಣರನ್ನೂ ಯಾರು ಕುತ್ತಿಗೆಗೆ ನೇಣುಹಾಕಿ ತೊಂದರೆ ಪಡಿಸುತ್ತಾರೆಯೋ ಅವರನ್ನು ಇಲ್ಲಿ ಶಿಕ್ಷಿಸುತ್ತಾರೆ.

೧೪ ಈ ನರಕವೂ ಕೂಡ ವಧಾದಿಭೇದದಿಂದ ಆರು ರೀತಿಯಾಗಿದೆ. ಇದು ಕೂಡ ಶಾಲ್ಮಲಿಯೆಂಬ ಐದನೆಯ ನರಕವು. ನೋಡು.

ಯತ್ರಾಂಗಾರನಿಭಾ ಹ್ಯೇತೇ ಶಾಲ್ಮಲ್ಯಾದ್ಯಾಃ ಸ್ಥಿತಾ ದ್ವಿಜ ।
ಯತ್ರ ಷೋಢಾ ವಿಸಜ್ಯಂತೇ ಯಾತನಾಭಿರಿಮೇ ನರಾಃ ॥ ೧೫ ॥

ಪರದಾರ ಪರದ್ರವ್ಯ ಪರದ್ರೋಹರತಾಸ್ಸದಾ ।
ರಕ್ತಪೂಯಮಿಮಂ ಪಶ್ಯ ಷಷ್ಠಂ ನಿರಯಮದ್ಭುತಂ ॥ ೧೬ ॥

ಅದೋಮುಖಾ ವಿಪಚ್ಯಂತೇ ಯತ್ರ ಪಾಪಕೃತೋ ನರಾಃ ।
ಅಭಕ್ಷ್ಯಭಕ್ಷಕಾ ನಿಂದಾಪೈಶುನ್ಯಾದಿರತಾ ಇಮೇ ॥ ೧೭ ॥

ಮಜ್ಜಮಾನಾ ವಧ್ಯಮಾನಾ ಕ್ರಂದಂತೇ ಭೈರವಾನ್ ರವಾನ್ ।
ಷಟ್ಪ್ರಕಾರೈರ್ವಿಗಂಧಾದ್ಯೈರಸಾವಪಿ ಚ ಸಂಸ್ಥಿತಃ ॥ ೧೮ ॥

ಕುಂಭೀಪಾಕಸ್ಸಪ್ತಮೋಽಯಂ ನಿರಯೋ ಘೋರದರ್ಶನಃ ।
ಷೋಢಾ ತೈಲಾದಿಭಿರ್ದ್ರವ್ಯೈಃ ಧನೇಶ್ವರ ವಿಲೋಕಯ ॥ ೧೯ ॥

---

೧೫. ಇಲ್ಲಿರುವ ಶಾಲ್ಮಲೀ ಬೂರಗ ಮೊದಲಾದ ಮರಗಳು ಬೆಂಕಿಯ ಕೆಂಡದಂತಿವೆ. ಇಲ್ಲಿ ಪಾಪಿಗಳನ್ನು ನಾಲ್ಕು ಬಗೆಯಾಗಿ ತೊಂದರೆ ಪಡಿಸುತ್ತಾರೆ

೧೬. ಈ ಕೂಟಶಾಲ್ಮಲಿಯಲ್ಲಿ ಪರರ ದ್ರವ್ಯ, ಪರರ ಹೆಂಡತಿಯರನ್ನು ಕದ್ದವರೂ, ಪರರಿಗೆ ದ್ರೋಹಮಾಡಿದವರೂ ಬಾಧಿಸಲ್ಪಡುತ್ತಾರೆ. ಇದು ಆರನೆಯ ನರಕವು. ಇದರ ಹೆಸರು ರಕ್ತಪೂಯವೆಂದು.

೧೭. ಇಲ್ಲಿ ಪಾಪಿಗಳನ್ನು ತಲೆಕೆಳಗಾಗಿ ಇಟ್ಟು ತೊಂದರೆಪಡಿಸುತ್ತಾರೆ. ತಿನ್ನಬಾರದುದನ್ನು ತಿನ್ನುವವರು, ನಿಂದಿಸುವವರು, ಚಾಡಿ ಹೇಳುವವರು ಇವರು ಇಲ್ಲಿದ್ದಾರೆ.

೧೮. ಇಲ್ಲಿ ಪಾಪಿಗಳು ಮುಳುಗಿ ಏಳುತ್ತ ಏಟನ್ನು ತಿನ್ನುತ್ತಾ ಭಯಂಕರವಾಗಿ ಅಳುತ್ತಿದ್ದಾರೆ. ಇದು ವಿಗಂಧವೇ ಮುಂತಾದ ಆರು ಪ್ರಕಾರವಾಗಿದೆ.

೧೯. ಇದು ಏಳನೆಯದಾದ ಕುಂಭೀಪಾಕ ನರಕವು. ಇದು ಎಣ್ಣೆ ಮುಂತಾದುವುಗಳಿಂದ ಸೇರಿದ ಆರು ಭಾಗವಾಗಿ ವಿಭಾಗವಾಗಿದೆ.

ಮಹಾಪಾತಕಿನೋ ಯತ್ರ ಕ್ವಥ್ಯಂತೇ ಯಮಕಿಂಕರೈಃ।
ಬಹೂನ್ಯಬ್ದಸಹಸ್ರಾಣಿ ಸೋನ್ಮಜ್ಜನನಿಮಜ್ಜನೈಃ ॥ ೨೦ ॥

ಚತ್ವಾರಿಂಶನ್ಮಿತಾನೇತಾನ್ ದ್ವ್ಯಧಿಕಾನಿ ಪಶ್ಯ ರೌರವಾನ್ ।
ಅಕಾಮಾತ್ಪಾತಕಂ ಶುಷ್ಕಂ ಕಾಮಾದಾರ್ದ್ರಮುದಾಹೃತಂ ॥ ೨೧ ॥

ಆರ್ದ್ರಶುಷ್ಕಾದಿಭಿಃ ಪಾಪೈಃ ದ್ವಿಪ್ರಕಾರಾನವಸ್ಥಿತಾನ್ ।
ಚತುರಶೀತ ಸಂಖ್ಯಾಕೈಃ ಪೃಥಗ್ಭೇದೈರವಸ್ಥಿತಾನ್ ॥ ೨೨ ॥

ಯತ್ರ ಕೀರ್ಣಮಪಾಂಕ್ತೇಯಂ ಮಲಿನೀಕರಣಂ ತಥಾ ।
ಜಾತಿಭ್ರಂಶಕರಂ ತದ್ವದುಪಪಾತಕ ಸಂಜ್ಞಿತಂ ॥ ೨೩ ॥

ಅತಿಪಾಪಂ ಮಹಾಪಾಪಂ ಸಪ್ತಧಾ ಪಾತಕಂ ಸ್ಮೃತಂ ।
ಏಭಿಸ್ಸಪ್ತಸು ಪಚ್ಯಂತೇ ನಿರಯೇಷು ಯಥಾ ಕ್ರಮಂ ॥ ೨೪ ॥

ಕಾರ್ತಿಕವ್ರತಿಭಿರ್ಯಸ್ಮಾತ್ಸಂಸರ್ಗೋ ಹ್ಯಭವತ್ತವ ।
ತತ್ಪುಣ್ಯೋಪಚಯಾದೇತೇ ನಿರ್ವೃತಾ ನಿರಯಾಃ ಖಲು ॥ ೨೫ ॥

---

೨೦. ಇಲ್ಲಿ ಮಹಾಪಾತಕ ಮಾಡಿದವರನ್ನು ಯಮಕಿಂಕರರು ಬಹು ವರ್ಷಗಳವರೆಗೂ ತೇಲಿಸಿ ಮುಳುಗಿಸಿ ಬೇಯಿಸುತ್ತಾರೆ.

೨೧. ಈ ರೌರವ ನರಕವು ನಾಲ್ವತ್ತೆರಡು ಭೇದವುಳ್ಳದ್ದು. ಇವನ್ನು ನೋಡು. ಇಚ್ಛೆಯಿಂದ ಮಾಡದಿರುವ ಪಾಪಕ್ಕೆ ಶುಷ್ಕವೆಂದೂ, ಮನಃಪೂರ್ತಿಯಾಗಿ ಮಾಡಿದ ಪಾಪಕ್ಕೆ ಆರ್ದ್ರವೆಂದೂ ಹೆಸರು.

೨೨. ಆರ್ದ್ರ ಶುಷ್ಕಗಳೆಂದು ಎರಡು ಬಗೆಯಾಗಿ ಮಾಡಿ ಅವುಗಳು ಮತ್ತೆ ಎಂಭತ್ತು ನಾಲ್ಕು ಬಗೆಯಾಗಿರುವ ಈ ಭೇದಗಳನ್ನು ನೋಡು.

೨೩-೨೪. ಪ್ರಕೀರ್ಣ, ಅಪಾಂಕ್ತೇಯ, ಮಲಿನೀಕರಣ, ಜಾತಿಭ್ರಂಶಕರಣ, ಉಪಪಾತಕ, ಅತಿಪಾಪ, ಮಹಾಪಾಪ ಎಂಬುದಾಗಿ ಪಾಪವು ಏಳು ಬಗೆಯಾಗಿರುವುದು. ಈ ಏಳು ಬಗೆಯವರೂ ಈ ಏಳರಲ್ಲಿ ಕ್ರಮವಾಗಿ ತೊಂದರೆ ಪಡಿಸಲ್ಪಡುತ್ತಾರೆ.

೨೫. ನೀನು ಕಾರ್ತಿಕ ವ್ರತ ಮಾಡುತ್ತಿದ್ದವರ ಸಹವಾಸದಲ್ಲಿದ್ದುದರಿಂದ ಆ ಪುಣ್ಯದಿಂದ ಇವೆಲ್ಲವೂ ನಿನಗೆ ತಪ್ಪಿಹೋದುವು.

॥ ಶ್ರೀಕೃಷ್ಣ ಉವಾಚ ॥

ದರ್ಶಯಿತ್ವೇತಿನಿರಯಾನ್ ಪ್ರೇತಪಸ್ತಮಥಾಽಽಹರತ್ ।
ಧನೇಶ್ವರಂ ಯಕ್ಷಲೋಕೇ ಯಕ್ಷಶ್ಚಾಭೂತ್ಸ ತತ್ರ ಹ ॥ ೨೬ ॥

ಧನದಸ್ಯಾನುಗಸ್ಸೋಽಯಂ ಧನಯಕ್ಷೇತಿ ಸಂಸ್ಮೃತಃ ।
ಯದಾಖ್ಯಯಾಽಕರೋತ್ತೀರ್ಥಮಯೋಧ್ಯಾಯಾಂ ತು ಗಾಧಿಜಃ ॥ ೨೭ ॥

ಏವಂ ಪ್ರಭಾವಃ ಖಲು ಕಾರ್ತಿಕೋಽಯಂ-
ಭಕ್ತಿಪ್ರದೋ ಭಕ್ತಿಕರಶ್ಚ ಯಸ್ಮಾತ್ ।
ಪ್ರಯಾತ್ಯನೇಕಾರ್ಜಿತಪಾತಕೋಽಪಿ
ವ್ರತಸ್ಥಸಂದರ್ಶನತೋಽಪಿ ಮುಕ್ತಿಂ ॥ ೨೮ ॥

ಇತಿ ಶ್ರೀಮಹಾಪುರಾಣೇ ಪಾದ್ಮೇ ಉತ್ತರಖಂಡೇ ಕಾರ್ತಿಕ ಮಾಹಾತ್ಮ್ಯೇ
ಶ್ರೀ ಕೃಷ್ಣ ಸತ್ಯಭಾಮಾ ಸಂವಾದೇ ಧನೇಶ್ವರೋಪಾಖ್ಯಾನಂ
ನಾಮ ಷೋಡಶಾಧಿಕಶತತಮೋಽಧ್ಯಾಯಸ್ಸಮಾಪ್ತಃ

---

೨೬. ಶ್ರೀ ಕೃಷ್ಣನು ಹೇಳಿದನು–ಪ್ರೇತಪನು ಈ ರೀತಿಯಾಗಿ ಆ ಧನೇಶ್ವರನಿಗೆ ನರಕಗಳನ್ನು ತೋರಿಸಿ ಕರೆದುಕೊಂಡು ಹೋದನು. ಅನಂತರ ಯಕ್ಷನನ್ನಾಗಿ ಮಾಡಿ ಯಕ್ಷರ ಲೋಕದಲ್ಲಿ ಬಿಟ್ಟನು.

೨೭. ಇವನು ಕುಬೇರನಿಗೆ ಆಳಾಗಿ ಧನಯಕ್ಷನೆಂದು ಹೆಸರು ಪಡೆದಿದ್ದಾನೆ. ಅಯೋಧ್ಯೆಯಲ್ಲಿ ವಿಶ್ವಾಮಿತ್ರನು ಅವನ ಹೆಸರಿನಿಂದ ಒಂದು ತೀರ್ಥವನ್ನು ಮಾಡಿರುವನು.

೨೮. ಕಾರ್ತಿಕ ಮಾಸವು ಈ ರೀತಿಯಾದ ಪ್ರಭಾವವುಳ್ಳದ್ದು. ಭಕ್ತಿಯನ್ನು ಕೊಡುತ್ತದೆ. ಭಕ್ತಿಯನ್ನು ಉಂಟುಮಾಡುತ್ತದೆ. ಈ ವ್ರತವನ್ನು ಮಾಡಿದವರನ್ನು ನೋಡಿದರೇನೇ ಅನೇಕ ಪಾಪಗಳು ಹೋಗುತ್ತವೆ. ಮುಕ್ತಿಯು ಬರುತ್ತದೆ.

ಇಂತು ಶ್ರೀ ಪದ್ಮಮಹಾಪುರಾಣದ ಉತ್ತರಖಂಡದ ಕಾರ್ತಿಕ ಮಹಾತ್ಮೆಯು
ಶ್ರೀ ಕೃಷ್ಣ ಸತ್ಯಭಾಮೆಯರ ಸಂವಾದದಲ್ಲಿ ಧನೇಶ್ವರ ಉಪಾಖ್ಯಾನ
ಎಂಬ ನೂರ ಹದಿನಾರನೆಯ ಅಧ್ಯಾಯವು ಮುಗಿದುದು.



॥ ಶ್ರೀಃ ॥

-X-

# ಅಥ ಶ್ರೀ ಮಹಾಪುರಾಣೇ ಪಾದ್ಮೇ ಉತ್ತರಖಂಡೇ

## ॥ ಸಪ್ತದಶಾಧಿಕಶತತಮೋಽಧ್ಯಾಯಃ ॥



॥ ಸೂತ ಉವಾಚ ॥

ಇತ್ಯುಕ್ತ್ವಾ ವಾಸುದೇವೋಽಸೌ ಸತ್ಯಭಾಮಾಮತಿಪ್ರಿಯಾಂ ।
ಸಾಯಂ ಸಂಧ್ಯಾಧಿಕಂ ಕರ್ತುಂ ಜಗಾಮ ಜನನೀಗೃಹಂ ॥ ೧ ॥

ಏವಂ ಪ್ರಭಾವಃ ಪ್ರೋಕ್ತೋಽಯಂ ಕಾರ್ತಿಕಃ ಪಾಪನಾಶನಃ ।
ವಿಷ್ಣುಪ್ರಿಯಕರೋ ನಿತ್ಯಂ ಭುಕ್ತಿಮುಕ್ತಿಫಲಪ್ರದಃ ॥ ೨ ॥

ಹರಿಜಾಗರಣಂ ಪ್ರಾತಃ ಸ್ನಾನಂ ತುಲಸೀಸೇವನಂ ।
ಉದ್ಯಾಪನಂ ದೀಪದಾನಂ ವ್ರತಾನ್ಯೇತಾನಿ ಕಾರ್ತಿಕೇ ॥ ೩ ॥

---

## ನೂರ ಹದಿನೇಳನೆಯ ಅಧ್ಯಾಯವು



೧. ಸೂತನು ಹೇಳಿದನು–ವಾಸುದೇವನು ಸತ್ಯಭಾಮೆಗೆ ಈ ರೀತಿಯಾಗಿ ಹೇಳಿ ಸಾಯಂಕಾಲದ ಸಂಧ್ಯಾವಂದನಾದಿಗಳನ್ನು ಮಾಡಲು ತಾಯಿಯ ಮನೆಗೆ ಹೋದನು.

೨. ಕಾರ್ತಿಕವು ಈ ರೀತಿಯಾಗಿ ಪಾಪನಾಶಕವು. ಇದನ್ನು ಹೇಳಿದ್ದೇನೆ. ಇದು ವಿಷ್ಣುವಿಗೆ ಪ್ರೀತಿಕರವಾದುದು. ಭುಕ್ತಿ ಮುಕ್ತಿಗಳನ್ನು ಕೊಡುತ್ತದೆ.

೩. ಹರಿಜಾಗರಣ, ಬೆಳಗಿನಸ್ನಾನ, ತುಳಸಿಯಸೇವನ, ಉದ್ಯಾಪನ, ದೀಪದಾನ ಇವೇ ಕಾರ್ತಿಕ ಮಾಸದ ವ್ರತಗಳು.

ಪಂಚಕೈರ್ವ್ರತಕೈರೇಭಿಃ ಸಂಪೂರ್ಣಂ ಕಾರ್ತಿಕವ್ರತೀ ।
ಫಲಮಾಪ್ನೋತಿ ತತ್ಪ್ರೋಕ್ತಂ ಭುಕ್ತಿಮುಕ್ತಿ ಫಲಪ್ರದಂ ॥ ೪ ॥

॥ ಋಷಯ ಊಚುಃ ॥

ವಿಷ್ಣುಪ್ರಿಯೋಽತಿಫಲದಃ ಪ್ರೋಕ್ತೋಽಯಂ ರೋಮಹರ್ಷಣೇ ।
ಕಾರ್ತಿಕಸ್ಯ ವಿಧಿಸ್ಸಮ್ಯಕ್ಸೇತಿಹಾಸೋಽತಿವಿಸ್ಮಯಃ ॥ ೫ ॥

ಅವಶ್ಯಮೇವ ಕರ್ತವ್ಯಃ ಪಾಪದುಃಖನಿವಾರಣಃ ।
ಮೋಕ್ಷಾರ್ಥಿಭಿರ್ನರೈಸ್ಸಮ್ಯಗ್ಭೋಗಕಾಮೈರಥಾಪಿ ವಾ ॥ ೬ ॥

ಏವಂ ಸ್ಥಿತೇ ಯದಾ ಕಶ್ಚಿದ್ವ್ರತಸ್ಥಃ ಸಂಕಟೇ ಸ್ಥಿತಃ ।
ದುರ್ಗಾರಣ್ಯಸ್ಥಿತೋ ವಾಽಪಿ ವ್ಯಾಧಿಭಿಃ ಪರಿಪೀಡಿತಃ ॥ ೭ ॥

ಕಥಂ ತೇನ ಪ್ರಕರ್ತವ್ಯಂ ಕಾರ್ತಿಕವ್ರತಕಂ ಶುಭಂ ।
ಯಸ್ಮಾದತ್ಯಂತ ಫಲದಮತ್ಯಾಜ್ಯಂ ಸರ್ವಥಾ ನರೈಃ ॥ ೮ ॥

---

೪. ಈ ಐದು ವ್ರತಗಳನ್ನೂ ಮಾಡಿದರೆ ಕಾರ್ತಿಕ ವ್ರತ ಮಾಡುವವನು ಸಂಪೂರ್ಣವಾಗಿ ಫಲವನ್ನು ಹೊಂದುತ್ತಾನೆ. ಇದು ಭುಕ್ತಿ ಮುಕ್ತಿಗಳನ್ನು ಕೊಡುತ್ತದೆ.

೫. ಋಷಿಗಳು ಹೇಳಿದರು–ಈ ಕಾರ್ತಿಕ ವಿಧಿಯು ವಿಷ್ಣುವಿಗೆ ಪ್ರೀತಿಕರವಾದುದು. ಬಹು ಫಲವನ್ನು ಕೊಡುತ್ತದೆ. ಎಲೈ ರೋಮಹರ್ಷಣ ಋಷಿಯೇ ? ಇದನ್ನು ಇತಿಹಾಸದೊಡನೆ ಚೆನ್ನಾಗಿ ಹೇಳಿದೆ. ಆಶ್ಚರ್ಯಕರವಾದುದು.

೬. ಪಾಪ ಮತ್ತು ದುಃಖಗಳನ್ನು ನಾಶಮಾಡುವುದರಿಂದ ಇದನ್ನು ಅವಶ್ಯವಾಗಿ ಮಾಡಬೇಕು. ಮೋಕ್ಷಾರ್ಥಿಗಳೂ ಭೋಗ ಕಾಮಿಗಳೂ ಇದನ್ನು ಮಾಡಬೇಕು.

೭–೮. ಈ ವ್ರತವೇನೋ ಈರೀತಿ ಉತ್ತಮವಾದುದು ವ್ರತ ಮಾಡುತ್ತಿದ್ದಾಗ ಕಷ್ಟಬಂದರೇನು ಮಾಡಬೇಕು ? ಕಷ್ಟದಲ್ಲಿ ಸಿಕ್ಕಿರುವವನು ದುರ್ಗಮವಾದ ಅರಣ್ಯದಲ್ಲಿರುವವನು. ರೋಗವುಳ್ಳವನು. ಈ ಕಾರ್ತಿಕ ವ್ರತವನ್ನು ಹೇಗೆ ಮಾಡಬೇಕು ? ಇದು ಬಹು ಫಲವನ್ನು ಕೊಡುತ್ತಾದುದರಿಂದ ಮನುಷ್ಯನು ಇದನ್ನು ಬಿಡಕೂಡದಷ್ಟೇ !

|| ಸೂತ ಉವಾಚ ||

ಏವಮಾಪದ್ಗತೋ ಯಸ್ತು ನರೋ ನಿತ್ಯಂ ದೃಢವ್ರತಃ |
ಕಾರ್ತಿಕವ್ರತಕಂ ತೇನ ಕರ್ತವ್ಯಂ ತು ಯಥಾ ಭವೇತ್ || ೯ ||

ತತ್ಸರ್ವಂ ಕಥಯಿಷ್ಯೇಽಹಂ ಶೃಣುಧ್ವಂ ಮುನಿಪುಂಗವಾಃ |
ವಿಷ್ಣೋಶ್ಶಿವಸ್ಯ ವಾ ಕುರ್ಯಾದಾಲಯೇ ಹರಿಜಾಗರಂ || ೧೦ ||

ಶಿವವಿಷ್ಣುಗೃಹಾಭಾವೇ ಸರ್ವದೇವಾಲಯೇಷ್ವಪಿ |
ದುರ್ಗಾರಣ್ಯಸ್ಥಿತೋ ಯಶ್ಚ ಯದಿ ವಾಽಽಪದ್ಗತೋ ಭವೇತ್ || ೧೧ ||

ಕುರ್ಯಾತ್ತದಾಶ್ವತ್ಥಮೂಲೇ ತುಲಸೀನಾಂ ವನೇಷ್ವಪಿ |
ವಿಷ್ಣುನಾಮಪ್ರಬಂಧಾಶ್ಚ ಯೋ ಗಾಯೇದ್ವಿಷ್ಣುಸನ್ನಿಧೌ || ೧೨ ||

ಗೋಸಹಸ್ರಪ್ರದಾನಸ್ಯ ಫಲಂ ಪ್ರಾಪ್ನೋತಿ ಮಾನವಃ |
ವಾದ್ಯಕೃತ್ಪುರುಷಶ್ಚಾಪಿ ವಾಜಪೇಯಫಲಂ ಲಭೇತ್ || ೧೩ ||

---

೯-೧೩. ಸೂತನು ಹೇಳಿದನು–ವ್ರತಮಾಡಬೇಕೆಂದಿರುವವನಿಗೆ ಕಷ್ಟ ಬಂದರೆ ಅವನು ಆ ವ್ರತವನ್ನು ಹೇಗೆ ಮಾಡಬೇಕು? ಎಂಬುದನ್ನೆಲ್ಲಾ ಹೇಳುತ್ತೇನೆ. ಎಲೈ ಋಷಿಗಳಿರಾ? ಕೇಳಿರಿ. ಆಗ ವಿಷ್ಣುವಿನ ಅಥವಾ ಶಿವನ ದೇವಾಲಯದಲ್ಲಿ ಹರಿಜಾಗರಣವನ್ನು ಮಾಡಬೇಕು. ಅವೂ ಇಲ್ಲದಿರುವಲ್ಲಿ ಮತ್ತಾವುದಾದರೂ ದೇವಸ್ಥಾನವಿದ್ದರೆ ಅಲ್ಲಿ ಮಾಡಬೇಕು. ಅರಣ್ಯದಲ್ಲಿ ದುರ್ಗದಲ್ಲಿ ಇದ್ದವನೂ ಆಪತ್ತನ್ನು ಹೊಂದಿರುವವನೂ ಅರಳಿಯ ಮರದ ಬುಡದಲ್ಲಾಗಲಿ, ತುಳಸಿಯ ವನದಲ್ಲಾಗಲಿ ಮಾಡಬೇಕು. ವಿಷ್ಣುವಿನ ನಾಮಗಳನ್ನೂ ಪುರಾಣಗಳನ್ನೂ ವಿಷ್ಣುವಿನ ಸನ್ನಿಧಿಯಲ್ಲಿ ಓದುವವನು ಸಾವಿರ ಗೋವುಗಳನ್ನು ದಾನಮಾಡಿದ ಫಲವನ್ನು ಹೊಂದುತ್ತಾನೆ. ಆ ಸ್ವಾಮಿಯ ಸನ್ನಿಧಿಯಲ್ಲಿ ವಾದ್ಯವನ್ನು ಮಾಡಿಸುವವನು ವಾಜಪೇಯ ಯಾಗದ ಫಲವನ್ನು ಹೊಂದುತ್ತಾನೆ.

ಸರ್ವತೀರ್ಥಾವಗಾಹೋತ್ಥಂ ನರ್ತಕಃ ಫಲಮಾಪ್ನುಯಾತ್ ।
ಸರ್ವಮೇತಲ್ಲಭೇತ್ಪುಣ್ಯಂ ತೇಷಾಂ ತು ದ್ರವ್ಯದಃ ಪುಮಾನ್ ॥ ೧೪ ॥

ಶ್ರವಣಾದರ್ಶನಾದ್ವಾಪಿ ತತ್ ಷಡಂಶಮವಾಪ್ನುಯಾತ್ ।
ಆಪದ್ಗತೋ ಯದಾಪ್ಯಂಭೋ ನ ಲಭೇತ್ ಸ್ನಪನಾಯ ಸಃ ॥ ೧೫ ॥

ವ್ಯಾಧಿತೋ ವಾ ಪುನಃ ಕುರ್ಯಾದ್ವಿಷ್ಣೋರ್ನಾಮ್ನಾ ಪ್ರಮಾರ್ಜನಂ ।
ಉದ್ಯಾಪನವಿಧಿಂ ಕರ್ತುಮಶಕ್ತೋ ಯೋ ವ್ರತಸ್ಥಿತಃ ॥ ೧೬ ॥

ಬ್ರಾಹ್ಮಣಾನ್ಭೋಜಯೇಚ್ಛಕ್ತ್ಯಾ ವ್ರತಸಂಪೂರ್ಣ ಹೇತವೇ ।
ಯಸ್ಮಾದತ್ಯಂತ ಫಲದೋ ನ ತ್ಯಾಜ್ಯಃ ಸರ್ವಥಾ ನರೈಃ ॥ ೧೭ ॥

---

೧೪. ಅಲ್ಲಿ ನರ್ತನ ಮಾಡುವವನು ಎಲ್ಲಾ ತೀರ್ಥಗಳಲ್ಲಿಯೂ ಸ್ನಾನ ಮಾಡಿದ ಫಲವನ್ನು ಹೊಂದುತ್ತಾನೆ. ಆ ವ್ರತಕ್ಕೆ ಹಣವನ್ನು ಕೊಡುವವನು ಇವರೆಲ್ಲರೂ ಪುಣ್ಯವನ್ನೂ ಹೊಂದುತ್ತಾರೆ.

೧೫. ಕೇಳುವುದರಿಂದಲೂ ನೋಡುವುದರಿಂದಲೂ ಆರನೆಯ ಬಂದಂಶದ ಫಲವನ್ನು ಹೊಂದುತ್ತಾನೆ. ಆಪತ್ತಿನಲ್ಲಿರುವವನು ನೀರಿನಲ್ಲಿ ಸ್ನಾನಮಾಡಲು ನೀರು ಸಿಕ್ಕದಿದ್ದರೆ ವಿಷ್ಣುವಿನ ನಾಮವನ್ನು ಹೇಳಿಕೊಂಡು ಪ್ರೋಕ್ಷಿಸಿಕೊಳ್ಳಬೇಕು.

೧೬-೧೭. ರೋಗಿಯಾದವನು ವಿಷ್ಣುವಿನ ನಾಮಸ್ಮರಣೆಯನ್ನು ಮಾಡುತ್ತಾ ನೀರನ್ನು ಪ್ರೋಕ್ಷಿಸಿಕೊಳ್ಳಬೇಕು ವ್ರತಮಾಡುತ್ತಿದ್ದು ಉದ್ಯಾಪನೆಯನ್ನು ಮಾಡಲು ಆಗದಿದ್ದರೆ ಶಕ್ತಿಗನುಣವಾಗಿ ಬ್ರಾಹ್ಮಣರಿಗೆ ಭೋಜನ ಮಾಡಿಸಬೇಕು. ಇದು ಬಹುಫಲವನ್ನು ಕೊಡುವುದರಿಂದ ಖಂಡಿತವಾಗಿಯೂ ಬಿಡಬಾರದು.

**ಅವ್ಯಕ್ತರೂಪಿಣೋ ವಿಷ್ಣೋಃ ಸ್ವರೂಪಂ ಬ್ರಾಹ್ಮಣಾ ಭುವಿ ।**
**ತತ್ಸಂತುಷ್ಟ್ಯಾ ಸ ಸಂತುಷ್ಟಸ್ಸರ್ವಥಾ ಸ್ಯಾನ್ನ ಸಂಶಯಃ ॥ ೧೮ ॥**

**ಅಶಕ್ತೋ ದೀಪದಾನೇ ಯಃ ಪರದೀಪಂ ಪ್ರಬೋಧಯೇತ್ ।**
**ತೇಷಾಂ ವಾ ರಕ್ಷಣಂ ಕುರ್ಯಾದ್ವಾತಾದಿಭ್ಯಃ ಪ್ರಯತ್ನತಃ ॥ ೧೯ ॥**

**ಅಭಾವೇ ತುಲಸೀನಾಂ ಚ ಪೂಜಯೇದ್ವೈಷ್ಣವಂ ದ್ವಿಜಂ ।**
**ಯಸ್ಮಾತ್ಸನ್ನಿಹಿತೋ ವಿಷ್ಣುಃ ಸ್ವಭಕ್ತೇಷ್ವೇವ ಸರ್ವದಾ ॥ ೨೦ ॥**

**ಸರ್ವಾಽಭಾವೇ ವ್ರತೀ ಕುರ್ಯಾದ್ಬ್ರಾಹ್ಮಣಾನಾಂ ಗವಾಮಪಿ ।**
**ಸೇವಾಂ ಹ್ಯಶ್ವತ್ಥವಟಯೋರ್ವ್ರತಸಂಪೂರ್ಣ ಹೇತವೇ ॥ ೨೧ ॥**

---

೧೮. ಕಣ್ಣಿಗೆ ಕಾಣದ ವಿಷ್ಣುವಿನ ರೂಪವೇ ಬ್ರಾಹ್ಮಣರಾಗಿ ಭೂಮಿಯಲ್ಲಿ ಹುಟ್ಟಿದ್ದಾರೆ. ಅವರು ತೃಪ್ತರಾದರೆ ಆ ವಿಷ್ಣುವು ಸಂತುಷ್ಟನಾಗುವನು. ಎಂಬುದರಲ್ಲಿ ಸಂಶಯವಿಲ್ಲ. ಇದು ನಿಶ್ಚಯವು.

೧೯. ದೀಪವನ್ನು ಹಚ್ಚುವುದಕ್ಕೆ ಶಕ್ತನಲ್ಲದವನು ಮತ್ತೊಬ್ಬರು ಹಚ್ಚಿರುವ ದೀಪವನ್ನು ಹೆಚ್ಚುವಂತೆ ಮಾಡಬೇಕು. ಅದು ಗಾಳಿಯಲ್ಲಿ ಆರಿಹೋಗದಂತೆ ಅದನ್ನು ರಕ್ಷಿಸಬೇಕು.

೨೦. ಅದಾಗದಿದ್ದರೆ ತುಳಸಿಯನ್ನಾಗಲಿ, ವೈಷ್ಣವನಾದ ಬ್ರಾಹ್ಮಣನನ್ನಾಗಲಿ ಪೂಜಿಸಬೇಕು. ವಿಷ್ಣುವು ಯಾವಾಗಲೂ ತನ್ನ ಭಕ್ತರಲ್ಲಿಯೇ ಇದ್ದುಕೊಂಡಿರುತ್ತಾನೆ.

೨೧. ಏನು ಮಾಡಲಾಗದಿದ್ದರೂ ಕಡೆಗೆ ವ್ರತಮಾಡುವವನು ಬ್ರಾಹ್ಮಣರ ಗೋವುಗಳ, ಅರಳಿ, ಆಲಗಳ, ಸೇವೆಯನ್ನು ಮಾಡಿದರೆ ವ್ರತವು ಪೂರ್ತಿಯಾಗುತ್ತದೆ.

|| ಋಷಯ ಊಚುಃ ||

ಕಥಂ ತ್ವಯಾಶ್ವತ್ಥವಟೌ ಗೋಬ್ರಾಹ್ಮಣಸಮೌ ಕೃತೌ ।
ಸರ್ವೇಭ್ಯಶ್ಚ ತರುಭ್ಯಸ್ತೌ ಕಸ್ಮಾತ್ಪೂಜ್ಯತರೌ ಸ್ಮೃತೌ || ೨೨ ||

|| ಸೂತ ಉವಾಚ ||

ಅಶ್ವತ್ಥರೂಪೀ ಭಗವಾನ್ ವಿಷ್ಣುರೇವ ನ ಸಂಶಯಃ ।
ರುದ್ರರೂಪೀ ವಟಸ್ತದ್ವತ್ಪಾಲಾಶೋ ಬ್ರಹ್ಮರೂಪಧೃತ್ || ೨೩ ||

ದರ್ಶನಂ ಪೂಜನಂ ದೇವಾ ತೇಷಾಂ ಪಾಪಹರಾ ಸ್ಮೃತಾ ।
ದುಃಖಾಪದ್ವ್ಯಾಧಿದುಷ್ಟಾನಾಂ ವಿನಾಶೇ ಕಾರಣಂ ಧ್ರುವಂ || ೨೪ ||

|| ಋಷಯ ಊಚುಃ ||

ಕಥಂ ವೃಕ್ಷತ್ವಮಾಪನ್ನಾ ಬ್ರಹ್ಮವಿಷ್ಣುಮಹೇಶ್ವರಾಃ ।
ಏತತ್ಕಥಯ ಸರ್ವಜ್ಞ ಸಂಶಯೋಽತ್ರ ಮಹಾನ್ ಹಿ ನಃ || ೨೫ ||

---

೨೨. ಋಷಿಗಳು ಹೇಳಿದರು–ಅರಳಿ, ಆಲಗಳು ಗೋಬ್ರಾಹ್ಮಣರಿಗೆ ಸಮವೆಂದು ಹೇಳುತ್ತಿರುವಿಯಲ್ಲ. ಅದು ಹೇಗೆ? ಎಲ್ಲ ಮರಗಳಿಗಿಂತಲೂ ಇವುಗಳೇಕೆ ಪೂಜ್ಯಗಳಾದುವು ?

೨೩. ಸೂತನು ಹೇಳಿದನು–ವಿಷ್ಣುವು ಅಶ್ವತ್ಥರೂಪವೇ ಆಗಿರುವನು ಎಂಬುದರಲ್ಲಿ ಸಂಶಯವಿಲ್ಲ. ಆಲದ ಮರವು ರುದ್ರನ ರೂಪವುಳ್ಳದ್ದು. ಮುತ್ತುಗವು ಬ್ರಹ್ಮನ ರೂಪವಾದುದು. ಸಂಶಯವಿಲ್ಲ.

೨೪. ಅವುಗಳ ದರ್ಶನ, ಪೂಜೆ, ಸೇವೆಗಳು ಪಾಪವನ್ನು ಹಾಳುಮಾಡುತ್ತವೆ. ದುಃಖ, ಆಪತ್ತು, ರೋಗಗಳೆಲ್ಲವೂ ಹೋಗುತ್ತವೆ. ನಿಶ್ಚಯವು.

೨೫. ಋಷಿಗಳು ಹೇಳಿದರು–ಬ್ರಹ್ಮ, ವಿಷ್ಣು ಮಹೇಶ್ವರರು ಮರದ ರೂಪವನ್ನು ಹೇಗೆ ಹೊಂದಿದರು ? ಇದನ್ನು ಹೇಳು. ನಮಗೆ ಬಹಳವಾದ ಸಂಶಯವಿದೆ.

|| ಸೂತ ಉವಾಚ ||

ಪಾರ್ವತೀ ಶಿವಯೋರ್ದೇವೈಃ ಸುರತಂ ಕುರ್ವತೋಃ ಕಿಲ |
ಅಗ್ನಿಂ ಬ್ರಾಹ್ಮಣವೇಷೇಣ ಪ್ರೇಷ್ಯ ವಿಘ್ನಂ ಕೃತಂ ಪುರಾ || ೨೬ ||

ತತಸ್ತು ಪಾರ್ವತೀ ಕ್ರುದ್ಧಾ ಶಶಾಪ ತ್ರಿದಿವೌಕಸಃ |
ರತ್ಯೋತ್ಸವಸುಖಭ್ರಂಶಾತ್ಕಂಪಮಾನಾ ರುಷಾ ತದಾ || ೨೭ ||

|| ಪಾರ್ವತ್ಯುವಾಚ ||

ಕ್ರಿಮಿಕೀಟಾದಯೋಽಪ್ಯೇತೇ ಜಾನಂತಿ ಸುರತೇ ಸುಖಂ |
ತದ್ವಿಘ್ನಕರಣಾದ್ದೇವಾ ಹ್ಯುದ್ಭಿಜತ್ವಮವಾಪ್ಸ್ಯಥ || ೨೮ ||

|| ಸೂತ ಉವಾಚ ||

ಏವಂ ಸಾ ಪಾರ್ವತೀ ದೇವಾನಶಪತ್ಕ್ರುದ್ಧಮಾನಸಾ |
ತಸ್ಮಾದ್ವೃಕ್ಷತ್ವಮಾಪನ್ನಾಃ ಸರ್ವೇ ದೇವಗಣಾಃ ಕಿಲ || ೨೯ ||

---

೨೬. ಸೂತನು ಹೇಳಿದನು–ಪಾರ್ವತೀ ಶಿವರು ಸುರತವನ್ನು ಮಾಡುತ್ತಿದ್ದಾಗ ದೇವತೆಗಳು ಅಗ್ನಿಯನ್ನು ಬ್ರಾಹ್ಮಣನ ವೇಷದಿಂದ ಅವರ ಬಳಿಗೆ ಕಳುಹಿಸಿ ವಿಘ್ನವನ್ನುಂಟುಮಾಡಿದರು.

೨೭. ಆಗ ರತಿಸುಖವನ್ನು ಕಳೆದುಕೊಂಡ ಆ ಪಾರ್ವತಿಯು ಕೋಪಗೊಂಡು ತುಟಿಯನ್ನು ಅಲ್ಲಾಡಿಸುತ್ತಾ ದೇವತೆಗಳನ್ನು ಶಪಿಸಿದಳು.

೨೮. ಪಾರ್ವತಿಯು ಹೇಳಿದಳು–ಕ್ರಿಮಿ ಕೀಟಗಳೂ ಕೂಡ ಸುರತದಲ್ಲಿ ಸುಖವನ್ನು ತಿಳಿದು ಹೊಂದುತ್ತವೆ. ಅಂತಹ ಸುರತವನ್ನು ನಾಶಮಾಡಿದುದರಿಂದ ಎಲೈ ದೇವತೆಗಳಿರಾ ! ಭೂಮಿಯಲ್ಲಿ ಮೊಳಕೆಯಿಂದ ಹುಟ್ಟುವಿಕೆಯನ್ನು ಹೊಂದಿರಿ.

೨೯. ಸೂತನು ಹೇಳಿದನು–ಈ ರೀತಿಯಾಗಿ ಪಾರ್ವತಿಯು ಕೋಪಗೊಂಡು ದೇವತೆಗಳನ್ನು ಶಪಿಸಲು ಅವರೆಲ್ಲರೂ ಮರವಾಗಿ ಹುಟ್ಟಿದರು.

ತಸ್ಮಾದ್ದಿವ್ಯೌ ವಿಷ್ಣುಮಹೇಶ್ವರಾವುಭೌ-
ಬಭೂವತುಃ ಬೋಧಿವಟೌ ಮುನೀಶ್ವರಾಃ ।
ಬೋಧಿಸ್ತ್ವಗಾದಾರ್ಕಿದಿನಂ ವಿನೈಷ-
ಹ್ಯಸ್ಪೃಶ್ಯತಾಮರ್ಕಜವಿಷ್ಟಿಯೋಗಾತ್ ॥ ೩೦ ॥

ಇತಿ ಶ್ರೀಮಹಾಪುರಾಣೇ ಪಾದ್ಮೇ ಉತ್ತರಖಂಡೇ ಕಾರ್ತಿಕ ಮಾಹಾತ್ಮ್ಯೇ
ಶ್ರೀ ಕೃಷ್ಣ ಸತ್ಯಭಾಮಾ ಸಂವಾದೇ ಅಶ್ವತ್ಥವಟ ಪ್ರಶಂಸನಂ
ನಾಮ ಸಪ್ತದಶಾಧಿಕಶತತಮೋಽಧ್ಯಾಯಸ್ಸಮಾಪ್ತಃ

---

೩೦. ಆದುದರಿಂದ ಈ ಅರಳಿ ಆಲಗಳು ವಿಷ್ಣು ಮಹೇಶ್ವರರು ಆದರು. ಅರಳಿಯ ಮರವನ್ನು ಶನಿವಾರ ಮತ್ತು ವಿಷ್ಟಿಗಳ ಯೋಗವಿರುವ ವಾರದಲ್ಲಿ ಮಾತ್ರ ಮುಟ್ಟಬಹುದು. ಮಿಕ್ಕ ದಿನ ಕೂಡದು.

ಇಂತು ಶ್ರೀ ಪದ್ಮಮಹಾಪುರಾಣದ ಉತ್ತರಖಂಡದ ಕಾರ್ತಿಕ ಮಹಾತ್ಮ್ಯೆಯ
ಶ್ರೀ ಕೃಷ್ಣ ಸತ್ಯಭಾಮೆಯರ ಸಂವಾದದಲ್ಲಿ ಅಶ್ವತ್ಥವಟ ಪ್ರಶಂಸನ
ಎಂಬ ನೂರ ಹದಿನೇಳನೆಯ ಅಧ್ಯಾಯವು ಮುಗಿದುದು.



॥ ಶ್ರೀಃ ॥

-X-

# ಅಥ ಶ್ರೀ ಮಹಾಪುರಾಣೇ ಪಾದ್ಮೇ ಉತ್ತರಖಂಡೇ

## ॥ ಅಷ್ಟಾದಶಾಧಿಕಶತತಮೋಽಧ್ಯಾಯಃ ॥



॥ ಋಷಯ ಊಚುಃ ॥

ಅಸ್ಪೃಶ್ಯತ್ವಂ ಕಥಂ ಯಾತಃ ಸೂತ ಬೋಧಿತರುಸ್ತ್ವಯಂ ।
ಸ್ಪೃಶ್ಯ ತ್ವಂ ಚ ಕಥಂ ಪ್ರಾಪ್ತಃ ತಥಾಯಂ ಶನಿವಾಸರೇ ॥
ಏತದ್ವಿಸ್ತರತಸ್ಸರ್ವಂ ವಕ್ತುಮರ್ಹಸಿ ನೋ ಭವಾನ್ ॥ ೧ ॥

॥ ಸೂತ ಉವಾಚ ॥

ಸಮುದ್ರಮಥನಾದ್ಯಾನಿ ರತ್ನಾನ್ಯಾಪುಃ ಸುರೋತ್ತಮಾಃ ।
ಶ್ರೀಯಂ ಚ ಕೌಸ್ತುಭಂ ತೇಷಾಂ ವಿಷ್ಣವೇ ಪ್ರದದುಸ್ಸರಾಃ ॥ ೨ ॥

---

## ನೂರ ಹದಿನೆಂಟನೆಯ ಅಧ್ಯಾಯವು



೧. ಋಷಿಗಳು ಹೇಳಿದರು—ಎಲೈ ಸೂತನೇ! ಈ ಅರಳಿಯ ಮರವು ಶನಿವಾರ ಹೊರತು, ಮಿಕ್ಕ ದಿವಸಗಳಲ್ಲಿ ಏಕೆ ಮುಟ್ಟಬಾರದಾಯಿತು? ಶನಿವಾರ ದಲ್ಲಿ ಏಕೆ ಮುಟ್ಟಬಹುದು? ಇದನ್ನು ನನಗೆ ವಿಸ್ತಾರವಾಗಿ ಹೇಳು.

೨. ಸೂತನು ಹೇಳಿದನು—ಸಮುದ್ರ ಮಥನದಿಂದ, ದೇವತೆಗಳು ಹೊಂದಿದ, ರತ್ನಗಳಲ್ಲಿ ಲಕ್ಷ್ಮಿಯನ್ನೂ, ಕೌಸ್ತುಭವನ್ನೂ, ಆ ದೇವತೆಗಳು ವಿಷ್ಣುವಿಗೆ ಕೊಟ್ಟರು.

ಯಾವದಂಗೀಚಕಾರಾಸೌ ಲಕ್ಷ್ಮೀಂ ಭಾರ್ಯಾರ್ಥಮಾತ್ಮನಾಃ ।
ತಾವದ್ವಿಜ್ಞಾಪಯಾಮಾಸ ಲಕ್ಷ್ಮೀಸ್ತಂ ಚಕ್ರಪಾಣಿನಂ ॥ ೩ ॥

॥ ಲಕ್ಷ್ಮೀರುವಾಚ ॥

ಅಸಂಸ್ಕೃತ್ಯ ಕಥಂ ಜ್ಯೇಷ್ಠಾಂ ಕನಿಷ್ಠಾ ಪರಿಣೀಯತೇ ।
ತಸ್ಮಾನ್ಮಮಾಗ್ರಜಾಮೇತಾಮಲಕ್ಷ್ಮೀಂ ಮಧುಸೂದನ ॥
ವಿವಾಹ್ಯ ನಯ ಮಾಂ ಪಶ್ಚಾದೇಷ ಧರ್ಮಃಸ್ಸನಾತನಃ ॥ ೪ ॥

॥ ಸೂತ ಉವಾಚ ॥

ಇತಿ ತದ್ವಚನಂ ಶ್ರುತ್ವಾ ಸ ವಿಷ್ಣುರ್ಲೋಕಭಾವನಃ ।
ಉದ್ದಾಲಕಾಯ ಮುನಯೇ ಸುದೀರ್ಘತಪಸೇ ತಥಾ ॥ ೫ ॥

ಸ್ಥೂಲಾಸ್ಯಾಂ ಶುಭ್ರದಶನಾಂ ಜರಠಾಂ ಬಿಭ್ರತೀಂ ತನುಂ ।
ವಿತತಾಂ ರಕ್ತನಯನಾಂ ರೂಕ್ಷಪಿಂಗಶಿರೋರುಹಾಂ ॥ ೬ ॥

---

೩. ವಿಷ್ಣುವು ಲಕ್ಷ್ಮಿಯನ್ನು ಹೆಂಡತಿಯನ್ನಾಗಿ ಒಪ್ಪಿಕೊಂಡಾಗ, ಆಕೆಯು ವಿಷ್ಣುವಿಗೆ ಇಂತೆಂದು ವಿಜ್ಞಾಪಿಸಿಕೊಂಡಳು.

೪. ಲಕ್ಷ್ಮಿಯು ಹೇಳಿದಳು–ಎಲೈ ಮಧುಸೂದನನೇ ! ನನಗಿಂತ ಮೊದಲು ಹುಟ್ಟಿದ, ಈ ಅಲಕ್ಷ್ಮಿಗೆ ಮೊದಲು ವಿವಾಹ ರೂಪವಾದ, ಸಂಸ್ಕಾರ ವಾಗದೆ ನನ್ನನ್ನು ಹೇಗೆ ಮದುವೆಯಾಗುತ್ತೀಯೆ ? ಈಕೆಗೆ ಮೊದಲು ಮದುವೆ ಮಾಡಿ ಅನಂತರ ನನ್ನನ್ನು ಮದುವೆಯಾಗಿ ಕರೆದುಕೊಂಡು ಹೋಗು ಇದು ಹಿಂದಿನ ನಡತೆಯು.

೫-೮. ಸೂತನು ಹೇಳಿದನು–ಆಗ ಲೋಕಮಾನ್ಯನಾದ ವಿಷ್ಣುವು ಆಕೆಯ ಈ ಮಾತನ್ನು ಕೇಳಿ, ದೀರ್ಘವಾಗಿ ತಪಸ್ಸು ಮಾಡಿದ, ಉದ್ದಾಲಕನೆಂಬ ಋಷಿಗೆ ಲಕ್ಷ್ಮಿಯ ಮಾತಿನಂತೆ ಆ ಅಲಕ್ಷ್ಮಿಯನ್ನು ಮದುವೆ ಮಾಡಿಕೊಟ್ಟನು. ದಪ್ಪವಾದ ಮುಖವುಳ್ಳ, ಬೆಳ್ಳಗಿರುವ ಹಲ್ಲುಗಳುಳ್ಳ, ಒರಟಾಗಿರುವ ದೇಹವುಳ್ಳ, ಅಡ್ಡಲಾಗಿ

ಸ ಮುನಿರ್ವಿಷ್ಣುವಾಕ್ಯಾತ್ತಾಮಂಗೀಕೃತ್ಯ ಸ್ವಮಾಶ್ರಮಂ ।
ವೇದಧ್ವನಿಸಮಾಯುಕ್ತಮಾನಯಾಮಾಸ ಧರ್ಮವಿತ್ ॥ ೭ ॥

ಹೋಮಧೂಪಸುಗಂಧಾಢ್ಯಂ ವೇದಘೋಷನಿನಾದಿತಂ ।
ಆಶ್ರಮಂ ತಂ ಸಮಾಲೋಕ್ಯ ವ್ಯಥಿತಾ ಸಾಬ್ರವೀದಿದಂ ॥ ೮ ॥

॥ ಜ್ಯೇಷ್ಠೋವಾಚ ॥

ನ ಹಿ ವಾಸೋಽನುರೂಪೋಽಯಂ ವೇದಧ್ವನಿಯುತೋ ಮಮ ।
ನ ತ್ವಾಗಮಿಷ್ಯೇ ಭೋ ಬ್ರಹ್ಮನ್ನಯಸ್ವಾನ್ಯತ್ರ ಮಾಂ ಧ್ರುವಂ ॥ ೯ ॥

॥ ಉದ್ದಾಲಕ ಉವಾಚ ॥

ಕಥಂ ನಾಯಾಸಿ ಕಿಂ ಚಾತ್ರ ವರ್ತತೇಽಸಮ್ಮತಂ ತವ ।
ತವ ಯೋಗ್ಯಾ ಚ ವಸತಿಃ ಕಾ ಭವೇಚ್ಚ ವದಸ್ವ ತತ್ ॥ ೧೦ ॥

---

ಬೆಳೆದಿರುವ, ಕೆಂಪಾದ ಕಣ್ಣುಗಳುಳ್ಳ, ಒರಟಾಗಿಯೂ, ಕೆಂಚಗೂ ಇರುವ ಕೂದಲುಳ್ಳ, ಆಕೆಯನ್ನು ಉದ್ದಾಲಕನು ಮದುವೆಯಾದನು. ಆ ಉದ್ದಾಲಕನು ವಿಷ್ಣುವಿನ ಮಾತನ್ನು ಮೀರಲಾರದೆ ಒಪ್ಪಿ ಮದುವೆಮಾಡಿಕೊಂಡು ವೇದಧ್ವನಿಯನ್ನು ಮಾಡುತ್ತಾ ತನ್ನ ಆಶ್ರಮಕ್ಕೆ ಕರೆದುಕೊಂಡು ಹೋದನು. ಹೋಮದ ಧೂಮವುಳ್ಳ, ಸುವಾಸನೆಯಾದ, ವೇದಘೋಷದಿಂದ ಕೂಡಿರುವ, ಆ ಆಶ್ರಮವನ್ನು ನೋಡಿ ಅಕೆಯು ದುಃಖಗೊಂಡು ಇಂತೆಂದಳು

೯. ಜ್ಯೇಷ್ಠೆಯು ಹೇಳಿದಳು–ಎಲೈ ಬ್ರಾಹ್ಮಣನೇ! ವೇದಧ್ವನಿಯಿಂದ ಕೂಡಿದ ಈ ಸ್ಥಳವು ನನ್ನ ವಾಸಕ್ಕೆ ಸರಿಯಾಗುವುದಿಲ್ಲ. ನಾನು ಇಲ್ಲಿಗೆ ಬರುವುದಿಲ್ಲ. ಬೇರೆ ಕಡೆಗೆ ನನ್ನನ್ನು ಕರೆದುಕೊಂಡು ಹೋಗು

೧೦. ಉದ್ದಾಲಕನು ಹೇಳಿದನು–ನೀನೇಕೆ ಇಲ್ಲಿಗೆ ಬರುವುದಿಲ್ಲ? ಇಲ್ಲಿ ನಿನಗೆ ಬೇಡವಾಗಿರುವುದು ಯಾವುದು? ನಿನಗೆ ಬೇಕಾದ ಸ್ಥಳವಾವುದು? ಹೇಳು.

॥ ಜ್ಯೇಷ್ಠೋವಾಚ ॥

ವೇದಧ್ವನಿರ್ಭವೇದ್ಯಸ್ಮಿನ್ನತಿಥೀನಾಂ ಚ ಪೂಜನಂ ।
ಯಜ್ಞದಾನಾದಿಕಂ ಚಾಪಿ ನೈವ ತತ್ರ ವಸಾಮ್ಯಹಂ ॥ ೧೧ ॥

ಉತ್ತಮೋ ನೀತಿಕುಶಲೋ ಧರ್ಮಯುಕ್ತಃ ಪ್ರಿಯಂವದಃ ।
ಗುರುದೇವಾರ್ಚನಂ ಯತ್ರ ನೈವ ತತ್ರ ವಸಾಮ್ಯಹಂ ॥ ೧೨ ॥

ಪರಸ್ಪರಾನುರಾಗೇಣ ದಾಂಪತ್ಯಂ ಯತ್ರ ವರ್ತತೇ ।
ಪಿತೃದೇವಾರ್ಚನಂ ಯತ್ರ ನೈವ ತತ್ರ ವಸಾಮ್ಯಹಂ ॥ ೧೩ ॥

ರಾತ್ರೌ ರಾತ್ರೌ ಗೃಹೇ ಯಸ್ಮಿನ್ ದಂಪತ್ಯೋಃ ಕಲಹೋ ಭವೇತ್ ।
ನಿರಾಶಾ ಯಾಂತ್ಯತಿಥಯಃ ತಸ್ಮಿನ್ ಸ್ಥಾನೇ ರತಿರ್ಮಮ ॥ ೧೪ ॥

ದುರೋದರರತಾ ಯತ್ರ ಪರದ್ರವ್ಯಾಪಹಾರಿಣಃ ।
ಪರದಾರರತಾಶ್ಚಾಪಿ ತತ್ರ ಸ್ಥಾನೇ ರತಿರ್ಮಮ ॥ ೧೫ ॥

---

೧೧. ಜ್ಯೇಷ್ಠೆಯು ಹೇಳಿದಳು–ವೇದಧ್ವನಿಯು ಆಗುತ್ತಿರುವಲ್ಲಿಯೂ, ಅತಿಥಿಗಳನ್ನು ಪೂಜಿಸುತ್ತಿರುವಲ್ಲಿಯೂ, ಯಜ್ಞದಾನಾದಿಗಳು ನಡೆಯುವಲ್ಲಿಯೂ ನಾನು ವಾಸಮಾಡಲಾರೆನು.

೧೨. ಉತ್ತಮನೂ, ನೀತಿವಂತನೂ, ಧರ್ಮವುಳ್ಳವನೂ, ಪ್ರಿಯವಾದ ಮಾತನಾಡುವವನೂ, ಗುರು ದೇವತೆಗಳ ಪೂಜೆ ನಡೆಸುವವನೂ ಇರುವಲ್ಲಿ ನಾನು ಇರಲಾರೆನು.

೧೩. ಒಬ್ಬೊಬ್ಬರಿಗೆ ಸ್ನೇಹದಿಂದ ದಂಪತಿಗಳಿರುವಲ್ಲಿಯೂ, ದೊಡ್ಡವರ ಪೂಜೆಯೂ, ದೇವರ ಪೂಜೆಯೂ ನಡೆಯುವಲ್ಲಿಯೂ ನಾನು ವಾಸಿಸುವುದಿಲ್ಲ.

೧೪. ಪ್ರತಿರಾತ್ರಿಯಲ್ಲಿಯೂ ಯಾವ ಮನೆಯಲ್ಲಿ ಜಗಳ ನಡೆಯುವುದೋ ಅತಿಥಿಗಳು ನಿರಾಶರಾಗಿ ಎಲ್ಲಿಂದ ಹೋಗುತ್ತಾರೆಯೋ ಅಲ್ಲಿ ನಾನು ವಾಸಿಸುತ್ತೇನೆ.

೧೫. ಜೂಜು ನಡೆಯುವಲ್ಲಿಯೂ, ಪರರ ಹಣವನ್ನು ಕದಿಯುವವರಲ್ಲಿಯೂ, ಪರರ ಹೆಂಡಿರಲ್ಲಿ ಆಸಕ್ತರಾಗಿರುವವರಲ್ಲಿಯೂ ಇರಲು ನನಗೆ ಆಸೆಯಾಗುತ್ತದೆ.

ವೃದ್ಧಸಜ್ಜನವಿಪ್ರಾಣಾಂ ಯತ್ರ ಸ್ಯಾದಪಮಾನನಂ ।
ನಿಷ್ಠುರಂ ಭಾಷಣಂ ಯತ್ರ ತತ್ರ ನಿತ್ಯಂ ವಸಾಮ್ಯಹಂ ॥ ೧೬ ॥

ಗೋವಧೋ ಮದ್ಯಪಾನಂ ಚ ಯತ್ರ ಸಂಜಾಯತೇಽನಿಶಂ ।
ಬ್ರಹ್ಮಹತ್ಯಾದಿಪಾಪಾನಿ ತಸ್ಮಿನ್ ಸ್ಥಾನೇ ರತಿರ್ಮಮ ॥ ೧೭ ॥

॥ ಸೂತ ಉವಾಚ ॥

ಇತಿ ತದ್ವಚನಂ ಶ್ರುತ್ವಾ ವಿಷಣ್ಣವದನೋಽಭವತ್ ।
ಉದ್ದಾಲಕಃ ಪುನರ್ವಿಷ್ಣೋಃ ವಾಕ್ಯಂ ಸ್ಮೃತ್ವಾ ನ ಚೋಚಿವಾನ್ ॥ ೧೮ ॥

ಸೋಗಚ್ಛದ್ಯತ್ರ ತತ್ರಾಸ್ಯ ಪೂಜಾಮಾಲೋಕ್ಯ ಸಾಬ್ರವೀತ್ ।
ನಾಯಾಮೀತಿ ತತಸ್ಸೋಽಪಿ ಭ್ರಮಾದತ್ಯಾತುರೋಽಭವತ್ ।
ಉದ್ದಾಲಕಸ್ತತೋ ವಾಕ್ಯಂ ತಾಮಲಕ್ಷ್ಮೀ ಮುವಾಚ ಹ ॥ ೧೯ ॥

---

೧೬. ವೃದ್ಧರಿಗೂ ಸಜ್ಜನರಿಗೂ ಅಪಮಾನವಾಗುವಲ್ಲಿಯೂ, ನಿಷ್ಠುರವಾದ ಭಾಷೆಯನ್ನು ಆಡುವವರಿರುವಲ್ಲಿಯೂ ನಾನು ಇರುತ್ತೇನೆ.

೧೭. ಗೋವಧೆ ಮದ್ಯಪಾನಗಳು ಎಲ್ಲಿ ಯಾವಾಗಲೂ ನಡೆಯುತ್ತವೆಯೋ ಬ್ರಹ್ಮಹತ್ಯಾದಿಗಳು ಎಲ್ಲಿ ನಡೆಯುತ್ತವೆಯೋ ಅಲ್ಲಿ ನನಗಿರಲು ಇಷ್ಟವಾಗುತ್ತದೆ.

೧೮. ಸೂತನು ಹೇಳಿದನು–ಈ ಮಾತನ್ನು ಕೇಳಿ ಉದ್ದಾಲಕನು ಖಿನ್ನನಾದನು. ವಿಷ್ಣುವಿನ ಮಾತನ್ನು ಸ್ಮರಿಸಿಕೊಳ್ಳುತ್ತಾ ಅದಕ್ಕೆ ಕಟ್ಟುಬಿದ್ದು ಯಾವ ಮಾತನ್ನೂ ಆಡಲೇ ಇಲ್ಲ.

೧೯. ಅನಂತರ ಆತನು ತನ್ನ ಆಶ್ರಮಕ್ಕೆ ಹೊರಟನು. ಅಲ್ಲಿ ಈತನು ಮಾಡುತ್ತಿದ್ದ ಪೂಜೆಯನ್ನು ಆಕೆಯು ನೋಡಿ ಅಲ್ಲಿಗೆ ನಾನು ಬರುವುದಿಲ್ಲವೆಂದಳು. ಆಗ ಇದನ್ನು ನೋಡಿ ಉದ್ದಾಲಕನು ಬಹು ದುಃಖಗೊಂಡನು. ಅನಂತರ ಆ ಅಲಕ್ಷ್ಮಿಯನ್ನು ನೋಡಿ ಇಂತೆಂದನು.

॥ ಉದ್ದಾಲಕ ಉವಾಚ ॥

ಅಶ್ವತ್ಥವೃಕ್ಷಮೂಲೇಸ್ಮಿನ್ನಲಕ್ಷ್ಮೀಃ ಸ್ಥೀಯತಾಂ ಕ್ಷಣಂ ।
ಆವಾಸಸ್ಥಾನಮಾಲೋಕ್ಯ ಯಾವದ್ಯಾಸ್ಯಾಮ್ಯಹಂ ಪುನಃ ॥ ೨೦ ॥

॥ ಸೂತ ಉವಾಚ ॥

ಇತಿ ತಾಂ ತತ್ರ ಸಂಸ್ಥಾಪ್ಯ ಜಗಾಮೋದ್ದಾಲಕಸ್ತದಾ ।
ಪ್ರತೀಕ್ಷ್ಯಾಪಿ ಚಿರಂ ತತ್ರ ಯದಾ ತಂ ನ ದದರ್ಶ ಸಾ ॥ ॥ ೨೧ ॥

ತದಾ ರುರೋದ ಕರುಣಂ ಭರ್ತ್ರ್ಯತ್ಯಾಗೇನ ದುಃಖಿತಾ
ತತ್ರಾಸ್ಯಾ ರುದಿತಂ ಲಕ್ಷ್ಮೀರ್ವೈಕುಂಠಭುವನೇಽಶೃಣೋತ್ ।
ತದಾ ವಿಜ್ಞಾಪಯಾಮಾಸ ವಿಷ್ಣುಮುದ್ವಿಗ್ನಮಾನಸಾ ॥ ೨೨ ॥

॥ ಲಕ್ಷ್ಮೀರುವಾಚ ॥

ಸ್ವಾಮಿನ್ ಮದ್ಭಗಿನೀ ಜ್ಯೇಷ್ಠಾ ಭರ್ತೃತ್ಯಾಗೇನ ದುಃಖಿತಾ ।
ತಾಮಾಶ್ವಾಸಯಿತುಂ ಯಾಹಿ ಕೃಪಾಳೋ ಯದ್ಯಹಂ ಪ್ರಿಯಾ ॥ ೨೩ ॥

---

೨೦. ಉದ್ದಾಲಕನು ಹೇಳಿದನು–ಎಲೈ ಅಲಕ್ಷ್ಮಿಯೆ! ನೀನು ಈ ಅರಳಿಯ ಮರದ ಬುಡದಲ್ಲಿ ಕ್ಷಣಕಾಲವಿರು. ನಿನ್ನ ವಾಸಕ್ಕೆ ಸರಿಯಾದ ಮನೆಯನ್ನು ನೋಡಿಕೊಂಡು ಬರುತ್ತೇನೆ.

೨೧. ಸೂತನು ಹೇಳಿದನು-ಹೀಗೆಂದು ಹೇಳಿ ಆಕೆಯನ್ನು ಅಲ್ಲಿ ಉದ್ದಾಲಕನು ಕೂರಿಸಿ ಹೊರಟು ಹೋದನು. ಬಹಳ ಹೊತ್ತು ನೋಡಿನರೂ ಆ ಉದ್ದಾಲಕನು ಬಾರದಿರಲು ಗಂಡನು ತನ್ನನ್ನು ಬಿಟ್ಟುದರಿಂದ ಆಕೆಯು ಬಹುವಾಗಿ ಅತ್ತಳು.

೨೨. ವೈಕುಂಠದಲ್ಲಿರುವ ಲಕ್ಷ್ಮಿಯು ಈ ಅಲಕ್ಷ್ಮಿಯ ಅಳುವಿನ ಧ್ವನಿಯನ್ನು ಕೇಳಿ ತಾನೂ ಖಿನ್ನಳಾಗಿ ವಿಷ್ಣುವನ್ನು ಕುರಿತು ಇಂತೆಂದಳು.

೨೩. ಲಕ್ಷ್ಮಿಯು ಹೇಳಿದಳು–ಸ್ವಾಮಿಯೆ! ನನ್ನ ಅಕ್ಕನು ಗಂಡನು ಬಿಟ್ಟು ಬಿಟ್ಟುದರಿಂದ ದುಃಖಗೊಂಡಿದ್ದಾಳೆ. ನನ್ನಲ್ಲಿ ನಿನಗೆ ಪ್ರೀತಿಯಿದ್ದರೆ ಅವಳನ್ನು ಹೋಗಿ ಸಮಾಧಾನಪಡಿಸು.

|| ಸೂತ ಉವಾಚ ||

ಲಕ್ಷ್ಮ್ಯಾ ಸಹ ತತೋ ವಿಷ್ಣುಃ ತತ್ರಾಗಚ್ಛತ್ ಕೃಪಾನ್ವಿತಃ ।
ಆಶ್ವಾಸಯನ್ನಲಕ್ಷ್ಮೀಂ ತಾಂ ಇದಂ ವಚನಬ್ರವೀತ್ ॥ ೨೪ ||

॥ ಶ್ರೀವಿಷ್ಣುರುವಾಚ ||

ಅಶ್ವತ್ಥವೃಕ್ಷಮಾಸಾಧ್ಯ ಸದಾಲಕ್ಷ್ಮೀಸ್ಥಿರಾ ಭವ ।
ಮಮಾಂಶ ಸಂಭವೋಹ್ಯೇಷಃ ಆವಾಸಸ್ತೇ ಶನಿಂ ವಿನಾ || ೨೫ ||

ಶನೌ ತೇ ಭಗಿನೀ ಜ್ಯೇಷ್ಠೇ ಲಕ್ಷ್ಮೀರತ್ರಾಗಮಿಷ್ಯತಿ ।
ತಸ್ಮಾದಶ್ವತ್ಥವೃಕ್ಷೋಸೌ ಶನೌ ಪೂಜ್ಯೋ ಮುನೀಶ್ವರಾಃ || ೨೬ ||

ಪ್ರತ್ಯಹಂ ಯೇಽರ್ಚಯಿಷ್ಯಂತಿ ತ್ವಾಂ ಜ್ಯೇಷ್ಠಾಂ ಗೃಹಧರ್ಮಿಣಃ ।
ತೇಷ್ವಿಯಂ ಶ್ರೀಃ ಕನಿಷ್ಠಾ ತೇ ಭಗಿನೀ ನಿಶ್ಚಲಾಸ್ತು ವೈ || ೨೭ ||

|| ಸೂತ ಉವಾಚ ||

ಇತ್ಯುಕ್ತ್ವಾ ಭಗವಾನ್ ವಿಷ್ಣುಸ್ತತ್ರೈವಾಂತರಧೀಯತ ।
ಇತ್ಯೂರ್ಜಸ್ಯ ಚ ಮಹಾತ್ಮ್ಯಂ ಯೇ ಶೃಣ್ವಂತಿ ಪಠಂತಿ ಚ ॥
ತೇಷಾಂ ವಿಷ್ಣುಪುರೇ ವಾಸೋ ಭವೇದಾ ಭೂತಸಂಪ್ಲವಂ || ೨೮ ||

---

೨೪. ಸೂತನು ಹೇಳಿದನು-ಆಗ ಕೃಪೆಯಿಂದ ವಿಷ್ಣುವು ಲಕ್ಷ್ಮಿಯೊಡನೆ ಅಲ್ಲಿಗೆ ಬಂದನು. ಆಕೆಯನ್ನು ಸಮಾಧಾನಪಡಿಸುತ್ತಾ ಇಂತೆಂದನು.

೨೫. ಶ್ರೀ ವಿಷ್ಣುವು ಹೇಳಿದನು-ಎಲೈ ಅಲಕ್ಷ್ಮಿಯೆ! ನೀನು ಯಾವಾಗಲೂ ಈ ಅರಳಿಯ ಮರವನ್ನು ಆಶ್ರಯಿಸಿಕೊಂಡು ನಿಲ್ಲು. ಈ ಅರಳಿಯ ಮರವು ನನ್ನ ಅಂಶದಿಂದ ಹುಟ್ಟಿದುದು. ಆದರೆ ಶನಿವಾರದ ದಿವಸ ಮಾತ್ರ ನೀನು ಅಲ್ಲಿರಬೇಡ.

೨೬-೨೭. ಎಲೌ ಜ್ಯೇಷ್ಠೆಯೆ! ಶನಿವಾರದ ದಿವಸ ಲಕ್ಷ್ಮಿಯು ಇಲ್ಲಿಗೆ ಬರುತ್ತಾಳೆ. ಎಂದು ಹೇಳಿದನು. ಆದುದರಿಂದ ಅರಳಿಯ ಮರವು ಶನಿವಾರದಲ್ಲಿ ಪೂಜ್ಯವಾದುದು. ಯಾವ ಗೃಹಸ್ಥರು ಪ್ರತಿದಿನದಲ್ಲಿಯೂ ಜ್ಯೇಷ್ಠಾಲಕ್ಷ್ಮಿಯನ್ನು ಪೂಜಿಸುವರೋ ಅವರಲ್ಲಿ ಈ ಕನಿಷ್ಠ ಲಕ್ಷ್ಮಿಯು ಸ್ಥಿರವಾಗಿರಲಿ.

೨೮. ಸೂತನು ಹೇಳಿದನು-ಹೀಗೆಂದು ಹೇಳಿ ವಿಷ್ಣುವು ಹೊರಟುಹೋದನು. ಈ ರೀತಿಯಾದ ಕಾರ್ತಿಕಮಾಸದ ಮಹಿಮೆಯನ್ನು ಕೇಳುವವರಿಗೂ ಹೇಳುವವರಿಗೂ ವೈಕುಂಠವಾಸವು ಪ್ರಳಯಕಾಲದವರೆಗೂ ಇರುತ್ತದೆ.

ರೋಗಾಪಹಂ ಪಾತಕನಾಶಕೃತ್ಪರಂ
ಸದ್ಬುದ್ಧಿದಂ ಪುತ್ರ ಧನಾದಿಸಾಧನಂ ।
ಮುಕ್ತೇರ್ನಿದಾನಂ ನ ಹಿ ಕಾರ್ತಿಕವ್ರತಾ
ದ್ವಿಷ್ಣುಪ್ರಿಯ ದನ್ಯದಿಹಾಸ್ತಿಭೂತಳೇ ॥ ೨೯ ॥

ವಿಷ್ಣುಪ್ರಿಯಂ ಸಕಲಕಲ್ಮಷನಾಶನಂ ಚ
ಸತ್ಪುತ್ರಪೌತ್ರ ಧನಧಾನ್ಯ ಸಮೃದ್ಧಿಕಾರಿ ॥
ಊರ್ಜವ್ರತಂ ಸ ನಿಯಮಂ ಕುರುತೇ ಮನುಷ್ಯಃ
ಕಿಂ ತಸ್ಯ ತೀರ್ಥ ಪರಿಶೀಲನಸೇವಯಾ ಚ ॥ ೩೦ ॥

ಇತಿ ಶ್ರೀ ಮಹಾಪುರಾಣೇ ಪಾದ್ಮೇ ಉತ್ತರಖಂಡೇ ಕಾರ್ತಿಕ ಮಹಾತ್ಮ್ಯೇ
ಶ್ರೀ ಕೃಷ್ಣ ಸತ್ಯಭಾಮಾ ಸಂವಾದೇ ಅಲಕ್ಷ್ಮ್ಯುಪಾಖ್ಯಾನಂ
ನಾಮ ಅಷ್ಟಾದಶಾಧಿಕಶತತಮೋಽಧ್ಯಾಯಸ್ಸಮಾಪ್ತಃ

---

೨೯. ಇದು ರೋಗವನ್ನೂ ಪಾಪವನ್ನೂ ನಾಶಮಾಡುತ್ತದೆ. ಒಳ್ಳೆಯ ಬುದ್ಧಿಯನ್ನು ಕೊಡುತ್ತದೆ. ಒಳ್ಳೆಯ ಮಕ್ಕಳನ್ನು ಕೊಡುತ್ತದೆ. ಮುಕ್ತಿಗೆ ಕಾರಣವು. ಈ ಕಾರ್ತೀಕಕ್ಕಿಂತಲೂ ವಿಷ್ಣುಪ್ರಿಯವಾದುದು ಮತ್ತೊಂದಿಲ್ಲ

೩೦. ಇದು ವಿಷ್ಣುವಿಗೆ ಪ್ರಿಯವಾದುದು. ಪಾಪಶಾಶಕವು. ಪುತ್ರಪೌತ್ರ ಧನ ಧಾನ್ಯಗಳನ್ನು ಹೆಚ್ಚಿಸುತ್ತದೆ. ಯಾವನು ಈ ಕಾರ್ತಿಕ ವ್ರತವನ್ನು ನಿಯಮದಿಂದ ಮಾಡುತ್ತಾನೆಯೋ ಅವನಿಗೆ ಮಿಕ್ಕ ತೀರ್ಥಗಳ ಸೇವೆಯಿಂದ ಪ್ರಯೋಜನವೇ ಇಲ್ಲ.

ಇಂತು ಶ್ರೀ ಪದ್ಮಮಹಾಪುರಾಣದ ಉತ್ತರಖಂಡದ ಕಾರ್ತಿಕ ಮಹಾತ್ಮ್ಯೆಯ
ಶ್ರೀ ಕೃಷ್ಣ ಸತ್ಯಭಾಮೆಯರ ಸಂವಾದದಲ್ಲಿ ಅಲಕ್ಷ್ಮ್ಯುಪಾಖ್ಯಾನ
ಎಂಬ ನೂರ ಹದಿನೆಂಟನೆಯ ಅಧ್ಯಾಯವು ಮುಗಿದುದು.



|| ಶ್ರೀಃ ||

–X–

# ಅಥ ಶ್ರೀ ಮಹಾಪುರಾಣೇ ಪಾದ್ಮೇ ಉತ್ತರಖಂಡೇ

## || ಏಕೋನವಿಂಶತ್ಯಧಿಕಶತತಮೋಽಧ್ಯಾಯಃ ||



|| ಸೂತ ಉವಾಚ ||

**ಇತಿ ಸರ್ವಂ ಸಮಾಕರ್ಣ್ಯ ಸತ್ರಾಜಿತಸುತಾ ತದಾ |**
**ಹರೇರ್ವಾಕ್ಯಂ ಮಹಾಭಾಗಾ ಸತ್ಯಾ ವಚನಮಬ್ರವೀತ್ || ೧ ||**

|| ಸತ್ಯೋವಾಚ ||

**ಕಾರ್ತಿಕಸ್ಯ ಚ ಮಾಹಾತ್ಮ್ಯಂ ನ ಶ್ರುತಾ ವಿಸ್ತರಾತ್ಪ್ರಭೋ |**
**ಸರ್ವೇಷಾಮೇವ ಮಾಸಾನಾಂ ಕಾರ್ತಿಕಃ ಪ್ರವರಸ್ಸ್ಮೃತಃ || ೨ ||**

|| ಶ್ರೀಕೃಷ್ಣ ಉವಾಚ ||

**ಸಾಧು ಪೃಷ್ಟಂ ತ್ವಯಾ ಸತ್ಯೇ ಕಾರ್ತಿಕವ್ರತಮಾದರಾತ್ |**
**ಶೌನಕಾಯ ಪುರಾ ಪ್ರೋಕ್ತಂ ಸೂತೇನ ಸುಮಹಾತ್ಮನಾ || ೩ ||**

---

## ನೂರ ಹತ್ತೊಂಭತ್ತನೆಯ ಅಧ್ಯಾಯವು



೧. ಸೂತನು ಹೇಳಿದನು–ಈ ಮಾತೆಲ್ಲವನ್ನೂ ಸತ್ರಾಜಿತನ ಮಗಳಾದ ಸತ್ಯಭಾಮೆಯು ಕೇಳಿ ಶ್ರೀ ಕೃಷ್ಣನನ್ನು ಕುರಿತು ಇಂತೆಂದಳು.

೨. ಸತ್ಯೆಯು ಹೇಳಿದಳು–ಎಲೈ ಸ್ವಾಮಿಯೆ! ಕಾರ್ತಿಕಮಾಸದ ಮಹಿಮೆಯನ್ನು ನಾನು ವಿಸ್ತಾರವಾಗಿ ಕೇಳಲಿಲ್ಲ. ಎಲ್ಲಾ ಮಾಸಗಳಲ್ಲಿಯೂ ಕಾರ್ತಿಕವು ಶ್ರೇಷ್ಠವಾದುದು.

೩. ಶ್ರೀಕೃಷ್ಣನು ಹೇಳಿದನು- ಎಲೌ ಸತ್ಯೆಯೇ! ಕಾರ್ತಿಕ ವ್ರತವನ್ನು ನೀನು ಆದರದಿಂದ ಕೇಳಿದೆ. ಇದನ್ನು ಶೌನಕನಿಗೆ ಮಹಾತ್ಮನಾದ ಸೂತನು ಹೇಳಿದನು.

|| ಸೂತ ಉವಾಚ ||

ಶ್ರೂಯತಾಂ ಮುನಿಶಾರ್ದೂಲ ಏತತ್ಪ್ರಶ್ನೋತ್ತರಂ ಶುಭಂ ।
ಈಶ್ವರೇಣ ಪುರಾ ಪ್ರೋಕ್ತಂ ಪೃಚ್ಛತೇ ಷಣ್ಮುಖಾಯ ವೈ ॥ ೪ ॥

|| ಕಾರ್ತಿಕೇಯ ಉವಾಚ ||

ಬಹೂನಿ ಪದ್ಮನಾಭಸ್ಯ ರಹಸ್ಯಾನಿ ಶ್ರುತಾನಿ ಚ ।
ಯಥಾ ಹಿ ಪ್ರೋಚ್ಯಮಾನಾನಿ ವೈಷ್ಣವೇನ ತ್ವಯಾ ಪ್ರಭೋ ॥ ೫ ॥

ಸಂಸಾರಸಾಗರೇ ಪ್ರಾಪ್ತಾ ದುಃಖೋರುಲಹರೀವೃತೇ ।
ತೇಷಾಮುತ್ತಾರಣಾರ್ಥಾಯ ಕಥಯಸ್ವ ಪ್ರಯತ್ನತಃ ॥ ೬ ॥

ಕಾರ್ತಿಕಸ್ಯ ವಿಧಿಂ ಬ್ರೂಹಿ ಸ್ನಾನಸ್ಯ ವದತಾಂ ವರ ।
ಯೇನ ದುಃಖಾಂಬುಧಿಂ ತಾತ ಸಂತರಿಷ್ಯಂತಿ ಮಾನವಾಃ ॥ ೭ ॥

ಫಲಂ ವೈಷ್ಣವಧರ್ಮಸ್ಯ ಕಥಯಸ್ವ ಸುವಿಸ್ತರಂ ।
ಯೇನ ಧರ್ಮಪ್ರಭಾವೇನ ಪದಂ ಗಚ್ಛಂತಿ ವೈಷ್ಣವಂ ॥ ೮ ॥

---

೪. ಸೂತನು ಹೇಳಿದನು-ಎಲೈ ಋಷಿಯೆ! ಈ ಪ್ರಶ್ನೋತ್ತರವನ್ನು ಕೇಳು. ಹಿಂದೆ ಷಣ್ಮುಖನು ಪ್ರಶ್ನೆಮಾಡಲು ಈಶ್ವರನು ಅವನಿಗೆ ಹೇಳಿದನು.

೫. ಕುಮಾರಸ್ವಾಮಿಯು ಹೇಳಿದನು–ಎಲೈ ಸ್ವಾಮಿಯೆ! ಪದ್ಮನಾಭನ ವಿಷಯವಾದ ಅನೇಕ ವ್ರತಗಳನ್ನು ವಿಷ್ಣುಭಕ್ತನಾದ ನೀನು ಹೇಳಿದುದನ್ನು ಕೇಳಿದೆನು.

೬. ಬಹು ದುಃಖಗಳಿಂದ ಕೂಡಿರುವ ಈ ಸಂಸಾರ ಸಾಗರದಲ್ಲಿ ಎಷ್ಟೋ ಜನರು ಹುಟ್ಟಿದ್ದಾರೆ. ಇಂತಹವರ ಮುಕ್ತಿಗೋಸ್ಕರ ಆ ಕಾರ್ತಿಕ ವಿಧಿಯನ್ನು ಪ್ರಯತ್ನಪಟ್ಟು ತಿಳಿಸು.

೭. ಎಲೈ ದೇವನೆ! ಮನುಷ್ಯರು ದುಃಖವೆಂಬ ಸಾಗರವನ್ನು ದಾಟುವ ಕಾರ್ತಿಕ ಸ್ನಾನ ವಿಧಿಯನ್ನು ತಿಳಿಸು.

೮. ಯಾವ ಧರ್ಮ ಪ್ರಭಾವದಿಂದ ವೈಕುಂಠವನ್ನು ಹೊಂದುತ್ತಾರೆಯೋ ಅಂತಹ ವೈಷ್ಣವ ಧರ್ಮದ ಫಲವನ್ನು ವಿಸ್ತಾರವಾಗಿ ಹೇಳು.

ದೀಪದಾನಸ್ಯ ಮಾಹಾತ್ಮ್ಯಂ ಮುನಿಪುಷ್ಪಸ್ಯ ಸುವ್ರತ ।
ಗೋಪೀಚಂದನ ಮಾಹಾತ್ಮ್ಯಂ ತುಲಸ್ಯಾಸ್ತು ಕಥಾ ವಿಭೋ ॥ ೯ ॥

ಮಾಲತೀಪುಷ್ಪಮಾಹಾತ್ಮ್ಯಂ ನಾರಿಜಾನಾಂ ತಥಾ ವದ ।
ಧಾತ್ರೀ ಫಲಾನಾಂ ಮಾಹಾತ್ಮ್ಯಂ ತಥಾ ದಮನಕಸ್ಯ ಚ ॥ ೧೦ ॥

ಕೇತಕೀಪುಷ್ಪಮಾಹಾತ್ಮ್ಯಂ ನೈವೇದ್ಯಸ್ಯ ಪರಂತಪ ।
ತೀರ್ಥೋದಕಸ್ಯ ಮಾಹಾತ್ಮ್ಯಂ ಮಾಘಸ್ನಾನಫಲಂ ವಿಭೋ ॥ ೧೧ ॥

ಫಲಂ ಬ್ರೂಹಿ ಸುರಶ್ರೇಷ್ಠ ಬ್ರಹ್ಮಪತ್ರೇಷು ಭೋಜನಾತ್ ।
ನೀರಾಜನಫಲಂ ಸ್ಥಾಣೋ ಪರದೀಪ ಪ್ರಬೋಧನಾತ್ ॥ ೧೨ ॥

ಪುಷ್ಕರಕ್ಷೇತ್ರ ಮಾಹಾತ್ಮ್ಯಂ ಸೂಕರಸ್ಯ ತಥಾ ವಿಭೋ ।
ಸಾಲಿಗ್ರಾಮಸ್ಯ ಮಾಹಾತ್ಮ್ಯಂ ಸ್ವಸ್ತಿಕಸ್ಯ ವಿಧಾನಕಂ ॥ ೧೩ ॥

---

೯. ದೀಪದಾನ, ಅಗಸೆಯಹೂ, ಗೋಪಿಚಂದನ, ತುಳಸಿ ಇವುಗಳ ಮಹಿಮೆಯನ್ನು ಹೇಳು.

೧೦. ಜಾಜಿಯಹೂ, ಕಮಲ, ನೆಲ್ಲಿಯಕಾಯಿ, ದವನ ಇವುಗಳ ಮಹಿಮೆಯನ್ನು ವಿಸ್ತಾರವಾಗಿ ತಿಳಿಸು.

೧೧. ತಾಳೆಯಹೂ, ನೈವೇದ್ಯ, ತೀರ್ಥೋದಕ, ಮಾಘಸ್ನಾನ ಇವುಗಳ ಮಹಿಮೆಯನ್ನು ಹೇಳು.

೧೨. ಮುತ್ತುಗದ ಎಲೆಯಲ್ಲಿ ಭೋಜನಮಾಡುವುದು. ಆರತಿಯೆತ್ತುವುದು. ದೀಪಕ್ಕೆ ಎಣ್ಣೆಹಾಕಿ ಹೆಚ್ಚಿಸುವುದು ಇವುಗಳ ಫಲವನ್ನು ಹೇಳು.

೧೩. ಪುಷ್ಕರಕ್ಷೇತ್ರ, ಸೂಕರಕ್ಷೇತ್ರ, ಸಾಲಗ್ರಾಮ, ಸ್ವಸ್ತಿಕ, ಇವುಗಳ ಮಹಿಮೆಯನ್ನು ಹೇಳು.

ದಾನಾನಾಂ ಚ ಫಲಂ ಬ್ರೂಹಿ ಪರಾನ್ನಸ್ಯ ಚ ವರ್ಜನಾತ್ |
ಮಾಸೋಪವಾಸಸ್ಯ ಫಲಂ ಖಟ್ವಾಯಾ ಮೋಕ್ಷಣಾದ್ವಿಭೋ || ೧೪ ||

ದೀಪಾವಲ್ಯಾಶ್ಚ ಮಾಹಾತ್ಮ್ಯಂ ಪ್ರಬೋಧಿನ್ಯಾಶ್ಚ ಸುವ್ರತ |
ಪಂಚಭೀಷ್ಮಸ್ಯ ಮಾಹಾತ್ಮ್ಯಂ ಕಥಯಸ್ವ ಸುವಿಸ್ತರಾತ್ || ೧೫ ||

|| ಈಶ್ವರ ಉವಾಚ ||

ಸಾಧು ಪೃಷ್ಟಂ ತ್ವಯಾ ವತ್ಸ ಲೋಕೋದ್ಧರಣ ಹೇತವೇ |
ಕಥಯಾಮಿ ನ ಸಂದೇಹಃ ತ್ವತ್ಸಮೋ ನಾಸ್ತಿ ವೈಷ್ಣವಃ || ೧೬ ||

ಸತ್ಪುತ್ರೇಣ ತ್ವಯಾ ವತ್ಸ ತಾರಿತೋಽಹಂ ನ ಸಂಶಯಃ |
ನಿಶ್ಚಲಾ ಕೇಶವೇ ಭಕ್ತಿಸ್ತ್ವಯಿ ತಿಷ್ಠತಿ ಸರ್ವದಾ || ೧೭ ||

---

೧೪. ದಾನಗಳ ಫಲವನ್ನು ಹೇಳು. ಪರಾನ್ನವನ್ನು ಬಿಡುವುದರಿಂದ ಬರುವ ಫಲವನ್ನು ತಿಳಿಸು. ಒಂದು ತಿಂಗಳೂ ಉಪವಾಸವಿದ್ದರೆ ಅದರ ಫಲವನ್ನು ತಿಳಿಸು. ಮಂಚದಮೇಲೆ ಮಲಗದೆ ನೆಲದಮೇಲೆ ಮಲಗಿದರೆ ಅದರ ಫಲವನ್ನು ಹೇಳು.

೧೫. ಸಾಲುದೀಪದ ಮಹಿಮೆ, ಪ್ರಬೋಧಿನೀ ಏಕಾದಶೀ, ಭೀಷ್ಮಪಂಚಕ, ಇವುಗಳ ಫಲವನ್ನು ವಿಸ್ತಾರವಾಗಿ ತಿಳಿಸು.

೧೬. ಈಶ್ವರನು ಹೇಳಿದನು–ಎಲೈ ವತ್ಸನೆ ! ನೀನು ಕೇಳಿದುದು ಸರಿ. ಇದು ಲೋಕವನ್ನೇ ಉದ್ಧಾರಮಾಡುವ ಪ್ರಶ್ನೆ. ಹೇಳುತ್ತೇನೆ. ಸಂದೇಹ ಪಡಬೇಡ. ನಿನ್ನ ಸಮನಾದ ವಿಷ್ಣುಭಕ್ತನಿಲ್ಲ.

೧೭. ಎಲೈ ಮಗುವೆ ! ಉತ್ತಮ ಮಗನಾದ ನಿನ್ನಿಂದ ನಾನು ಕೃತಾರ್ಥನಾದೆನು ! ಸಂಶಯವಿಲ್ಲ. ನಿನ್ನಲ್ಲಿ ಯಾವಾಗಲೂ ಕೇಶವನ ಭಕ್ತಿಯು ಇದ್ದೇ ಇರುವುದು.

ನರೇಭ್ಯೋ ವೈಷ್ಣವಂ ಧರ್ಮಂ ಯೋ ದದಾತಿ ದ್ವಿಜೋತ್ತಮಃ ।
ಸ ಸಾಗರ ಮಹೀದಾನೇ ಶತ್ಪುಣ್ಯಂ ಲಭತೇ ಹಿ ಸಃ ॥ ೧೮ ॥

ಕಾರ್ತಿಕಸ್ಯ ಚ ಮಾಸಸ್ಯ ಕೋಟ್ಯಂಶೇನಾಪಿ ನಾರ್ಹತಿ ।
ಏಕತಸ್ಸರ್ವ ತೀರ್ಥಾನಿ ಸರ್ವದಾನಾನಿ ಚೈಕತಃ ॥ ೧೯ ॥

ಏಕತೋ ಗೋಪ್ರದಾನಾನಿ ಸರ್ವೇ ಯಜ್ಞಾಸ್ಸದಕ್ಷಿಣಾಃ ।
ಏಕತಃ ಪುಷ್ಕರೇ ವಾಸಃ ಕುರುಕ್ಷೇತ್ರೇ ಹಿಮಾಲಯೇ ॥ ೨೦ ॥

ಅಕ್ರೂರಸ್ಯ ವರೇ ತೀರ್ಥೇ ವಾರಾಣಸ್ಯಾಂ ಚ ಶೂಕರೇ ।
ಏಕತಃ ಕಾರ್ತಿಕೇ ವತ್ಸ ಸರ್ವದಾ ಕೇಶವಪ್ರಿಯಃ ॥ ೨೧ ॥

॥ ಸೂತ ಉವಾಚ ॥

ಇತ್ಯುಕ್ತ್ವಾ ಮುನಿಶಾರ್ದೂಲ ಪುನರ್ವಾಕ್ಯಂ ಜಗೌ ಹರಃ ।
ಕಾರ್ತಿಕಸ್ನಾನಮಾಹಾತ್ಮ್ಯಂ ಕಥಯಿಷ್ಯೇ ಸುವಿಸ್ತರಾತ್ ॥ ೨೨ ॥

---

೧೮. ಯಾವನು ಜನರಿಗೆ ವೈಷ್ಣವ ಧರ್ಮವನ್ನು ಉಪದೇಶಿಸುತ್ತಾನೆಯೋ ಅವನಿಗೆ ಸಮುದ್ರದಿಂದ ಕೂಡಿದ ಭೂಮಿಯನ್ನು ದಾನಮಾಡಿದ ಫಲವು ಬರುತ್ತದೆ.

೧೯. ಎಲ್ಲಾ ದಾನಗಳೂ ಎಲ್ಲಾ ತೀರ್ಥಗಳೂ, ಸೇರಿಕೊಂಡು ಒಂದುಕಡೆ ನಿಂತರೂ ಅವು ಕಾರ್ತಿಕ ಮಾಸದ ಫಲದ ಕೋಟ್ಯಂಶದಲ್ಲಿ ಒಂದಂಶವನ್ನು ಹೋಲಲಾರವು.

೨೦. ಗೋದಾನಗಳೂ, ದಕ್ಷಿಣೆಯೊಡನೆ ಕೂಡಿದ ಯಜ್ಞಗಳೂ ಒಂದುಕಡೆ ನಿಂತರೂ, ಆ ಕಾರ್ತಿಕದ ಫಲದ ಕೋಟ್ಯಂಶದಲ್ಲಿ ಒಂದಂಶವನ್ನೂ ಹೊಂದುವುದಿಲ್ಲ. ಪುಷ್ಕರ, ಕುರುಕ್ಷೇತ್ರ, ಹಿಮಾಲಯಗಳಲ್ಲಿ, ವಾಸಮಾಡಿದರೂ ಅವೂ ಈ ಕಾರ್ತಿಕದ, ಕೋಟ್ಯಂಶದಲ್ಲಿ ಒಂದಂಶವನ್ನೂ ಹೋಲಲಾರವು.

೨೧. ಅಕ್ರೂರತೀರ್ಥ, ಕಾಶಿ, ಸೂಕರತೀರ್ಥ, ಇವುಗಳು ಒಂದುಕಡೆ ನಿಂತರೂ, ಕಾರ್ತಿಕದ ಕೋಟ್ಯಂಶದಲ್ಲಿ ಒಂದಂಶವನ್ನೂ ತೂಗುವುದಿಲ್ಲ. ಕಾರ್ತಿಕವು ಆ ರೀತಿಯಾಗಿ ಕೇಶವನಿಗೆ ಪ್ರಿಯುವಾದುದು.

೨೨. ಸೂತನು ಹೇಳಿದನು—ಎಲೈ ಋಷಿಗಳಿರಾ! ಹರನು ಹೀಗೆಂದು ಹೇಳಿ ಕಾರ್ತಿಕ ಸ್ನಾನದ ಮಹಿಮೆಯನ್ನು ವಿಸ್ತಾರವಾಗಿ ಹೇಳುತ್ತೇನೆ. ಕೇಳು. ಎಂದನು.

|| ಈಶ್ವರ ಉವಾಚ ||

ಬ್ರಾಹ್ಮಂ ಕೃತಯುಗಂ ಪ್ರೋಕ್ತಂ ತ್ರೇತಾ ತು ಕ್ಷತ್ರಿಯಂ ಯುಗಂ ।
ದ್ವಾಪರಂ ವೈಶ್ಯ ಮಿತ್ಯಾಹುಃ ಶೌದ್ರಂ ಕಲಿಯುಗಂ ಸ್ಮೃತಂ || ೨೩ ||

ಕಲೌ ವತ್ಸ ಮನುಷ್ಯಾಣಾಂ ಶೈಥಿಲ್ಯಂ ಸ್ನಾನಕರ್ಮಣಿ ।
ತಥಾಪಿ ಕಥಯಿಷ್ಯಾಮಿ ಸ್ನಾನಂ ಕಾರ್ತಿಮಾಘಯೋಃ || ೨೪ ||

ಯಸ್ಯ ಹಸ್ತೌ ಚ ಪಾದೌ ಚ ವಾಙ್ಮನಶ್ಚ ಸುಸಂಯತಂ ।
ವಿದ್ಯಾ ತಪಶ್ಚ ಕೀರ್ತಿಶ್ಚ ಸ ತೀರ್ಥಫಲಮಾಪ್ನುಯಾತ್ || ೨೫ ||

ಅಶ್ರದ್ಧಧಾನಃ ಪಾಪಾತ್ಮಾ ನಾಸ್ತಿಕೋ ಛಿನ್ನಮಾನಸಃ ।
ಹೇತುನಿಷ್ಠಶ್ಚ ಪಂಚೈತೇ ನ ತೀರ್ಥಫಲಭಾಗಿನಃ || ೨೬ ||

---

೨೩. ಈಶ್ವರನು ಹೇಳಿದನು– ಕೃತಯುಗವು ಬ್ರಾಹ್ಮಣಯುಗವೆಂದೂ, ತ್ರೇತಾಯುಗವು ಕ್ಷತ್ರಿಯ ಯುಗವೆಂದೂ, ದ್ವಾಪರವು ವೈಶ್ಯಯುಗವೆಂದೂ, ಕಲಿಯುಗವು ಶೂದ್ರಯುಗವೆಂದೂ ಹೇಳಲ್ಪಟ್ಟಿದೆ.

೨೪. ಎಲೈ ವತ್ಸನೆ! ಕಲಿಯುಗದಲ್ಲಿ ಸ್ನಾನದ ವಿಷಯದಲ್ಲಿ ಮನುಷ್ಯರಿಗೆ ಶ್ರದ್ಧೆಯು ಕಡಿಮೆಯಾಗುತ್ತದೆ. ಆದರೂ ಕಾರ್ತಿಕ ಮಾಘ ಮಾಸಗಳ ಸ್ನಾನದ ವಿಷಯವನ್ನು ಹೇಳುತ್ತೇನೆ.

೨೫ .ಯಾವನಿಗೆ ಕೈಕಾಲುಗಳು ಮಾತು ಮನಸ್ಸುಗಳು ಶುದ್ಧವಾಗಿ ವಿದ್ಯೆ ತಪಸ್ಸು ಕೀರ್ತಿಗಳಿವೆಯೋ ಅವನು ತೀರ್ಥದ ಫಲವನ್ನು ಹೊಂದುತ್ತಾನೆ.

೨೬. ಶ್ರದ್ಧೆಯಿಲ್ಲದವನು, ಪಾಪಿಯು, ನಾಸ್ತಿಕನು, ಚಂಚಲಮನಸ್ಸುಳ್ಳವನು ಕಾರಣವನ್ನು ಹುಡುಕುವವನು ಈ ಐದು ಜನರು ತೀರ್ಥದ ಫಲವನ್ನು ಹೊಂದುವುದಿಲ್ಲ.

ಪ್ರಾತರುತ್ಥಾಯ ಯೋ ವಿಪ್ರಃ ಪ್ರಾತಸ್ನಾಯೀ ಸದಾ ಭವೇತ್ ।
ಸರ್ವಪಾಪ ವಿನಿರ್ಮುಕ್ತಃ ಪರಂ ಬ್ರಹ್ಮಾಧಿಗಚ್ಛತಿ ॥ ೨೭ ॥

ಸ್ನಾನಂ ಚತುರ್ವಿಧಂ ಪ್ರೋಕ್ತಂ ಸ್ನಾನವಿದ್ಭಿಸ್ಸುಡಾನನ ।
ವಾಯುವ್ಯಂ ವಾರುಣಂ ಚೇತಿ ಬ್ರಾಹ್ಮಂ ದಿವ್ಯಂ ತಥಾ ಸ್ಮೃತಂ ॥ ೨೮ ॥

॥ ಸತ್ಯೋವಾಚ ॥

ಸ್ನಾನಾನಾಂ ಹಿ ಚತುರ್ಣಾಂ ತು ಲಕ್ಷಣಂ ವದ ನೋ ಪ್ರಭೋ ।
ಯೇಷಾಂ ವಿಜ್ಞಾನಮಾತ್ರೇಣ ಸ್ವಸ್ಥಾ ಸ್ಥಾಸ್ಯಾಮಿ ತೇ ಗೃಹೇ ॥ ೨೯ ॥

॥ ಶ್ರೀಕೃಷ್ಣ ಉವಾಚ ॥

ವಾಯುವ್ಯಂ ಗೋರಜಸ್ನಾನಂ ಸಾಗರಾದಿಷು ವಾರುಣಂ ।
ಬ್ರಾಹ್ಮಂ ಬ್ರಾಹ್ಮಣಮಂತ್ರೋಕ್ತಂ ದಿವ್ಯಂ ಮೇಘಾಂಬುನಾ ಸ್ಮೃತಂ॥೩೦॥

---

೨೭. ಬ್ರಾಹ್ಮಣನಾದವನು ಬೆಳಗ್ಗೆ ಎದ್ದು ಯಾವಾಗಲೂ ಸ್ನಾನಮಾಡಬೇಕು. ಹಾಗೆ ಮಾಡಿದರೆ ಪಾಪಗಳನ್ನು ಕಳೆದುಕೊಂಡು ಪರಬ್ರಹ್ಮನನ್ನು ಹೊಂದುತ್ತಾನೆ.

೨೮. ಸ್ನಾನದ ವಿಷಯವನ್ನು ಬಲ್ಲವರು ಸ್ನಾನವನ್ನು ವಾಯುವ್ಯ ವಾರುಣ ಬ್ರಾಹ್ಮಣ ದಿವ್ಯಗಳೆಂಬುದಾಗಿ ನಾಲ್ಕುಬಗೆಯಾಗಿ ವಿಂಗಡಿಸಿದ್ದಾರೆ.

೨೯. ಸತ್ಯಭಾಮೆಯು ಹೇಳಿದಳು–ಎಲೈ ಪ್ರಭುವೆ! ನಾಲ್ಕು ಬಗೆಯ ಸ್ನಾನಗಳಿಗೂ ಲಕ್ಷಣಗಳನ್ನು ಹೇಳು. ಅವುಗಳನ್ನು ತಿಳಿದುಕೊಂಡು ಮನೆಯಲ್ಲಿಯೇ ನೆಮ್ಮದಿಯಿಂದ ಇರುವೆನು.

೩೦. ಶ್ರೀಕೃಷ್ಣನು ಹೇಳಿದನು–ಗೋವಿನ ಧೂಳಿಯಿಂದ ಮಾಡುವ ಸ್ನಾನವು ವಾಯುವ್ಯವು ಸಮುದ್ರ ಮುಂತಾದುವುಗಳಲ್ಲಿ ಮಾಡುವ ಸ್ನಾನವು ವಾರುಣವು. ಬ್ರಾಹ್ಮಣರ ಮಂತ್ರದಂತೆ ಮಾಡುವ ಸ್ನಾನವು ಬ್ರಾಹ್ಮವು ಮೇಘದಿಂದ ಬೀಳುವ ನೀರಿನಿಂದ ಮಾಡುವ ಸ್ನಾನವು ದಿವ್ಯವು.

ಸ್ನಾನಾನಾಂ ಚೈವ ಸರ್ವೇಷಾಂ ವಿಶಿಷ್ಟಂ ತತ್ರ ವಾರುಣಂ ।
ಬ್ರಾಹ್ಮಣಃ ಕ್ಷತ್ರಿಯೋ ವೈಶ್ಯೋ ಮಂತ್ರವತ್ ಸ್ನಾನಮಾಚರೇತ್ ॥ ೩೧ ॥

ತುಷ್ಣೀ ಮೇವ ಹಿ ಶೂದ್ರಸ್ಯ ಸ್ತ್ರೀಣಾಂ ಚ ಗಜಗಾಮಿನಿ ।
ಬಾಲಾಶ್ಚ ತರುಣಾ ವೃದ್ಧಾ ನರನಾರೀ ನಪುಂಸಕಾಃ ॥ ೩೨ ॥

ಪ್ರಾತಸ್ಸರ್ವೇ ಪ್ರಶಂಸಂತಿ ಸ್ನಾನಂ ಕಾರ್ತಿಕಮಾಘಯೋಃ ।
ಸ್ನಾತಾ ವೈ ಕಾರ್ತಿಕೇ ಲೋಕಾಃ ಪ್ರಾಪ್ನುವಂತೀಪ್ಸಿತಂ ಫಲಂ ॥ ೩೩ ॥

ಇತಿ ಶ್ರೀಮಹಾಪುರಾಣೇ ಪಾದ್ಮೇ ಉತ್ತರಖಂಡೇ ಕಾರ್ತಿಕ ಮಾಹಾತ್ಮ್ಯೇ
ಶ್ರೀ ಕೃಷ್ಣ ಸತ್ಯಭಾಮಾ ಸಂವಾದೇ ಕಾರ್ತಿಕೆ ಸ್ನಾನವಿಧಿ ಕಥನಂ
ನಾಮ ಏಕೋನವಿಂಶತ್ಯಧಿಕಶತತಮೋಽಧ್ಯಾಯಸ್ಸಮಾಪ್ತಃ

---

೩೧. ಎಲ್ಲಾ ಸ್ನಾನಗಳಿಗಿಂತಲೂ, ವಾರುಣ (ನೀರಿನ) ಸ್ನಾನವು ಶ್ರೇಷ್ಠ ವಾದುದು. ಬ್ರಾಹ್ಮಣ, ಕ್ಷತ್ರಿಯ, ವೈಶ್ಯರುಗಳು ಮಂತ್ರದಿಂದ ಕೂಡಿದ ವಾರುಣ ಸ್ನಾನವನ್ನು ಮಾಡಬೇಕು.

೩೨. ಶೂದ್ರರು, ಹೆಂಗಸರು ಇವರು ಮಂತ್ರ ಹೇಳದೆ ಸುಮ್ಮನೆ ಸ್ನಾನಮಾಡಬೇಕು.

೩೩. ಬಾಲರು, ತರುಣರು, ವೃದ್ಧರು, ಹೆಂಗಸರು, ನಪುಂಸಕರು, ಎಲ್ಲರೂ ಕಾರ್ತಿಕ ಮಾಘಮಾಸಗಳ ಸ್ನಾನವನ್ನು ಹೊಗಳುತ್ತಾರೆ. ಅದನ್ನು ಅವರೆಲ್ಲರೂ ಮಾಡಬೇಕು. ಕಾರ್ತಿಕ ಮಾಸದಲ್ಲಿ ಪ್ರಾತಸ್ನಾನಮಾಡಿದವರು ಬೇಕಾದ ಫಲಗಳನ್ನು ಹೊಂದುವುದಲ್ಲದೆ, ವೈಕುಂಠವೇ ಮುಂತಾದ ಉತ್ತಮವಾದ ಲೋಕಗಳನ್ನು ಹೊಂದುತ್ತಾರೆ.

ಇಂತು ಶ್ರೀ ಪದ್ಮಮಹಾಪುರಾಣದ ಉತ್ತರಖಂಡದ ಕಾರ್ತಿಕ ಮಹಾತ್ಮ್ಯೆಯ
ಶ್ರೀ ಕೃಷ್ಣ ಸತ್ಯಭಾಮೆಯರ ಸಂವಾದದಲ್ಲಿ ಕಾರ್ತಿಕ ಸ್ನಾನ ವಿಧಿ ಕಥನ
ಎಂಬ ನೂರ ಹತ್ತೊಂಭತ್ತನೆಯ ಅಧ್ಯಾಯವು ಮುಗಿದುದು.



॥ ಶ್ರೀಃ ॥

-X-

# ಅಥ ಶ್ರೀ ಮಹಾಪುರಾಣೇ ಪಾದ್ಮೇ ಉತ್ತರಖಂಡೇ

## ॥ ವಿಂಶತ್ಯಧಿಕಶತತಮೋಽಧ್ಯಾಯಃ ॥



॥ ಸೂತ ಉವಾಚ ॥

ಪುನಃ ಪ್ರೋವಾಚ ಭಗವಾನ್ ಮಹಾದೇವೋ ವೃಷಧ್ವಜಃ ।
ಶ್ರೋತಾರಮುಪಸಂಗಮ್ಯ ಭಕ್ತಿಯುಕ್ತಂ ಷಡಾನನಂ ॥ ೧ ॥

॥ ಈಶ್ವರ ಉವಾಚ ॥

ಕಾರ್ತಿಕೋ ವೈಷ್ಣವೋ ಮಾಸಃ ಸರ್ವಮಾಸೇಷು ಚೋತ್ತಮಃ ।
ಅಸ್ಮಿನ್ಮಾಸೇ ತ್ರಯಸ್ತ್ರಿಂಶದ್ದೇವಾಃ ಸನ್ನಿಹಿತಾಃ ಕಲೌ ॥ ೨ ॥

ಊರ್ಜೇ ಮಾಸಿ ಮಹಾಭಾಗ ಭೋಜನಾನಿ ದ್ವಿಜಾತಯೇ ।
ತಿಲಧೇನುಂ ಹಿರಣ್ಯಂ ಚ ರಜತಂ ಭೂಮಿವಾಸಸೀ ॥ ೩ ॥

---

## ನೂರ ಇಪತ್ತನೆಯ ಅಧ್ಯಾಯವು



೧. ಸೂತನು ಹೇಳಿದನು-ಮಹೇಶ್ವರನಾದ ಮಹಾದೇವನು ಭಕ್ತಿಯಿಂದ ಕೂಡಿದ ಕೇಳಬೇಕೆಂಬ ಇಚ್ಛೆಯುಳ್ಳ ಕುಮಾರ ಸ್ವಾಮಿಯನ್ನು ಕುರಿತು ಮತ್ತೆ ಇಂತೆಂದನು.

೨. ಈಶ್ವರನು ಹೇಳಿದನು–ಕಾರ್ತಿಕ ಮಾಸವು ವಿಷ್ಣುವಿನ ಮಾಸವು. ಎಲ್ಲ ತಿಂಗಳುಗಳಲ್ಲಿಯೂ ಶ್ರೇಷ್ಠವಾದುದು. ಈ ತಿಂಗಳಿನಲ್ಲಿ ಕಲಿಯುಗದಲ್ಲಿ ಮೂವತ್ತು ಮೂರುಕೋಟಿ ದೇವತೆಗಳೂ ಬಂದಿರುತ್ತಾರೆ.

೩–೪. ಕಾರ್ತಿಕ ಮಾಸದಲ್ಲಿ ಬ್ರಾಹ್ಮಣನಿಗೆ ಭೋಜನಮಾಡಿಸಬೇಕು. ತಿಲಧೇನು, ಚಿನ್ನ, ಬೆಳ್ಳಿ, ಭೂಮಿ, ಬಟ್ಟೆ, ಗೋವು, ಇವುಗಳನ್ನೂ, ಇನ್ನೂ

ಗೋಪ್ರದಾನಾನಿ ದಾಸ್ಯನ್ತಿ ಸರ್ವಭಾವೇನ ಸುವ್ರತ ।
ಸರ್ವೇಷಾಮೇವ ದಾನಾನಾಂ ಕನ್ಯಾದಾನಂ ವಿಶಿಷ್ಯತೇ ॥ ೪ ॥

ಬ್ರಾಹ್ಮಣಾಯ ಚ ಯೇ ಕನ್ಯಾಂ ದಾಸ್ಯಂತಿ ವಿಧಿವನ್ನರಾಃ ।
ವೈಕುಂಠೇ ವಸತಿಸ್ತೇಷಾಂ ಯಾವದಿಂದ್ರಾಶ್ಚತುರ್ದಶ ॥ ೫ ॥

ರೋಮಕಾಲೇ ತು ಸಂಪ್ರಾಪ್ತೇ ಸೋಮೋ ಭುಂಕ್ತೇ ತು ಕನ್ಯಕಾಂ ।
ರಜಃ ಕಾಲೇ ತು ಗಂಧರ್ವಾ ವಹ್ನಿಸ್ತು ಕುಚದರ್ಶನೇ ॥ ೬ ॥

ತಸ್ಮಾದ್ವಿವಾಹಯೇತ್ಕನ್ಯಾಂ ಯಾವನ್ನರ್ತುಮತೀ ಭವೇತ್ ।
ವಿವಾಹಸ್ತ್ವಷ್ಟವರ್ಷಾಯಾ ಕನ್ಯಾಯಾಶ್ಯಸ್ಯತೇ ಬುಧೈಃ ॥ ೭ ॥

ದಾತವ್ಯಾ ಶ್ರೋತ್ರಿಯಾಯೈವ ಬ್ರಾಹ್ಮಣಾಯ ತಪಸ್ವಿನೇ ।
ಸಾಕ್ಷಾದಧೀತವೇದಾಯ ವಿಧಿನಾ ಬ್ರಹ್ಮಚಾರಿಣೇ ॥ ೮ ॥

---

ತನಗೆ ಬೇಕಾದುವುಗಳನ್ನೂ ದಾನವಾಗಿ ಕೊಡಬೇಕು. ದಾನಗಳಲ್ಲೆಲ್ಲಾ ಕನ್ಯಾದಾನವು ಶ್ರೇಷ್ಠವಾದುದು.

೫. ಬ್ರಾಹ್ಮಣನಿಗೆ ಶಾಸ್ತ್ರದಲ್ಲಿ ಹೇಳಿರುವಂತೆ ಈ ಕನ್ಯಾದಾನವನ್ನು ಮಾಡಿದರೆ ಅವರು ಹದಿನಾಲ್ಕು ಜನ ಇಂದ್ರರು ರಾಜ್ಯಭಾರಮಾಡಿ ಮುಗಿಸುವವರೆಗೂ ವೈಕುಂಠದಲ್ಲಿ ಇರುತ್ತಾರೆ.

೬. ಕಂಕುಳು ಮತ್ತು ಗುಹ್ಯಗಳಲ್ಲಿ ಕೂದಲು ಹುಟ್ಟುವ ಸಮಯದಲ್ಲಿ ಕನ್ಯೆಯನ್ನು ಸೋಮನು ಅನುಭವಿಸುತ್ತಾನೆ. ರಜಸ್ಸುಕಾಣುವ ಕಾಲ ಬಂದಾಗ ಗಂಧರ್ವರು ಅನುಭವಿಸುತ್ತಾರೆ. ಕುಚಗಳು ಮೇಲಕ್ಕೇಳುತ್ತಿರುವಾಗ ಅಗ್ನಿಯು ಅನುಭವಿಸುತ್ತಾನೆ.

೭. ಆದುದರಿಂದ ಋತುಮತಿಯಾಗುವುದಕ್ಕೆ ಮೊದಲೇ ಕನ್ಯೆಗೆ ವಿವಾಹ ಮಾಡಬೇಕು. ಎಂಟುವರ್ಷಕ್ಕೇನೆ ಕನ್ಯೆಗೆ ಮದುವೆಯು ಬಹು ಯೋಗ್ಯವಾದುದು.

೮. ಶ್ರೋತ್ರಿಯನೂ, ತಪಸ್ವಿಯೂ, ವೇದಗಳನ್ನು ಓದಿದವನೂ, ಬ್ರಹ್ಮಚಾರಿಯೂ ಆದ ಬ್ರಾಹ್ಮಣನಿಗೆ ಕನ್ಯೆಯನ್ನು ವಿವಾಹ ಮಾಡಿಕೊಡಬೇಕು.

ಕನ್ಯಾವರಪ್ರದಾನಸ್ಯ ಏಷ ಏವ ವಿಧಿಃ ಸ್ಮೃತಃ ।
ಯಾವಂತಿ ಚೈವ ರೋಮಾಣಿ ಕನ್ಯಾಯಾಶ್ಚ ತನೌ ಸುತ ॥ ೯ ॥

ತಾವದ್ವರ್ಷ ಸಹಸ್ರಾಣಿ ರುದ್ರಲೋಕೇ ಮಹೀಯತೇ ।
ಸಹಸ್ರಮೇವ ಧೇನೂನಾಂ ಶತಂ ಚಾನಡುಹಾಂ ಸಮಂ ॥ ೧೦ ॥

ದಶಾನಡುತ್ಸಮಂ ಯಾನಂ ದಶಯಾನ ಸಮೋ ಹಯಃ ।
ಹಯದಾನ ಸಹಸ್ರೇಭ್ಯೋ ಗಜದಾನಂ ವಿಶಿಷ್ಯತೇ ॥ ೧೧ ॥

ಗಜದಾನ ಸಹಸ್ರಾಣಾಂ ಸ್ವರ್ಣದಾನಂ ಚ ತತ್ಸಮಂ ।
ಸ್ವರ್ಣದಾನ ಸಹಸ್ರಾಣಾಂ ವಿದ್ಯಾದಾನಂ ಚ ತತ್ಸಮಂ ॥ ೧೨ ॥

ವಿದ್ಯಾದಾನಾತ್ಕೋಟಿಗುಣಂ ಭೂಮಿದಾನಂ ವಿಶಿಷ್ಯತೇ ।
ಭೂಮಿದಾನ ಸಹಸ್ರೇಭ್ಯೋ ಗೋಪ್ರದಾನಂ ವಶಿಷ್ಯತೇ ॥ ೧೩ ॥

ಗೋಪ್ರದಾನ ಸಹಸ್ರೇಭ್ಯೋ ಹ್ಯನ್ನದಾನಂ ವಿಶಿಷ್ಯತೇ ।
ಅನ್ನಾಧಾರಮಿದಂ ಸರ್ವಂ ಜಗತ್ ಸ್ಥಾವರಜಂಗಮಂ ॥ ೧೪ ॥

---

೯. ಕನ್ಯೆಯನ್ನು ವರನಿಗೆ ಕೊಡಬೇಕಾದರೆ ಇದೇ ವಿಧಿಯು ಹೇಳಲ್ಪಟ್ಟಿದೆ. ಆಗ ಕೊಟ್ಟರೆ ಕನ್ಯೆಯ ಶರೀರದಲ್ಲಿ ಎಷ್ಟು ಕೂದಲುಗಳಿವೆಯೊ ? ಅಷ್ಟು ಸಾವಿರ ವರ್ಷಗಳವರೆಗೂ ದಾತೃವು ರುದ್ರಲೋಕದಲ್ಲಿ ಸುಖಿಯಾಗುತ್ತಾನೆ.

೧೦-೧೨. ಸಾವಿರ ಹಸುಗಳ ದಾನವು ನೂರು ಹೋರಿಗಳ ದಾನಕ್ಕೆ ಸಮವು. ಹತ್ತು ಹೋರಿಗಳ ದಾನವು ಒಂದು ಯಾನದಾನಕ್ಕೆ ಸಮವು. ಹತ್ತು ಯಾನಗಳ ದಾನವು ಒಂದು ಕುದುರೆಯ ದಾನಕ್ಕೆ ಸಮವು ಸಾವಿರ ಆನೆಗಳ ದಾನವು ಒಂದು ಚಿನ್ನದ ದಾನಕ್ಕೆ ಸಮವು. ಅಂತಹ ಸಾವಿರ ಚಿನ್ನದ ದಾನಕ್ಕೆ ವಿದ್ಯಾ ದಾನವು ಸಮವು. ವಿದ್ಯೆಯ ದಾನಕ್ಕಿಂತ ಭೂದಾನವು ಕೋಟಿ ಪಾಲು ಉತ್ತಮವಾದುದು.

೧೩-೧೪. ಸಾವಿರ ಭೂದಾನಕ್ಕಿಂತ ಒಂದು ಗೋದಾನವು ಉತ್ತಮವು. ಏಕೆಂದರೆ ಈ ಸ್ಥಾವರ ಜಂಗಮಗಳಾದ ಜಗತ್ತು ಅನ್ನವೇ ಆಧಾರವಾಗಿ ನಿಂತಿದೆ.

(ಧೇನುವೆಂದರೆ ಕರುವನ್ನು ಹಾಕದಿರುವ ಕಡಸೆಂದೂ, ಗೋವೆಂದರೆ ಕರುವನ್ನು ಹಾಕಿ ಕರೆಯುವ ಹಸುವೆಂದೂ ತಿಳಿಯಬೇಕು.)

ತಸ್ಮಾದ್ದೇಯಂ ಪ್ರಯತ್ನೇನ ಕಾರ್ತಿಕೇ ಶಿಖಿವಾಹನ ।
ತ್ರೀಣಿ ತುಲ್ಯ ಪ್ರದಾನಾನಿ ತ್ರೀಣಿ ತುಲ್ಯಫಲಾನಿ ಚ ॥
ಸರ್ವಕಾಮದುಘಾ ಧೇನುಃ ಪೃಥ್ವೀ ಚೈವ ಸರಸ್ವತೀ ॥ ೧೫ ॥

॥ ಕಾರ್ತಿಕೇಯ ಉವಾಚ ॥

ಅನ್ಯಾನಪಿ ಮಹಾದೇವ ಧರ್ಮಾನ್ನೇವಕ್ತುಮರ್ಹಸಿ ।
ಯಾನ್ಕೃತ್ವಾ ಸರ್ವಪಾಪಾನಿ ಪ್ರಕ್ಷಾಳ್ಯ ತ್ರಿದಶೋ ಭವೇತ್ ॥ ೧೬ ॥

॥ ಸೂತ ಉವಾಚ ॥

ಇತಿಪೃಷ್ಟಸ್ತದಾ ಶಂಭುಃ ಪುನರ್ವಕ್ತುಂ ಪ್ರಚಕ್ರಮೇ ।
ಪಾವಕಿಂ ಬಹುಧಾ ಸ್ತುತ್ವಾ ತಚ್ಛೃಣುಧ್ವಂ ತಪೋಧನಾಃ ॥ ೧೭ ॥

॥ ಈಶ್ವರ ಉವಾಚ ॥

ಪರಾನ್ನಂ ವರ್ಜಯೇ ದ್ಯಸ್ತು ಕಾರ್ತಿಕೇ ನಿಯಮೇ ಕೃತೇ ।
ಪರಾನ್ನವರ್ಜನಾದೇವ ಲಭೇಚ್ಚಾಂದ್ರಾಯಣಂ ಫಲಂ ॥ ೧೮ ॥

---

೧೫ ಆದ್ದರಿಂದ ಕಾರ್ತಿಕಮಾಸದಲ್ಲಿ ಅನ್ನದಾನವನ್ನು ಮಾಡಬೇಕು. ಹಾಲನ್ನು ಕೊಡುವ ಹಸು, ಎಲ್ಲವನ್ನೂ ಬೆಳೆಯುವ ಭೂಮಿ, ಎಲ್ಲವನ್ನೂ ಸಂಪಾದಿಸಲು ಯೋಗ್ಯತೆಯನ್ನು ಕೊಡುವ ವಿದ್ಯೆ, ಇವು ಮೂರೂ ಸಮವಾದ ಫಲವನ್ನು ಕೊಡುತ್ತವೆ.

೧೬. ಕಾರ್ತಿಕೇಯನು ಹೇಳಿದನು–ಎಲೈ ಮಹಾದೇವನೆ! ಇನ್ನೂ ಬೇರೆಯಾದ, ಧರ್ಮಗಳನ್ನೂ ನನಗೆ ಹೇಳು. ಅವುಗಳನ್ನು ಆಚರಿಸಿ, ಪಾಪಗಳನ್ನು ಕಳೆದುಕೊಂಡು ಸ್ವರ್ಗವನ್ನು ಹೊಂದಲಿ.

೧೭. ಸೂತನು ಹೇಳಿದನು—ಷಣ್ಮುಖನು ಹೀಗೆಂದು ಕೇಳಲು, ಶಂಭುವು ಅವನನ್ನು ಬಹಳವಾಗಿ ಸ್ತುತಿಸಿ, ಮತ್ತೆ ಹೇಳಲು ಮೊದಲು ಮಾಡಿದನು. ಎಲೈ ಋಷಿಗಳಿರಾ! ಅದನ್ನು ಕೇಳಿರಿ.

೧೮. ಈಶ್ವರನು ಹೇಳಿದನು—ಕಾರ್ತಿಕ ಧ್ವನಿಯಮದಲ್ಲಿ ಪರಾನ್ನವನ್ನು ಬಿಡಬೇಕು. ಹಾಗೆ ಬಿಟ್ಟವನು ಚಾಂದ್ರಾಯಣ ಫಲವನ್ನು ಹೊಂದುತ್ತಾನೆ.

ಸಂಪ್ರಾಪ್ತಂ ಕಾರ್ತಿಕಂ ದೃಷ್ಟ್ವಾ ಪರಾನ್ನಂ ಯಸ್ತು ವರ್ಜಯೇತ್ ।
ದಿನೇ ದಿನೇ ತು ಕೃಚ್ಛ್ರಸ್ಯ ಫಲಂ ಪ್ರಾಪ್ನೋತಿ ಮಾನವಃ ॥ ೧೯ ॥

ಕಾರ್ತಿಕೇ ವರ್ಜಯೇತ್ತೈಲಂ ಕಾರ್ತಿಕೇ ವರ್ಜಯೇನ್ಮಧು ।
ಕಾರ್ತಿಕೇ ವರ್ಜಯೇ ತ್ಕಾಂಸ್ಯಂ ಮೈಥುನಂ ಚ ವಿಶೇಷತಃ ॥ ೨೦ ॥

ರಾಕ್ಷಸೀಂ ಯೋನಿಮಾಪ್ನೋತಿ ಸಕೃನ್ಮಾಂಸಸ್ಯ ಭಕ್ಷಣಾತ್ ।
ಷಷ್ಟಿವರ್ಷಸಹಸ್ರಾಣಿ ವಿಷ್ಠಾಯಾಂ ಪರಿಪಚ್ಯತೇ ॥ ೨೧ ॥

ತನ್ಮುಕ್ತೋ ಜಾಯತೇ ಪಾಪೋ ವಿಷ್ಠಾಶೀ ಗ್ರಾಮಸೂಕರಃ ।
ಪ್ರವೃತ್ತಾನಾಂ ತು ಭಕ್ಷಾಣಾಂ ಕಾರ್ತಿಕೇ ನಿಯಮೋ ಕೃತೇ ॥ ೨೨ ॥

ಅವಶ್ಯಂ ಪ್ರಾಪ್ಯತೇ ಮೋಕ್ಷೋ ವಿಷ್ಣೋಸ್ತತ್ಪರಮಂ ಪದಂ ।
ನ ಕಾರ್ತಿಕಸಮೋ ಮಾಸೋ ನ ದೇವಃ ಕೇಶವಾತ್ಪರಃ ॥ ೨೩ ॥

---

೧೯. ಕಾರ್ತಿಕಮಾಸ ಬಂದುದನ್ನು ನೋಡಿ, ಯಾವನು ಪರಾನ್ನವನ್ನು ಬಿಡುತ್ತಾನೆಯೋ ಅವನಿಗೆ ದಿನದಿನಕ್ಕೂ, ಕೃಚ್ಛ್ರವನ್ನು ಮಾಡಿದ ಫಲವು ಬರುತ್ತದೆ.

೨೦. ಕಾರ್ತಿಕ ಮಾಸದಲ್ಲಿ ಎಣ್ಣೆ, ಎಣ್ಣೆಯಿಂದ ಮಾಡಿದ ಪದಾರ್ಥಗಳು. ಜೇನು, ಕಂಚಿನ ಪಾತ್ರೆಯಲ್ಲಿ ಊಟಮಾಡುವುದು, ಅದನ್ನು ಉಪಯೋಗಿಸುವುದು, ಇವನ್ನು ಬಿಡಬೇಕು, ಹೆಂಡತಿಯೊಡನೆ ಸಂಭೋಗವನ್ನು ಮಾಡಲೇ ಬಾರದು.

೨೧. ಆ ತಿಂಗಳಿನಲ್ಲಿ ಒಂದು ಸಾರಿ ಮಾಂಸ ತಿಂದರೂ, ರಾಕ್ಷಸ ಜಾತಿಯಲ್ಲಿ ಹುಟ್ಟುತ್ತಾನೆ. ಅರವತ್ತು ಸಾವಿರ ವರ್ಷಗಳವರೆಗೂ, ಅಮೇಧ್ಯದಲ್ಲಿ ಬಿದ್ದು ಒದ್ದಾಡುತ್ತಾನೆ.

೨೨. ಅನಂತರದಲ್ಲಿ ಅಮೇಧ್ಯವನ್ನು ತಿನ್ನುವ ಊರುಹಂದಿಯಾಗಿ ಹುಟ್ಟುತ್ತಾನೆ. ಕಾರ್ತಿಕಮಾಸದಲ್ಲಿ ನಿಯಮದಿಂದ ಬೇಡವೆನ್ನುವ ಭಕ್ಷ್ಯಗಳನ್ನು ತಿನ್ನದಿದ್ದರೆ ಖಂಡಿತವಾಗಿಯೂ ಮೋಕ್ಷವು ಸಿಕ್ಕುತ್ತದೆ.

೨೩–೨೪. ಕಾರ್ತಿಕ ಮಾಸಕ್ಕೆ ಸಮವಾದ ಮಾಸವಿಲ್ಲ. ಕೇಶವನಿಗಿಂತಲೂ ಹೆಚ್ಚಿನ ದೇವರಿಲ್ಲ. ವೇದಕ್ಕೆ ಶಮಾನವಾದ ಶಾಸ್ತ್ರವಿಲ್ಲ. ಗಂಗೆಗೆ

**ಸ ವೇದಸದೃಶಂ ಶಾಸ್ತ್ರಂ ನ ತೀರ್ಥಂ ಗಂಗಯಾ ಸಮಂ ।**
**ನ ಸತ್ಯೇನ ಸಮಂ ವೃತ್ತಂ ನ ಕೃತೇನ ಸಮಂ ಯುಗಂ ॥ ೨೪ ॥**

**ನ ತೃಪ್ತಿರಶನಾ ತುಲ್ಯಾ ನ ದಾನ ಸದೃಶಂ ಸುಖಂ ।**
**ನ ಧರ್ಮ ಸದೃಶಂ ಮಿತ್ರಂ ನ ಜ್ಯೋತಿಶ್ಚಕ್ಷುಷಾ ಸಮಂ ॥ ೨೫ ॥**

**ಅವ್ರತೇನ ನಯೇದ್ಯಸ್ತು ಮಾಸಂ ದಾಮೋದರಪ್ರಿಯಂ ।**
**ಕರ್ಮಭ್ರಷ್ಟಸ್ಸವಿಜ್ಞೇಯೋ ಹೀನಯೋನಿಷು ಜಾಯತೇ ॥ ೨೬ ॥**

**ಕಾರ್ತಿಕಃ ಪ್ರವರೋ ಮಾಸೋ ವೈಷ್ಣವಾನಾಂ ಸದಾ ಪ್ರಿಯಃ ।**
**ಸಮುದ್ರಗಾ ನದೀ ಪುಣ್ಯಾ ದುರ್ಲಭಾ ಸ್ನಾನಶಾಲಿನಾಂ ॥ ೨೭ ॥**

**ಕುಲಶೀಲವತೀ ಕನ್ಯಾ ದುರ್ಲಭಾ ದಂಪತೀ ನೃಣಾಂ ।**
**ದುರ್ಲಭಾ ಜನನೀ ಲೋಕೇ ಪಿತಾ ಚೈವ ವಿಶೇಷತಃ ॥ ೨೮ ॥**

---

ವಾದ ತೀರ್ಥವಿಲ್ಲ. ಸತ್ಯಕ್ಕೆ ಸಮವಾದ ಆಚಾರವಿಲ್ಲ. ಕೃತಯುಗಕ್ಕೆ ಸಮವಾದ ಯುಗವಿಲ್ಲ.

೨೫ ಊಟಕ್ಕೆ ಸಮವಾದ ತೃಪ್ತಿಯೇ ಇಲ್ಲ. ದಾನಕ್ಕೆ ಸಮವಾದ ಸುಖ ವಿಲ್ಲ. ಧರ್ಮಕ್ಕೆ ಸಮವಾವ ಸ್ನೇಹಿತನಿಲ್ಲ. ಕಣ್ಣಿಗೆ ಸಮವಾದ ಬೇರೆ ಜ್ಯೋತಿಸ್ಸು (ಬೆಳಕು) ಇಲ್ಲ.

೨೬. ದಾಮೋದರನಿಗೆ ಪ್ರಿಯವಾದ ಕಾರ್ತಿಕ ವ್ರತವೊಂದನ್ನೂ ಹಿಡಿಯದೆ ಯಾವನು ಕಾಲಕಳೆಯುತ್ತಾನೆಯೋ ಅವನನ್ನು ಕರ್ಮಭ್ರಷ್ಟನೆಂದು ತಿಳಿಯಬೇಕು. ಅವನು ಕೆಟ್ಟ ಕುಲದಲ್ಲಿ ಹುಟ್ಟುತ್ತಾನೆ.

೨೭-೨೮. ಉತ್ತಮವಾದ ಕಾರ್ತಿಕಮಾಸವು ವೈಷ್ಣವರಿಗೆ ಯಾವಾಗಲೂ ಪ್ರಿಯವಾದುದು. ಸ್ನಾನಮಾಡತಕ್ಕವರಿಗೆ ಸಮುದ್ರವನ್ನು ಸೇರುವ ನದಿಯು ಸಿಕ್ಕುವುದು ಕಷ್ಟವು. ಜನರಿಗೆ ದಾಂಪತ್ಯದಲ್ಲಿ ಕುಲಶೀಲಗಳಿಂದ ಕೂಡಿದ ಕನ್ಯೆಯು ಸಿಕ್ಕುವುದು ಕಷ್ಟವು. ಲೋಕದಲ್ಲಿ ತಾಯಿತಂದೆಗಳು ಸಿಕ್ಕುವುದು ಬಹು ಕಷ್ಟವು. ಅದರಲ್ಲಿಯೂ ತಂದೆಯು ಸಿಕ್ಕುವುದು ಬಹು ಕಷ್ಟವು.

ದುರ್ಲಭಃ ಸಾಧು ಸಮ್ಮಾನೋ ದುರ್ಲಭೋ ಧಾರ್ಮಿಕಸ್ಸುತಃ ।
ದುರ್ಲಭೋ ದ್ವಾರಕಾವಾಸೋ ದುರ್ಲಭಂ ಕೃಷ್ಣದರ್ಶನಂ || ೨೯ ||

ದುರ್ಲಭಂ ಗೋಮತೀಸ್ನಾನಂ ದುರ್ಲಭಂ ಕಾರ್ತಿಕವ್ರತಂ ।
ಬ್ರಾಹ್ಮಣೇಭ್ಯೋ ಮಹೀಂ ದತ್ವಾ ಗ್ರಹಣೇ ಚಂದ್ರಸೂರ್ಯಯೋಃ || ೩೦ ||

ಯತ್ಫಲಂ ಲಭತೇ ವತ್ಸ ತತ್ಫಲಂ ಭೂಮಿ ಶಾಯಿನಃ ।
ಭೋಜಯೇದ್ದ್ವಿಜದಾಂಪತ್ಯಂ ಪೂಜಯೇಚ್ಚ ವಿಲೇಪನೈಃ || ೩೧ ||

ಕಂಬಳಾನಿ ಚ ರತ್ನಾನಿ ವಾಸಾಂಸಿ ವಿವಿಧಾನಿ ಚ ।
ತೂಲಿಕಾಶ್ಚ ಪ್ರದಾತವ್ಯಾಃ ಪ್ರಚ್ಛಾದನಪಟೈಸ್ಸಹ || ೩೨ ||

ಉಪಾನಹಾವಾತಪತ್ರಂ ಕಾರ್ತಿಕೇ ದೇಹಿ ಪಾವಕೇ ।
ಯಃ ಕರೋತಿ ನರೋ ನಿತ್ಯಂ ಕಾರ್ತಿಕೇ ಪತ್ರಭೋಜನಂ || ೩೩ ||

---

೨೯. ಸಾಧುಗಳಿಗೆ ಗೌರವವು ಸಿಕ್ಕುವುದು ಕಷ್ಟವು. ಧರ್ಮವನ್ನು ಬಲ್ಲ ಮಗನು ಹುಟ್ಟುವುದು ಕಷ್ಟವು. ದ್ವಾರಕೆಯ ವಾಸ ಸಿಕ್ಕುವುದು ಕಷ್ಟ. ಅದರಲ್ಲಿಯೂ ಕೃಷ್ಣ ದರ್ಶನವು ಇನ್ನೂ ಕಷ್ಟವು. ಗೋಮತಿಯಲ್ಲಿ ಸ್ನಾನ ಸಿಕ್ಕುವುದು ಕಷ್ಟವು. ಕಾರ್ತಿಕವು ಸಿಕ್ಕುವುದು ಅಂತೆಯೇ ಕಷ್ಟವು.

೩೦. ಚಂದ್ರ, ಸೂರ್ಯ ಗ್ರಹಣ ಕಾಲದಲ್ಲಿ ಬ್ರಾಹ್ಮಣರಿಗೆ ಭೂದಾನವನ್ನು ಕೊಟ್ಟರೆ ಯಾವ ಪುಣ್ಯವು ಬರುತ್ತದೆಯೋ ಕಾರ್ತಿಕ ಮಾಸದಲ್ಲಿ ಭೂಮಿಯಲ್ಲಿ ಮಲಗಿದವನಿಗೆ ಆ ಫಲವು ಬರುತ್ತದೆ.

೩೧-೩೨, ಬ್ರಾಹ್ಮಣ ದಂಪತಿಗಳನ್ನು ಭೋಜನ ಮಾಡಿಸಬೇಕು. ಅವರನ್ನು ಗಂಧ, ಹೂವು, ಮುಂತಾದುವುಗಳಿಂದ ಪೂಜಿಸಬೇಕು. ಕಂಬಳಿಗಳನ್ನೂ ನಾನಾಬಗೆಯಾದ ಬಟ್ಟೆಗಳನ್ನೂ ಸುಪ್ಪತ್ತಿಗೆಗಳನ್ನೂ ಮಗ್ಗಲು ಹಾಸಿಗೆಗಳನ್ನೂ ದಾನಮಾಡಬೇಕು.

೩೩-೩೪. ಛತ್ರಿ ಕೆರಗಳನ್ನೂ ಕಾರ್ತಿಕದಲ್ಲಿ ದಾನಮಾಡಬೇಕು. ಕಾರ್ತಿಕದಲ್ಲಿ ನಿತ್ಯವೂ ಎಲೆಯಲ್ಲಿ ಊಟಮಾಡಿದರೆ ಅವನಿಗೆ ಹದಿನಾಲ್ಕು ಜನ ಇಂದ್ರರಿ

ನ ದುರ್ಗತಿಮವಾಪ್ನೋತಿ ಯಾವದಿಂದ್ರಾಶ್ಚತುರ್ದಶ ।
ಸರ್ವಕಾಮಫಲಂ ತಸ್ಯ ಸರ್ವತೀರ್ಥಫಲಂ ಲಭೇತ್ ॥ ೩೪ ॥

ನ ಚಾಪಿ ನರಕಂ ಪಶ್ಯೇದ್ಬ್ರಹ್ಮಪತ್ರೇಷು ಭೋಜನಾತ್ ।
ಬ್ರಹ್ಮ ಏಷ ಸ್ಮೃತಸ್ಸಾಕ್ಷಾತ್ ಪಲಾಶಃ ಸರ್ವಕಾಮದಃ ॥ ೩೫ ॥

ಮಧ್ಯಮಂ ವರ್ಜಯೇತ್ಪತ್ರಂ ಕಾರ್ತಿಕೇ ಶಿಖಿವಾಹನ ।
ಬ್ರಹ್ಮಾ ವಿಷ್ಣುಶ್ಚ ರುದ್ರಶ್ಚ ತ್ರಯೋ ದೇವಾಸ್ತ್ರಿಪತ್ರಕೇ ॥ ೩೬ ॥

ಐಶ್ವರಂ ವರ್ಜಯೇತ್ಪತ್ರಂ ಬ್ರಹ್ಮವಿಷ್ಣೋರನುತ್ತಮಂ ।
ಸರ್ವಪುಣ್ಯಮವಾಪ್ನೋತಿ ಶೇಷಪತ್ರೇಷು ಭೋಜನಾತ್ ॥ ೩೭ ॥

ಭೋಜನಾನ್ಮಧ್ಯಪತ್ರೇತು ಕಪಿಲಾಪಯಸಸ್ತಥಾ ।
ಪ್ರಾಶನಾನ್ಮುನಿಶಾರ್ದೂಲ ನರೋ ನರಕಮಾಪ್ನುಯಾತ್ ॥ ೩೮ ॥

---

ರುವವರೆಗೂ ನರಕ ಬರುವುದಿಲ್ಲ. ಅವನು ಇಷ್ಟಾರ್ಥವೆಲ್ಲವನ್ನೂ ಹೊಂದುತ್ತಾನೆ. ಎಲ್ಲಾ ತೀರ್ಥಗಳ ಫಲವೂ ಬರುತ್ತದೆ.

೩೫. ಮುತ್ತುಗದ ಎಲೆಯಲ್ಲಿ ಊಟಮಾಡುವುದರಿಂದ ನರಕವನ್ನು ನೋಡುವುದೂ ಕೂಡ ಇಲ್ಲವು. ಮುತ್ತುಗವು ಪ್ರತ್ಯಕ್ಷವಾದ ಬ್ರಹ್ಮನೇ ಎಲ್ಲಾ ಇಷ್ಟಗಳನ್ನೂ ಕೊಡುತ್ತದೆ.

೩೬. ಮಧ್ಯದ ಎಲೆಯಲ್ಲಿ ಕಾರ್ತಿಕದಲ್ಲಿ ಊಟಮಾಡಬಾರದು. ಬ್ರಹ್ಮ, ವಿಷ್ಣು, ರುದ್ರರು ಮುತ್ತುಗದ ಕೊತ್ತಿನ ಮೂರು ಎಲೆಗಳಲ್ಲಿಯೂ ಇರುತ್ತಾರೆ.

೩೭. ಅರಳಿ, ಆಲ, ಮುತ್ತುಗದ ಎಲೆಗಳನ್ನು ಬಿಟ್ಟು ಬಿಡಬೇಕು. ಮಿಕ್ಕ ಎಲೆಗಳಲ್ಲಿ ಊಟಮಾಡಿದರೆ ಸಮಸ್ತ ಪುಣ್ಯವನ್ನು ಹೊಂದುತ್ತಾನೆ.

೩೮. ಕಾರ್ತಿಕದಲ್ಲಿ ಮಧ್ಯದ ಎಲೆಯಲ್ಲಿ ಊಟಮಾಡಿದರೂ ಕಪಿಲೆ ಹಸುವಿನ ಹಾಲನ್ನು ಕುಡಿದರೂ ನರಕವನ್ನು ಹೊಂದುತ್ತಾನೆ.

ಅಜ್ಞಾನಾದ್ಭುಂಜತೇ ಯಸ್ತು ಶೂದ್ರೋ ವಾ ಕಪಿಲಾಪಯಃ ।
ಕಪಿಲಾಂ ಬ್ರಾಹ್ಮಣೇ ದತ್ವಾ ಶುದ್ಧೋ ಭವತಿ ಕಾರ್ತಿಕೇ ॥ ೩೯ ॥

ತಿಲದಾನಂ ನದೀಸ್ನಾನಂ ಸರ್ವದಾ ಸಾಧುಸೇವನಂ ।
ಭೋಜನಂ ಬ್ರಹ್ಮಪತ್ರೇಷು ಕಾರ್ತಿಕೇ ಮುಕ್ತಿದಾಯಕಂ ॥ ೪೦ ॥

ಮೌನೀ ಪಲಾಶಭೋಜೀ ಚ ತಿಲಸ್ನಾಯೀ ಸದಾ ಕ್ಷಮೀ ।
ಕಾರ್ತಿಕೇ ಕ್ಷಿತಿಶಾಯೀ ಚ ಹನ್ಯಾತ್ಪಾಪಂ ಯುಗಾರ್ಜಿತಂ ॥ ೪೧ ॥

ಜಾಗರಂ ಕಾರ್ತಿಕೇ ಮಾಸಿ ಯಃ ಕರೋತ್ಯರುಣೋದಯೇ ।
ದಾಮೋದರಾಗ್ರೇ ಸ್ನಾನೀ ಗೋಸಹಸ್ರಫಲಂ ಲಭೇತ್ ॥ ೪೨ ॥

ಪಿತೃಪಕ್ಷೇನ್ನದಾನೇನ ಜ್ಯೇಷ್ಠಾಷಾಢೇ ಚ ವಾರಿಣಾ ।
ಕಾರ್ತಿಕೇ ತತ್ಫಲಂ ಪುಂಸಾಂ ಪರದೀಪಪ್ರಬೋಧನಾತ್ ॥ ೪೩ ॥

---

೩೯. ಒಂದುವೇಳೆ ಶೂದ್ರನಾದವನು ತಿಳಿಯದೆ ಕಾರ್ತಿಕದಲ್ಲಿ ಆ ಕಪಿಲೆಯ ಹಾಲನ್ನು ಊಟಮಾಡುತ್ತಿದ್ದರೆ ಆ ಹಸುವನ್ನು ಬ್ರಾಹ್ಮಣನಿಗೆ ದಾನವನ್ನು ಕೊಟ್ಟರೆ ಶುದ್ಧನಾಗುತ್ತಾನೆ.

೪೦. ಎಳ್ಳನ್ನು ದಾನಕೊಡುವುದು. ನದಿಯಲ್ಲಿ ಸ್ನಾನಮಾಡುವುದು. ಸಾಧುಗಳನ್ನು ಸೇವಿಸುವುದು. ಮುತ್ತುಗದೆಲೆಯಲ್ಲಿ ಊಟಮಾಡುವುದು. ಇಷ್ಟನ್ನು ಕಾರ್ತಿಕದಲ್ಲಿ ಮಾಡಿದರೆ ಮುಕ್ತಿಯು ಬರುತ್ತದೆ.

೪೧. ಮಾತನಾಡದಿರುವುದು ಮುತ್ತುಗದೆಲೆಯಲ್ಲಿ ಊಟಮಾಡುವುದು ಎಳ್ಳೆಣ್ಣೆ ಹಚ್ಚಿಕೊಂಡು ಸ್ನಾನಮಾಡುವುದು ಕ್ಷಮಿಸುವುದು ನೆಲದಮೇಲೆ ಮಲಗುವುದು ಇವನ್ನು ಕಾರ್ತಿಕ ಮಾಸದಲ್ಲಿ ಮಾಡಿದರೆ ಯುಗದಿಂದ ಮಾಡಿದ ಪಾಪಗಳೆಲ್ಲವೂ ಹೋಗುತ್ತವೆ.

೪೨. ಕಾರ್ತಿಕ ಮಾಸದಲ್ಲಿ ಜಾಗರಣೆ ಮಾಡುತ್ತ ಅರುಣೋದಯದಲ್ಲಿ ದೇವರ ಮುಂದೆ ಯಾವನು ಸ್ನಾನಮಾಡುತ್ತಾನೆಯೋ ಅವನು ಸಾವಿರಗೋದಾನ ಫಲವನ್ನು ಹೊಂದುತ್ತಾನೆ.

೪೩. ಪಿತೃಪಕ್ಷದಲ್ಲಿ ಅನ್ನದಾನ ಮಾಡುವುದು ಜ್ಯೇಷ್ಠಾಷಾಢಗಳಲ್ಲಿ ತರ್ಪಣ ಕೊಡುವುದು ಇವುಗಳ ಫಲವನ್ನು ಕಾರ್ತಿಕ ಮಾಸದಲ್ಲಿ ಇತರರು ಹಚ್ಚಿಟ್ಟಿದ್ದ ದೀಪವನ್ನು ಚೆನ್ನಾಗಿ ಉರಿಯುವಂತೆ ಮಾಡಿದರೆ ಹೊಂದುತ್ತಾನೆ.

ಬೋಧನಾತ್ಪರದೀಪಸ್ಯ ವೈಷ್ಣವಾನಾಂ ಚ ಸೇವನಾತ್ ।
ಕಾರ್ತಿಕೇ ಫಲಮಾಪ್ನೋತಿ ರಾಜಸೂಯಾಶ್ವಮೇಧಯೋಃ ॥ ೪೪ ॥

ನದೀಸ್ನಾನಂ ಕಥಾ ವಿಷ್ಣೋಃ ವೈಷ್ಣವಾನಾಂ ಚ ದರ್ಶನಂ ।
ನ ಭವೇತ್ಕಾರ್ತಿಕೇಯಸ್ಯ ಹರೇತ್ಪುಣ್ಯಂ ದಶಾಬ್ದಿಕಂ ॥ ೪೫ ॥

ಪುಷ್ಕರಂ ಯಸ್ಮರೇತ್ಪ್ರಾಜ್ಞಃ ಕರ್ಮಣಾ ಮನಸಾ ಗಿರಾ ।
ಕಾರ್ತಿಕೇ ಮುನಿಶಾರ್ದೂಲ ಲಕ್ಷಕೋಟಿಗುಣಂ ಭವೇತ್ ॥ ೪೬ ॥

ಪ್ರಯಾಗೋ ಮಾಘಮಾಸೇ ತು ಪುಷ್ಕರಂ ಕಾರ್ತಿಕೇ ತಥಾ ।
ಅವಂತೀ ಮಾಧವೇ ಮಾಸಿ ಹನ್ಯಾತ್ಪಾಪಂ ಯುಗಾರ್ಜಿತಂ ॥ ೪೭ ॥

ಧನ್ಯಾಸ್ತೇ ಮಾನವಾ ಲೋಕೇ ಕಲಿಕಾಲೇ ವಿಶೇಷತಃ ।
ಯೇ ಕುರ್ವಂತಿ ಸ್ಕಂದ ನಿತ್ಯಂ ಪಿತ್ರರ್ಥಂ ಹರಿಸೇವನಂ ॥ ೪೮ ॥

---

೪೪. ಕಾರ್ತಿಕದಲ್ಲಿ ಇತರರು ಹತ್ತಿಸಿದ ದೀಪವನ್ನು ಹಚ್ಚಿಸಿ ಉರಿಸೋಣದ ರಿಂದಲೂ ವೈಷ್ಣವರನ್ನು ಸೇವಿಸುವುದರಿಂದಲೂ ರಾಜಸೂಯ ಅಶ್ವಮೇಧಗಳ ಫಲವನ್ನು ಹೊಂದುತ್ತಾನೆ.

೪೫. ಕಾರ್ತಿಕದಲ್ಲಿ ನದಿಯಸ್ನಾನ ಮಾಡದಿದ್ದರೆ ವಿಷ್ಣುವಿನ ಕಥೆಯನ್ನು ಕೇಳದಿದ್ದರೆ ವಿಷ್ಣು ಭಕ್ತರ ದರ್ಶನ ಮಾಡದಿದ್ದರೆ ಅವನ ಹತ್ತು ವರ್ಷಗಳ ಪುಣ್ಯವು ಹೋಗುತ್ತದೆ.

೪೬. ಮನೋವಾಕ್ಕಾಯ ಕರ್ಮಗಳಿಂದ ಯಾವನು ಕಾರ್ತಿಕದಲ್ಲಿ ಪುಷ್ಕರವನ್ನು ಸ್ಮರಿಸುತ್ತಾನೆಯೋ ಅವನಿಗೆ ಲಕ್ಷ ಕೋಟಿಯಷ್ಟು ಹೆಚ್ಚು ಫಲವು ಬರುತ್ತದೆ.

೪೭. ಪ್ರಯಾಗವನ್ನು ಮಾಘ ಮಾಸದಲ್ಲಿಯೂ ಪುಷ್ಕರವನ್ನೂ ಕಾರ್ತಿಕ ಮಾಸದಲ್ಲಿಯೂ ಅವಂತಿಯನ್ನು ವೈಶಾಖ ಮಾಸದಲ್ಲಿಯೂ ಸ್ಮರಿಸಿದರೆ ಯುಗದ ಪಾಪಗಳು ಹೋಗುತ್ತವೆ.

೪೮. ಎಲೈ ಸ್ಕಂದನೆ! ಪಿತೃಗಳ ತೃಪ್ತಿಗೋಸ್ಕರ ಯಾರು ಹರಿಸೇವೆಯನ್ನು ಮಾಡುತ್ತಾರೆಯೋ ಅವರೇ ಧನ್ಯರು. ಅದರಲ್ಲಿಯೂ ಕಲಿಗಾಲದಲ್ಲಿ ಅವರು ಬಹು ಧನ್ಯರು.

ಕಿಂ ದತ್ತೈಃ ಬಹುಭಿಃ ಪಿಂಡೈರ್ಗಯಾಶ್ರಾದ್ಧಾದಿಭಿಸ್ಸುತ ।
ತಾರಿತಾಸ್ತೇನ ಪಿತರೋ ನರಕಾಚ್ಚ ನ ಸಂಶಯಃ ॥ ೪೯ ॥

ಕ್ಷೀರಾದಿಸ್ನಪನಂ ವಿಷ್ಣೋಃ ಕ್ರಿಯತೇ ಪಿತೃಕಾರಣಾತ್ ।
ಕಲ್ಪಕೋಟಿಂ ದಿವಂ ಪ್ರಾಪ್ಯ ವಸಂತಿ ತ್ರಿದಶೈಸ್ಸಹ ॥ ೫೦ ॥

ಕಾರ್ತಿಕೇನಾರ್ಚಿತೋ ಯೈಸ್ತು ಕಮಲೈಃ ಕಮಲೇಕ್ಷಣಃ ।
ಜನ್ಮಕೋಟಿಷು ವಿಪ್ರೇಂದ್ರ ನ ತೇಷಾಂ ಕಮಲಾಗೃಹೇ ॥ ೫೧ ॥

ಅಹೋ ಮುಷ್ಟಾ ವಿನಷ್ಟಾಸ್ತೇ ಪತಿತಾಃ ಕಲಿಕಂದರೇ ।
ಯೈರ್ನಾರ್ಚಿತೋ ಹರಿರ್ಭಕ್ತ್ಯಾ ಕಮಲೈರಸಿತೈಸ್ಸಿತೈಃ ॥ ೫೨ ॥

ಪದ್ಮೇನೈಕೇನ ದೇವೇಶಂ ಯೋಽರ್ಚಯೇತ್ಕಮಲಾಪತಿಂ ।
ವರ್ಷಾಯುತಸಹಸ್ರಸ್ಯ ಪಾಪಸ್ಯ ಕುರುತೇ ಕ್ಷಯಂ ॥ ೫೩ ॥

---

೪೯. ಗಯಾ ಶ್ರಾದ್ಧವನ್ನು ಮಾಡಿ ಅನೇಕ ಪಿಂಡಗಳನ್ನು ಕೊಡುವುದಕ್ಕಿಂತಲೂ ಕಾರ್ತಿಕದಲ್ಲಿ ಅವರನ್ನುದ್ದೇಶಿಸಿ ಹರಿಸೇವೆ ಮಾಡುವುದರಿಂದ ಪಿತೃಗಳು ವಿಶೇಷವಾಗಿ ನರಕದಿಂದ ಮುಕ್ತರಾಗುತ್ತಾರೆ.

೫೦. ಪಿತೃಗಳನ್ನುದ್ದೇಶಿಸಿ ವಿಷ್ಣುವಿಗೆ ಹಾಲು ಮುಂತಾದುವುಗಳಿಂದ ಸ್ನಾನ ಮಾಡಿಸಿದರೆ ಕೋಟಿಕಲ್ಪಗಳವರೆಗೂ ಸ್ವರ್ಗದಲ್ಲಿ ದೇವತೆಗಳೊಡನೆ ಇರುತ್ತಾನೆ.

೫೧. ಕಾರ್ತಿಕ ಮಾಸದಲ್ಲಿ ಕಮಲಗಳಿಂದ ವಿಷ್ಣುವನ್ನು ಪೂಜಿಸದಿದ್ದರೆ ಅವನ ಮನೆಯಲ್ಲಿ ಕೋಟಿ ಜನ್ಮದವರೆಗೂ ಲಕ್ಷ್ಮಿಯು ಬರುವುದಿಲ್ಲ.

೫೨. ಯಾರು ಬಿಳಿಯ ಮತ್ತು ಕೆಂಪಾದ ಕಮಲಗಳಿಂದ ಕಾರ್ತಿಕದಲ್ಲಿ ವಿಷ್ಣುವನ್ನು ಪೂಜಿಸುವುದಿಲ್ಲವೋ ಅವರು ಕಲಿಯ ಗುಹೆಯಲ್ಲಿ ಬಿದ್ದು ನಾಶವಾಗಿ ಹೋಗುತ್ತಾರೆ.

೫೩. ಕಾರ್ತಿಕದಲ್ಲಿ ಒಂದು ಕಮಲದಿಂದ ವಿಷ್ಣುವನ್ನು ಪೂಜಿಸಿದರೂ ಅವನು ಕೋಟಿ ವರ್ಷಗಳ ಪಾಪಗಳೂ ನಾಶವಾಗುತ್ತವೆ.

ಅಪರಾಧಸಹಸ್ರಾಣಿ ತಥಾ ಸಪ್ತಶತಾನಿ ಚ ।
ಪದ್ಮೈನೈಕೇನ ದೇವೇಶಃ ಕ್ಷಮತೇ ಪ್ರಣತೋಽರ್ಚಿತಃ ॥ ೫೪ ॥

ತುಲಸೀಪತ್ರಲಕ್ಷೇಣ ಕಾರ್ತಿಕೇ ಯೋಽರ್ಚಯೇದ್ಧರಿಂ ।
ಪತ್ರೇ ಪತ್ರೇ ಮುನಿಶ್ರೇಷ್ಠ ಮೌಕ್ತಿಕಂ ಲಭತೇ ಫಲಂ ॥ ೫೫ ॥

ತುಳಸೀಗಂಧಮಿಶ್ರಂ ತು ಯತ್ಕಿಂಚಿತ್ಕ್ರಿಯತೇ ಸುತ ।
ಕಲ್ಪಕೋಟಿಸಹಸ್ರಾಣಿ ಪ್ರೀತೋ ಭವತಿ ಕೇಶವಃ ॥ ೫೬ ॥

ಮುಖೇ ಶಿರಸಿ ದೇಹೇ ತು ವಿಷ್ಣೋಽತ್ತೀರ್ಣಾಂ ತು ಯೋ ವಹೇತ್ ।
ತುಳಸೀಂ ಷಣ್ಮುಖ ಪ್ರೀತ್ಯಾ ನ ತಸ್ಯ ಸ್ಪೃಶತೇ ಕಲಿಃ ॥ ೫೭ ॥

ಕೃಷ್ಣೋತ್ತೀರ್ಣೈಸ್ತು ನಿರ್ಮಾಲ್ಯೈರ್ಯೋ ಗಾತ್ರಂ ಪರಿಮಾರ್ಜಯೇತ್ ।
ಸರ್ವರೋಗೈಸ್ತಥಾಪಾಪೈರ್ಮುಕ್ತೋ ಭವತಿ ಷಣ್ಮುಖ ॥ ೫೮ ॥

---

೫೪. ಕಾರ್ತಿಕ ಮಾಸದಲ್ಲಿ ಒಂದು ಕಮಲದಿಂದಲಾದರೂ ವಿಷ್ಣುವನ್ನು ಪೂಜಿಸಿ ನಮಸ್ಕರಿಸಿದರೆ ಆ ಸ್ವಾಮಿಯು ಸಾವಿರದ ಏಳನೂರು ಅಪರಾಧಗಳನ್ನು ಕ್ಷಮಿಸುತ್ತಾನೆ.

೫೫. ಕಾರ್ತಿಕ ಮಾಸದಲ್ಲಿ ಲಕ್ಷ ತುಳಸಿದಳಗಳಿಂದ ವಿಷ್ಣುವನ್ನು ಪೂಜಿಸಿದರೆ ಒಂದೊಂದು ದಳಕ್ಕೂ ಒಂದೊಂದು ಮುತ್ತನ್ನು ಪೂಜೆಮಾಡಿದ ಫಲವನ್ನು ಹೊಂದುತ್ತಾನೆ.

೫೬. ಕಾರ್ತಿಕದಲ್ಲಿ ತುಳಸಿಯ ಗಂಧವನ್ನು ಸೇರಿಸಿ ದೇವರಿಗೆ ಪೂಜಿಸಿದರೆ ಆ ಕೇಶವನು ಸಾವಿರ ಕೋಟಿ ಕಲ್ಪಗಳವರೆಗೂ ಪ್ರೀತನಾಗಿರುತ್ತಾನೆ.

೫೭. ಯಾವನು ಕಾರ್ತಿಕದಲ್ಲಿ ವಿಷ್ಣುವಿನಿಂದ ತೆಗೆದ ಪ್ರಸಾದ ರೂಪವಾದ ತುಳಸಿಯನ್ನು ಬಾಯಲ್ಲಿ ಹಾಕಿಕೊಂಡು ತಲೆಗೆ ಮುಡಿದುಕೊಂಡು ದೇಹದಲ್ಲಿ ಇಟ್ಟುಕೊಳ್ಳುತ್ತಾನೆಯೋ ಅವನನ್ನು ಕಲಿಯು ಮುಟ್ಟುವುದಿಲ್ಲ.

೫೮. ಎಲೈ ಷಣ್ಮುಖನೆ! ಕೃಷ್ಣನಿಂದ ಈಚೆಗೆ ತೆಗೆದ ನಿರ್ಮಾಲವಾದ ತುಳಸಿಯ ದಳಗಳಿಂದ ಯಾವನು ದೇಹವನ್ನು ತಿಕ್ಕಿಕೊಳ್ಳುತ್ತಾನೆಯೋ ಅವನಿಗೆ ಪಾಪಗಳೂ ರೋಗಗಳೂ ಹೋಗುತ್ತವೆ.

ವಿಷ್ಣೋರ್ನಿರ್ಮಾಲ್ಯಶೇಷೇಣ ಯಸ್ಯಾಂಗಂ ಸ್ಪೃಶ್ಯತೇ ಸುತ ।
ದುರಿತಾನಿ ವಿನಶ್ಯಂತಿ ವ್ಯಾಧಯೋ ಯಾಂತಿ ಸಂಕ್ಷಯಂ ॥ ೫೯ ॥

ಶಂಖೋದಕಂ ಹರೇಃ ಭಕ್ತ್ಯಾ ನಿರ್ಮಾಲ್ಯಂ ಪಾದಯೋರ್ಜಲಂ ।
ಚಂದನಂ ಧೂಪಶೇಷಂ ತು ಬ್ರಹ್ಮಹತ್ಯಾಪಹಾರಕಂ ॥ ೬೦ ॥

ಇತಿ ಶ್ರೀ ಮಹಾಪುರಾಣೇ ಪಾದ್ಮೇ ಉತ್ತರಖಂಡೇ ಕಾರ್ತಿಕ ಮಾಹಾತ್ಮ್ಯೇ
ಶ್ರೀ ಕೃಷ್ಣ ಸತ್ಯಭಾಮಾ ಸಂವಾದೇ ಕಾರ್ತಿಕಮಾಸ ನಿಯಮ ವರ್ಣನಂ
ನಾಮ ವಿಂಶತ್ಯಧಿಕಶತತಮೋಽಧ್ಯಾಯಸ್ಸಮಾಪ್ತಃ

---

೫೯. ವಿಷ್ಣುವಿನ ನಿರ್ಮಾಲ್ಯವಾದ ತುಳಸಿಯು ಯಾವನ ದೇಹಕ್ಕೆ ತಗಿಲುತ್ತದೆಯೋ ಅವನ ಪಾಪಗಳೂ ರೋಗಗಳೂ ಹೋಗುತ್ತವೆ.

೬೦. ಶಂಖದ ನೀರು ಹರಿಯ ನಿರ್ಮಾಲ್ಯ ಹರಿಯ ಪಾದೋದಕ ಹರಿಯ ಚಂದನ ಹರಿಯ ಧೂಪದ ಶೇಷ ಇವುಗಳು ಬ್ರಹ್ಮಹತ್ಯೆಯನ್ನು ನಾಶಮಾಡುತ್ತವೆ.

ಇಂತು ಶ್ರೀ ಪದ್ಮಮಹಾಪುರಾಣದ ಉತ್ತರಖಂಡದ ಕಾರ್ತಿಕ ಮಹಾತ್ಮ್ಯೆಯ
ಶ್ರೀ ಕೃಷ್ಣ ಸತ್ಯಭಾಮೆಯರ ಸಂವಾದದಲ್ಲಿ ಕಾರ್ತಿಕಮಾಸ ನಿಯಮ ವರ್ಣನ
ಎಂಬ ನೂರ ಇಪ್ಪತ್ತನೆಯ ಅಧ್ಯಾಯವು ಮುಗಿದುದು.



॥ ಶ್ರೀಃ ॥

–x–

## ಅಥ ಶ್ರೀ ಮಹಾಪುರಾಣೇ ಪಾದ್ಮೇ ಉತ್ತರಖಂಡೇ

## ॥ ಏಕವಿಂಶತ್ಯಧಿಕಶತತಮೋಽಧ್ಯಾಯಃ ॥



॥ ಈಶ್ವರ ಉವಾಚ ॥

**ಮಾಘಸ್ನಾನಸ್ಯ ಮಾಹಾತ್ಮ್ಯಂ ಶೃಣು ಭಾಗವತೋತ್ತಮ ।**
**ತ್ವತ್ಸಮೋ ನಾಸ್ತಿ ಲೋಕೇಽಸ್ಮಿನ್ ವಿಷ್ಣುಭಕ್ತೋ ಮಹಾಮತೇ ॥ ೧ ॥**

**ಚಕ್ರತೀರ್ಥೇ ಹರಿಂ ದೃಷ್ಟ್ವಾ ಮಥುರಾಯಾಂ ತು ಕೇಶವಂ ।**
**ಯತ್ಫಲಂ ಲಭತೇ ಮರ್ತ್ಯೋ ಮಾಘಸ್ನಾನೇನ ತತ್ಫಲಂ ॥ ೨ ॥**

**ಜಿತೇಂದ್ರಿಯಶ್ಶಾಂತಮನಾಃ ಸದಾಚಾರೇಣ ಸಂಯುತಃ ।**
**ಸ್ನಾನಂ ಕರೋತಿ ಯೋ ಮಾಘೇ ಸಂಸಾರೀ ನ ಭವೇತ್ಪುನಃ ॥ ೩ ॥**

---

## ನೂರ ಇಪ್ಪತ್ತೊಂದನೆಯ ಅಧ್ಯಾಯವು



೧. ಈಶ್ವರನು ಹೇಳಿದನು–ಎಲೈ ಭಾಗವತ್ತೋತ್ತಮನೆ ಮಾಘ ಸ್ನಾನದ ಮಹಿಮೆಯನ್ನು ಕೇಳು. ನಿನ್ನಂತಹ ವಿಷ್ಣುಭಕ್ತರು ಇನ್ನು ಈ ಲೋಕದಲ್ಲಿಲ್ಲ.

೨. ಚಕ್ರತೀರ್ಥದಲ್ಲಿ ಹರಿಯ ದರ್ಶನಮಾಡಿ, ಮಥುರೆಯಲ್ಲಿ ಕೇಶವನ ದರ್ಶನಮಾಡಿ, ಮನುಷ್ಯನು ಹೊಂದುವ ಫಲವನ್ನು ಮಾಘಸ್ನಾನ ಒಂದರಿಂದಲೇ ಹೊಂದುತ್ತಾನೆ.

೩. ಜಿತೇಂದ್ರಿಯನಾಗಿ ಶಾಂತಚಿತ್ತನಾಗಿ ಒಳ್ಳೆಯ ಆಚಾರದಿಂದ ಇರುತ್ತ ಮಾಘ ಮಾಸದಲ್ಲಿ ಸ್ನಾನಮಾಡುವವನು ಮತ್ತೆ ಜನ್ಮವನ್ನು ಹೊಂದುವುದಿಲ್ಲ.

॥ ಶ್ರೀಕೃಷ್ಣ ಉವಾಚ ।

ಶೂಕರಸ್ಯ ಚ ಮಾಹಾತ್ಮ್ಯಂ ಕಥಯಿಷ್ಯೇ ತವಾಗ್ರತಃ ।
ಯಸ್ಯ ವಿಜ್ಞಾನಮಾತ್ರೇಣ ಸಾನ್ನಿಧ್ಯಂ ಮಮ ಸರ್ವದಾ ॥ ೪ ॥

॥ ಸೂತ ಉವಾಚ ॥

ಇತ್ಯುಕ್ತ್ವಾ ಭಗವಾನ್ಕೃಷ್ಣಃ ಸತ್ಯಾಯೈ ಬಹುಧಾ ಜಗೌ ।
ತದಹಂ ಸಂಪ್ರವಕ್ಷ್ಯಾಮಿ ತಚ್ಛೃಣುಧ್ವಂ ತಪೋಧನಾಃ ॥ ೫ ॥

॥ ಶ್ರೀಕೃಷ್ಣ ಉವಾಚ ॥

ಪಂಚಯೋಜನವಿಸ್ತೀರ್ಣೇ ಶೂಕರೇ ಮಮ ಮಂದಿರೇ ।
ಅಸ್ಮಿನ್ವಸತಿ ಯೋ ದೇವಿ ಗರ್ದಭೋಽಪಿ ಚತುರ್ಭುಜಃ ॥ ೬ ॥

ತ್ರೀಣಿ ಹಸ್ತಸಹಸ್ರಾಣಿ ತ್ರೀಣಿ ಹಸ್ತಶತಾನಿ ಚ ।
ತಯೋಃ ಹಸ್ತಾ ವಿಶಾಲಾಕ್ಷಿ ಪರಿಮಾಣಂ ವಿಧೀಯತೇ ॥ ೭ ॥

---

೪. ಶ್ರೀಕೃಷ್ಣನು ಹೇಳಿದನು–ಸೂಕರದ ಮಹಿಮೆಯನ್ನು ನಿನಗೆ ಹೇಳುತ್ತೇನೆ. ಅದನ್ನು ತಿಳಿಯುವುದರಿಂದಲೇ ಅವನಲ್ಲಿ ನಾನು ಯಾವಾಗಲೂ ಇರುತ್ತೇನೆ.

೫. ಸೂತನು ಹೇಳಿದನು-ಕೃಷ್ಣನು ಹೀಗೆಂದು ಹೇಳಿ ಸತ್ಯಭಾಮೆಗೆ ಇನ್ನೂ ಅನೇಕವಾಗಿ ಹೇಳಿದನು. ಅದನ್ನೇ ನಾನು ಹೇಳುತ್ತೇನೆ. ಎಲೈ ಋಷಿಗಳಿರಾ ಕೇಳಿರಿ.

೬. ಶ್ರೀಕೃಷ್ಣನು ಹೇಳಿದನು- ಐದು ಯೋಜನಗಳ ವಿಸ್ತಾರವಿರುವ ಶೂಕರವೆಂಬ ನನ್ನ ಸ್ಥಾನದಲ್ಲಿ ವಾಸಮಾಡುವ ಕತ್ತೆಯೂ ಕೂಡ ನಾಲ್ಕು ಭುಜ ಗಳನ್ನು ಹೊಂದಿ ನನ್ನಂತಾಗುತ್ತದೆ.

೭. ಮೂರುಸಾವಿರ ಮೊಳಗಳ ಉದ್ದವೂ ಮುನ್ನೂರು ಮೊಳಗಳ ಅಗಲವೂ ಈ ಶೂಕರ ಕ್ಷೇತ್ರದ ಪರಿಮಾಣವು. ಈ ಅಳತೆಯು ಅಲ್ಲದೆ ಮೇಲೆ ಇನ್ನೂ ಮೂರು ಮೂರು ಮೊಳಗಳು ಹೆಚ್ಚಾಗಿದೆ.

ಷಷ್ಟಿವರ್ಷಸಹಸ್ರಾಣಿ ಯೋನ್ಯತ್ರ ಕುರುತೇ ತಪಃ ।
ತತ್ಫಲಂ ಲಭತೇ ದೇವಿ ಪ್ರಹರಾರ್ಧೇನ ಶೂಕರೇ ॥ ೮ ॥

ಸನ್ನಿಹತ್ಯಾಂ ಕುರುಕ್ಷೇತ್ರೇ ರಾಹುಗ್ರಸ್ತೇ ದಿವಾಕರೇ।
ತುಲಾಪುರುಷದಾನೇನ ಯತ್ಫಲಂ ಪರಿಕೀರ್ತಿತಂ ॥ ೯ ॥

ಕಾಶ್ಯಾಂ ದಶಗುಣಂ ಪ್ರೋಕ್ತಂ ವೇಣ್ಯಾಂ ಶತಗುಣಂ ಭವೇತ್ ।
ಸಹಸ್ರಗುಣಿತಂ ಪ್ರೋಕ್ತಂ ಗಂಗಾಸಾಗರಸಂಗಮೆ ॥ ೧೦ ॥

ಅನಂತಂ ದೇವಿ ವಿಜ್ಞೇಯಂ ಶೂಕರೇ ಮಮ ಮಂದಿರೇ ।
ಅನ್ಯತ್ರ ದದತೇ ಲಕ್ಷಂ ಸುವಿಧಾನೇನ ಭಾಮಿನೀ ॥ ೧೧ ॥

ಇಹ್ಯೈನೈತೇನ ದತ್ತೇನ ಶೂಕರೇ ತತ್ಸಮಂ ಭವೇತ್ ।
ಶೂಕರೇ ಚ ತಥಾ ವೇಣ್ಯಾಂ ಗಂಗಾಸಾಗರಸಂಗಮೆ ॥ ೧೨ ॥

---

೮. ಮಿಕ್ಕ ಸ್ಥಳಗಳಲ್ಲಿ, ಅರವತ್ತುಸಾವಿರ ವರ್ಷಗಳಕಾಲ ತಪಸ್ಸುಮಾಡಿದರೆ, ಹೊಂದುವ ಫಲವನ್ನು ಈ ಶೂಕರದಲ್ಲಿ ಅರ್ಧಘಂಟೆಯಕಾಲ ಮಾಡುವುದರಿಂದಲೇ ಹೊಂದುತ್ತಾನೆ.

೯. ಕುರುಕ್ಷೇತ್ರದಲ್ಲಿರುವ ಸನ್ನಿಹತಿಯೆಂಬ ತೀರ್ಥದಲ್ಲಿ ಸೂರ್ಯಗ್ರಹಣದಲ್ಲಿ ತುಲಾಪುರುಷ ದಾನವನ್ನು ಮಾಡಿದರೆ ಬಹುವಾದ ಫಲವನ್ನು ಹೊಂದುತ್ತಾನೆ.

೧೦. ಕಾಶಿಯಲ್ಲಿ ಆ ಫಲದ ಹತ್ತರಷ್ಟು ಫಲವೂ ವೇಣಿಯಲ್ಲಿ ಅದರ ನೂರರಷ್ಟು ಫಲವೂ ಗಂಗೆ ಸಾಗರಗಳ ಸಂಗಮದಲ್ಲಿ ಸಾವಿರದಷ್ಟು ಫಲವೂ ಬರುತ್ತದೆ. ಈ ಶೂಕರಮಂದಿರದಲ್ಲಿ ಅನಂತವಾದ ಫಲವು ಬರುತ್ತದೆ.

೧೧. ಮಿಕ್ಕ ಕ್ಷೇತ್ರಗಳಲ್ಲಿ ಲಕ್ಷದಷ್ಟನ್ನು ಕೊಟ್ಟು ಯಾವ ಫಲವನು ಹೊಂದುವನೋ ಇಲ್ಲಿ ಒಂದನ್ನು ಕೊಡುವುದರಿಂದ ಆ ಫಲವನ್ನು ಹೊಂದುತ್ತಾನೆ.

೧೨. ಶೂಕರ ವೇಣಿ ಗಂಗಾಸಾಗರ ಸಂಗಮಗಳಲ್ಲಿ ಮನುಷ್ಯನು ಒಂದೇ ಬಾರಿ ಸ್ನಾನಮಾಡುವುದರಿಂದ ಬ್ರಹ್ಮಹತ್ಯೆಯು ಹೋಗುತ್ತದೆ.

ಸಕೃದೇವ ನರಸ್ಸ್ನಾತ್ವಾ ಬ್ರಹ್ಮಹತ್ಯಾಂ ವ್ಯಪೋಹತಿ ।
ಅಲರ್ಕೇಣ ಪುರಾ ಪ್ರಾಪ್ತಾ ಸಪ್ತದ್ವೀಪಾ ವಸುಂಧರಾ ॥ ೧೩ ॥

ಶೂಕರಕ್ಷೇತ್ರಮಾಹಾತ್ಮ್ಯಂ ಶ್ರುತ್ವಾ ಚ ಗಜಗಾಮಿನಿ ।
ಮಾರ್ಗಶೀರ್ಷಸ್ಯ ಶುಕ್ಲಾಯಾಂ ದ್ವಾದಶ್ಯಾಂ ವ್ರಜ ಪುತ್ರಕ ॥ ೧೪ ॥

॥ ಕಾರ್ತಿಕೇಯ ಉವಾಚ ॥

ಭಗವನ್ ಶ್ರೋತುಮಿಚ್ಛಾಮಿ ವ್ರತಾನಾಮುತ್ತಮಂ ವ್ರತಂ ।
ವಿಧಿಂ ಮಾಸೋಪವಾಸಸ್ಯ ಫಲಂ ವಾಸ್ಯ ಯಥೋಚಿತಂ ॥ ೧೫ ॥

ಯಥಾ ವಿಧಿ ನರೈಃ ಕಾರ್ಯಂ ವ್ರತಂ ಚೀರ್ಣಂ ಯಥಾ ಭವೇತ್ ।
ಆರಭ್ಯತೇ ಯಥಾ ಪೂರ್ವಂ ಸಮಾಪ್ಯಂ ಹಿ ಯಥಾವಿಧಿ ॥ ೧೬ ॥

ಯಾತ್ಸಂಖ್ಯಂ ತು ಕರ್ತವ್ಯಂ ತತ್ಪ್ರಬ್ರೂಹಿ ಮಹೇಶ್ವರ ।
ವ್ರತಮೇತತ್ಸುಖಶ್ರೀದಂ ವಿಸ್ತರೇಣ ಮಮಾನಘ ॥ ೧೭ ॥

---

೧೩. ಅಲರ್ಕನು ಇಲ್ಲಿ ಸ್ನಾನಮಾಡಿ ತಪೋನಿಷ್ಠನಾಗಿದ್ದುದರಿಂದ ಏಳು ದ್ವೀಪಗಳಿಂದ ಕೂಡಿದ ಭೂಮಿಯು ಸಿಕ್ಕಿತು.

೧೪. ಶೂಕರ ಕ್ಷೇತ್ರದ ಮಹಿಮೆಯನ್ನು ಕೇಳಿ ಅಲ್ಲಿಗೆ ಮಾರ್ಗಶಿರಮಾಸದ ಶುದ್ಧ ದ್ವಾದಶಿಯ ದಿವಸ ಹೋಗಬೇಕು.

೧೫. ಕಾರ್ತಿಕೇಯನು ಹೇಳಿದನು—ಎಲೈ ಸ್ವಾಮಿಯೆ! ವ್ರತಗಳೊಳಗೆ ಉತ್ತಮವಾದ ವ್ರತವನ್ನು ಕೇಳಲು ಇಚ್ಛಿಸುತ್ತೇನೆ. ಮಾಸೋಪವಾಸದ ವಿಧಿಯನ್ನೂ ಅದರ ಫಲವನ್ನೂ ಹೇಳು.

೧೬. ಯಾವ ರೀತಿಯಾಗಿ ಮಾಡಿದರೆ ವ್ರತವು ಮಾಡಿದಂತೆ ಆಗುತ್ತದೆ? ಮತ್ತು ಹೇಗೆ ಪ್ರಾರಂಭಿಸಿದರೆ ಪೂರ್ತಿಯಾಗಿ ಆಗುತ್ತದೆಯೋ ಹಾಗೆ ಶಾಸ್ತ್ರರೀತಿಯಿಂದ ಪ್ರಾರಂಭಿಸಬೇಕು.

೧೭. ಈ ವ್ರತವನ್ನು ಎಷ್ಟು ಸಂಖ್ಯೆ ಮಾಡಬೇಕು? ಈ ವ್ರತವು ಸುಖವನ್ನೂ ಸಂಪತ್ತನ್ನೂ ಕೊಡುತ್ತದೆಯೆ? ಎಂಬುದನ್ನು ವಿಸ್ತಾರವಾಗಿ ಹೇಳು.

|| ರುದ್ರ ಉವಾಚ ||

ಸಾಧು ಪಾವಕಿ ಸರ್ವಂ ತೇ ಯತ್ಪೃಷ್ಟಂ ಪ್ರಬ್ರುವೇನಘ ।
ಭಕ್ತ್ಯಾಮತಿತಾಂ ಶ್ರೇಷ್ಠ ಶ್ರುಣುಷ್ವ ಗದತೋ ಮಮ || ೧೮ ||

ಸುರಾಣಾಂ ಚ ಯಥಾ ವಿಷ್ಣುಃ ತಪತಾಂ ಚ ಯಥಾ ರವಿಃ ।
ಮೇರುಶ್ಶಿಖರಿಣಾಂ ಯದ್ವತ್ವೈನತೇಯಶ್ಚ ಪಕ್ಷಿಣಾಂ || ೧೯ ||

ತೀರ್ಥಾನಾಂ ತು ಯಥಾ ಗಂಗಾ ಪ್ರಜಾನಾಂ ತು ಯಥಾ ವಣಿಕ್ ।
ಶ್ರೇಷ್ಠಃ ಸರ್ವವ್ರತಾನಾಂ ತು ತದ್ವನ್ಮಾಸೋಪವಾಸನಂ || ೨೦ ||

ಸರ್ವವ್ರತೇಷು ಯತ್ಪುಣ್ಯಂ ಸರ್ವತೀರ್ಥೇಷು ಚೈವ ಹಿ ।
ಸರ್ವದಾನೋದ್ಭವಂ ಚೈವ ಲಭೇನ್ಮಾಸೋಪವಾಸಕೃತ್ || ೨೧ ||

ಅಗ್ನಿಷ್ಟೋಮಾದಿಭಿರ್ಯಜ್ಞೈರ್ವಿವಿಧೈರ್ಭೂರಿದಕ್ಷಿಣೈಃ।
ನ ತತ್ಪುಣ್ಯಮವಾಪ್ನೋತಿ ಯನ್ಮಾಸಪರಿಲಂಘನಾತ್ || ೨೨ ||

---

೧೮. ರುದ್ರನು ಹೇಳಿದನು-ಎಲೈ ಷಣ್ಮುಖನೆ! ನೀನು ಕೇಳಿದುದು ಒಳ್ಳೆಯದು. ಭಕ್ತಿಯಿಂದ ಕೇಳು. ನೀನು ಬುದ್ಧಿವಂತನು. ಎಲ್ಲವನ್ನೂ ಹೇಳುತ್ತೇನೆ.

೧೯-೨೦. ದೇವತೆಗಳಲ್ಲಿ ವಿಷ್ಣುವೂ, ತೇಜಸ್ಸುಗಳಲ್ಲಿ ಸೂರ್ಯನೂ, ಪರ್ವತಗಳಲ್ಲಿ ಮೇರುವೂ, ಪಕ್ಷಿಗಳಲ್ಲಿ ಗರುಡನೂ, ತೀರ್ಥಗಳಲ್ಲಿ ಗಂಗೆಯೂ ಪ್ರಜೆಗಳಲ್ಲಿ ವರ್ತಕನೂ ಹೇಗೆ ಶ್ರೇಷ್ಠರೋ ಹಾಗೆ ವ್ರತಗಳಲ್ಲಿ ಈ ಮಾಸೋಪವಾಸ ವ್ರತವು ಶ್ರೇಷ್ಠವು.

೨೧. ಎಲ್ಲಾ ವ್ರತಗಳನ್ನೂ ಮಾಡಿದರೆ ಯಾವ ಪುಣ್ಯವು ಬರುತ್ತದೋ ಎಲ್ಲಾ ತೀರ್ಥಗಳಲ್ಲಿ ಸ್ನಾನಮಾಡಿದರೆ ಯಾವ ಪುಣ್ಯವು ಬರುವುದೋ ಎಲ್ಲಾ ದಾನಗಳನ್ನೂ ಮಾಡಿದರೆ ಯಾವ ಪುಣ್ಯವು ಬರುವುದೋ ಆ ಪುಣ್ಯಗಳನ್ನು ಈ ಮಾಸೋಪವಾಸಿಯು ಹೊಂದುತ್ತಾನೆ.

೨೨. ನಾನಾಬಗೆಯಾಗಿ ದಕ್ಷಿಣೆಗಳನ್ನು ಕೊಟ್ಟು ಅಗ್ನಿಷ್ಟೋಮಾದಿ ಯಾಗಗಳನ್ನು ಮಾಡಿದರೂ ಈ ಮಾಸೋಪವಾಸದ ಪುಣ್ಯದಷ್ಟು ಪುಣ್ಯವು ಬರುವುದಿಲ್ಲ.

ತೇನ ಜಪ್ತಂ ಹುತಂ ದತ್ತಂ ತಪಸ್ತಪ್ತಂ ಕೃತಂ ಸ್ವಧಾ ।
ಯಃ ಕರೋತಿ ವಿಧಾನೇನ ನರೋ ಮಾಸಮುಪೋಷಣಂ ॥ ೨೩ ॥

ಉದ್ದಿಶ್ಯ ವೈಷ್ಣವಂ ಯಜ್ಞಂ ಸಮಭ್ಯರ್ಚ್ಯ ಜನಾರ್ದನಂ ।
ಗುರೋಶಾಜ್ಞಾಂ ತತೋ ಲಬ್ಧ್ವಾ ಕುರ್ಯಾನ್ಮಾಸೋಪವಾಸನಂ ॥ ೨೪ ॥

ವೈಷ್ಣವಾನಿ ಯಥೋಕ್ತಾನಿ ಕೃತ್ವಾ ಸರ್ವವ್ರತಾನಿ ತು ।
ದ್ವಾದಶೀದಿನಪುಣ್ಯಾನಿ ತತೋಮಾಸಮುಪಾವಸೇತ್ ॥ ೨೫ ॥

ಅತಿಕೃಚ್ಛ್ರಂ ಚ ಪಾರಾಕಂ ಕೃತ್ವಾ ಚಾಂದ್ರಾಯಣಂ ತತಃ ।
ಮಾಸೋಪವಾಸಂ ಕುರ್ವೀತ ಗುರೋರ್ವಿಪ್ರಾಜ್ಞಯಾ ತತಃ ॥ ೨೬ ॥

ಅಶ್ವಿನಸ್ಯಾಮಲೇ ಪಕ್ಷ ಏಕಾದಶ್ಯಾಮುಪೋಷಿತಃ ।
ವ್ರತಮೇತತ್ತು ಗೃಹ್ಣೀಯಾದ್ಯಾವತ್ತ್ರಿಂಶದಿನಾನಿ ತು ॥ ೨೭ ॥

---

೨೩. ಯಾವನು ವಿಧಿವತ್ತಾಗಿ ಮಾಸೋಪವಾಸವನ್ನು ಮಾಡುವನೋ ಅವನು ಎಲ್ಲಾ ಜಪಗಳನ್ನೂ ಮಾಡಿದಂತಾಗುತ್ತದೆ. ತಪಸ್ಸೆಲ್ಲವನ್ನೂ ಮಾಡಿದಂತಾಗುತ್ತದೆ. ಪಿತೃಗಳ ದಾನವನ್ನೆಲ್ಲಾ ಮಾಡಿದಂತಾಗುತ್ತದೆ.

೨೪. ವಿಷ್ಣುವಿನ ಪೂಜೆಯನ್ನು ಸಂಕಲ್ಪಿಸಿ ವಿಷ್ಣುವನ್ನು ಪೂಜಿಸಿ ಗುರುವಿನ ಅಪ್ಪಣೆಯನ್ನು ಹೊಂದಿ ಆಮೇಲೆ ಮಾಸೋಪವಾಸವನ್ನು ಮಾಡಬೇಕು.

೨೫. ವೈಷ್ಣವ ವ್ರತಗಳನ್ನು ವಿಧಿವತ್ತಾಗಿ ಮಾಡಿ ದ್ವಾದಶೀ ವ್ರತವನ್ನು ಆಚರಿಸಿ ಆಮೇಲೆ ಮಾಸೋಪವಾಸವನ್ನು ಮಾಡಬೇಕು.

೨೬. ಅತಿಕೃಚ್ಛ್ರ, ಪಾರಾಕ, ಚಾಂದ್ರಾಯಣಗಳನ್ನು ಕ್ರಮವಾಗಿ ಮಾಡಿ ಗುರು, ಬ್ರಾಹ್ಮಣರ ಪೂಜೆಯನ್ನು ಮಾಡಿ ಅನಂತರ ಮಾಸೋಪವಾಸವನ್ನು ಮಾಡಬೇಕು.

೨೭. ಆಶ್ವಯುಜ ಶುಕ್ಲಪಕ್ಷದ ಏಕಾದಶಿಯ ದಿನ ಉಪವಾಸ ಮಾಡಿ ಮೂವತ್ತು ದಿನಗಳವರೆಗೂ ಈ ವ್ರತವನ್ನು ಸ್ವೀಕರಿಸಬೇಕು.

ವಾಸುದೇವಂ ಸಮಭ್ಯರ್ಚ್ಯ ಕಾರ್ತಿಕಂ ಸಕಲಂ ನರಃ ।
ಮಾಸಂಚೋಪವಸೇದ್ಯಸ್ತು ಸ ಮುಕ್ತಿಫಲಭಾಗ್ಭವೇತ್ ॥ ೨೮ ॥

ಅಚ್ಯುತಸ್ಯಾಲಯೇ ಭಕ್ತ್ಯಾ ತ್ರಿಕಾಲಂ ಕುಸುಮೈಶ್ಶುಭೈಃ ।
ಮಾಲತೀಂದೀವರೈಃ ಪದ್ಮೈಃ ಕಮಲೈಶ್ಚ ಸುಗಂಧಿಭಿಃ ॥ ೨೯ ॥

ಕುಂಕುಮೋಶೀರಕರ್ಪೂರೈಃ ವಿಲಿಪ್ಯ ವರಚಂದನೈಃ ।
ನೈವೇದ್ಯಧೂಪದೀಪಾದ್ಯೈಃ ಅರ್ಚಯೇಚ್ಚ ಜನಾರ್ದನಂ ॥ ೩೦ ॥

ಮನಸಾ ಕರ್ಮಣಾ ವಾಚಾ ಪೂಜಯೇದ್ಗರುಡಧ್ವಜಂ ।
ಕುರ್ವನ್ನರಃ ಸ್ತ್ರೀ ವಿಧವಾ ಬೃಹದ್ಭಕ್ತಿರ್ಜಿತೇಂದ್ರಿಯಃ ॥ ೩೧ ॥

ನಾಮ್ನಾಮೇವ ತಥಾಲಾಪಂ ವಿಷ್ಣೋಃ ಕುರ್ಯಾದಹರ್ನಿಶಂ ।
ಭಕ್ತ್ಯಾ ವಿಷ್ಣೋಃ ಸ್ತುತಿರ್ವಾಚ್ಯಾ ಮಿಥ್ಯಾಲಾಪವಿವರ್ಜಿತಾ ॥ ೩೨ ॥

---

೨೮. ವಾಸುದೇವನನ್ನು ಪೂಜಿಸಿ ಕಾರ್ತಿಕಮಾಸ ಪೂರ್ತಿಯಾಗಿ ಉಪವಾಸ ಮಾಡಿದವನು ಮುಕ್ತಿಯನ್ನು ಹೊಂದುತ್ತಾನೆ.

೨೯-೩೦ ವಿಷ್ಣು ದೇವಸ್ಥಾನದಲ್ಲಿ ಭಕ್ತಿಯಿಂದ ಮೂರು ಕಾಲದಲ್ಲಿಯೂ ಜಾಜಿ ಕಮಲ ಇಂದೀವರ ಸಹಸ್ರಪತ್ರದ ಕಮಲ ಕುಂಕುಮಕೇಸರಿ ಲಾಮಂಚ ಪಚ್ಚಕರ್ಪೂರ ಹರಿಚಂದನ ಮುಂತಾದುವುಗಳಿಂದ ಯಥಾಯೋಗ್ಯವಾಗಿ ಪೂಜಿಸಬೇಕು. ನೈವೇದ್ಯ ಧೂಪ ದೀಪಗಳಿಂದಲೂ ಜನಾರ್ದನನನ್ನು ಪೂಜಿಸಬೇಕು.

೩೧. ಹೆಂಗಸರಾಗಲೀ ಗಂಡಸರಾಗಲೀ ವಿಧವೆಯರಾಗಲೀ ಯಾರೇ ಆಗಲೀ ಮನೋವಾಕ್ಕಾಯಗಳಿಂದಲೂ ಬಹು ಭಕ್ತಿಯಿಂದಲೂ ಜನಾರ್ದನನನ್ನು ಪೂಜಿಸಬೇಕು.

೩೨. ಶ್ರೀ ವಿಷ್ಣುವಿನ ನಾಮಸ್ಮರಣೆಗಳನ್ನೇ ಯಾವಾಗಲೂ ಮಾಡುತ್ತಿರಬೇಕು. ಭಕ್ತಿಯಿಂದ ವಿಷ್ಣುವಿನ ಸ್ತುತಿಗಳನ್ನೇ ಹೇಳುತ್ತಿರಬೇಕು. ಉಪಯೋಗವಿಲ್ಲದ ಮಾತುಗಳನ್ನು ಆಡುತ್ತಿರಬಾರದು.

ಸರ್ವಸತ್ವದಯಾಯುಕ್ತಃ ಶಾನ್ತವೃತ್ತಿರಹಿಂಸಕಃ ।
ಸುಪ್ತೋ ವಾ ಹ್ಯಾಸನಸ್ಥೋ ವಾ ವಾಸುದೇವಂ ಪ್ರಕೀರ್ತಯೇತ್ ॥ ೩೩ ॥

ಸ್ಪೃತ್ವಾಲೋಕನ ಗಂಧಾದಿಸ್ವಾದಿತಂ ಪರಿಕೀರ್ತಯೇತ್ ।
ಅನ್ನಸ್ಯ ವರ್ಜಯೇದ್ಗ್ರಾಸಂ ಗ್ರಾಸಾನಾಂ ಸಂಪ್ರಮೋಕ್ಷಣಂ ॥ ೩೪ ॥

ಗಾತ್ರಾಭ್ಯಂಗಂ ಶಿರೋಭ್ಯಂಗಂ ತಾಂಬೂಲಂ ಚ ವಿಲೇಪನಂ ।
ವ್ರತಸ್ಥೋ ವರ್ಜಯೇತ್ಸರ್ವಂ ಯಚ್ಚಾನ್ಯಚ್ಚ ನಿರಾಕೃತಂ ॥ ೩೫ ॥

ನ ವ್ರತಸ್ಥಃ ಸ್ಪೃಶೇತ್ಕಂಚಿದ್ವಿಕರ್ಮಸ್ಥಂ ನ ಚಾಲಪೇತ್ ।
ದೇವತಾಯತನೇ ತಿಷ್ಠನ್ನಗೃಹಸ್ಥಶ್ಚರೇದ್ವ್ರತಂ ॥ ೩೬ ॥

---

೩೩. ಎಲ್ಲಾ ಪ್ರಾಣಿಗಳಲ್ಲಿಯೂ ದಯೆಯುಳ್ಳವನಾಗಿರಬೇಕು. ಶಾನ್ತನಾಗಿರಬೇಕು. ಹಿಂಸಾಕಾರ್ಯವನ್ನು ಮಾಡಬಾರದು. ಕುಳಿತಿರಲಿ ನಿಂತಿರಲಿ ಮಲಗಿರಲಿ ವಾಸುದೇವನನ್ನು ಸ್ಮರಿಸುತ್ತಿರಬೇಕು.

೩೪. ನೋಟ ನೋಡುವುದು ಗಂಧವನ್ನು ವಾಸನೆ ನೋಡುವುದು ಇವನ್ನು ಆ ವಾಸುದೇವನ ಸ್ಮರಣೆ ಮಾಡುತ್ತಲೇ ಮಾಡುತ್ತಿರಬೇಕು. ಅನ್ನವನ್ನು ತಿನ್ನಬಾರದು. ಮಿಕ್ಕವುಗಳನ್ನಾದರೂ ಹೆಚ್ಚಾಗಿಯಾಗಲೀ ಹೊಟ್ಟೆ ತುಂಬುವಷ್ಟನ್ನಾಗಲಿ ತಿನ್ನಬಾರದು.

೩೫. ಮೈಗೆ ಎಣ್ಣೆ ಹಾಕುವುದಾಗಲೀ ತಲೆಗೆ ಎಣ್ಣೆ ತಿಕ್ಕಿಕೊಳ್ಳುವುದಾಗಲೀ ಮಾಡಕೂಡದು. ತಾಂಬೂಲವನ್ನು ಹಾಕಿಕೊಳ್ಳಬಾರದು. ಗಂಧವನ್ನು ಪೂಸಿಕೊಳ್ಳಬಾರದು. ಇನ್ನೂ ಯಾವು ಯಾವುದನ್ನು ವ್ರತದಲ್ಲಿ ಉಪಯೋಗಿಸಕೂಡದೆಂದು ಹೇಳಿದೆಯೋ ಅವುಗಳನ್ನು ವ್ರತದಲ್ಲಿರುವಾಗ ಬಿಟ್ಟುಬಿಡಬೇಕು.

೩೬. ವ್ರತಮಾಡುತ್ತಿರುವವನು ವ್ರತಮಾಡದ ಅಯೋಗ್ಯರೊಡನೆ ಸೇರಿ ಅವರನ್ನು ಮುಟ್ಟಬಾರದು. ಅವರೊಡನೆ ಮಾತನ್ನೂ ಆಡಬಾರದು. ದೇವಸ್ಥಾನದಲ್ಲಿರುತ್ತ ಆ ವ್ರತವನ್ನು ಮಾಡಬೇಕೇ ಹೊರತು ಮನೆಯಲ್ಲಿ ವ್ರತವನ್ನು ಮಾಡಬಾರದು.

ಕೃತ್ವಾ ಮಾಸೋಪವಾಸಂ ತು ಯಥೋಕ್ತವಿಧಿನಾ ನರಃ ।
ನಾರೀ ವಾ ವಿಧವಾ ಸಾಧ್ವೀ ವಾಸುದೇವಂ ಸಮರ್ಚಯೇತ್ ॥ ೩೭ ॥

ಅನ್ಯೂನಾಧಿಕಮೇವಂ ತು ವ್ರತಂ ತ್ರಿಂಶದ್ದಿನೈರಿದಂ ।
ಕೃತ್ವಾ ಮಾಸೋಪವಾಸಂ ತು ಸಂಯತಾತ್ಮಾ ಜಿತೇಂದ್ರಿಯಃ ॥ ೩೮ ॥

ತತೋರ್ಚಯೇತ್ತು ವೈ ದೇವಂ ದ್ವಾದಶ್ಯಾಂ ಗರುಡಧ್ವಜಂ ।
ಪೂಜಯೇತ್ಪುಷ್ಪಮಾಲಾಭಿರ್ಗಂಧಧೂಪವಿಲೇಪನೈಃ ॥ ೩೯ ॥

ವಸ್ತ್ರಾಲಂಕಾರವಾದ್ಯೈಶ್ಚ ತೋಷಯೇದಚ್ಯುತಂ ನರಃ ।
ಸಂಸ್ನಾಪಯೇದ್ಧರಿಂ ಭಕ್ತ್ಯಾ ತೀರ್ಥಚಂದನವಾರಿಭಿಃ ॥ ೪೦ ॥

ಚಂದನೇನಾನುಲಿಪ್ತಾಂಗಂ ಗಂಧಪುಷ್ಪೈರಲಂಕೃತಂ ।
ವಸ್ತ್ರದಾನಾದಿಭಿಶ್ಚೈವ ಭೋಜಯಿತ್ವಾ ದ್ವಿಜೋತ್ತಮಾ ॥ ೪೧ ॥

---

೩೭. ಹೆಂಗಸಾಗಲೀ, ಗಂಡಸಾಗಲೀ, ವಿಧವೆಯಾಗಲೀ, ಯಾರೇ ಆಗಲೀ ಶಾಸ್ತ್ರರೀತಿಯಿಂದ ಉಪವಾಸವನ್ನು ಹಿಡಿದು ಈ ಮಾಸೋಪವಾಸವನ್ನು ಮಾಡಿ ವಾಸುದೇವನನ್ನು ಪೂಜಿಸಬೇಕು.

೩೮-೪೦. ಈ ವ್ರತವು ಹೆಚ್ಚುಕಡಿಮೆಯಿಲ್ಲದೆ ಮೂವತ್ತು ದಿನಗಳದೆಂದು ಹೇಳಲ್ಪಟ್ಟಿದೆ. ಈ ಉಪವಾಸವನ್ನು ಮಾಡಿ ಜಿತೇಂದ್ರಿಯನಾಗಿದ್ದು ಅನಂತರ ದ್ವಾದಶಿಯ ದಿವಸ ವಾಸುದೇವನ ಪೂಜೆಯನ್ನು ಮಾಡಬೇಕು. ಹೂವು. ಗಂಧ, ಧೂಪ, ವಸ್ತ್ರ, ಅಲಂಕಾರ, ಮುಂತಾದುವುಗಳಿಂದ ಸ್ವಾಮಿಯನ್ನು ಪೂಜಿಸಿ ತೃಪ್ತಿ ಪಡಿಸಬೇಕು. ತೀರ್ಥದಿಂದ ನೀರನ್ನು ತಂದು ಅವುಗಳಿಂದಲೂ ಒಳ್ಳೆಯ ಗಂಧ, ಪಚ್ಚಕರ್ಪೂರ ಮುಂತಾದುವುಗಳನ್ನು ಹಾಕಿ ಆ ನೀರಿನಿಂದಲೂ ವಾಸುದೇವನನ್ನು ಸ್ನಾನಮಾಡಿಸಬೇಕು.

೪೧-೪೩. ಅನಂತರ ಬ್ರಾಹ್ಮಣರನ್ನು ಕರೆದು ಅವರಿಗೆ ಗಂಧ, ಹೂವು ಗಳನ್ನು ಕೊಟ್ಟು ಬಟ್ಟೆಯಿಂದ ಅಲಂಕರಿಸಿ ಒಳ್ಳೆ ಮೃಷ್ಟಾನ್ನದಿಂದ ಭೋಜನ

ದದ್ಯಾಚ್ಚ ದಕ್ಷಿಣಾಂ ತೇಭ್ಯಃ ಪ್ರಣಿಪತ್ಯ ಕ್ಷಮಾಪಯೇತ್ ।
ಏವಂ ಮಾಸೋಪವಾಸಾನ್ ಹಿ ಕೃತ್ವಾಭ್ಯರ್ಚ್ಯ ಜನಾರ್ದನಂ ॥ ೪೨ ॥

ಭೋಜಯಿತ್ವಾ ದ್ವಿಜಾಂಶ್ಚೈವ ವಿಷ್ಣುಲೋಕೇ ಮಹೀಯತೇ ।
ಏವಂ ಮಾಸೋಪವಾಸಾಂತೇ ಕೃತ್ವಾ ವಿಪ್ರಾಂಸ್ತ್ರಯೋದಶ ॥ ೪೩ ॥

ನಿಯರ್ಾಪಯೇತ್ತತಸ್ತಾನ್ವೈ ವಿಧಿನಾ ಯೇನ ತಚ್ಛೃಣು ।
ಕಾರಯೇದ್ವೈಷ್ಣವಂ ಯಜ್ಞಮೇಕಾದಶ್ಯಾಮುಪೋಷಿತಃ ॥ ೪೪ ॥

ಪೂಜಯಿತ್ವಾ ತು ದೇವೇಶಮಾಚಾರ್ಯಾನುಜ್ಞಯಾ ಹರಿಂ ।
ಅರ್ಚಯಿತ್ವಾ ಯಥಾಶಕ್ತಿ ಹ್ಯಭಿವಾದ್ಯ ಗುರುಂ ತಥಾ ॥ ೪೫ ॥

ತತೋ ನು ಭೋಜಯೇದ್ವಿಪ್ರಾನ್ನಮಸ್ಕಾರಪುರಸ್ಸರಂ ।
ವಿಶುದ್ಧಕುಲಚಾರಿತ್ರಾನ್ ವಿಷ್ಣುಪೂಜನತತ್ಪರಾನ್ ॥ ೪೬ ॥

---

ಮಾಡಿಸಿ ದಕ್ಷಿಣೆಯನ್ನು ಕೊಟ್ಟು ನಮಸ್ಕರಿಸಿ ಕ್ಷಮಿಸುವಂತೆ ಕೇಳಿಕೊಂಡು ಕಳುಹಿಸಬೇಕು. ಈ ರೀತಿಯಾಗಿ ಮಾಸೋಪವಾಸವನ್ನು ಮಾಡಿ ಸ್ವಾಮಿಯನ್ನು ಪೂಜಿಸಿ ಬ್ರಾಹ್ಮಣರಿಗೆ ಭೋಜನಮಾಡಿಸಿದರೆ ವೈಕುಂಠದಲ್ಲಿ ಸುಖಿಸುತ್ತಾನೆ. ಮಾಸೋಪವಾಸವು ಮುಗಿದ ಒಡನೆಯೇ ಹದಿಮೂರುಜನ ಬ್ರಾಹ್ಮಣರಿಗೆ ಹೇಳಿ ವಿಷ್ಣುಸಂಬಂಧವಾದ ಯಜ್ಞವನ್ನು ಮಾಡಬೇಕು. ಅದನ್ನು ಹೇಳುತ್ತೇನೆ. ಕೇಳು.

೪೪–೪೬. ಏಕಾದಶಿಯ ದಿನ ಉಪವಾಸಮಾಡಿ ಆ ವಿಷ್ಣುವಿನ ಯಜ್ಞವನ್ನು ಮಾಡಬೇಕು. ಆಚಾರ್ಯನ ಅನುಮತಿಯಂತೆ ದೇವರನ್ನೂ ಬ್ರಾಹ್ಮಣರನ್ನೂ ಶಕ್ತಿಯಿದ್ದಂತೆ ಪೂಜಿಸಿ ಅನಂತರ ಗುರುವಿಗೆ ನಮಸ್ಕರಿಸಿ ಪೂಜಿಸಬೇಕು.

೪೬. ಅನಂತರ ನಮಸ್ಕಾರಮಾಡುತ್ತ ಆ ಬ್ರಾಹ್ಮಣರಿಗೆ ಊಟಕ್ಕೆ ಬಡಿಸಬೇಕು. ಅವರು ಕುಲ ಶೀಲಗಳಲ್ಲಿ ಯೋಗ್ಯರಾಗಿದ್ದು ವಿಷ್ಣು ಪೂಜೆಯಲ್ಲಿ ಆಸಕ್ತಿಯುಳ್ಳವರಾಗಿರಬೇಕು.

ಪೂಜಯಿತ್ವಾ ದ್ವಿಜಾನ್ಸರ್ವಾನ್ಭೋಜಯಿತ್ವಾ ತ್ರಯೋದಶ ।
ತಾಂಬೂಲವಸ್ತ್ರಯುಗ್ಮಾನಿ ಭೋಜನಾಚ್ಛಾದನಾನಿ ಚ ॥ ೪೭ ॥

ಯೋಗಪಟ್ಟಾನಿ ಸೂತ್ರಾಣಿ ಬ್ರಹ್ಮಸೂತ್ರಾಣಿ ಚೈವ ಹಿ ।
ದದ್ಯಾಚ್ಚೈವ ದ್ವಿಜಾಗ್ರ್ಯೇಭ್ಯಃ ಪೂಜಯಿತ್ವಾ ಪ್ರಣಮ್ಯ ಚ ॥ ೪೮ ॥

ತತೋಽನುಪೂಜಯೇಚ್ಛಕ್ತ್ಯಾ ಶಯ್ಯಾಂ ಸ್ತರಣಸಂಸ್ಕೃತಾಂ ।
ಸಾಚ್ಛಾದನಾಂ ಶುಭಾಂ ಶ್ರೇಷ್ಠಾಂ ಸೋಪಧಾನಮಲಂಕೃತಾಂ ॥ ೪೯ ॥

ಕಾರಯಿತ್ವಾತ್ಮನೋ ಮೂರ್ತಿಂ ಕಾಂಚನೀಂ ತು ಸ್ವಶಕ್ತಿತಃ ।
ನ್ಯಸೇತ್ತಸ್ಯಾಂ ತು ಶಯ್ಯಾಯಾಮರ್ಚಯಿತ್ವಾ ಸ್ರಗಾದಿಭಿಃ ॥ ೫೦ ॥

ಆಸನಂ ಪಾದುಕೇ ಛತ್ರಂ ವಸ್ತ್ರಯುಗ್ಮಮುಪಾನಹೌ ।
ಪವಿತ್ರಾಣಿ ಚ ಪುಷ್ಪಾಣಿ ಶಯ್ಯಾಯಾಮುಪಕಲ್ಪಯೇತ್ ॥ ೫೧ ॥

---

೪೭–೪೮. ಆ ಹದಿಮೂರು ಜನ ಬ್ರಾಹ್ಮಣರನ್ನು ಭೋಜನಮಾಡಿಸಿ ತಾಂಬೂಲ, ವಸ್ತ್ರ, ಜನಿವಾರ, ಬಟ್ಟೆ, ಯೋಗಪಟ್ಟ ಎಲ್ಲವನ್ನೂ ಕೊಟ್ಟು ಪೂಜಿಸಿ ಗೌರವಿಸಬೇಕು. ಅವರಿಗೆ ಭೋಜನ ಮಾಡಿಸಿ ನಮಸ್ಕರಿಸಬೇಕು.

೪೯–೫೦. ಆಮೇಲೆ ಹಾಸಿಗೆಯನ್ನು ಮಾಡಿಸಿ ಅದನ್ನು ಭಕ್ತಿಯಿಂದ ಪೂಜಿಸಬೇಕು. ಆ ಹಾಸಿಗೆಯಲ್ಲಿ ಮೇಲುಹೊದಿಕೆಯೇ ಮುಂತಾದುವುಗಳೆಲ್ಲವೂ ಇರಬೇಕು. ದಿಂಬು ಮುಂತಾದುವುಗಳನ್ನು ಹಾಕಿ ಅಲಂಕರಿಸಬೇಕು. ಅದರಲ್ಲಿ ಸ್ವಾಮಿಯ ಮೂರ್ತಿಯನ್ನು ಶಕ್ತ್ಯನುಸಾರವಾಗಿ ಚಿನ್ನದಲ್ಲಿ ಮಾಡಿಸಿ ಆ ಹಾಸಿಗೆಯಲ್ಲಿಟ್ಟು ಹೂವು ಮುಂತಾದುವುಗಳಿಂದ ಪೂಜಿಸಬೇಕು.

೫೧. ಆ ಹಾಸಿಗೆಯಲ್ಲಿಯೇ ಆಸನ, ಕೆರ, ಛತ್ರ, ವಸ್ತ್ರಗಳು, ಮರದ ಹಾವುಗೆ, ಪತ್ರಗಳು, ಪುಷ್ಪಗಳು ಇವೆಲ್ಲವನ್ನೂ ಇಡಬೇಕು.

ಏವಂ ಶಯ್ಯಾಂ ತು ಸಂಕಲ್ಪ್ಯ ಪ್ರಣಿಪತ್ಯ ಚ ತಾನ್ದ್ವಿಜಾನ್ ।
ಪ್ರಾರ್ಥಯೇಚ್ಚಾನುಮೋದಾರ್ಥಂ ವಿಷ್ಣುಲೋಕಂ ವ್ರಜಾಮ್ಯಹಂ॥ ೫೨ ॥

ತತೋ ವ್ರಜೇನ್ನರಶ್ರೇಷ್ಠೋ ವಿಷ್ಣುಸ್ಥಾನಮನಾಮಯಂ ।
ಮಂಡಪಸ್ಥಾಂಸ್ತು ತಾನ್ವಿಪ್ರಾನಿತಿ ವಾಚ್ಯಂ ಮುಹುರ್ಮುಹುಃ ॥ ೫೩ ॥

ಮಂತ್ರಹೀನಂ ಕ್ರಿಯಾಹೀನಂ ಸರ್ವಹೀನಂ ದ್ವಿಜೋತ್ತಮಾಃ ।
ಸರ್ವಂ ಸಂಪೂರ್ಣತಾಂ ಯಾತು ಭವದ್ವಾಕ್ಯಪ್ರಸಾದತಃ ।
ವಿಧಿರ್ಮಾಸೋಪವಾಸಸ್ಯ ಯಥಾವತ್ಪರಿಕೀರ್ತಿತಃ ॥ ೫೪ ॥

ಇತಿ ಶ್ರೀ ಮಹಾಪುರಾಣೇ ಪಾದ್ಮೇ ಉತ್ತರಖಂಡೇ ಕಾರ್ತಿಕ ಮಹಾತ್ಮ್ಯೇ
ಶ್ರೀ ಕೃಷ್ಣ ಸತ್ಯಭಾಮಾ ಸಂವಾದೇ ಮಾಸೋಪವಾಸವಿಧಿ ಕಥನಂ
ನಾಮ ಏಕವಿಂಶತ್ಯಧಿಕಶತತಮೋಽಧ್ಯಾಯಸ್ಸಮಾಪ್ತಃ

---

೫೨. ಈರೀತಿಯಾಗಿ ಹಾಸಿಗೆಯನ್ನು ಮಾಡಿ ಅನಂತರ ಆ ಬ್ರಾಹ್ಮಣರಿಗೆ ನಮಸ್ಕರಿಸಿ ವಿಷ್ಣುಲೋಕಕ್ಕೆ ಹೋಗುವುದಕ್ಕೆ ಅವರ ಒಪ್ಪಿಗೆಯನ್ನು ಪ್ರಾರ್ಥಿಸಬೇಕು.

೫೩. ಅನಂತರ ವಿಷ್ಣುವಿನ ದೇವಸ್ಥಾನಕ್ಕೆ ಹೋಗಬೇಕು. ಇತ್ತ ಯಜ್ಞಮಂಡಪದಲ್ಲಿರುವ ಬ್ರಾಹ್ಮಣರನ್ನು ಹೀಗೆಂದು ಕೇಳಿಕೊಳ್ಳಬೇಕು

೫೪. ಎಲೈ ದ್ವಿಜರಿರಾ! ಮಂತ್ರಹೀನವಾಗಿದ್ದರೂ ಕ್ರಿಯಾಹೀನವಾಗಿದ್ದರೂ ಕೊನೆಗೆ ಸರ್ವಹೀನವಾಗಿದ್ದರೂ ಇವೆಲ್ಲವೂ ತಮ್ಮಗಳ ಅನುಗ್ರಹದಿಂದ ಸಂಪೂರ್ಣವಾಗಲೆಂದು ಪ್ರಾರ್ಥಿಸಬೇಕು. ಈರೀತಿಯಾಗಿ ಮಾಸೋಪವಾಸದ ವಿಧಿಯು ಕ್ರಮವಾಗಿ ಹೇಳಲ್ಪಟ್ಟಿತು.

ಇಂತು ಶ್ರೀ ಪದ್ಮಮಹಾಪುರಾಣದ ಉತ್ತರಖಂಡದ ಕಾರ್ತಿಕ ಮಹಾತ್ಮ್ಯೆಯು
ಶ್ರೀ ಕೃಷ್ಣ ಸತ್ಯಭಾಮೆಯರ ಸಂವಾದದಲ್ಲಿ ಮಾಸೋಪವಾಸವಿಧಿ ಕಥನ
ಎಂಬ ನೂರ ಇಪ್ಪತ್ತೊಂದನೆಯ ಅಧ್ಯಾಯವು ಮುಗಿದುದು.



॥ ಶ್ರೀಃ ॥

-X-

# ಅಥ ಶ್ರೀ ಮಹಾಪುರಾಣೇ ಪಾದ್ಮೇ ಉತ್ತರಖಂಡೇ

## ॥ ದ್ವಾವಿಂಶತ್ಯಧಿಕಶತತಮೋಽಧ್ಯಾಯಃ ॥



॥ ಸೂತ ಉವಾಚ ॥

ಇತಿ ವಾಕ್ಯಂ ಸಮಾಕರ್ಣ್ಯ ಪುನಃ ಪಪ್ರಚ್ಛ ಪಾವಕಿಃ ।
ಸಾಲಗ್ರಾಮಾರ್ಚನಂ ಭೂಯಃ ತಚ್ಛೃಣುಧ್ವಂ ತಪೋಧನಾಃ ॥ ೧ ॥

॥ ಕಾರ್ತಿಕೇಯ ಉವಾಚ ॥

ಭಗವನ್ಯೋಗಿನಾಂ ಶ್ರೇಷ್ಠ ಸರ್ವೆ ಧರ್ಮಾಶ್ಶ್ರುತಾ ಮಯಾ ।
ಸಾಲಗ್ರಾಮಾರ್ಚನಂ ಬ್ರೂಹಿ ವಿಸ್ತರೇಣ ಮಮ ಪ್ರಭೋ ॥ ೨ ॥

---

## ನೂರ ಇಪ್ಪತ್ತೆರಡನೆಯ ಅಧ್ಯಾಯವು



೧. ಸೂತನು ಹೇಳಿದನು–ಎಲೈ ಋಷಿಗಳೇ ! ಈ ರೀತಿ ಹೇಳಿದುದೆಲ್ಲವನ್ನೂ ಕೇಳಿದ ಮೇಲೆ ಮತ್ತೂ ಷಣ್ಮುಖನು ಸಾಲಗ್ರಾಮದ ಶಿಲೆಯ ಅರ್ಚನೆಯ ರೀತಿಯನ್ನು ಕೇಳಿದನು. ಅದನ್ನು ಹೇಳುತ್ತೇನೆ ಕೇಳಿರಿ ?

೨. ಕುಮಾರಸ್ವಾಮಿಯು ಹೇಳಿದನು–ಎಲೈ ಯೋಗಿಶ್ರೇಷ್ಠನಾದ ಸ್ವಾಮಿಯೆ ! ನಿನ್ನಿಂದ ಎಲ್ಲಾ ಧರ್ಮಗಳನ್ನೂ ಕೇಳಿದೆನು. ಸಾಲಗ್ರಾಮದ ಪೂಜೆಯನ್ನು ವಿಸ್ತಾರವಾಗಿ ಹೇಳು.

|| ಈಶ್ವರ ಉವಾಚ ||

ಸಾಧು ಸಾಧು ಮಹಾಪ್ರಾಜ್ಞ ಯನ್ಮಾಂ ತ್ವಂ ಪರಿಪೃಚ್ಛಸಿ |
ತದಹಂ ಸಂಪ್ರವಕ್ಷ್ಯಾಮಿ ಶ್ರೂಯತಾಂ ಮಮ ವತ್ಸಕ || ೩ ||

ಶಾಲಗ್ರಾಮಶಿಲಾಯಾಂ ತು ತ್ರೈಲೋಕ್ಯಂ ಸಚರಾಚರಂ |
ಮಹಾಶಯ ಮಹಾಸೇನ ಲೀನಂ ತಿಷ್ಠತಿ ಸರ್ವದಾ || ೪ ||

ದೃಷ್ಟ್ವಾ ಪ್ರಣಮಿತಾ ಯೇನ ಸ್ನಾಪಿತಾ ಪೂಜಿತಾ ತಥಾ |
ಯಜ್ಞಕೋಟಿಸಮಂ ಪುಣ್ಯಂ ಗವಾಂ ಕೋಟಿಫಲಂ ಲಭೇತ್ || ೫ ||

ಛಿನ್ನಸ್ತೇನ ತಥಾ ವತ್ಸ ಗರ್ಭವಾಸಸ್ಸುದಾರುಣಃ |
ಪೀತಂ ಯೇನ ಸದಾ ವಿಷ್ಣೋಃ ಸಾಲಗ್ರಾಮಶಿಲಾಜಲಂ || ೬ ||

ಕಾಮಾಸಕ್ತೋಽಪಿ ಯೋ ನಿತ್ಯಂ ಭಕ್ತಿಭಾವವಿವರ್ಜಿತಃ |
ಸಾಲಗ್ರಾಮಶಿಲಾಂ ವತ್ಸ ಪೂಜಯಿತ್ವಾಚ್ಯುತೋ ಭವೇತ್ || ೭ ||

---

೩. ಈಶ್ವರನು ಹೇಳಿದನು–ಎಲೈ ಮಹಾಪ್ರಾಜ್ಞನೆ! ನೀನು ಕೇಳಿದುದು ಒಳ್ಳೆಯದು. ಚೆನ್ನಾಗಿದೆ. ಮಗುವೆ! ಅದೆಲ್ಲವನ್ನೂ ಹೇಳುತ್ತೇನೆ. ನೀನು ಕೇಳು.

೪. ಎಲೈ ಮಹಾಶಯನೆ! ಸಾಲಿಗ್ರಾಮಶಿಲೆಯಲ್ಲಿ ಚರಾಚರಾತ್ಮಕವಾದ ಈ ಮೂರು ಲೋಕಗಳೂ ಅಡಗಿವೆ.

೫. ಆ ಸಾಲಿಗ್ರಾಮದ ದರ್ಶನ ಅದರ ನಮಸ್ಕಾರ ಅದರ ಅಭಿಷೇಕ ಅದರ ಪೂಜೆ ಇವುಗಳು ಕೋಟಿ ಯಜ್ಞದ ಪುಣ್ಯಗಳಿಗೆ ಸಮವಾಗುತ್ತವೆ. ಮತ್ತು ಕೋಟಿ ಗೋವುಗಳನ್ನು ದಾನಮಾಡಿದ ಫಲವನ್ನು ಕೊಡುತ್ತವೆ.

೬. ಸಾಲಗ್ರಾಮದ ತೀರ್ಥವನ್ನು ಯಾವಾಗಲೂ ಯಾವನು ಕುಡಿಯು ತ್ತಾನೆಯೊ ಅವನ ದಾರುಣವಾದ ಗರ್ಭವಾಸವು ನಾಶವಾಗುತ್ತದೆ

೭. ಕಾಮಾಸಕ್ತನಾಗಿದ್ದರೂ ಭಕ್ತಿಯಿಲ್ಲದಿದ್ದರೂ ಕೂಡ ಯಾವನು ಸಾಲಗ್ರಾಮವನ್ನು ಪೂಜಿಸುತ್ತಾನೆಯೋ ಅವನು ಸಾಕ್ಷಾದ್ವಿಷ್ಣುವೇ ಆಗುವನು.

ಶಾಲಗ್ರಾಮಶಿಲಾಬಿಂಬಂ ಹತ್ಯಾಕೋಟಿವಿನಾಶನಂ ।
ಸ್ಮೃತಂ ಸಂಕೀರ್ತಿತಂ ಧ್ಯಾತಂ ಪೂಜಿತಂ ಚ ನಮಸ್ಕೃತಂ ॥ ೮ ॥

ಸಾಲಗ್ರಾಮಶಿಲಾಂ ದೃಷ್ಟ್ವಾ ಯಾಂತಿ ಪಾಪಾನ್ಯನೇಕಶಃ ।
ಸಿಂಹಂ ದೃಷ್ಟ್ವಾ ಯಥಾ ಯಾಂತಿ ವನೇ ಮೃಗಗಣಾ ಭಯಾತ್ ॥ ೯ ॥

ನಮಸ್ಕರೋತಿ ಮನುಜಃ ಸಾಲಗ್ರಾಮಶಿಲಾರ್ಚನಂ ।
ಭಕ್ತ್ಯಾ ವಾ ಯದಿ ವಾಭಕ್ತ್ಯಾ ಕೃತ್ವಾ ಮುಕ್ತಿಮವಾಪ್ನುಯಾತ್ ॥ ೧೦ ॥

ವೈವಸ್ವತಭಯಂ ನಾಸ್ತಿ ತಥಾ ಮರಣಜನ್ಮಯೋಃ ।
ಯಃ ಕರೋತಿ ನರೋ ನಿತ್ಯಂ ಶಾಲಗ್ರಾಮಶಿಲಾರ್ಚನಂ ॥ ೧೧ ॥

ಗಂಧಪಾದ್ಯಾರ್ಘ್ಯನೈವೇದ್ಯೈಃ ದೀಪೈರ್ಧೂಪೈರ್ವಿಲೇಪನೈಃ ।
ಗೀತೈರ್ವಾದ್ಯೈಸ್ತಥಾ ಸ್ತೋತ್ರೈಃ ಶ್ಯಾಲಗ್ರಾಮಶಿಲಾರ್ಚನಂ ॥ ೧೨ ॥

---

೮. ಸಾಲಗ್ರಾಮದ ಶಿಲೆಯನ್ನು ಸ್ಮರಿಸಿದರೂ ಬಾಯಲ್ಲಿ ಹೇಳಿದರೂ ಧ್ಯಾನಮಾಡಿದರೂ ಪೂಜಿಸಿದರೂ ನಮಸ್ಕರಿಸಿದರೂ ಕೂಡ ಕೋಟಿ ಹತ್ಯೆಗಳನ್ನು ನಾಶಮಾಡುತ್ತದೆ.

೯. ಕಾಡಿನಲ್ಲಿ ಸಿಂಹವನ್ನು ನೋಡಿ ಮೃಗಗಳ ಗುಂಪು ಭಯದಿಂದ ಓಡಿ ಹೋಗುವಂತೆ ಸಾಲಗ್ರಾಮದ ಶಿಲೆಯನ್ನು ನೋಡಿ ಪಾಪಗಳೆಲ್ಲವೂ ಓಡಿ ಹೋಗುತ್ತವೆ.

೧೦. ಸಾಲಗ್ರಾಮದ ಶಿಲೆಯನ್ನು ಯಾವನು ಅರ್ಚಿಸಿ ನಮಸ್ಕರಿಸುತ್ತಾನೆಯೋ ಅವನು ಮುಕ್ತಿಯನ್ನು ಹೊಂದುತ್ತಾನೆ. ಅವನು ಭಕ್ತಿಯಿಂದಲಾಗಲಿ ಭಕ್ತಿಯಿಲ್ಲದಾಗಲಿ ಹೇಗೆ ಮಾಡಿದರೂ ಮುಕ್ತಿಯು ಬರುತ್ತದ.

೧೧. ಸಾಲಗ್ರಾಮದ ಶಿಲಾರ್ಚನೆಯನ್ನು ಮಾಡುವವನಿಗೆ ಯಮನ ಭಯವಾಗಲೀ ಜನನಮರಣಗಳ ಭಯವಾಗಲೀ ಇರುವುದಿಲ್ಲ.

೧೨. ಗಂಧ, ಪಾದ್ಯ, ಅರ್ಘ್ಯ, ನೈವೇದ್ಯ, ದೀಪ, ಧೂಪ, ವಿಲೇಪನ, ಗೀತ, ಸ್ತೋತ್ರಗಳಿಂದ ಸಾಲಗ್ರಾಮದ ಶಿಲಾರ್ಚನೆಯನ್ನು ಮಾಡಬೇಕು

ಕುರುತೇ ಮಾನವೋ ಯಸ್ತು ಕಲೌ ಭಕ್ತಿಪರಾಯಣಃ ।
ಕಲ್ಪಕೋಟಿಸಹಸ್ರಾಣಿ ರಮತೇ ವಿಷ್ಣುಸದ್ಮನಿ ॥ ೧೩ ॥

ಶಾಲಗ್ರಾಮನಮಸ್ಕಾರೋ ಭಾವೇನಾಪಿ ನರೈಃ ಕೃತಃ ।
ಮಾನುಷತ್ವಂ ಕಥಂ ತೇಷಾಂ ಮದ್ಭಕ್ತಾ ಯೇ ನರಾ ಭುವಿ ॥ ೧೪ ॥

ಮದ್ಭಕ್ತಿಬಲದರ್ಪಿಷ್ಠಾ ಮತ್ಪ್ರಭುಂ ನ ನಮಂತಿ ಯೇ ।
ವಾಸುದೇವಂ ನ ತೇ ಜ್ಞೇಯಾ ಮದ್ಭಕ್ತಾಃ ಪಾಪಮೋಹಿತಾಃ ॥ ೧೫ ॥

ಮದ್ಭಕ್ತೋಽಪಿ ಚ ಯೋ ಭೂತ್ವಾ ಭುಂಕ್ತೇ ತ್ವೇಕಾದಶೀದಿನೇ ।
ಸ ಯಾತಿ ಸ್ಕಂದ ತಾಮಿಸ್ರೇ ನಿರಯೇ ಮಮ ಘಾತಕಃ ॥ ೧೬ ॥

ಮಲ್ಲಿಂಗಸ್ಪರ್ಶನಂ ಕಾರ್ಯಂ ನಾನ್ಯಾ ಶುದ್ಧಿರ್ವಿಧೀಯತೇ ।
ಯಾ ತಿಥಿರ್ದಯಿತಾ ವಿಷ್ಣೋಃ ಸಾ ತಿಥಿರ್ಮಮ ವಲ್ಲಭಾ ॥ ೧೭ ॥

---

೧೩. ಕಲಿಯುಗದಲ್ಲಿ ಭಕ್ತಿಯಿಂದ ಯಾವನು ಈ ರೀತಿಯಾಗಿ ಪೂಜಿಸುವನೋ ಅವನು ಕೋಟಿಸಾವಿರ ಕಲ್ಪಗಳವರೆಗೂ ವೈಕುಂಠದಲ್ಲಿ ರಮಿಸುತ್ತಾನೆ.

೧೪. ಸಾಲಿಗ್ರಾಮದ ಶಿಲೆಯ ನಮಸ್ಕಾರವನ್ನು ಭಕ್ತಿಯಿಂದ ಮಾಡಿದ ನನ್ನ ಭಕ್ತನಿಗೆ ಪ್ರಪಂಚದಲ್ಲಿ ಮನುಷ್ಯನಾಗಿ ಹುಟ್ಟುವಿಕೆಯೇ ಇರುವುದಿಲ್ಲ.

೧೫. ನನ್ನಲ್ಲಿರುವ ಭಕ್ತಿಯಿಂದ ಕೊಬ್ಬಿದವರಾಗಿ ನನ್ನ ಭಕ್ತರು ನನ್ನ ಪ್ರಭುವಾದ ಶ್ರೀ ವಿಷ್ಣುವನ್ನು ನಮಸ್ಕರಿಸದಿದ್ದರೆ ಅವರನ್ನು ನನ್ನ ಭಕ್ತರೆಂದು ಹೇಳಲಾಗುವುದಿಲ್ಲ.

ನನ್ನ ಭಕ್ತನಾಗಿಯೂ ಏಕಾದಶಿಯ ದಿವಸ ಊಟಮಾಡಿದರೆ ಅವನು ನನ್ನನ್ನು ನಿಂದಿಸತಕ್ಕವನಾಗಿ ಅಂಧತಾಮಿಸ್ರವೆಂಬ ನರಕದಲ್ಲಿ ಬೀಳುತ್ತಾನೆ.

೧೭. ಹಾಗೆ ಊಟಮಾಡಿದರೆ ನನ್ನ ಲಿಂಗಸ್ವರೂಪವಾದ ದೇಹವನ್ನು ಮುಟ್ಟಬೇಕು. ಬೇರೆ ಯಾವ ಬಗೆಯಾದ ಪ್ರಾಯಶ್ಚಿತ್ತವೂ ಇರುವುದಿಲ್ಲ. ವಿಷ್ಣುವಿಗೆ ಪ್ರೀತಿಕರವಾದ ತಿಥಿಯು ನನಗೂ ಪ್ರೀತಿಕರವೇ.

ಯಸ್ತ್ವಾಂ ನೋಪವಸೇನ್ಮರ್ತ್ಯಃ ಸ ಪಾಪೀ ಶ್ವಪಚಾಧಿಕಃ ।
ಸಾಲಗ್ರಾಮಶಿಲಾಯಾಂ ತು ಸದಾ ಪುತ್ರ ವಸಾಮ್ಯಹಂ ॥ ೧೮ ॥

ದತ್ತಂ ದೇವೇಶ ತುಷ್ಟೇನ ಸ್ವಸ್ಥಾನಂ ಮಮ ಭಕ್ತಿತಃ ।
ಪದ್ಮಕೋಟಿಸಹಸ್ರೈಸ್ತು ಪೂಜಿತೇ ಮಯಿ ಯತ್ಫಲಂ ॥ ೧೯ ॥

ತತ್ಫಲಂ ಕೋಟಿಗುಣಿತಂ ಸಾಲಗ್ರಾಮಶಿಲಾರ್ಚನಾತ್ ।
ಪೂಜಿತೋಽಹಂ ನ ತೈರ್ಮರ್ತ್ಯೈರ್ನಮಿತೋಽಹಂ ನ ತೈರ್ನರೈಃ ॥ ೨೦ ॥

ನ ಕೃತಂ ಮರ್ತ್ಯಲೋಕೇ ಯೈಃ ಸಾಲಗ್ರಾಮಶಿಲಾರ್ಚನಂ ।
ಸಾಲಗ್ರಾಮಶಿಲಾಗ್ರೇ ತು ಯಃ ಕರೋತಿ ಮಮಾರ್ಚನಂ ॥ ೨೧ ॥

ತೇನಾರ್ಚಿತೋಽಹಂ ದೇನಾನೀಃ ಯುಗಾನಾಮೇಕವಿಂಶತಿಂ ।
ಕಿಮರ್ಚಿತೈರ್ಲಿಂಗಶತೈರ್ವಿಷ್ಣುಭಕ್ತಿವಿವರ್ಜಿತೈಃ ॥ ೨೨ ॥

---

೧೮. ಯಾವನು ಆ ಏಕಾದಶಿಯದಿವಸ ಉಪವಾಸಮಾಡದೆ ಊಟ ಮಾಡುತ್ತಾನೆಯೋ ಅವನು ಮಹಾಪಾಪಿಯು. ಚಂಡಾಲನಿಗಿಂತಲೂ ಕೀಳಾದವನು. ಎಲೈ ಸ್ಕಂದನೆ! ನಾನು ಯಾವಾಗಲೂ ಸಾಲಿಗ್ರಾಮಶಿಲೆಯಲ್ಲಿಯೇ ವಾಸಮಾಡುತ್ತೇನೆ.

೧೯-೨೨. ನನ್ನ ಭಕ್ತಿಗೆ ಸಂತೋಷಪಟ್ಟ ಆ ಸ್ವಾಮಿಯು ನನಗೆ ತನ್ನ ಸ್ಥಾನವನ್ನೇ ಕೊಟ್ಟಿರುವನು. ಕೋಟಿ ಪದ್ಮಗಳನ್ನು ತಂದು ನನ್ನನ್ನು ಪೂಜಿಸಿದರೆ ಯಾವಫಲವು ಬರುತ್ತದೋ ಅದಕ್ಕೆ ಕೋಟಿಯಷ್ಟು ಹೆಚ್ಚಾದ ಫಲವು ಸಾಲಿಗ್ರಾಮಶಿಲೆಯನ್ನು ಪೂಜಿಸುವುದರಿಂದ ಬರುತ್ತದೆ. ಯಾರು ಈ ಮನುಷ್ಯಲೋಕದಲ್ಲಿ ಸಾಲಿಗ್ರಾಮರೂಪಿಯಾದ ನನ್ನನ್ನು ಅದರಲ್ಲಿ ಪೂಜಿಸುವುದಿಲ್ಲವೋ ಅವರು ಮಾಡಿದ ಬೇರೆಯ ಪೂಜೆ ನಮಸ್ಕಾರಗಳೆಲ್ಲವೂ ವ್ಯರ್ಥವು. ಸಾಲಿಗ್ರಾಮಶಿಲೆಯಲ್ಲಿ ಯಾವನು ನನ್ನನ್ನು ಪೂಜಿಸುವನೋ ಅವನು ಇಪ್ಪತ್ತೊಂದು ಯುಗಗಳವರೆಗೆ ನನ್ನನ್ನು ಪೂಜಿಸಿದಂತಾಗುತ್ತದೆ. ವಿಷ್ಣುವಿನಲ್ಲಿ ಭಕ್ತಿಇಲ್ಲದೆ ಸಾಲಿಗ್ರಾಮವನ್ನು ಪೂಜಿಸದೆ ಸಾವಿರಾರು ಲಿಂಗಗಳನ್ನು ಪೂಜಿಸಿದರೂ ಅವೆಲ್ಲವೂ ವ್ಯರ್ಥವೇ

ಸಾಲಗ್ರಾಮಶಿಲಾಬಿಂಬಂ ನಾರ್ಚಿತಂ ಯದಿ ಪುತ್ರಕ ।
ಅನರ್ಹಂ ಮಮ ನೈವೇದ್ಯಂ ಪತ್ರಂ ಪುಷ್ಪಂ ಫಲಂ ಜಲಂ || ೨೩ ||

ಸಾಲಗ್ರಾಮಶಿಲಾಗ್ರೇ ತು ಸರ್ವಂ ಯಾತಿ ಪವಿತ್ರತಾಂ ।
ಭುಕ್ತ್ವಾ ನ್ಯದೇವನೈವೇದ್ಯಂ ದ್ವಿಜಶ್ಚಾಂದ್ರಾಯಣಂ ಚರೇತ್ || ೨೪ ||

ಭುಕ್ತ್ವಾ ಕೇಶವನೈವೇದ್ಯಂ ಯಜ್ಞಕೋಟಿಫಲಂ ಲಭೇತ್ ।
ಪಾದೋದಕೇನ ದೇವಸ್ಯ ಹತ್ಯಾಕೋಟಿಸಮನ್ವಿತಾಃ || ೨೫ ||

ಶುಧ್ಯಂತಿ ನಾತ್ರ ಸಂದೇಹಸ್ತಥಾ ಶಂಖೋದಕೇನ ಹಿ ।
ಯೋ ಹಿ ಮಾಹೇಶ್ವರೋ ಭೂತ್ವಾ ವೈಷ್ಣವಂ ಚ ನ ಪೂಜಯೇತ್|| ೨೬ ||

ದ್ವೇಷ್ಟಾ ಚ ಯಾತಿ ನರಕಂ ಯಾವದಿಂದ್ರಾಶ್ಚತುರ್ದಶ ।
ಜ್ಯೇಷ್ಠಾಶ್ರಮೀ ಗೃಹೇ ಯಸ್ಯ ಮುಹೂರ್ತಮಪಿ ವಿಶ್ರಮೇತ್ || ೨೭ ||

---

ಸರಿ. ಹಾಗೆ ಪೂಜಿಸದೆ ನನಗೆ ಅರ್ಪಿಸಿದ ನೈವೇದ್ಯವೂ ಪತ್ರೆಗಳೂ ಹೂಗಳೂ ಹಣ್ಣೂ ನೀರೂ ಎಲ್ಲವೂ ವ್ಯರ್ಥವೇ.

೨೪. ಸಾಲಗ್ರಾಮ ಶಿಲೆಯ ಮುಂದಿಟ್ಟರೆ ಎಲ್ಲವೂ ಪವಿತ್ರವಾಗುತ್ತವೆ. ಬೇರೆಯ ದೇವರ ನೈವೇದ್ಯವನ್ನು ಬ್ರಾಹ್ಮಣನು ತಿಂದರೆ ಚಾಂದ್ರಾಯಣವನ್ನು ಮಾಡಬೇಕು.

೨೫. ಕೇಶವನ ನೈವೇದ್ಯವನ್ನು ತಿಂದರೆ ಕೋಟಿ ಯಜ್ಞಗಳ ಫಲವು ಬರುತ್ತದೆ. ಸಾಲಗ್ರಾಮರೂಪಿಯಾದ ಕೇಶವನ ಪಾದೋದಕದಿಂದ ಕೋಟಿಬಗೆಯ ಹತ್ಯೆಗಳನ್ನು ಮಾಡಿದ್ದರೂ ಅವನು ಶುದ್ಧನಾಗುತ್ತಾನೆ ಶಂಖೋದಕದಿಂದಲೂ ಅಂತೆಯೇ ಶುದ್ಧನಾಗುತ್ತಾನೆ.

೨೬. ಮಹೇಶ್ವರನ ಭಕ್ತನಾಗಿ ಯಾರು ವಿಷ್ಣುವನ್ನಾಗಲೀ ವಿಷ್ಣುಭಕ್ತರನ್ನಾಗಲೀ ಗೌರವಿಸದೆ ದ್ವೇಷಿಸುತ್ತಾರೆಯೋ ಅವರು ಹದಿನಾಲ್ಕು ಇಂದ್ರರಿರುವವರೆಗೂ ನರಕವನ್ನು ಹೊಂದುತ್ತಾರೆ.

೨೭. ಯಾವನ ಮನೆಯಲ್ಲಿ ಬ್ರಹ್ಮಚಾರಿಯು ಒಂದು ಮುಹೂರ್ತಕಾಲವಾದರೂ ವಿಶ್ರಮಿಸಿಕೊಳ್ಳುತ್ತಾನೆಯೋ ಅವನ ಪಿತಾಮಹರುಗಳು ಎಂಟು ಯುಗಗಳವರೆಗೂ ಅಮೃತವನ್ನುಂಟುಮಾಡಿಕೊಂಡಿರುತ್ತಾರೆ.

ಪಿತಾಮಹಾ ಯುಗಾನ್ಯಷ್ಟೌ ಭವಂತ್ಯನ್ಯೃತಭೋಜಿನಃ ।
ಸಂಸಾರೇ ದುಃಖಕಾಂತಾರೇ ನಿಮಜ್ಜಂತಿ ನರಾಧಮಾಃ ॥ ೨೮ ॥

ವರ್ಷಕೋಟಿಸಹಸ್ರಾಣಿ ಕೃಷ್ಣಾರಾಧನವರ್ಜಿತಾಃ ।
ಸಕೃದಭ್ಯರ್ಚಿತೈರ್ಲಿಂಗೈಶ್ಶಾಲಗ್ರಾಮಸಮುದ್ಭವೈಃ ॥ ೨೯ ॥

ಮುಕ್ತಿಂ ಪ್ರಯಾಂತಿ ಮನುಜಾ ಯೋಗಸಾಂಖ್ಯೇನ ವರ್ಜಿತಾಃ ।
ಮಲ್ಲಿಂಗಕೋಟಿಭಿರ್ದೃಷ್ಟೈರ್ಯತ್ಫಲಂ ಪೂಜಿತೈಸ್ಸ್ತುತೈಃ ॥ ೩೦ ॥

ಸಾಲಗ್ರಾಮಶಿಲಾಯಾಂ ತು ಏಕಸ್ಯಾಮಿಹ ತದ್ಭವೇತ್ ।
ದ್ವಾದಶೈವ ಶಿಲಾ ಯೇ ವೈ ಸಾಲಗ್ರಾಮಸಮುದ್ಭವಾಃ ॥ ೩೧ ॥

ಅರ್ಚಯೇದ್ವೈಷ್ಣವೋ ನಿತ್ಯಂ ತಸ್ಯ ಪುಣ್ಯಂ ನಿಬೋಧ ಮೇ ।
ಕೋಟಿಲಿಂಗಸಹಸ್ರೈಸ್ತು ಪೂಜಿತೈರ್ಜಾಹ್ನವೀ ತಟೇ ॥ ೩೨ ॥

---

೨೮. ದುಃಖ ಬಹಳವಾದ ಈ ಸಂಸಾರದಲ್ಲಿ ಕೃಷ್ಣನನ್ನು ಆರಾಧಿಸದ ಅಯೋಗ್ಯರು ಕೋಟಿಸಾವಿರ ವರ್ಷಗಳವರೆಗೂ ಈ ದುಃಖವಾದ ಸಂಸಾರದಲ್ಲಿಯೇ ಬಿದ್ದಿರುತ್ತಾರೆ.

೨೯. ಯೋಗಸಾಂಖ್ಯಗಳನ್ನು ತಿಳಿಯದಿದ್ದರೂ ಮನುಜರು ಒಂದು ಸಾರಿಯಾದರೂ ಸಾಲಿಗ್ರಾಮವನ್ನು ಪೂಜಿಸಿದರೆ ಮುಕ್ತಿಯನ್ನು ಹೊಂದುತ್ತಾರೆ.

೩೦. ಕೋಟಿ ಲಿಂಗಗಳನ್ನು ದರ್ಶನಮಾಡಿ ಪೂಜಿಸಿ ಸ್ತುತಿಸಿದರೆ ಬರುವ ಪುಣ್ಯವು ಒಂದೇ ಒಂದು ಸಾಲಗ್ರಾಮಶಿಲೆಯನ್ನು ಪೂಜಿಸಿದರೆ ಬರುತ್ತದೆ.

೩೧. ಸಾಲಿಗ್ರಾಮಶಿಲೆಗಳು ಹನ್ನೆರಡು ಬಗೆಯಾಗಿವೆ. ಅವುಗಳಲ್ಲಿ ಯಾವುದನ್ನಾದರೂ ಸರಿಯಾಗಿ ಪೂಜಿಸಿದರೆ ಅವನಿಗೆ ಬರುವ ಪುಣ್ಯವನ್ನು ಹೇಳುತ್ತೇನೆ. ಕೇಳು.

೩೨. ಗಂಗಾತೀರದಲ್ಲಿ ಕೋಟಿಸಾವಿರ ಲಿಂಗಗಳನ್ನು ಪೂಜಿಸುತ್ತಾ ಕಾಶಿಯಲ್ಲಿಯೇ ಎಂಟು ಯುಗಗಳಿದ್ದರೆ ಯಾವ ಪುಣ್ಯವು ಬರುತ್ತದೆಯೋ ಅದು ಈ ಸಾಲಗ್ರಾಮವನ್ನು ಪೂಜಿಸಿದರೆ ಒಂದು ದಿನದಲ್ಲಿಯೇ ಬರುತ್ತದೆ.

ಕಾಶೀವಾಸೋ ಯುಗಾನ್ಯಷ್ಟೌ ದಿನೇನೈಕೇನ ತದ್ಭವೇತ್ ।
ಕಿಂ ಪುನಶ್ಚ ಬಹೂರ್ಯಸ್ತು ಪೂಜಯೇದ್ವೈಷ್ಣವೋ ನರಃ ॥ ೩೩ ॥

ನಾಹಂ ಬ್ರಹ್ಮಾದಯೋ ದೇವಾಃ ಸಂಖ್ಯಾಂ ಕರ್ತುಂ ಸಮಾಹತೇ ।
ತಸ್ಮಾದ್ಭಕ್ತ್ಯಾ ಚ ಮದ್ಭಕ್ತೈಃ ಪ್ರೀತ್ಯರ್ಥಂ ಮಮ ಪುತ್ರಕ ॥ ೩೪ ॥

ಕರ್ತವ್ಯಂ ಮಮ ತದ್ಭಕ್ತ್ಯಾ ಸಾಲಗ್ರಾಮಶಿಲಾರ್ಚನಂ ।
ಸಾಲಗ್ರಾಮಶಿಲಾರೂಪೀ ಯತ್ರ ತಿಷ್ಠತಿ ಕೇಶವಃ ॥ ೩೫ ॥

ತತ್ರ ದೇವಾಸ್ಸುರಾ ಯಕ್ಷಾ ಭುವನಾನಿ ಚತುರ್ದಶ ।
ಸುರಾಣಾಂ ಕೀರ್ತನೈಸ್ಸರ್ವೈಃ ಕೋಟಿಭಿಶ್ಚ ಫಲಂ ಕೃತಂ ॥ ೩೬ ॥

ತತ್ಫಲಂ ಕೀರ್ತನಾದೇವ ಕೇಶವೇ ಸುಕೃತಂ ಕಲೌ ।
ಸಾಲಗ್ರಾಮಶಿಲಾಗ್ರೇ ತು ಸಕೃತ್ಪಿಂಡೇನ ತರ್ಪಿತಾಃ ॥ ೩೭ ॥

---

೩೩. ಹೀಗಿರುವಲ್ಲಿ ವಿಷ್ಣುಭಕ್ತನಾಗಿ ಅನೇಕ ಸಾಲಗ್ರಾಮಗಳನ್ನು ಪೂಜಿಸಿದರೆ ಅದರ ಪುಣ್ಯದ ಸಂಖ್ಯೆಯನ್ನು ನಾನಾಗಲೀ ಬ್ರಹ್ಮನೇ ಮುಂತಾದ ದೇವತೆಗಳಾಗಲೀ ಹೇಳುವುದಕ್ಕೆ ಸಾಧ್ಯವಿಲ್ಲ.

೩೪. ಆದುದರಿಂದ ನನ್ನ ಭಕ್ತರು ನನ್ನ ಪ್ರೀತಿಗೋಸ್ಕರವಾಗಿ ಆ ವಿಷ್ಣುವಿನಲ್ಲಿ ಭಕ್ತಿಯಿಟ್ಟುಕೊಂಡು ಸಾಲಗ್ರಾಮಶಿಲೆಯ ಅರ್ಚನೆಯನ್ನು ಮಾಡಬೇಕು.

೩೫. ಸಾಲಗ್ರಾಮ ಶಿಲಾರೂಪಿಯಾದ ಕೇಶವನಿರುವಲ್ಲಿ ಸುರರೂ ಯಕ್ಷರೂ ಕೊನೆಗೆ ಹದಿನಾಲ್ಕು ಲೋಕಗಳೂ ಅಲ್ಲಿರುವುವು.

೩೬ ಮೂವತ್ತುಮೂರು ಕೋಟಿ ದೇವತೆಗಳನ್ನೂ ಹೊಗಳುವುದರಿಂದ ಯಾವ ಪುಣ್ಯವು ಬರುತ್ತದೋ ಆ ಪುಣ್ಯವು ಕಲಿಯುಗದಲ್ಲಿ ಆ ಕೇಶವನೊಬ್ಬನನ್ನು ಹೊಗಳುವುದರಿಂದಲೇ ಬರುತ್ತದೆ.

೩೭. ಸಾಲಗ್ರಾಮವನ್ನು ಎದುರಿಗಿಟ್ಟುಕೊಂಡು ಪಿತೃಗಳಿಗೆ ತರ್ಪಣ ಮಾಡಿದರೆ ಅವರ ಪಿತೃಗಳು ಸ್ವರ್ಗದಲ್ಲಿ ಸುಖಿಸುವ ಕಾಲವನ್ನು ಲೆಕ್ಕಿಸುವುದಕ್ಕಾಗುವುದಿಲ್ಲ.

ವಸನ್ತಿ ಪಿತರಸ್ತಸ್ಯ ನ ಸಂಖ್ಯಾ ತತ್ರ ವಿದ್ಯತೇ ।
ಯೇ ಪಿಬಂತಿ ನರಾ ನಿತ್ಯಂ ಸಾಲಗ್ರಾಮಶಿಲಾಜಲಂ ॥ ೩೮ ॥

ಪಂಚಗವ್ಯಸಹಸ್ರೈಸ್ತು ಪ್ರಾಶಿತೈಃ ಕಿಂ ಪ್ರಯೋಜನಂ ।
ಪ್ರಾಯಶ್ಚಿತ್ತೇ ಸಮುತ್ಪನ್ನೇ ಕಿಂ ದಾನೈಃ ಕಿಮುಪೋಷಣೈಃ ॥ ೩೯ ॥

ಚಾಂದ್ರಾಯಣೈಶ್ಚ ಚೀರ್ಣೈಶ್ಚ ಪೀತ್ವಾ ಪಾದೋದಕಂ ಹರೇಃ ।
ಯಃ ಕರೋತಿ ತಟಾಗೇ ತು ಪ್ರತಿಮಾಂ ಜಲಶಾಯಿನೀಂ ॥ ೪೦ ॥

ಮಾಮಕೈಃ ಬ್ರಹ್ಮಸೂರ್ಯಾದ್ಯೈಃ ಪ್ರಸಾದ್ಯೈಃ ಕಿಂ ಪ್ರಯೋಜನಂ ।
ವರಮೇಕಾ ತಟಾಗೇ ತು ಪ್ರತಿಮಾ ಜಲಶಾಯಿನೀ ॥ ೪೧ ॥

ಕೋಟಿಭಿಶ್ಚಾಪಿ ಕಿಂ ಕಾರ್ಯಮನ್ಯದೇವೈಶ್ಚ ಪೂಜಿತೈಃ ।
ವಿಷ್ಣುಮುಖ್ಯಾಸ್ತು ವೈ ದೇವಾಸ್ತತ್ರ ಜಲ್ಪನ್ತಿ ವೈ ಗುಹ ॥ ೪೨ ॥

ಪ್ರಮಾಣಮಸ್ತಿ ಸರ್ವಸ್ಯ ಸುಕೃತಸ್ಯ ಹಿ ಪುತ್ರಕ ।
ಫಲಂ ಪ್ರಮಾಣಹೀನಂ ತು ಸಾಲಗ್ರಾಮಶಿಲಾರ್ಚನೇ ॥ ೪೩ ॥

---

೩೮. ಸಾಲಗ್ರಾಮದ ತೀರ್ಥವನ್ನು ಯಾರು ಕುಡಿಯುತ್ತಾರೆಯೋ ಅವರಿಗೆ ಸಾವಿರಬಾರಿ ಪಂಚಗವ್ಯವನ್ನು ಕುಡಿಸಿದುದರಿಂದ ಪ್ರಯೋಜನವೇನು ?

೩೯. ಪಾಪಮಾಡಿದಾಗ ಪ್ರಾಯಶ್ಚಿತ್ತವು ಹುಟ್ಟಿದರೆ ದಾನಗಳಿಂದಲಾಗಲೀ ಉಪವಾಸಗಳಿಂದಲಾಗಲೀ ಚಾಂದ್ರಾಯಣಗಳಿಂದಲಾಗಲೀ ಉಪಯೋಗವೇನು? ಸಾಲಗ್ರಾಮದ ತೀರ್ಥವನ್ನು ಸೇವಿಸಿದರೆ ಆ ಪಾಪಗಳಿಗೆ ಪ್ರಾಯಶ್ಚಿತ್ತವಾಯಿತು.

೪೦. ಯಾವನು ಆ ಸಾಲಗ್ರಾಮ ಪ್ರತಿಮೆಯನ್ನು ನೀರಿನಲ್ಲಿ ಮುಳುಗಿಸುತ್ತಾನೆಯೊ ಅವನಿಗೆ ನನ್ನಮತ್ತು ಬ್ರಹ್ಮಸೂರ್ಯರ ಅನುಗ್ರಹದಿಂದೇನು ಪ್ರಯೋಜನ ? ವಿಷ್ಣುವಿನ ಅನುಗ್ರಹವೇ ಹೆಚ್ಚಾಗಿರುತ್ತದೆ.

೪೧–೪೩. ಕೆರೆಯಲ್ಲಿ ನೀರಿನಲ್ಲಿ ಸ್ವಾಮಿಯನ್ನು ಮಲಗಿಸಿದರೆ ಬಹು ಉತ್ತಮವು. ಹಾಗೆ ಮಾಡಿದರೆ ಅನೇಕ ಕೋಟಿ ದೇವತೆಗಳನ್ನು ಪೂಜಿಸಿದುದರಿಂದ ಪ್ರಯೋಜನವೇನು ? ಎಲೈ ಮಗುವೆ ! ಎಲ್ಲಾ ಪುಣ್ಯಗಳಿಗೂ ಒಂದು ಪ್ರಮಾಣವುಂಟು. ಆದರೆ ಈ ಸಾಲಗ್ರಾಮ ಶಿಲೆಯ ಪೂಜೆಯು ಪ್ರಮಾಣವಿಲ್ಲದ್ದು. ಎಂದು ವಿಷ್ಣುವೇ ಮುಂತಾದ ದೇವತೆಗಳೂ ಹೇಳುತ್ತಾರೆ.

ಯೋ ದದಾತಿ ಶಿಲಾ ವಿಷ್ಣೋಃ ಸಾಲಗ್ರಾಮಶಿಲೋದ್ಭವಾಃ ।
ವಿಪ್ರಾಯ ವಿಷ್ಣುಭಕ್ತಾಯ ತೇನೇಷ್ಟಂ ಕ್ರತುಭಿಶ್ಶತೈಃ ॥ ೪೪ ॥

ಗೃಹೇಪಿ ವಸತಸ್ತಸ್ಯ ಗಂಗಾಸ್ನಾನಂ ದಿನೇ ದಿನೇ ।
ಸಸ್ನಾತಸ್ಸರ್ವತೀರ್ಥೇಷು ಸರ್ವಯಜ್ಞೇಷು ದೀಕ್ಷಿತಃ ॥ ೪೫ ॥

ಸಾಲಗ್ರಾಮಶಿಲಾತೋಯೈರ್ಯೋಭಿಷೇಕಂ ಸಮಾಚರೇತ್ ।
ಸ್ವರ್ಗೇ ಮರ್ತ್ಯೇ ಚ ಪಾತಾಳೇ ಪಾಷಾಣಾಸ್ಸಸ್ತಿ ಭೂಮಿಜಾಃ ॥ ೪೬ ॥

ಸಾಲಗ್ರಾಮಶಿಲಾಸಾಮ್ಯಂ ನಾಸ್ತಿ ನಾಸ್ತಿ ಪುನಃ ಪುನಃ ।
ಮಾನುಷ್ಯೇ ದುರ್ಲಭೇ ಲೋಕೇ ಸಫಲಂ ತಸ್ಯ ಜೀವಿತಂ ॥ ೪೭ ॥

ತಿಲಪ್ರಸ್ಥಶತಂ ಭಕ್ತ್ಯಾ ಯೋ ದದಾತಿ ದಿನೇ ದಿನೇ ।
ತತ್ಫಲಂ ಸಮವಾಪ್ನೋತಿ ಸಾಲಗ್ರಾಮಶಿಲಾರ್ಚನಾತ್ ॥ ೪೮ ॥

---

೪೪. ಯಾವನು ಸಾಲಗ್ರಾಮ ರೂಪಿಯಾದ ವಿಷ್ಣುವನ್ನು ವಿಷ್ಣು ಭಕ್ತನಾದ ಬ್ರಾಹ್ಮಣನಿಗೆ ಕೊಡುತ್ತಾನೆಯೋ ಅವನು ನೂರು ಯಾಗಗಳನ್ನು ಮಾಡಿದ ಪುಣ್ಯವನ್ನು ಹೊಂದುತ್ತಾನೆ.

೪೫. ಸಾಲಗ್ರಾಮವನ್ನು ಪೂಜಿಸುತ್ತ ಅದರ ನೀರನ್ನು ಎರಚಿ ಕೊಳ್ಳುತ್ತಿದ್ದರೆ ಮನೆಯಲ್ಲಿಯೇ ವಾಸವಾಗಿದ್ದರೂ ಅವನು ಪ್ರತಿದಿನವೂ ಗಂಗಾಸ್ನಾನ ಮಾಡಿದಂತಾಗುತ್ತದೆ. ಎಲ್ಲಾ ತೀರ್ಥಗಳಲ್ಲಿಯೂ ಸ್ನಾನಮಾಡಿ ದಂತಾಗುತ್ತದೆ. ಎಲ್ಲಾ ಯಜ್ಞಗಳನ್ನೂ ಮಾಡಿದಂತಾಗುತ್ತದೆ.

೪೬–೪೭. ಸ್ವರ್ಗ ಭೂಮಿ ಪಾತಾಳಗಳಲ್ಲಿ ಬೇಕಾದಷ್ಟು ಶಿಲೆಗಳಿರುತ್ತವೆ. ಆದರೆ ಈ ಸಾಲಗ್ರಾಮದ ಶಿಲೆಯಂತೆ ಮತ್ತೊಂದಿಲ್ಲ. ಮತ್ತೆ ಮತ್ತೆಯೂ ಒತ್ತಿ ಒತ್ತಿ ಅದನ್ನೇ ಹೇಳಬಹುದು. ಈ ದುರ್ಲಭವಾದ ಮನುಷ್ಯ ಲೋಕದಲ್ಲಿ ಅವನ ಜನ್ಮವು ಫಲವುಳ್ಳದ್ದು.

೪೮. ಯಾವನು ಪ್ರತಿದಿನವೂ ನೂರುನೂರು ಕೊಳಗ ಎಳ್ಳನ್ನು ದಾನಮಾಡುತ್ತಾನೆಯೋ ಆ ಫಲವು ಈ ಸಾಲಗ್ರಾಮಶಿಲೆಯನ್ನು ಪೂಜೆಮಾಡು ವುದರಿಂದ ಬರುತ್ತದೆ.

ಪತ್ರಂ ಪುಷ್ಪಂ ಫಲಂ ತೋಯಂ ಮೂಲಂ ದೂರ್ವಾದಳಂ ತಥಾ ।
ಜಾಯತೇ ಮೇರುಣಾ ತುಲ್ಯಂ ಶಾಲಗ್ರಾಮಶಿಲಾರ್ಪಿತಂ ॥ ೪೯ ॥

ವಿಧಿಹೀನೋಽಪಿ ಯಃ ಕಶ್ಚಿತ್ಕ್ರಿಯಾಮಂತ್ರವಿವರ್ಜಿತಃ ।
ಚಕ್ರಾಂಕಭುಜ ಆಪ್ನೋತಿ ಸಮ್ಯಕ್ ಶಾಸ್ತ್ರೋದಿತಂ ಫಲಂ ॥ ೫೦ ॥

ಯತ್ತು ಪೂರ್ವಂ ಮಯಾ ಪೃಷ್ಟಂ ಕೇಶವಂ ಕ್ಲೇಶನಾಶನಂ ।
ತತ್ಸರ್ವಂ ಕಥಯಿಷ್ಯಾಮಿ ತವಸ್ನೇಹೇನ ಪುತ್ರಕ ॥ ೫೧ ॥

ಕ್ವ ತ್ವಂ ವಸಸಿ ಹೇ ವಿಷ್ಣೋ ಕಿಮಾಧಾರಃ ಕಿಮಾಶ್ರಯಃ ।
ಕಥಂ ವಾ ಪ್ರೀಯಸೇ ದೇವ ತತ್ಸರ್ವಂ ಕಥಯಸ್ವ ನಃ ॥ ೫೨ ॥

॥ ಶ್ರೀವಿಷ್ಣುರುವಾಚ ॥

ನಿವಸಾಮಿ ಸದಾ ಶಂಭೋ ಸಾಲಗ್ರಾಮೋದ್ಭವೇಽಶ್ಮನಿ ।
ತತ್ರೈವ ರಥಚಕ್ರಾಂಕೇ ಯಾನಿ ನಾಮಾನಿ ಮೇ ಶೃಣು ॥ ೫೩ ॥

---

೪೯. ಪತ್ರ, ಪುಷ್ಪ, ಹಣ್ಣು, ನೀರುಗೆಡ್ಡೆಗರಿಕೆದಳ ಯಾವುದನ್ನಾಗಲೀ ಸಾಲಗ್ರಾಮದಲ್ಲಿ ಅರ್ಪಿಸಿದರೆ ಮೇರುವಿನಷ್ಟು ಫಲವನ್ನು ಕೊಡುತ್ತದೆ.

೫೦. ವಿಧಿ, ಕ್ರಿಯೆ, ಮಂತ್ರ ಇವುಗಳಿಂದ ಹೀನವಾಗಿಯಾದರೂ ಸಾಲಗ್ರಾಮವನ್ನು ಪೂಜಿಸಿದರೆ ಚತುರ್ಭುಜನಾಗಿ ಶಾಸ್ತ್ರವತ್ತಾದ ಫಲವನ್ನು ಹೊಂದುತ್ತಾನೆ.

೫೧. ಕ್ಲೇಶನಾಶಕನಾದ ಕೇಶವನನ್ನು ಹಿಂದೆ ನಾನೇನೇನನ್ನುಕೇಳಿದೆನೋ ಅದೆಲ್ಲವನ್ನೂ ನಿನ್ನಲ್ಲಿರುವ ಸ್ನೇಹದಿಂದ ಈಗ ಹೇಳುತ್ತೇನೆ.

೫೨. ಎಲೈ ವಿಷ್ಣುವೇ! ನೀನೆಲ್ಲಿ ವಾಸಮಾಡುತ್ತೀಯೆ? ನಿನ್ನಆಧಾರವೇನು? ನಿನಗೆ ಆಶ್ರಯವು ಯಾವುದು? ನೀನು ಸಂತೋಷಪಡುವುದು ಹೇಗೆ? ಅವೆಲ್ಲವನ್ನೂ ನನಗೆ ಹೇಳು.

೫೩. ಶ್ರೀ ವಿಷ್ಣುವು ಹೇಳಿದನು - ಎಲೈ ಶಂಭುವೆ ! ಸಾಲಗ್ರಾಮದ ಶಿಲೆಯಲ್ಲಿ ನಾನು ಯಾವಾಗಲೂ ಇರುತ್ತೇನೆ. ರಥ ಚಕ್ರಗಳಿಂದ ಗುರುತು ಮಾಡಲ್ಪಟ್ಟ ಅವುಗಳಲ್ಲಿರುವ ನನ್ನ ಹೆಸರುಗಳನ್ನೂ ಕೇಳು.

ದ್ವಾರದೇಶೇ ಸಮೇ ಚಕ್ರೇ ದೃಶ್ಯೇತೇ ನಾಂತರಂ ಯದಿ ।
ವಾಸುದೇವಸ್ಸ ವಿಜ್ಞೇಯಃ ಶುಕ್ಲಶ್ಚೈವಾತಿಶೋಭನಃ ॥ ೫೪ ॥

ಪ್ರದ್ಯುಮ್ನ ಊರ್ಧ್ವಚಕ್ರಸ್ತು ನೀಲದೀಪ್ತಿಸ್ತಥೈವ ಚ ।
ಸುಷಿರಂ ಛಿದ್ರಬಹುಳಂ ದೀರ್ಘಾಕಾರಂ ತು ತದ್ಭವೇತ್ ॥ ೫೫ ॥

ಅನಿರುದ್ಧಸ್ತು ಪೀತಾಭೋ ವರ್ತುಲಶ್ಚಾತಿಶೋಭನಃ ।
ರೇಖಾತ್ರಯಾಂಕಿತೋ ದ್ವಾರಿ ಹೃಷ್ಟಪದ್ಮೇನ ಚಿಹ್ನಿತಃ ॥ ೫೬ ॥

ಶ್ಯಾಮೋ ನಾರಾಯಣೋ ದೇವೋ ನಾಭಿಚಕ್ರೇ ತಥೋನ್ನತೇ ।
ದೀರ್ಘರೇಖಾಸಮೋಪೇತೋ ದಕ್ಷಿಣೇ ಸುಷಿರಾನ್ವಿತಃ ॥ ೫೭ ॥

ಊರ್ಧ್ವಮುಖಂ ವಿಜಾನೀಯಾತ್ಸುಂದರಂ ಹರಿರೂಪಿಣಂ ।
ಕಾಮದಂ ಮೋಕ್ಷದಂ ಚೈವ ಹ್ಯರ್ಥದಂ ಚ ವಿಶೇಷತಃ ॥ ೫೮ ॥

---

೫೪. ಸಾಲಗ್ರಾಮದಲ್ಲಿ ರಂಧ್ರವಾಗಿರುವ ಮುಂಭಾಗದಲ್ಲಿಯೇ ಎರಡು ಚಕ್ರಗಳು ಕಂಡುಬಂದರೆ ಅವೆರಡೂ ಸೇರಿದಂತಿದ್ದರೆ ಅದಕ್ಕೆ ವಾಸುದೇವ ಸಾಲಗ್ರಾಮವೆಂದು ಹೆಸರು. ಅದು ಬಿಳಿಯ ಬಣ್ಣದ ಶಿಲೆಯಾದರೆ ಬಹು ಉತ್ತಮವಾದುದು.

೫೫. ಚಕ್ರವು ಮೇಲುಮುಖವಾಗಿದ್ದರೆ ಅದು ಪ್ರದ್ಯುಮ್ನ ಸಾಲಗ್ರಾಮವು ಅದರ ಬಣ್ಣವು ನೀಲವಾಗಿದ್ದರೆ ಉತ್ತಮವು. ಆ ಸಾಲಗ್ರಾಮವು ಅನೇಕ ರಂಧ್ರವುಳ್ಳದ್ದಾಗಿಯೂ ಉದ್ದವಾಗಿಯೂ ಇರುತ್ತದೆ.

೫೬. ಆ ಸಾಲಗ್ರಾಮವು ಹೊಂಬಣ್ಣಕ್ಕಿದ್ದು ದುಂಡಗಿದ್ದರೆ ಅನಿರುದ್ಧ ಸಾಲಗ್ರಾಮವು. ಅದು ಒಳ್ಳೆಯದು. ಅದಕ್ಕೆ ರಂಧ್ರದ ಬಳಿ ಮೂರು ರೇಖೆಗಳಿರುತ್ತವೆ. ಅದರಲ್ಲಿರುವ ಪದ್ಮವು ಆಗತಾನೆ ಅರಳಿದಂತೆ ಮೇಲು ಮುಖಕ್ಕೆ ಇರುತ್ತದೆ.

೫೭. ಕಪ್ಪಗಿದ್ದರೆ ಅದು ನಾರಾಯಣ ಸಾಲಗ್ರಾಮವು. ಚಕ್ರದ ಮಧ್ಯದಲ್ಲಿ ಉಬ್ಬಿಕೊಂಡಿರುತ್ತದೆ. ರೇಖೆ ಉದ್ದವಾಗಿರುತ್ತದೆ. ರಂಧ್ರವಿರುತ್ತವೆ.

೫೮. ಮುಖವು ಮೇಲುಗಡೆಗಿದ್ದರೆ ಅದು ಹರಿ ಸಾಲಗ್ರಾಮವು. ಅದು ಸುಂದರವಾದುದು. ಕಾಮ ಮೋಕ್ಷ ಅರ್ಥಗಳನ್ನು ಕೊಡುತ್ತದೆ.

ಪರಮೇಷ್ಠೀ ಚ ಶುಕ್ಲಾಭಃ ಪದ್ಮಚಕ್ರಸಮನ್ವಿತಃ ।
ಬಿಂಬಾಕೃತಿಸ್ತಥಾ ಪೃಷ್ಠೇ ಸುಷಿರಂ ಚಾತಿಪುಷ್ಕರಂ ॥ ೫೯ ॥

ಕೃಷ್ಣವರ್ಣಸ್ತಥಾ ವಿಷ್ಣುಃ ಮೂಲೇ ಚಕ್ರೇ ಸುಶೋಭನೇ ।
ದ್ವಾರೋಪರಿ ತಥಾ ರೇಖಾ ಲಕ್ಷ್ಯತೇ ಮಧ್ಯದೇಶತಃ ॥ ೬೦ ॥

ಕಪಿಲೋ ನಾರಸಿಂಹಸ್ತು ಪೃಥುಚಕ್ರಸುಶೋಭಿತಃ ।
ಬ್ರಹ್ಮಚರ್ಯೇಣ ಪೂಜ್ಯೋಽಸಾವನ್ಯಥಾ ವಿಘ್ನದೋ ಭವೇತ್ ॥ ೬೧ ॥

ವಾರಾಹಶಕ್ತಿಲಿಂಗಸ್ತು ಚಕ್ರೇ ಚ ವಿಷಮೇ ಸ್ಥಿತೇ ।
ಇಂದ್ರನೀಲನಿಭಃ ಸ್ಥೂಲಸ್ತ್ರಿರೇಖೋ ನಾಮಿತಶ್ಶುಭಃ ॥ ೬೨ ॥

ದೀರ್ಘಕಾಂಚನವರ್ಣಾ ಯಾ ಬಿಂದುತ್ರಯವಿಭೂಷಿತಾ ।
ಮತ್ಸ್ಯಾಖ್ಯಾ ಸಾ ಶಿಲಾ ಜ್ಞೇಯಾ ಭುಕ್ತಿಮುಕ್ತಿಫಲಪ್ರದಾ ॥ ೬೩ ॥

---

೫೯. ಪದ್ಮ ಚಕ್ರಗಳಿದ್ದು ಅದು ಬೆಳ್ಳಗಿದ್ದರೆ ಪರಮೇಷ್ಠಿ ಸಾಲಗ್ರಾಮವು. ಮತ್ತು ಕೆಳಗಡೆಯಲ್ಲಿ ಬಿಂಬಾಕಾರವಾಗಿರಬೇಕು. ರಂಧ್ರವು ಬರಬರುತ್ತಾ ಸಣ್ಣದ್ದಾಗಿರಬೇಕು.

೬೦. ಕಪ್ಪಗಿದ್ದು ಬುಡದಲ್ಲಿಯೇ ಎರಡು ಚಕ್ರಗಳು ಚೆನ್ನಾಗಿದ್ದರೆ ಮತ್ತು ರಂಧ್ರದ ಮೇಲೆ ಮಧ್ಯ ದೇಶದಲ್ಲಿಯೇ ಒಂದು ರೇಖೆಯು ಕಂಡು ಬಂದರೆ ಅದು ವಿಷ್ಣು ಸಾಲಿಗ್ರಾಮವು.

೬೧. ಕಪಿಲ ವರ್ಣಕ್ಕಿದ್ದರೆ ಅದು ನರಸಿಂಹ ಸಾಲಿಗ್ರಾಮವು. ಚಕ್ರವು ದೊಡ್ಡದಾಗಿರುತ್ತದೆ. ಇದನ್ನು ಬ್ರಹ್ಮಚರ್ಯದಿಂದ ಪೂಜಿಸಬೇಕು ಇಲ್ಲದಿದ್ದರೆ ವಿಘ್ನವನ್ನುಂಟುಮಾಡುತ್ತದೆ.

೬೨ ಚಕ್ರವುಮೇಲೆ ಕೆಳಗೆ ಒಂದೇ ನೇರಕ್ಕೆ ಇರದೆ ಹೆಚ್ಚು ಕಡಿಮೆಯಲ್ಲಿದ್ದರೆ ಅದು ವಾರಾಹಶಕ್ತಿ ಸಾಲಗ್ರಾಮವು. ಇಂದ್ರನೀಲದ ಬಣ್ಣಕ್ಕಿರುವುದು. ದಪ್ಪವಾದ ರೇಖೆಯು ಇರುವುದು. ಸ್ವಲ್ಪ ಬಗ್ಗಿರುವುದು.

೬೩. ಚಿನ್ನದ ಬಣ್ಣಕ್ಕಿದ್ದು ಉದ್ದವಾಗಿ ಮೂರು ಬಿಂದುಗಳಿಂದ ಕೂಡಿದ್ದರೆ ಅದು ಮತ್ಸ್ಯಮೂರ್ತಿಯು. ಭುಕ್ತಿಯನ್ನೂ ಮುಕ್ತಿಯನ್ನೂ ಕೊಡುತ್ತದೆ.

ಕೂರ್ಮಸ್ತ್ವೋನ್ನತಃ ಪೃಷ್ಠೇ ವರ್ತುಲಾವರ್ತಪೂರಿತಃ ।
ಹರಿತಂ ವರ್ಣಮಾಧತ್ತೇ ಕೌಸ್ತುಭೇನ ತು ಚಿಹ್ನಿತಃ ॥ ೬೪ ॥

ಹಯಗ್ರೀವೋ ಹಯಾಕಾರೋ ರೇಖಾಪಂಚ ವಿಭೂಷಿತಃ ।
ಬಹುಬಿಂದುಸಮಾಕೀರ್ಣಃ ಪೃಷ್ಠೇ ನೀಲಂ ಚ ರೂಪಕಂ ॥ ೬೫ ॥

ವೈಕುಂಠಮುಸಿಭಿನ್ನಾಂಗಂ ಚಕ್ರಮೇಕಂ ತಥಾ ಧ್ವಜಂ ।
ದ್ವಾರೋಪರಿ ತಥಾ ರೇಖಾ ಗುಂಜಾಕಾರಾ ಸುಶೋಭನಾ ॥ ೬೬ ॥

ಶ್ರೀಧರಸ್ತು ತಥಾ ದೇವಶ್ಚಿಹ್ನಿತೋ ವನಮಾಲಯಾ ।
ಕದಂಬಕುಸುಮಾಕಾರೋ ರೇಖಾಪಂಚವಿಭೂಷಿತಃ ॥ ೬೭ ॥

ವರ್ತುಲಶ್ಚಾಪಿ ಹ್ರಸ್ವಶ್ಚ ವಾಮನಃ ಪರಿಕೀರ್ತಿತಃ ।
ಅತಸೀಕುಸುಮಪ್ರಖ್ಯೋ ಬಿಂದುನಾ ಪರಿಶೋಭಿತಃ ॥ ೬೮ ॥

---

೬೪. ಬೆನ್ನಿನ ಭಾಗ ಸ್ವಲ್ಪ ಎತ್ತರವಾಗಿ ದುಂಡಗಿದ್ದು ಹಳದಿಯ ಬಣ್ಣಕ್ಕಿದ್ದು ಕೌಸ್ತುಭದ ಚಿಹ್ನೆಗಳಿದ್ದರೆ ಅದು ಕೂರ್ಮ ಸಾಲಿಗ್ರಾಮವು.

೬೫. ಕುದುರೆಯ ಆಕಾರಕ್ಕಿದ್ದು ಐದು ಗೆರೆಗಳಿದ್ದು ಅನೇಕ ಬಿಂದುಗಳಿದ್ದರೆ ನೀಲಿಯ ಬಣ್ಣವಿದ್ದರೆ ಅದು ಹಯಗ್ರೀವ ಮೂರ್ತಿಯು.

೬೬. ಚಕ್ರದಿಂದ ಸೀಳಿದಂತಿರುವ ಗೀರಿದ್ದು ಒಂದು ಚಕ್ರವೂ ಒಂದು ಧ್ವಜವೂ ಇದ್ದು ರಂಧ್ರದ ಬಳಿಯೊಂದು ರೇಖೆಯಿದ್ದು ಗುಲಗಂಜಿಯಂತಿರುವುದು ವೈಕುಂಠ ಮೂರ್ತಿಯು.

೬೭. ವನಮಾಲೆಯೆಂಬ ಮಾಲೆಯ ಗುರುತಿದ್ದು ಕದಂಬ (ಕಡಹ) ದ ಹೂವಿನ ಆಕಾರಕ್ಕಿದ್ದು ಐದು ರೇಖೆಗಳಿದ್ದರೆ ಅದು ಶ್ರೀಧರ ಮೂರ್ತಿಯು.

೬೮. ದುಂಡಗೆ ಸಣ್ಣನಾಗಿ ಅಗಸೆ ಹೂವಿನ ಬಣ್ಣಕ್ಕಿದ್ದು ಒಂದು ಬಿಂದುವಿದ್ದರೆ ಅದು ವಾಮನ ಮೂರ್ತಿಯು.

ಸುದರ್ಶನಸ್ತ್ವತೋ ದೇವಃ ಶ್ಯಾಮವರ್ಣೋ ಮಹಾದ್ಯುತಿಃ ।
ವಾಮಪಾರ್ಶ್ವೇ ಗದಾಚಕ್ರೇ ರೇಖಾ ಚೈವ ತು ದಕ್ಷಿಣೇ ॥ ೧೯ ॥

ದಾಮೋದರಸ್ತಥಾ ಸ್ಥೂಲೋ ಮಧ್ಯೇ ಚಕ್ರಂ ಪ್ರತಿಷ್ಠಿತಂ ।
ದೂರ್ವಾಭಂ ದ್ವಾರಿ ಸಂಕೀರ್ಣಂ ಪೀತರೇಖಾ ತಥೈವ ಚ ॥ ೨೦ ॥

ನಾನಾವರ್ಣೋ ಹ್ಯನಂತಸ್ತು ನಾನಾಭೋಗೇನ ಚಿಹ್ನಿತಃ ।
ಅನೇಕಮೂರ್ತಿಸಂಭಿನ್ನಃ ಸರ್ವಕಾಮಫಲಪ್ರದಃ ॥ ೨೧ ॥

ವಿದಿಕ್ಷು ದಿಕ್ಷು ಸರ್ವಾಸು ಯಸ್ಯೋರ್ಧ್ವಂ ದೃಶ್ಯತೇ ಮುಖಂ ।
ಪುರುಷೋತ್ತಮಸ್ಸ ವಿಜ್ಞೇಯಃ ಭುಕ್ತಿಮುಕ್ತಿಫಲಪ್ರದಃ ॥ ೨೨ ॥

ದೃಶ್ಯತೇ ಶಿಖರೇ ಲಿಂಗಂ ಸಾಲಗ್ರಾಮಶಿಲೋದ್ಭವಂ ।
ತಸ್ಯ ಯೋಗೇಶ್ವರೋ ದೇವೋ ಬ್ರಹ್ಮಹತ್ಯಾಂ ವ್ಯಪೋಹತಿ ॥ ೨೩ ॥

---

೧೯. ಕಪ್ಪಗೆ ಪ್ರಕಾಶಮಾನವಾಗಿ ಎಡಭಾಗದಲ್ಲಿ ಗದೆಯೂ ಚಕ್ರವೂ ಇದ್ದು ಬಲಭಾಗದಲ್ಲಿ ಒಂದು ರೇಖೆಯಿದ್ದರೆ ಅದು ಸುದರ್ಶನ ಮೂರ್ತಿಯು.

೨೦. ದಪ್ಪವಾಗಿ ಮಧ್ಯದಲ್ಲಿ ಚಕ್ರವಿದ್ದು ರಂಧ್ರದ ಬಾಯಲ್ಲಿ ಹಸುರಿಗಿದ್ದು ಹಳದಿಯ ರೇಖೆಯಿದ್ದರೆ ಅದು ದಾಮೋದರ ಮೂರ್ತಿಯೆಂದು ತಿಳಿಯುವುದು.

೨೧. ಅನೇಕ ಬಣ್ಣಗಳಿದ್ದು ಅನೇಕ ಹೆಡೆಗಳಂತೆ ಚಕ್ರಗಳು ಕಂಡು ಬಂದು ಅನೇಕ ಮೂರ್ತಿಗಳು ಸೇರಿದಂತೆ ಇದ್ದರೆ ಅದು ಅನಂತಮೂರ್ತಿಯು. ಎಲ್ಲಾ ಇಷ್ಟಾರ್ಥಗಳನ್ನು ಕೊಡುತ್ತದೆ.

೨೨. ದಿಕ್ಕುಗಳ ಭೇದವಿಲ್ಲದೆ ಎಲ್ಲಾ ಕಡೆಯಲ್ಲಿಯೂ ಮುಖವು ಕಂಡು ಬಂದರೆ ಅದು ಪುರುಷೋತ್ತಮ ಮೂರ್ತಿಯು. ಅದು ಭುಕ್ತಿಯನ್ನೂ ಮುಕ್ತಿಯನ್ನೂ ಕೊಡುತ್ತದೆ.

೨೩. ಯಾವ ಸಾಲಗ್ರಾಮದ ಮೇಲು ಭಾಗದಲ್ಲಿ ಲಿಂಗವು ಕಾಣುತ್ತಾ ಇರುತ್ತದೆಯೊ ಅದು ಯೋಗೀಶ್ವರ ದೇವರು. ಅದು ಬ್ರಹ್ಮಹತ್ಯೆಯನ್ನು ನಾಶ ಮಾಡುತ್ತದೆ

ಆರಕ್ತಃ ಪದ್ಮನಾಭಸ್ತು ಪಂಕಜಚಕ್ರಸಂಯುತಃ ।
ತಸ್ಯಾಭ್ಯರ್ಚನತೋ ನಿತ್ಯಂ ದರಿದ್ರಸ್ತ್ವೀಶ್ವರೋ ಭವೇತ್ || ೭೪ ||

ಚಕ್ರಾಕೃತಿಂ ಹಿರಣ್ಯಾಂಗಂ ರಶ್ಮಿಜಾಲಂ ವಿನಿರ್ದಿಶೇತ್ ।
ಸುವರ್ಣರೇಖಾಬಹುಲಂ ಸ್ಫಟಿಕದ್ಯುತಿಶಾಲಿನಂ || ೭೫ ||

ಅತಿಸ್ನಿಗ್ಧಾ ಸಿದ್ಧಿಕರೀ ಕೃಷ್ಣಾ ಕೀರ್ತಿಂ ದದಾತಿ ಚ ।
ಪಾಂಡುರಾ ಪಾಪದಹನಾ ಪೀತಾ ಪುತ್ರಫಲಪ್ರದಾ || ೭೬ ||

ನೀಲಾಪ್ರಯಚ್ಛತೇ ಲಕ್ಷ್ಮೀಂ ರಕ್ತಾ ರೋಗಪ್ರದಾಯಿಕಾ ।
ರೂಕ್ಷಾ ಉದ್ವೇಗಜನನೀ ವಕ್ರಾ ದಾರಿದ್ರ್ಯಭಾಗಿನೀ || ೭೭ ||

ಏಕಂ ಸುದರ್ಶನಂ ಜ್ಞೇಯಂ ಲಕ್ಷ್ಮೀನಾರಾಯಣಂ ದ್ವಯಂ ।
ತೃತೀಯಂ ಚಾಚ್ಯುತಂ ವಿದ್ಯಾತ್ ಚತುರ್ಥಂ ತು ಜನಾರ್ದನಂ || ೭೮ ||

ಪಂಚಮಂ ವಾಸುದೇವಂ ಚ ಷಷ್ಠಂ ಪ್ರದ್ಯುಮ್ನಮೇವ ಚ ।
ಸಕರ್ಷಣಂ ಸಪ್ತಮಂ ಚ ಹ್ಯಷ್ಟಮಂ ಪುರುಷೋತ್ತಮಂ || ೭೯ ||

---

೭೪. ಶಂಖ ಚಕ್ರಗಳಿಂದ ಕೂಡಿ ಸ್ವಲ್ಪ ಕೆಂಪಗಿರುವ ಸಾಲಗ್ರಾಮವು ಪದ್ಮನಾಭವು. ಅದನ್ನು ಪೂಜಿಸಿದರೆ ದರಿದ್ರನೂ ಕುಬೇರನಾಗುವನು.

೭೫. ಚಕ್ರಾಕಾರವಿದ್ದು ಹೊಂಬಣ್ಣವಾಗಿ ಒಳ್ಳೆಯ ಕಾಂತಿಯನ್ನು ಹೊಂದಿ ಅನೇಕವಾದ ರೇಖೆಗಳಿದ್ದು ಮೃದುವಾಗಿದ್ದರೆ ಅದು ಕೃಷ್ಣಮೂರ್ತಿಯು. ಯಾವಾಗಲೂ ಸಿದ್ಧಿಯನ್ನು ಕೊಡುತ್ತದೆ.

೭೬-೭೭. ಬೆಳ್ಳಗಿರುವುದು ಪಾಪವನ್ನು ಹಾಳುಮಾಡುತ್ತದೆ. ಹೊಂಬಣ್ಣವಾಗಿರುವುದು ಪುತ್ರರನ್ನು ಕೊಡುತ್ತದೆ. ನೀಲಿಯ ಬಣ್ಣದ್ದು ಸಂಪತ್ತನ್ನು ಕೊಡುತ್ತದೆ. ಕೆಂಪಗಿರುವುದು ರೋಗವನ್ನುಂಟುಮಾಡುತ್ತದೆ ಕಠಿಣವಾಗಿರುವುದು ಮನಸ್ಸಿಗೆ ತೊಂದರೆಯನ್ನು ಕೊಡುತ್ತದೆ. ವಕ್ರವಾಗಿದ್ದರೆ ದಾರಿದ್ರವನ್ನುಂಟುಮಾಡುತ್ತದೆ.

೭೮-೮೧. ಒಂದು ಚಕ್ರವಿದ್ದರೆ ಸುದರ್ಶನವು. ಎರಡು ಚಕ್ರವಿದ್ದರೆ ಲಕ್ಷ್ಮೀನಾರಾಯಣನು. ಮೂರು ಚಕ್ರವಿದ್ದರೆ ಅಚ್ಯುತನು. ನಾಲ್ಕು ಚಕ್ರವಿದ್ದರೆ ಜನಾರ್ದನನು. ಐದು ಚಕ್ರವಿದ್ದರೆ ವಾಸುದೇವನು. ಆರು ಚಕ್ರವಿದ್ದರೆ ಪ್ರದ್ಯುಮ್ನನು. ಏಳು ಚಕ್ರವಿದ್ದರೆ ಸಂಕರ್ಷಣನು. ಎಂಟು ಚಕ್ರವಿದ್ದರೆ

ನವಮಂ ನವಮುವ್ಯೂಹಂ ದಶಮಂ ತು ದಶಾತ್ಮಕಂ ।
ಏಕಾದಶಂ ಚಾನಿರುದ್ಧಂ ದ್ವಾದಶಂ ದ್ವಾದಶಾತ್ಮಕಂ ॥ ೮೦ ॥

ಅತ ಊರ್ಧ್ವಂ ತು ಚಕ್ರಾಣಿ ದೃಶ್ಯಂತೇಽನಂತಸಂಜ್ಞಿಕೇ ।
ಖಂಡಿತೇ ತ್ರುಟಿತೇ ಭಗ್ನೇ ಸಾಲಗ್ರಾಮೇ ನ ದೋಷಭಾಕ್ ॥ ೮೧ ॥

ಇಷ್ಟಾ ತು ಯಸ್ಯ ಯಾ ಮೂರ್ತಿಃ ಸ ತಾಂ ಯತ್ನೇನ ಪೂಜಯೇತ್ ।
ಸ್ಕಂಧೇ ಕೃತ್ವಾ ತು ಯೋಧ್ವಾನಂ ವಹತೇ ಶೈಲನಾಯಕಂ ॥ ೮೨ ॥

ತಸ್ಯ ವಶ್ಯಂ ಭವೇತ್ಸರ್ವಂ ತ್ರೈಲೋಕ್ಯಂ ಸಚರಾಚರಂ ।
ಸಾಲಗ್ರಾಮಶಿಲಾ ಯತ್ರ ತತ್ರ ಸನ್ನಿಹಿತೋ ಹರಿಃ ॥ ೮೩ ॥

ತತ್ರ ಸ್ನಾನಂ ಚ ದಾನಂ ಚ ವಾಣಾಣಸ್ಯಾಃ ಶತಾಧಿಕಂ ।
ಕುರುಕ್ಷೇತ್ರಂ ಪ್ರಯಾಗಂ ಚ ನೈಮಿಷಂ ಪುಷ್ಕರಂ ತಥಾ ॥ ೮೪ ॥

---

ಪುರುಷೋತ್ತಮನು. ಒಂಭತ್ತು ಚಕ್ರವಿದ್ದರೆ ನವವ್ಯೂಹವು. ಹತ್ತು ಚಕ್ರವಿದ್ದರೆ ದಶಾವತಾರವು. ಹನ್ನೊಂದು ಚಕ್ರವಿದ್ದರೆ ಅನಿರುದ್ಧನು. ಹನ್ನೆರಡು ಚಕ್ರವಿದ್ದರೆ ದ್ವಾದಶಾತ್ಮಕನು. ಇವುಗಳಿಗಿಂತ ಹೆಚ್ಚಾಗಿ ಚಕ್ರಗಳಿದ್ದರೆ ಅನಂತಮೂರ್ತಿಯು. ಸಾಲಗ್ರಾಮವು ಒಡೆದು ಭಾಗವಾಗಿದ್ದರೂ, ಭಿನ್ನವಾಗಿದ್ದರೂ, ಚಕ್ಕೆ ಎದ್ದು ಹೋಗಿದ್ದರೂ ಅದನ್ನು ಪೂಜೆ ಮಾಡಿದರೆ ದೋಷವಿಲ್ಲ.

೮೨. ಯಾವನಿಗೆ ಯಾವ ಮೂರ್ತಿಯು ಇಷ್ಟವೊ ಅವನು ಆ ಮೂರ್ತಿಯನ್ನು ಪ್ರಯತ್ನಪಟ್ಟು ತಂದು ಪೂಜಿಸಬೇಕು. ಸಾಲಗ್ರಾಮವನ್ನು ಹೆಗಲ ಮೇಲೆ ಹೊತ್ತುಕೊಂಡು ಯಾವನು ಹೋಗುವನೋ ಅವನಿಗೆ ಚರಾಚರವಾದ ಪ್ರಪಂಚವು ವಶವಾಗುತ್ತದೆ.

೮೩. ಸಾಲಗ್ರಾಮವು ಇರುವಲ್ಲಿ ಶ್ರೀ ಹರಿಯು ಇದ್ದೇ ಇರುವನು. ಅಲ್ಲಿ ಸ್ನಾನಮಾಡಿದರೂ ದಾನಮಾಡಿದರೂ ಕಾಶಿಯಲ್ಲಿ ಮಾಡಿದ ಸ್ನಾನದಾನಗಳಿಗಿಂತ ನೂರರಷ್ಟು ಹೆಚ್ಚಾಗುವುದು

೮೪. ಕುರುಕ್ಷೇತ್ರ ಪ್ರಯಾಗ ನೈಮಿಷ ಪುಷ್ಕರಗಳಲ್ಲಿ ಸ್ನಾನ ದಾನಮಾಡಿದುದಕ್ಕಿಂತಲೂ ಕೋಟಿಯಷ್ಟು ಫಲವು ಈ ಸಾಲಗ್ರಾಮದ ಬಳಿಯಲ್ಲಿ ಸ್ನಾನ ಮಾಡಿ ದಾನಮಾಡಿದರೆ ಬರುತ್ತದೆ.

ತತ್ರ ಕೋಟಿಗುಣಂ ಪುಣ್ಯಂ ವಾರಾಣಸ್ಯಾಂ ಮಹಾಫಲಂ ।
ಬ್ರಹ್ಮಹತ್ಯಾದಿಕಂ ಪಾಪಂ ಯತ್ಕಿಂಚಿತ್ಕುರುತೇ ನರಃ ॥ ೮೫ ॥

ತತ್ಸರ್ವಂ ನಿರ್ದಹತ್ಯಾಶು ಸಾಲಗ್ರಾಮಶಿಲಾರ್ಚನಂ ।
ಸಾಲಗ್ರಾಮೋದ್ಭವೋ ದೇವೋ ಯತ್ರ ದ್ವಾರವತೀ ಭವಃ ॥ ೮೬ ॥

ಉಭಯೋಸ್ಸಂಗಮೋ ಯತ್ರ ಮುಕ್ತಿಸ್ತತ್ರ ನ ಸಂಶಯಃ ।
ಬ್ರಹ್ಮಚಾರಿಗೃಹಸ್ಥೈಶ್ಚ ದಾನಪ್ರಸ್ಥೈಶ್ಚ ಭಿಕ್ಷುಭಿಃ ॥ ೮೭ ॥

ಭೋಕ್ತವ್ಯಂ ವಿಷ್ಣುನೈವೇದ್ಯಂ ನಾತ್ರ ಕಾರ್ಯಾ ವಿಚಾರಣಾ ।
ತತ್ಪೂಜನೇ ನ ಮಂತ್ರಾಶ್ಚ ನ ಜಪೋ ನ ಚ ಭಾವನಾ ॥ ೮೮ ॥

ನ ಸ್ತುತಿರ್ನಾಪಿ ವಾಚಾರಃ ಸಾಲಗ್ರಾಮಶಿಲಾರ್ಚನೇ ।
ಸಾಲಗ್ರಾಮಶಿಲಾಗ್ರೇ ತು ಕೃತ್ವಾ ಸ್ವಸ್ತಿಕಮಾದರಾತ್ ॥ ೮೯ ॥

---

೮೫. ವಾರಾಣಸಿಯಲ್ಲಿ ಈ ಸಾಲಗ್ರಾಮದ ಬಳಿಯಲ್ಲಿ ಸ್ನಾನಮಾಡಿದರೆ ಮಹಾಫಲವು ಬರುತ್ತದೆ. ಮನುಷ್ಯನು ಮಾಡಿದ ಬ್ರಹ್ಮಹತ್ಯಾದಿ ಪಾಪಗಳನ್ನೆಲ್ಲಿ ಈ ಸಾಲಗ್ರಾಮದ ಪೂಜೆಯಿಂದ ನಾಶಮಾಡಿಕೊಳ್ಳುತ್ತಾನೆ.

೮೬. ಸಾಲಗ್ರಾಮವೂ ದ್ವಾರಕೆಯ ಸಾಲಗ್ರಾಮವೂ ಎರಡೂ ಇರುವ ಜಾಗದಲ್ಲಿ ಮುಕ್ತಿಯೆಂಬುದು ಸಿದ್ಧವು. ಸಂಶಯವಿಲ್ಲ.

೮೭. ಬ್ರಹ್ಮಚಾರಿಯಾಗಲೀ ಗೃಹಸ್ಥನಾಗಲೀ ವಾನಪ್ರಸ್ಥ ಭಿಕ್ಷುಕರೇ ಆಗಲೀ ವಿಷ್ಣುವಿನ ನೈವೇದ್ಯವನ್ನು ತಿನ್ನಬಹುದು. ಈ ವಿಷಯದಲ್ಲಿ ಸಂಶಯ ಇರುವುದಿಲ್ಲ.

೮೮. ಸಾಲಗ್ರಾಮವನ್ನು ಪೂಜಿಸುವುದರಲ್ಲಿ ಮಂತ್ರ ಬೇಕಾಗಿರುವುದಿಲ್ಲ. ಜಪ ಬೇಕಿಲ್ಲ. ಭಾವನೆ ಬೇಕಿರುವುದಿಲ್ಲ. ಸ್ತುತಿಯಾಗಲಿ ಆಚಾರವಾಗಲಿ ಬೇಕಿಲ್ಲ. ಅದನ್ನು ಹೇಗೆ ಬೇಕಾದರೂ ಪೂಜಿಸಬಹುದು.

೮೯. ಸಾಲಗ್ರಾಮದ ಶಿಲೆಯ ಮುಂಭಾಗದಲ್ಲಿ ಸ್ವಸ್ತಿಕ ಮಂಡಲವನ್ನು ಬರೆದರೆ ಬಹುವಾದ ಪುಣ್ಯ ಬರುವುದು. ಅದರಲ್ಲಿಯೂ ಕಾರ್ತಿಕಮಾಸದಲ್ಲಿ ಬರೆದರೆ ಏಳು ಕುಲಗಳನ್ನು ಪವಿತ್ರವನ್ನಾಗಿ ಮಾಡುತ್ತದೆ.

ಕಾರ್ತಿಕೇ ತು ವಿಶೇಷಣ ಪುನಾತ್ಯಾಸಪ್ತಮಂ ಕುಲಂ ।
ಅಣುಮಾತ್ರಂ ತು ಯಃ ಕುರ್ಯಾನ್ಮಂಡಲಂ ಕೇಶವಾಗ್ರತಃ ॥ ೯೦ ॥

ಮೃದಾ ಧಾತುವಿಕಾರೈಶ್ಚ ಕಲ್ಪಕೋಟಿಂ ದಿವಂ ವಸೇತ್ ।
ಯಸ್ತು ಸಂವತ್ಸರಂ ಪೂರ್ಣಮಗ್ನಿಹೋತ್ರಮುಪಾಸತೇ ॥ ೯೧ ॥

ಕಾರ್ತಿಕೇ ಸ್ವಸ್ತಿಕಂ ಕೃತ್ವಾ ಸಮಮೇತನ್ನ ಸಂಶಯಃ ।
ಅಗಮ್ಯಾಗಮನೇ ಚೈವ ಹ್ಯಭಕ್ಷ್ಯಸ್ಯ ತು ಭಕ್ಷಣೇ ॥ ೯೨ ॥

ತತ್ಪಾಪಂ ನಾಶಮಾಯಾತಿ ಮಂಡಯಿತ್ವಾ ಹರೇರ್ಗೃಹಂ ।
ಮಂಡಲಂ ಕುರುತೇ ನಿತ್ಯಂ ಯಾ ನಾರೀ ಕೇಶವಾಗ್ರತಃ
ಸಪ್ತ ಜನ್ಮಾನಿ ವೈಧವ್ಯಂ ನ ಸಾಪ್ನೋತಿ ಕದಾಚನ ॥ ೯೩ ॥

ಇತಿ ಶ್ರೀ ಮಹಾಪುರಾಣೇ ಪಾದ್ಮೇ ಉತ್ತರಖಂಡೇ ಕಾರ್ತಿಕ ಮಾಹಾತ್ಮ್ಯೇ
ಶ್ರೀ ಕೃಷ್ಣ ಸತ್ಯಭಾಮಾ ಸಂವಾದೇ ಸಾಲಗ್ರಾಮ ಶಿಲಾ ಮಾಹಾತ್ಮ್ಯಂ
ನಾಮ ದ್ವಾವಿಂಶತ್ಯಧಿಕಶತತಮೋಽಧ್ಯಾಯಸ್ಸಮಾಪ್ತಃ

---

೯೦–೯೧. ಕೇಶವನ ಮುಂದೆ ಮಣ್ಣಿನಿಂದಾಗಲೀ ಬಣ್ಣಗಳಿಂದಾಗಲೀ ಸ್ವಲ್ಪವಾದರೂ ಹಸೆಗಳನ್ನು ಬರೆದರೆ ಕೋಟಿಕಲ್ಪಗಳವರೆಗೂ ಸ್ವರ್ಗದಲ್ಲಿ ಸುಖಿಸುತ್ತಾನೆ. ಯಾವನು ಒಂದು ವರ್ಷ ಪೂರ್ತಿಯಾಗಿ ಅಗ್ನಿಹೋತ್ರವನ್ನು ಮಾಡುತ್ತಾನೆಯೋ ಅವನ ಫಲವೂ ಕಾರ್ತಿಕಮಾಸದಲ್ಲಿ ಕೇಶವನ ಮುಂದೆ ಸ್ವಸ್ತಿಕಮಂಡಲವನ್ನು ಬರೆದ ಫಲವೂ ಸಮವು. ಸಂಶಯವಿಲ್ಲ.

೯೨–೯೩. ಯಾರನ್ನು ರಮಿಸಬಾರದೋ ಅಂಥವರಲ್ಲಿ ರಮಿಸಿದರೂ ತಿನ್ನಬಾರದುದನ್ನು ತಿಂದರೂ ಕೂಡ ಹರಿಯ ಮುಂದೆ ಅಲಂಕಾರ ಮಾಡಿದರೆ ಆ ಪಾಪಗಳೆಲ್ಲವೂ ನಾಶವಾಗುತ್ತವೆ. ಕೇಶವನ ಮುಂದೆ ಯಾವಾಕೆಯು ಅಲಂಕಾರಗಳನ್ನು ಬರೆಯುವಳೋ ಆಕೆಯು ಏಳು ಜನ್ಮಗಳವರೆಗೂ ವೈಧವ್ಯವನ್ನು ಹೊಂದುವುದಿಲ್ಲ.

ಇಂತು ಶ್ರೀ ಪದ್ಮಮಹಾಪುರಾಣದ ಉತ್ತರಖಂಡದ ಕಾರ್ತಿಕ ಮಾಹಾತ್ಮ್ಯೆಯ
ಶ್ರೀ ಕೃಷ್ಣ ಸತ್ಯಭಾಮೆಯರ ಸಂವಾದದಲ್ಲಿ ಸಾಲಗ್ರಾಮ ಶಿಲಾ ಮಹಿಮೆ
ಎಂಬ ನೂರ ಇಪ್ಪತ್ತೆರಡನೆಯ ಅಧ್ಯಾಯವು ಮುಗಿದುದು.



॥ ಶ್ರೀಃ ॥

-X-

# ಅಥ ಶ್ರೀ ಮಹಾಪುರಾಣೇ ಪಾದ್ಮೇ ಉತ್ತರಖಂಡೇ

## ॥ ತ್ರಯೋವಿಂಶತ್ಯಧಿಕಶತತಮೋಽಧ್ಯಾಯಃ ॥



॥ ಈಶ್ವರ ಉವಾಚ ॥

ಧಾತ್ರೀಚ್ಛಾಯಾಂ ಸಮಾಶ್ರಿತ್ಯ ಕುರ್ಯಾತ್ಪಿಂಡಂ ಕು ಯೋ ಮುನೇ ।
ಮುಕ್ತಿಂ ಪ್ರಯಾಂತಿ ಪಿತರಃ ಪ್ರಸಾದಾನ್ಮಾಧವಸ್ಯ ತು ॥ ೧ ॥

ಮೂರ್ಧ್ನಿ ಪಾಣೌ ಮುಖೇ ಚೈವ ದೇಹೇ ಚ ಮುನಿಸತ್ತಮ ।
ಧತ್ತೇ ಧಾತ್ರೀಫಲಂ ಯಸ್ತು ಸ ಮಹಾತ್ಮಾ ಸುದುರ್ಲಭಃ ॥ ೨ ॥

ಧಾತ್ರೀಫಲವಿಲಿಪ್ತಾಂಗೋ ಧಾತ್ರೀಫಲವಿಭೂಷಿತಃ ।
ಧಾತ್ರೀಫಲಕೃತಾಹಾರೋ ನರೋ ನಾರಾಯಣೋ ಭವೇತ್ । ॥ ೩ ॥

---

## ನೂರ ಇಪ್ಪತ್ತಮೂರನೆಯ ಅಧ್ಯಾಯವು



೧. ಈಶ್ವರನು ಹೇಳಿದನು–ನೆಲ್ಲಿಯ ಮರದ ನೆರಳಿನಲ್ಲಿ ಶ್ರಾದ್ಧವನ್ನು ಮಾಡಿ ಪಿಂಡ ಹಾಕಿದರೆ ಮಾಧವನ ಅನುಗ್ರಹದಿಂದ ಅವನ ಪಿತೃಗಳು ಮುಕ್ತಿಯನ್ನು ಹೊಂದುತ್ತಾರೆ.

೨. ತಲೆ, ಕೈಗಳು, ಮುಖ, ದೇಹ ಇವುಗಳಲ್ಲಿ ನೆಲ್ಲಿಯಕಾಯನ್ನು ಧರಿಸಿದರೆ ಮಹಾಫಲವು ಬರುತ್ತದೆ. ಅಂತಹ ಮಾಹಾತ್ಮನು ದುರ್ಲಭನು

೩. ನೆಲ್ಲಿಯ ಕಾಯನ್ನು ಮೈಗೆ ಬಳಿದುಕೊಂಡು ನೆಲ್ಲಿಯ ಕಾಯಿಂದ ಅಲಂಕಾರ ಮಾಡಿಕೊಂಡವನು, ನೆಲ್ಲಿಯಕಾಯನ್ನೇ ತಿನ್ನುವವನು ಸಾಕ್ಷಾತ್ ನಾರಾಯಣನೇ ಆಗಿರುವನು.

ಯಃ ಕಶ್ಚಿದ್ವೈಷ್ಣವೋ ಲೋಕೇ ಧತ್ತೇ ಧಾತ್ರೀಫಲಂ ಗುಹ ।
ಪ್ರಿಯೋ ಭವತಿ ದೇವಾನಾಂ ಮನುಷ್ಯಾಣಾಂ ಚ ಕಾ ಕಥಾ ॥ ೪ ॥

ನ ಜಹ್ಯಾತ್ತುಳಸೀಮಾಲಾಂ ಧಾತ್ರೀಮಾಲಾಂ ವಿಶೇಷತಃ ।
ಯಾವಲ್ಲುಂಠತಿ ಕಂಠಸ್ಥಾ ಧಾತ್ರೀಮಾಲಾ ನರಸ್ಯ ಹಿ ॥ ೫ ॥

ತಾವತ್ತಸ್ಯ ಶರೀರೇ ತು ಪ್ರೀತ್ಯಾ ಲುಂಠತಿ ಕೇಶವಃ ।
ಧಾತ್ರೀಫಲಂ ತು ತುಳಸೀ ಮೃತ್ತಿಕಾ ದ್ವಾರಕೋದ್ಭವಾ ॥ ೬ ॥

ಸಫಲಂ ಜೀವಿತಂ ತಸ್ಯ ತ್ರಿತಯಂ ಯಸ್ಯ ವೇಶ್ಮನಿ ।
ಯಾವದ್ದಿನಾನಿ ವಹತೇ ಧಾತ್ರೀಮಾಲಾಂ ಕಲೌ ನರಃ ॥ ೭ ॥

ತಾವದ್ಯುಗಸಹಸ್ರಾಣಿ ವೈಕುಂಠೇ ವಸತಿರ್ಭವೇತ್ ।
ಮಾಲಾಯುಗ್ಮಂ ವಹೇದ್ಯಸ್ತು ಧಾತ್ರೀ ತುಲಸಿಸಂಭವಂ ॥ ೮ ॥

ವಹತೇ ಕಂಠದೇಶೇ ತು ಕಲ್ಪಕೋಟಿಂ ದಿವಂ ವಸೇತ್ ।
ಸನ್ನಿಯಮ್ಯೇಂದ್ರಿಯಗ್ರಾಮಂ ಸಾಲಗ್ರಾಮಶಿಲಾರ್ಚನಂ ॥ ೯ ॥

---

೪. ಯಾವ ಮಹಾನುಭಾವನಾದ ವೈಷ್ಣವನು ನೆಲ್ಲಿಯ ಕಾಯನ್ನು ಧರಿಸಿರುತ್ತಾನೆಯೋ ಅವನು ಲೋಕದಲ್ಲಿ ದೇವತೆಗಳಿಗೆ ಪ್ರೀತಿಪಾತ್ರನಾಗುತ್ತಾನೆ. ಹೀಗಿರುವಲ್ಲಿ ಮನುಷ್ಯರಿಗೆ ಪ್ರೀತಿಪಾತ್ರನೆಂದು ಹೇಳತಕ್ಕದ್ದೇನಿದೆ !

೫–೧೧ ತುಳಸೀಮಾಲೆಯನ್ನೂ ನೆಲ್ಲಿಯ ಕಾಯಿಯನ್ನೂ ಬಿಡಬಾರದು. ನೆಲ್ಲಿಯ ಮಾಲೆಯು ಮನುಷ್ಯನ ದೇಹದಲ್ಲಿ ಎಲ್ಲಿಯವರೆಗೂ ಜೋಲಾಡುತ್ತದೋ ಅಲ್ಲಿಯವರೆಗೂ ಅವನ ಶರೀರದಲ್ಲಿ ಕೇಶವನು ಸ್ವೇಚ್ಛೆಯಾಗಿ ಹೊರಳಾಡುತ್ತಾನೆ. ನೆಲ್ಲಿಯಕಾಯಿ, ತುಳಸಿ, ದ್ವಾರಕೆಯ ಮೃತ್ತಿಕೆ ಇವು ಯಾವನ ಮನೆಯಲ್ಲಿ ಇರುತ್ತವೆಯೋ ಅವನ ಜನ್ಮವೂ ಜೀವಿತವೂ ಸಫಲವಾದುವು. ಈ ಕಲಿಯುಗದಲ್ಲಿ ನೆಲ್ಲಿಯಕಾಯನ್ನು ಯಾವನು ಎಷ್ಟು ದಿನಗಳವರೆಗೂ ಹಾಕಿಕೊಂಡಿರುವನೋ ಅವನು ಅಷ್ಟು ಸಾವಿರ ಯುಗಗಳವರೆಗೂ ವೈಕುಂಠದಲ್ಲಿ ವಾಸಿಸುತ್ತಾನೆ. ನೆಲ್ಲಿ ತುಳಸಿಗಳ ಮಾಲೆಯನ್ನು ಕತ್ತಿನಲ್ಲಿ ಧರಿಸಿಕೊಂಡಿರುವವನು ಕೋಟಿ ಕಲ್ಪಗಳ ವರೆಗೂ ಸ್ವರ್ಗದಲ್ಲಿ ವಾಸಿಸುವನು. ಇಂದ್ರಿಯಗಳನ್ನು ನಿಗ್ರಹಿಸಿಕೊಂಡು ಸಾಲಗ್ರಾಮ ಶಿಲೆಯನ್ನು ಭಕ್ತಿಯಿಂದ ಪೂಜಿಸಿದವನು ಪ್ರತಿಯೊಂದು ಹೂವಿಗೂ

ಯಃ ಕುರ್ಯಾನ್ಮಾನವೋ ಭಕ್ತ್ಯಾ ಪುಷ್ಪೇ ಪುಷ್ಪೇಽಶ್ವಮೇಧಜಂ ।
ಸುರಾಣಾಂ ಚ ಯಥಾ ವಿಷ್ಣುಃ ಪುಷ್ಪಾಣಾಂ ಮಾಲತೀ ತಥಾ ॥ ೧೦ ॥

ಮಾಲತ್ಯಾನುದಿನಂ ದೇವಂ ಯೋಽರ್ಚಯೇದ್ಗರುಡಧ್ವಜಂ ।
ಜನ್ಮದುಃಖಜರಾರಾಗೈರ್ಮುಕ್ತೋಽಸೌ ಮುಕ್ತಿಮಾಪ್ನುಯಾತ್ ॥ ೧೧ ॥

ಮಾಲತೀಮಾಲಯಾ ವಿಷ್ಣುಃ ಪೂಜಿತೋ ಯೇನ ಕಾರ್ತಿಕೇ ।
ಪಾಪಾಕ್ಷರಕ್ಷತಾಂ ಮಾಲಾಂ ಸ್ಫುಟಂ ಶೌರಿಃ ಪ್ರಮಾರ್ಜತಿ ॥ ೧೨ ॥

ಶ್ರೀಚಂದನಂ ಸಕರ್ಪೂರಮಗುರುಂ ಚ ಸಕುಂಕುಮಂ ।
ಕೇತಕೀದೀಪದಾನಂ ತು ಸರ್ವದಾ ಕೇಶವಪ್ರಿಯಂ ॥ ೧೩ ॥

ಕಾರ್ತಿಕೇ ಕೇತಕೀಪುಷ್ಪಂ ದತ್ತಂ ಯೇನ ಕಲೌ ಯುಗೇ ।
ದೀಪದಾನಂ ಮಹಾಸೇನ ಕುಲಾನಾಂ ತಾರಯೇಚ್ಛತಂ ॥ ೧೪ ॥

---

ಅಶ್ವಮೇಧ ಫಲವನ್ನು ಹೊಂದುವನು. ದೇವತೆಗಳೊಳಗೆ ವಿಷ್ಣುವು ಹೇಗೆ ಶ್ರೇಷ್ಠನೋ ಹಾಗೆ ಹೂವುಗಳೊಳಗೆ ಜಾಜಿಯು ಹೂವು ಶ್ರೇಷ್ಠವಾದುದು. ಆ ಮಾಲತಿಯ ಹೂವಿಂದ ಯಾವನು ಶ್ರೀ ವಿಷ್ಣುವನ್ನು ಪೂಜಿಸುವನೋ ಅವನಿಗೆ ಜನ್ಮ ದುಃಖ ಮುಪ್ಪು ರಾಗಾದಿಗಳು ಹೋಗುತ್ತವೆ. ಅಲ್ಲದೆ ಮುಕ್ತಿಯನ್ನೂ ಹೊಂದುತ್ತಾನೆ.

೧೨. ಜಾಜಿಯ ಮಾಲೆಯಿಂದ ಕಾರ್ತಿಕ ಮಾಸದಲ್ಲಿ ವಿಷ್ಣುವನ್ನು ಪೂಜಿಸಿದರೆ ವಿಷ್ಣುವು ಅವನ ಪಾಪಗಳ ಅಕ್ಷರವುಳ್ಳ ಮಾತುಗಳೆಲ್ಲವನ್ನೂ, ನಾಶಮಾಡುತ್ತಾನೆ.

೧೨. ಶ್ರೀಗಂಧ, ಪಚ್ಚಕರ್ಪೂರ, ಅಗರು, ಕುಂಕುಮಕೇಸರಿ, ತಾಳಹೂ ದೀಪದಾನ ಇವು ಯಾವಾಗಲೂ ಕೇಶವನಿಗೆ ಪ್ರೀತಿಕರಗಳಾದುವು.

೧೪. ಎಲೈ ಷಣ್ಮುಖನೆ! ಕಾರ್ತಿಕ ಮಾಸದಲ್ಲಿ ಯಾವನು ತಾಳೆಯ ಹೂವನ್ನು ದಾನ ಮಾಡುತ್ತಾನೆಯೋ ಅವನು ನೂರುವಂಶಗಳನ್ನು ಉದ್ಧಾರಮಾಡುತ್ತಾನೆ.

ಸರೋರುಹಾಣಿ ತುಳಸೀ ಮಾಲತೀ ಮುನಿಪುಷ್ಪಕಂ ।
ಕಾರ್ತಿಕೇ ತಾರಯನ್ತ್ಯೇವ ದೀಪದಾನಂ ತು ಪಂಚಮಂ । ॥ ೧೫ ॥

ಮಾಲತೀಮಾಲಯಾ ಯೇನ ಕಾರ್ತಿಕೇ ಪುಷ್ಪಮಂಡಪಂ ।
ಕೇಶವಸ್ಯ ಕೃತಂ ವತ್ಸ ವಸತಿರ್ದಿವಿ ತಸ್ಯ ಚ ॥ ೧೬ ॥

ಕೇತಕೀಪುಷ್ಪಕೇಣೈವ ಪೂಜಿತೋ ಗರುಡಧ್ವಜಃ ।
ಸಮಾಸ್ಸಹಸ್ರಂ ಸುಪ್ರೀತೋ ಜಾಯತೇ ಮಧುಸೂದನಃ ॥ ೧೭ ॥

ಅರ್ಚಯಿತ್ವಾ ಹೃಷೀಕೇಶಂ ಕುಸುಮೈಃ ಕೇತಕೀಭವೈಃ ।
ಪುಣ್ಯಂ ತದ್ಭವನಂ ಯಾತಿ ಕೇಶವಸ್ಯ ಶಿವಂ ಗುಹ ॥ ೧೮ ॥

ದಮನಕೇನಾಪಿ ದೇವೇಶಂ ಸಂಪ್ರಾಪ್ತೇ ಮಧುಸೂದನೇ ।
ಗೋಶತಸ್ಯ ಮುನಿಶ್ರೇಷ್ಠ ಹ್ಯರ್ಚನಾಲ್ಲಭತೇ ಫಲಂ ॥ ೧೯ ॥

---

೧೫. ಕಮಲ, ತುಳಸಿ, ಜಾಜಿ, ಅಗಸೇಹೂವು, ದೀಪ ಇವನ್ನು ದೇವರಿಗೆ ಕಾರ್ತಿಕ ಮಾಸದಲ್ಲಿ ಅರ್ಪಿಸಿದರೆ ಅವೆಲ್ಲವೂ ಈತನನ್ನು ಪಾಪದಿಂದ ಪಾರುಮಾಡುತ್ತವೆ.

೧೬. ಕಾರ್ತಿಕ ಮಾಸದಲ್ಲಿ ಯಾವನು ಜಾಜಿ ಹೂವಿನಿಂದ ವಿಷ್ಣುವಿಗೆ ಮಂಟಪವನ್ನು ಕಟ್ಟುತ್ತಾನೆಯೋ ಅವನು ಸ್ವರ್ಗಲೋಕದಲ್ಲಿ ಸುಖಿಸುತ್ತಾನೆ.

೧೭ ತಾಳೆಯ ಹೂವಿನಿಂದ ಪೂಜಿಸಿದರೆ ಆ ಗರುಡಧ್ವಜನಾದ ಸ್ವಾಮಿಯು ಸಾವಿರ ವರ್ಷಗಳವರೆಗೂ ಪ್ರೀತಿಯನ್ನು ಹೊಂದಿರುತ್ತಾನೆ.

೧೮. ತಾಳೆಯ ಹೂವಿನಿಂದ ಯಾವ ಮನೆಯಲ್ಲಿ ಶ್ರೀ ವಿಷ್ಣುವನ್ನು ಪೂಜಿಸುತ್ತಾನೆಯೋ ಆ ಮನೆಯು ಮಂಗಳಕರವೂ ಪುಣ್ಯವುಳ್ಳದ್ದೂ ಆಗುತ್ತದೆ.

೧೯. ಚೈತ್ರ ವೈಶಾಖಗಳಲ್ಲಿ ದವನದಿಂದ ಶ್ರೀ ವಿಷ್ಣುವನ್ನು ಪೂಜಿಸಿದರೆ ನೂರು ಗೋವುಗಳನ್ನು ದಾನಮಾಡಿದರೆ ಬರುವ ಫಲವು ಬರುತ್ತದೆ.

ಅಗಸ್ತಿಕುಸುಮೈರ್ದೇವಂ ಯೋಽರ್ಚಯೇತ್ತು ಜನಾರ್ದನಂ ।
ದರ್ಶನಾತ್ತಸ್ಯ ಭೋ ವಿಪ್ರ ನರಕಾಗ್ನಿಃ ಪ್ರಣಶ್ಯತಿ ॥ ೨೦ ॥

ನ ತತ್ಕರೋತಿ ವಿಪ್ರರ್ಷೇ ತಪಸಾ ತೋಷಿತೋ ಹರಿಃ ।
ಯತ್ಕರೋತಿ ಮಹಾಸೇನ ಮುನಿಪುಷ್ಪೈಃ ಅಲಂಕೃತಃ ॥ ೨೧ ॥

ವಿಹಾಯ ಸರ್ವಪುಷ್ಪಾಣಿ ಮುನಿಪುಷ್ಪೇಣ ಕೇಶವಂ ।
ಕಾರ್ತಿಕೇ ಯೋಽರ್ಚಯೇದ್ಭಕ್ತ್ಯಾ ವಾಜಿಮೇಧಫಲಂ ಲಭೇತ್ ॥ ೨೨ ॥

ಮುನಿಪುಷ್ಪಕೃತಾಂ ಮಾಲಾಂ ಯೋ ದಾಸ್ಯತಿ ಜನಾರ್ದನೇ ।
ದೇವೇಂದ್ರೋಽಪಿ ಮುನಿಶ್ರೇಷ್ಠ ಕುರುತೇ ತಸ್ಯ ಸಂಕಥಾಂ ॥ ೨೩ ॥

ಗವಾಮಯುತದಾನೇನ ಯತ್ಫಲಂ ಪ್ರಾಪ್ಯತೇ ಗುಹ ।
ಮುನಿಪುಷ್ಪೇಣ ಚೈಕೇನ ಕಾರ್ತಿಕೇ ಲಭತೇ ಫಲಂ ॥ ೨೪ ॥

---

೨೦. ಅಗಸೆಹೂವುಗಳಿಂದ ಜನಾರ್ದನನನ್ನು ಪೂಜಿಸಿದರೆ ಆ ಸ್ವಾಮಿಯ ದರ್ಶನದಿಂದಲೇ ನರಕವೆಂಬ ಅಗ್ನಿಯು ಆರಿಹೋಗುತ್ತದೆ.

೨೧. ಅಗಸೆಹೂವಿನ ಪೂಜೆಯಿಂದ ಸಂತೋಷಪಟ್ಟು ಅವನಿಗೆ ಒಳ್ಳೆಯದನ್ನು ಮಾಡುವಷ್ಟನ್ನು ತಪಸ್ಸುಮಾಡಿ ಪ್ರಸನ್ನನಾದರೂ ಆ ಸ್ವಾಮಿಯು ಮಾಡುವುದಿಲ್ಲ.

೨೨. ಕಾರ್ತಿಕ ಮಾಸದಲ್ಲಿ ಉಳಿದ ಹೂವುಗಳನ್ನು ಬಿಟ್ಟು ಅಗಸೆ ಹೂವೊಂದರಿಂದಲೇ ಭಕ್ತಿಯಿಂದ ಕೇಶವನನ್ನು ಪೂಜಿಸಬೇಕು. ಹಾಗೆ ಪೂಜಿಸಿದರೆ ಅಶ್ವಮೇಧದ ಫಲವು ಬರುತ್ತದೆ.

೧೩. ಅಗಸೆ ಹೂವಿನ ಮಾಲೆಯನ್ನು ಜನಾರ್ದನನಿಗೆ ಸಮರ್ಪಿಸಿದರೆ ಅವನನ್ನು ದೇವೇಂದ್ರನೂ ಹೊಗಳುತ್ತಾನೆ.

೨೪. ಸಾವಿರ ಗೋವುಗಳನ್ನು ದಾನಮಾಡಿದರೆ ಯಾವ ಫಲವು ಬರುತ್ತದೆಯೋ ಆ ಫಲವು ಒಂದು ಅಗಸೆ ಹೂವನ್ನು ಕಾರ್ತಿಕ ಮಾಸದಲ್ಲಿ ಪೂಜಿಸಿದರೆ ಬರುತ್ತದೆ.

ಕೌಸ್ತುಭೇನ ಯಥಾ ಪ್ರೀತೋ ಯಥಾ ಚ ವನಮಾಲಯಾ ।
ತುಳಸೀದಳೇನ ಸಂಪ್ರೀತಃ ಕಾರ್ತಿಕೇ ಚ ತಥಾ ಹರಿಃ ॥ ೨೫ ॥

॥ ಸೂತ ಉವಾಚ ॥

ಪ್ರಶ್ರಯಾವನತಂ ದೃಷ್ಟ್ವಾ ಕುಮಾರಂ ಭಕ್ತಿತತ್ಪರಂ ।
ಪುನಃ ಪ್ರೋವಾಚ ಭಗವಾನ್ ಮಹಾದೇವೋ ವೃಷಧ್ವಜಃ ॥ ೨೬ ॥

॥ ಮಹಾದೇವ ಉವಾಚ ॥

ಶೃಣು ದೀಪಸ್ಯ ಮಾಹಾತ್ಮ್ಯಂ ಕಾರ್ತಿಕೇ ಶಿಖಿವಾಹನ ।
ಪಿತರಶ್ಚೈವ ವಾಂಛಂತಿ ಸದಾ ಪಿತೃಗಣೈರ್ವೃತಾಃ ॥ ೨೭ ॥

ಭವಿಷ್ಯತಿ ಕುಲೇಸ್ಮಾಕಂ ಪಿತೃಭಕ್ತಸ್ಸುಪುತ್ರಕಃ ।
ಕಾರ್ತಿಕೇ-ದೀಪದಾನೇನ ಯಸ್ತೋಷಯತಿ ಕೇಶವಂ ॥ ೨೮ ॥

ಘೃತೇನ ದೀಪಕೋ ಯಸ್ಯ ತಿಲತೈಲೇನ ವಾ ಪುನಃ ।
ಜ್ವಲತೇ ಯಸ್ಯ ಸೇನಾನೀರಶ್ವಮೇಧೇನ ತಸ್ಯ ಕಿಂ ॥ ೨೯ ॥

---

೨೫. ಶ್ರೀಹರಿಯು ಕೌಸ್ತುಭ ರತ್ನದಿಂದಲೂ ವನಮಾಲೆಯಿಂದಲೂ ಸಂತೋಷಪಡುವಂತೆ ಕಾರ್ತಿಕ ಮಾಸದಲ್ಲಿ ಒಂದು ತುಳಸೀ ದಳವನ್ನು ಪೂಜೆಮಾಡುವುದರಿಂದ ಸಂತೋಷಗೊಳ್ಳುತ್ತಾನೆ.

೨೬. ಸೂತನು ಹೇಳಿದನು–ಕುಮಾರಸ್ವಾಮಿಯು ಭಕ್ತಿಯಿಂದ ನಮ್ರನಾಗಿರುವುದನ್ನು ನೋಡಿ ವೃಷಧ್ವಜನಾದ ಈಶ್ವರನು ಇಂತೆಂದನು.

೨೭-೨೮. ಮಹಾದೇವನು ಹೇಳಿದನು-ಎಲೈ ಕುಮಾರಸ್ವಾಮಿಯೇ! ಕಾರ್ತಿಕದಲ್ಲಿ ದೀಪದಾನದ ವಿಷಯುವನ್ನು ಕೇಳು. ಪಿತೃಗಳೂ ಕೂಡ ತಮ್ಮವರಿಂದ ಸೇರಿಕೊಂಡು ಕಾರ್ತಿಕದಲ್ಲಿ ದೀಪವನ್ನು ದಾನಮಾಡಿ ಕೇಶವನನ್ನು ಸಂತೋಷಪಡಿಸುವ ಸುಪುತ್ರನು ಯಾವನಾದರೂ ನಮ್ಮ ಕುಲದಲ್ಲಿ ಹುಟ್ಟುವನೆ! ಎಂದು ಅಪೇಕ್ಷಿಸುತ್ತಾರೆ.

೨೯. ತುಪ್ಪದಿಂದಾಗಲೀ ಎಳ್ಳೆಣ್ಣೆಯಿಂದಾಗಲೀ ದೀಪವನ್ನು ಕಾರ್ತಿಕ ಮಾಸದಲ್ಲಿ ಕೇಶವನ ಮುಂದೆ ಹಚ್ಚಿದರೆ ಅವನಿಗೆ ಅಶ್ವಮೇಧಯಾಗದಿಂದ ಪ್ರಯೋಜನವಿಲ್ಲ. ಆ ಪುಣ್ಯವು ಇದರಿಂದಲೇ ಬರುತ್ತದೆ.

ತೇನೇಷ್ಟಂ ಕ್ರತುಭಿಸ್ಸರ್ವೈಃ ಕೃತಂ ತೀರ್ಥಾವಗಾಹನಂ ।
ದೀಪದಾನಂ ಕೃತಂ ಯೇನ ಕಾರ್ತಿಕೇ ಕೇಶವಾಗ್ರತಃ ॥ ೩೦ ॥

ಕೃಷ್ಣಪಕ್ಷೇ ವಿಶೇಷೇಣ ಪುತ್ರ ಪಂಚ ದಿನಾನಿ ತು ।
ಪುಣ್ಯಾನಿ ತೇಷು ಯದ್ದತ್ತಮಕ್ಷಯಂ ಸಾರ್ವಕಾಮಿಕಂ ॥ ೩೧ ॥

ಏಕಾದಶ್ಯಾಂ ಪರೈರ್ದತ್ತಂ ದೀಪಂ ಪ್ರಜ್ವಾಲ್ಯ ಮೂಷಿಕಾ ।
ಮಾನುಷ್ಯಂ ದುರ್ಲಭಂ ಪ್ರಾಪ್ಯ ಪರಾಂ ಗತಿಮವಾಪ ಸಾ ॥ ೩೨ ॥

ಲುಬ್ಧಕೋಽಪಿ ಚತುರ್ದಶ್ಯಾಂ ಪೂಜಯಿತ್ವಾ ಮಹೇಶ್ವರಂ ।
ನಿರ್ಭಕ್ತಿಂ ಪರಮಾಂ ಪ್ರಾಪ್ಯ ವಿಷ್ಣುಲೋಕಂ ಜಗಾಮ ಸಃ ॥ ೩೩ ॥

ಶ್ವಪಾಕೀ ಸ್ವಾಶ್ರಯಾದ್ವೇಶ್ಯಾ ದೀಪಂ ಕೃತ್ವಾ ಪರೈಃ ಕೃತಂ ।
ಶುದ್ಧಾ ಲೀಲಾವತೀ ಭೂತ್ವಾ ಜಗಾಮ ಸ್ವರ್ಗಮವ್ಯಯಂ ॥ ೩೪ ॥

ಗೋಪಃ ಕಶ್ಚಿದಮಾವಾಸ್ಯಾಂ ಪೂಜಾಂ ದೃಷ್ಟ್ವಾ ತು ಶಾಂರ್ಗಿಣಃ ।
ಮುಹುರ್ಮುಹುರ್ಜಯೇತ್ಯುಕ್ತ್ವಾ ರಾಜರಾಜೇಶ್ವರೋಽಭವತ್ ॥ ೩೫ ॥

---

೩೦–೩೨. ಕಾರ್ತಿಕ ಮಾಸದಲ್ಲಿ ಕೇಶವನ ಮುಂದೆ ದೀಪವನ್ನು ಹಚ್ಚಿದರೆ ಎಲ್ಲ ಯಾಗಗಳನ್ನೂ ಮಾಡಿದಂತಾಗುತ್ತದೆ. ಎಲ್ಲಾ ತೀರ್ಥಗಳಲ್ಲಿಯೂ ಸ್ನಾನಮಾಡಿ ದಂತಾಗುತ್ತದೆ. ಕೃಷ್ಣಪಕ್ಷದಲ್ಲಿ ಅದರಲ್ಲಿಯೂ ಕೊನೆಯ ಐದು ದಿನಗಳಲ್ಲಿ ಹಚ್ಚಿದರೆ ಅದರ ಪುಣ್ಯವನ್ನು ಹೇಳಲು ಸಾಧ್ಯವಿಲ್ಲ. ಅಕ್ಷಯವಾಗಿ ಎಲ್ಲಾ ಫಲಗಳನ್ನೂ ಕೊಡುತ್ತದೆ. ಏಕಾದಶಿಯ ದಿವಸ ಮತ್ತೊಬ್ಬರು ಹಚ್ಚಿದ್ದ ದೀಪವನ್ನು ಇಲಿಯೂ ಕೂಡ ಹೆಚ್ಚಿಸಿ ಮನುಷ್ಯ ಶರೀರವನ್ನು ಹೊಂದಿ ಉತ್ತಮ ಗತಿಯನ್ನು ಹೊಂದಿತು.

೩೩. ಬೇಡನೂ ಕೂಡ ಚತುರ್ದಶಿಯ ದಿವಸ ಮಹೇಶ್ವರನನ್ನು ಪೂಜಿಸಿ ಉತ್ತಮವಾದ ಭಕ್ತಿಯನ್ನು ಹೊಂದಿ ವಿಷ್ಣು ಲೋಕವನ್ನು ಹೊಂದಿದನು.

೩೪. ಚಂಡಾಲ ವಂಶದಲ್ಲಿ ಹುಟ್ಟಿ ಸೂಳೆಯಾಗಿದ್ದವಳು ಮತ್ತೊಬ್ಬರು ದೇವರಿಗೆ ಹಚ್ಚಿದ್ದ ದೀಪವನ್ನು ಪ್ರಕಾಶಪಡಿಸಿ ಲೀಲಾವತಿಯೆಂದು ಶುದ್ಧಳಾಗಿ ಹುಟ್ಟಿ ನಾಶರಹಿತವಾದ ಸ್ವರ್ಗವನ್ನು ಹೊಂದಿದಳು.

೩೫. ಒಬ್ಬ ಗೋಪನು ಅಮಾವಾಸ್ಯೆಯ ದಿವಸ ವಿಷ್ಣುವಿನ ಪೂಜೆಯನ್ನು ನೋಡಿ ಆ ಸ್ವಾಮಿಯನ್ನು ಜಯ ಜಯ ಎಂದು ಹೊಗಳಿ ಕೊನೆಗೆ ಕುಬೇರನಾದನು.

ತಸ್ಮಾದ್ದೀಪಾಃ ಪ್ರದಾತವ್ಯಾ ರಾತ್ರಾವಸ್ತಮಿತೇ ರವೌ ।
ಗೃಹೇಷು ಸರ್ವಗೋಷ್ಠೇಷು ಚೈತ್ಯೇಷ್ವಾಯತನೇಷು ಚ ॥ ೩೬ ॥

ದೇವಾಲಯೇಷು ದೇವಾನಾಂ ಶ್ಮಶಾನೇಷು ಸರಿತ್ಸು ಚ ।
ಘೃತಾದಿನಾ ಶುಭಾರ್ಥಾಯ ಯಾವತ್ಪಂಚದಿನಾನಿ ಚ ॥ ೩೭ ॥

ಪಾಪಿನಃ ಪಿತರೋ ಯೇ ಚ ಲುಪ್ತಪಿಂಡೋದಕಕ್ರಿಯಾಃ ।
ತೇಽಪಿ ಯಾಂತಿ ಪರಾಂ ಮುಕ್ತಿಂ ದೀಪದಾನಸ್ಯ ಪುಣ್ಯತಃ ॥ ೩೮ ॥

ಚತುರ್ದಶ್ಯಾಮಮಾವಾಸ್ಯಾಂ ದತ್ತಂ ತೇ ಪ್ರಾಪ್ನುವಂತಿ ಹಿ ।
ಅತೋಽರ್ಥಂ ಕೌಮುದೀನಾಮಾಖ್ಯಾತಾ ತೇ ಶಿಖಿವಾಹನ ॥ ೩೯ ॥

ಇತಿ ಶ್ರೀ ಮಹಾಪುರಾಣೇ ಪಾದ್ಮೇ ಉತ್ತರಖಂಡೇ ಕಾರ್ತಿಕ ಮಾಹಾತ್ಮ್ಯೇ
ಶ್ರೀ ಕೃಷ್ಣ ಸತ್ಯಭಾಮಾ ಸಂವಾದೇ ಪುಷ್ಪದೀಪ ಧಾತ್ರೀ ಫಲ ವರ್ಣನಂ
ನಾಮ ತ್ರಯೋವಿಂಶತ್ಯಧಿಕಶತತಮೋಽಧ್ಯಾಯಸ್ಸಮಾಪ್ತಃ

---

೩೬–೩೭. ಮನೆಮನೆಗಳಲ್ಲಿಯೂ ದನಗಳ ಕೊಟ್ಟಿಗೆಗಳಲ್ಲಿಯೂ ಮಂಟಪಗಳಲ್ಲಿಯೂ, ದೇವಸ್ಥಾನಗಳಲ್ಲಿಯೂ, ಶ್ಮಶಾನಗಳಲ್ಲಿಯೂ, ನದಿಗಳಲ್ಲಿಯೂ ಶುಭವನ್ನು ಅಪೇಕ್ಷಿಸುವವನು ತುಪ್ಪವೇ ಮುಂತಾದುವುಗಳಿಂದ ಸೂರ್ಯಾಸ್ತಮಯವಾಗುತ್ತಲೂ ಕೊನೆಯ ಐದು ದಿನಗಳಲ್ಲಿಯಾದರೂ ರಾತ್ರಿಯಲ್ಲಿ ದೀಪವನ್ನು ಹಚ್ಚಬೇಕು.

೩೮. ಪಾಪಿಗಳಾಗಿ ನರಕದಲ್ಲಿ ಬಿದ್ದಿರುವ ಪಿಂಡೋದಕಗಳಿಲ್ಲದ ಪಿತೃಗಳೂ ಕೂಡ ಈ ದೀಪದಾನದ ಪುಣ್ಯದಿಂದ ಮುಕ್ತಿಯನ್ನು ಹೊಂದುತ್ತಾರೆ.

೩೯. ಚತುರ್ದಶಿ ಅಮಾವಾಸ್ಯೆಗಳಲ್ಲಿ ಹಚ್ಚಿದ ದೀಪದ ದಾನದ ಫಲವನ್ನು ಆ ಪಿತೃಗಳು ಹೊಂದುತ್ತಾರೆ. ಆದ್ದರಿಂದಲೇ ಆ ದಿನಗಳಿಗೆ ಕೌಮುದೀ ಎಂಬ ಹೆಸರು ಬಂದಿರುವುದು.

ಇಂತು ಶ್ರೀ ಪದ್ಮಮಹಾಪುರಾಣದ ಉತ್ತರಖಂಡದ ಕಾರ್ತಿಕ ಮಹಾತ್ಮೆಯ
ಶ್ರೀ ಕೃಷ್ಣ ಸತ್ಯಭಾಮೆಯರ ಸಂವಾದದಲ್ಲಿ ಪುಷ್ಪದೀಪ ಧಾತ್ರೀ ಫಲ ವರ್ಣನ
ಎಂಬ ನೂರ ಇಪ್ಪತ್ತಮೂರನೆಯ ಅಧ್ಯಾಯವು ಮುಗಿದುದು.



॥ ಶ್ರೀಃ ॥

–x–

# ಅಥ ಶ್ರೀ ಮಹಾಪುರಾಣೇ ಪಾದ್ಮೇ ಉತ್ತರಖಂಡೇ

## ॥ ಚತುರ್ವಿಂಶತ್ಯಧಿಕಶತತಮೋಽಧ್ಯಾಯಃ ॥



**॥ ಸತ್ಯಭಾಮೋವಾಚ ॥**

**ದೀಪಾವಳೀಫಲಂ ನಾಥ ವಿಶೇಷಾದ್ಬ್ರೂಹಿ ಮೇ ಪ್ರಭೋ ।**
**ಕಿಮರ್ಥಂ ಕ್ರಿಯತೇ ಸಾ ತು ತಸ್ಯಾಃ ಕಾ ದೇವತಾ ಭವೇತ್ ॥ ೧ ॥**

**ಕಿಂ ಚ ತತ್ರ ಭವೇದ್ದೇಯಂ ಕಿನ್ನ ದೇಯಂ ವದ ಪ್ರಭೋ ।**
**ಪ್ರಹರ್ಷಃ ಕೋತ್ರ ನಿರ್ದಿಷ್ಟಃ ಕ್ರೀಡಾ ಕಾತ್ರ ಪ್ರಕೀರ್ತಿತಾ ॥ ೨ ॥**

**॥ ಸೂತ ಉವಾಚ ॥**

**ಇತಿ ಸತ್ಯಾವಚಶ್ಶ್ರುತ್ವಾ ಭಗವಾನ್ಕಮಲೇಕ್ಷಣಃ ।**
**ಸಾಧೂಕ್ತ್ವಾ ಕಮಲಾಕಾನ್ತಃ ಪ್ರಹಸನ್ನಿದಮಬ್ರವೀತ್ ॥ ೩ ॥**

---

## ನೂರ ಇಪ್ಪತ್ತನಾಲ್ಕನೆಯ ಅಧ್ಯಾಯವು



೧. ಸತ್ಯಭಾಮೆಯು ಹೇಳಿದಳು-ಎಲೈ ಸ್ವಾಮಿಯೆ! ದೀಪಗಳನ್ನು ಹತ್ತಿಸುವ ಫಲವನ್ನು ವಿಸ್ತಾರವಾಗಿ ಹೇಳು. ಆ ದೀಪಗಳನ್ನು ಏತಕ್ಕೆ ಹತ್ತಿಸುತ್ತಾರೆ? ಅದಕ್ಕೆ ದೇವತೆ ಯಾವುದು?

೨. ಆ ಸಮಯದಲ್ಲಿ ಯಾವುದನ್ನು ದಾನಮಾಡಬೇಕು? ಯಾವುದನ್ನು ದಾನಮಾಡಬಾರದು? ಆವಾಗಲಿರುವ ಸಂತೋಷವು ಯಾವ ಬಗೆ ಯಾಮುಮ? ಆವಾಗ ಆಡುವ ಆಟವಾವುದು?

೩. ಸೂತನು ಹೇಳಿದನು–ಕಮಲೇಕ್ಷಣನೂ, ಕಮಲಾಕಾಂತನೂ ಆದ ಸ್ವಾಮಿಯು ಸತ್ಯಭಾಮೆಯು ಈ ಮಾತನ್ನು ಕೇಳಿ ಒಳ್ಳೆಯದೆಂದೆನ್ನುತ್ತಾ ನಗುತ್ತಾ ಇಂತೆಂದನು.

॥ ಶ್ರೀಕೃಷ್ಣ ಉವಾಚ ॥

ಕಾರ್ತಿಕಸ್ಯಾಸಿತೇ ಪಕ್ಷೇ ತ್ರಯೋದಶ್ಯಾಂ ತು ಭಾಮಿನಿ ।
ಯಮದೀಪಂ ಬಹಿರ್ದದ್ಯಾದಪಮೃತ್ಯುರ್ವಿನಶ್ಯತಿ ॥ ೪ ॥

ಮೃತ್ಯುನಾ ಪಾಶಹಸ್ತೇನ ಕಾಲೇನ ಭಾರ್ಯಯಾ ಸಹ ।
ತ್ರಯೋದಶ್ಯಾಂ ದೀಪದಾನಾತ್ ಸೂರ್ಯಜಃ ಪ್ರೀಯತಾಮಿತಿ ॥ ೫ ॥

ಕಾರ್ತಿಕೇ ಕೃಷ್ಣಪಕ್ಷೇ ತು ಚತುರ್ದಶ್ಯಾಂ ವಿಧೂದಯೇ ।
ಅವಶ್ಯಮೇವ ಕರ್ತವ್ಯಂ ಸ್ನಾನಂ ನರಕಭೀರುಭಿಃ ॥ ೬ ॥

ಪೂರ್ವವಿದ್ಧಚತುರ್ದಶ್ಯಾಂ ಕಾರ್ತಿಕಸ್ಯ ಸಿತೇತರೇ ।
ಪಕ್ಷೇ ಪ್ರತ್ಯೂಷಸಮಯೇ ಸ್ನಾನಂ ಕುರ್ಯಾದತಂದ್ರಿತಃ ॥ ೭ ॥

ಅರುಣೋದಯತೋಽನ್ಯತ್ರ ರಿಕ್ತಾಯಾಂ ಸ್ನಾಪಿತೋ ನರಃ ।
ತಸ್ಯಾಬ್ದಿಕಭವೋ ಧರ್ಮೋ ನಶ್ಯತೇ ನಾತ್ರ ಸಂಶಯಃ ॥ ೮ ॥

---

೪. ಶ್ರೀ ಕೃಷ್ಣನು ಹೇಳಿದನು—ಎಲೈ ಸತ್ಯಭಾಮೆಯೆ! ಕೃಷ್ಣಪಕ್ಷದ ತ್ರಯೋದಶಿಯ ದಿವಸ ಹೊರಗಡೆ ದೀಪವನ್ನು ಹತ್ತಿಸಬೇಕು. ಇದಕ್ಕೆ ಯಮದೀಪವೆಂದು ಹೆಸರು. ಇದರಿಂದ ಅಪಮೃತ್ಯುವು ಹೋಗುತ್ತದೆ.

೫. ಆ ದೀಪವನ್ನು ಹತ್ತಿಸಿ ಪಾಶವನ್ನು ಕೈಯಲ್ಲಿ ಹಿಡಿದಿರುವ ಮೃತ್ಯುವೂ ಅವನ ಹೆಂಡತಿಯೂ ನಾನು ಈ ತ್ರಯೋದಶಿಯ ದಿವಸ ದೀಪವನ್ನು ಹತ್ತಿಸಿ ದುದರಿಂದ ಸಂತೋಷಪಡಲಿ. ಎಂದು ಹೇಳಬೇಕು.

೬. ಕಾರ್ತಿಕ ಮಾಸದ ಕೃಷ್ಣಪಕ್ಷದ ಚತುರ್ದಶಿಯ ದಿವಸ ಚಂದ್ರೋದಯದಲ್ಲಿ ಸ್ನಾನವನ್ನು ಮಾಡಿಯೇ ಮಾಡಬೇಕು. ಇದರಿಂದ ನರಕವು ತಪ್ಪುತ್ತದೆ.

೭ ತ್ರಯೋದಶಿಯಿಂದ ಕೂಡಿದ ಚತುರ್ದಶಿಯಿರುವ ಕಾರ್ತಿಕ ಕೃಷ್ಣ ಪಕ್ಷದಲ್ಲಿ ಬೆಳಗಿನ ಜಾವದಲ್ಲಿ ಆಲಸ್ಯ ಮಾಡದೆ ಸ್ನಾನಮಾಡಬೇಕು.

೮ ಹಾಗಿಲ್ಲದೆ ಅರುಣೋದಯವಾಗಿದ್ದು ಆ ತಿಥಿಯೂ ಇಲ್ಲದಿದ್ದಾಗ ಸ್ನಾನಮಾಡಿದ ಮನುಷ್ಯನು ತನ್ನ ಆ ವರ್ಷದ ಧರ್ಮವನ್ನೆಲ್ಲಾ ಕಳೆದು ಕೊಳ್ಳುತ್ತಾನೆ. ಸಂಶಯವಿಲ್ಲ.

ತೈಲೇ ಲಕ್ಷ್ಮೀರ್ಜಲೇ ಗಂಗಾ ದೀಪಾವಳ್ಯಾಂ ಚತುರ್ದಶೀಂ ।
ಪ್ರಾತಸ್ಸ್ನಾನಂ ಹಿ ಯಃ ಕುರ್ಯಾದ್ಯಮಲೋಕಂ ನ ಪಶ್ಯತಿ ॥ ೯ ॥

ಅಪಾಮಾರ್ಗಸ್ತಥಾ ತುಂಬೀ ಪ್ರಪುನ್ನಾಟಂ ಚ ಕಟ್ಫಲಂ ।
ಭ್ರಾಮಯೇತ್ ಸ್ನಾನಮಧ್ಯೇ ತು ನರಕಸ್ಯ ಕ್ಷಯಾಯ ವೈ ॥ ೧೦ ॥

ಸೀತಾಲೋಷ್ಟಸಮಾಯುಕ್ತಃ ಸಕಂಟಕದಳಾನ್ವಿತಃ ।
ಹರ ಪಾಪಮಪಾಮಾರ್ಗ ಭ್ರಾಮ್ಯಮಾಣಃ ಪುನಃ ಪುನಃ ॥ ೧೧ ॥

ಅಪಾಮಾರ್ಗಂ ಪ್ರಪುನ್ನಾಟಂ ಭ್ರಾಮಯೇಚ್ಛಿರಸೋಪರಿ ।
ತತಶ್ಚ ತರ್ಪಣಂ ಕಾರ್ಯಂ ಯಮರಾಜಸ್ಯ ನಾಮಭಿಃ ॥ ೧೨ ॥

---

೯. ಎಣ್ಣೆಯಲ್ಲಿ ಲಕ್ಷ್ಮಿಯೂ ನೀರಿನಲ್ಲಿ ಗಂಗೆಯೂ ಆ ದೀಪಾವಳಿಯ ಚತುರ್ದಶಿಯ ದಿವಸ ವಾಸಮಾಡುತ್ತಾರೆ. ಆಗ ಸ್ನಾನ ಮಾಡಿದವನು ಯಮಲೋಕವನ್ನು ನೋಡುವುದೇ ಇಲ್ಲ.

೧೦. ಸ್ನಾನ ಮಾಡುವಾಗ ಮಧ್ಯದಲ್ಲಿ ಉತ್ತರಣೆ ಕಡ್ಡಿ ಸೋರೆಬಳ್ಳಿ ಕಿರುಶಿವನೇಗಿಡ ತಗಚೆ ಗಿಡಗಳನ್ನು ತಲೆಯ ಸುತ್ತಲೂ ತಿರುಗಿಸಿ ಎಸೆಯಬೇಕು. ಹೀಗೆ ಮಾಡಿದರೆ ನರಕದ ಬಾಧೆಯು ತಪ್ಪುತ್ತದೆ.

೧೧. ನೇಗಿಲಿನ ತುದಿಯಲ್ಲಿರುವ ಒಂದು ಚೂರು ಹೆಂಟೆಯನ್ನು ತೆಗೆದು ಕೊಂಡು ಮುಳ್ಳಿರುವ ಒಂದು ಚೂರು ಕಡ್ಡಿಯನ್ನು ಯಾವುದನ್ನಾದರೂ ಮುಳ್ಳೂ ಎಲೆಯೂ ಇರುವಂತೆ ತೆಗೆದುಕೊಂಡು ಅವೆರಡನ್ನೂ ಈ ಉತ್ತರಣೆಯ ಕಡ್ಡಿಯ ಜೊತೆಗೆ ಸೇರಿಸಿಕೊಂಡು ಎಲೈ ಉತ್ತರಣೆಯೆ! ನನ್ನ ತಲೆಯ ಸುತ್ತಲೂ ತಿರುಗಿಸುತ್ತೇನೆ. ನನ್ನ ಪಾಪವನ್ನು ನಾಶಮಾಡು. ಎಂದೆನ್ನುತ್ತಾ ಅನೇಕ ಬಾರಿ ತಲೆಯ ಸುತ್ತಲೂ ತಿರುಗಿಸಬೇಕು.

೧೨. ಈ ರೀತಿಯಾಗಿ ಉತ್ತರಣೆಯನ್ನಾಗಲೀ ತಗಚೆಯನ್ನಾಗಲೀ ತಲೆಯ ಸುತ್ತಲೂ ತಿರುಗಿಸಬೇಕು. ಆಮೇಲೆ ಯಮನ ಹೆಸರುಗಳನ್ನು ಹೇಳಿಕೊಂಡು ಅವನಿಗೆ ತರ್ಪಣಗಳನ್ನು ಕೊಡಬೇಕು.

ಯಮಾಯ ಧರ್ಮರಾಜಾಯ ಮೃತ್ಯವೇ ಚಾಂತಕಾಯ ಚ ।
ವೈವಸ್ವತಾಯ ಕಾಲಾಯ ಸರ್ವಭೂತಕ್ಷಯಾಯ ಚ ॥ ೧೩ ॥

ಔದುಂಬರಾಯ ದಧ್ನಾಯ ನೀಲಾಯ ಪರಮೇಷ್ಠಿನೇ ।
ವೃಕೋದರಾಯ ಚಿತ್ರಾಯ ಚಿತ್ರಗುಪ್ತಾಯ ವೈ ನಮಃ ॥ ೧೪ ॥

ನರಕಾಯ ಪ್ರದಾತವ್ಯೋ ದೀಪಸ್ಸಂಪೂಜ್ಯ ದೇವತಾಃ ।
ತತಃ ಪ್ರದೋಷಸಮಯೇ ದೀಪಾನ್ದದ್ಯಾನ್ಮನೋಹರಾನ್ ॥ ೧೫ ॥

ಬ್ರಹ್ಮವಿಷ್ಣುಶಿವಾದೀನಾಂ ಭವನೇಷು ವಿಶೇಷತಃ ।
ಕೂಟಾಗಾರೇಷು ಚೈತ್ಯೇಷು ಸಭಾಸು ಚ ನದೀಷು ಚ ॥ ೧೬ ॥

ಪ್ರಾಕಾರೋದ್ಯಾನವಾಪೀಷು ಪ್ರತೋಳೀ ನಿಷ್ಕುಟೇಷು ಚ ।
ಮಂದುರಾಸು ವಿವಿಕ್ತಾಸು ಹಸ್ತಿಶಾಲಾಸು ಚೈವ ಹಿ ॥ ೧೭ ॥

---

೧೩–೧೪. ಯಮನಿಗೆ, ಧರ್ಮರಾಜನಿಗೆ, ಮೃತ್ಯುವಿಗೆ, ಅಂತಕನಿಗೆ, ವೈವಸ್ವತನಿಗೆ, ಕಾಲನಿಗೆ ಸರ್ವಭೂತಕ್ಷಯನಿಗೆ, ಔದುಂಬರನಿಗೆ, ದಧ್ನನಿಗೆ, ನೀಲನಿಗೆ, ಪರಮೇಷ್ಠಿಗೆ, ವೃಕೋದರನಿಗೆ, ಚಿತ್ರನಿಗೆ, ಚಿತ್ರಗುಪ್ತನಿಗೆ, ನಮಸ್ಕಾರವು. ಅವರಿಗೆ ತರ್ಪಣ ಕೊಡುತ್ತೇನೆಂದು ಈ ಹೆಸರುಗಳನ್ನು ಹೇಳುತ್ತಾ ಕೊಡಬೇಕು.

೧೫. ನರಕನಿಗೂ ಒಂದು ದೀಪವನ್ನು ಹತ್ತಿಸಬೇಕು. ಆಗ ದೇವತೆಗಳನ್ನು ಪೂಜಿಸಬೇಕು. ಅನಂತರ ಸಾಯಂಕಾಲದ ಪ್ರದೋಷ ಸಮಯದಲ್ಲಿ ಬಗೆ ಬಗೆಯಾದ ಅನೇಕ ದೀಪಗಳನ್ನು ಹತ್ತಿಸಬೇಕು.

೧೬–೧೭. ಬ್ರಹ್ಮ, ವಿಷ್ಣು, ಶಿವರ ದೇವಸ್ಥಾನಗಳಲ್ಲಿಯೂ, ಮನೆಗಳ ಮಹಡಿಮೇಲೆಯೂ, ಮಂಟಪಗಳಲ್ಲಿಯೂ, ಸಭೆಗಳಲ್ಲಿಯೂ, (ಅಂಗಳದಲ್ಲಿಯೂ) ನದಿಗಳಲ್ಲಿಯೂ, ಮನೆಯ ಸುತ್ತಲೂ, ಇರುವ ಆವರಣ ಗೋಡೆಗಳ ಮೇಲೂ, ಉದ್ಯಾನಗಳಲ್ಲೂ, ಬಾವಿಗಳ ಪಕ್ಕದಲ್ಲಿಯೂ, ಮಾರ್ಗಗಳಲ್ಲಿಯೂ, ಹೊದರುಗಳಲ್ಲಿಯೂ, ಕುದುರೆಗಳ ಲಾಯದಲ್ಲಿಯೂ, ಆನೆಗಳ ಶಾಲೆಗಳಲ್ಲಿಯೂ, ಎಲ್ಲಾ ಕಡೆಗಳಲ್ಲಿಯೂ ದೀಪವನ್ನು ಹತ್ತಿಸಬೇಕು.

ಏವಂ ಪ್ರಭಾತಸಮಯೇ ಹ್ಯಮಾವಾಸ್ಯಾಂ ತು ಭಾಮಿನಿ ।
ಸ್ನಾತ್ವಾ ದೇವಾನ್ ಪಿತೄನ್ ಭಕ್ತ್ಯಾ ಸಂಪೂಜ್ಯಾಥ ಪ್ರಣಮ್ಯ ಚ || ೧೮ ||

ಕೃತ್ವಾ ತು ಪಾರ್ವಣಂ ಶ್ರಾದ್ಧಂ ದಧಿಕ್ಷೀರ ಘೃತಾದಿಭಿಃ ।
ಭೋಜ್ಯೈರ್ನಾನಾವಿಧೈರ್ವಿಪ್ರಾನ್ ಭೋಜಯಿತ್ವಾ ಕ್ಷಮಾಪಯೇತ್

ತತೋಽಪರಾಹ್ಣಸಮಯೇ ತೋಷಯೇನ್ನಾಗರಾನ್ ಪ್ರಿಯೇ ।
ತೇಷಾಂ ಗೋಷ್ಠೀಶ್ಚ ಮಾನಂ ಹಿ ಕೃತ್ವಾ ಸಂಭಾಷಣಂ ಪ್ರಿಯೇ || ೨೦ ||

ಪಿತೄಣಾಂ ವತ್ಸರಂ ಯಾವತ್ಪ್ರೀತಿಮುತ್ಪಾದ್ಯತೇ ದಿವಿ ।
ಅಪ್ರಬುದ್ಧೇ ಹರೌ ಪೂರ್ವಂ ಸ್ತ್ರೀಭಿರ್ಲಕ್ಷ್ಮೀಂ ಪ್ರಬೋಧಯೇತ್ || ೨೧ ||

ಪ್ರಬೋಧಸಮಯೇ ಲಕ್ಷ್ಮೀಂ ಬೋಧಯಿತ್ವಾರ್ಚಯೇತ್ತು ಯಃ ।
ಪುಮಾನ್ಸ್ತ್ರೀ ವತ್ಸರಂ ಯಾವಲ್ಲಕ್ಷ್ಮೀಸ್ತಂ ನೈವ ಮುಂಚತಿ || ೨೨ ||

---

೧೮–೧೯. ಹೀಗೆ ಮಾಡಿ ಬೆಳಗಾದ ಮೇಲೆ ಅಮಾವಾಸ್ಯೆಯ ದಿನ ಸ್ನಾನ ಮಾಡಿ ದೇವತೆಗಳನ್ನೂ ಪಿತೃಗಳನ್ನೂ ಭಕ್ತಿಯಿಂದ ಪೂಜಿಸಿ ನಮಸ್ಕರಿಸಿ ಆದಿನ ಬ್ರಾಹ್ಮಣರಿಗೆ ಹೇಳಿ ಪಾರ್ವಣ ಶಾದ್ಧವನ್ನು ಮಾಡಿ ಹಾಲು ಮೊಸರು ತುಪ್ಪಗಳಿಂದಲೂ ಬಗೆಬಗೆಯಾದ ಆಹಾರಗಳಿಂದಲೂ ಅವರನ್ನು ತೃಪ್ತಿಪಡಿಸಿ ಕ್ಷಮಾಪಣೆಯನ್ನು ಕೇಳಿಕೊಳ್ಳಬೇಕು.

೨೦. ಅನಂತರ ಮಧ್ಯಾಹ್ನದ ಮೇಲೆ ಊರಿನ ಜನರನ್ನು ಶಕ್ತಿಯಿದ್ದರೆ ತಿಂಡಿ ತೀರ್ಥಗಳಿಂದಲೂ ಇಲ್ಲದಿದ್ದರೆ ಮಾತುಗಳಿಂದಲೂ ಸಂತೋಷಪಡಿಸಬೇಕು. ಅವರನ್ನು ಸಭೆ ಸೇರಿಸಿ ಗೌರವಿಸಿ ಮಾತನಾಡಿಸಬೇಕು.

೨೧. ಹೀಗೆ ಮಾಡಿದರೆ ಪಿತೃಗಳಿಗೆ ವರ್ಷ ಪರ್ಯಂತವೂ ಸಂತೋಷವಾಗುತ್ತದೆ. ಇನ್ನೂ ಹರಿಯು ಮಲಗಿರುವಾಗಲೇ ಹೆಂಗಸರು ಲಕ್ಷ್ಮಿಯನ್ನು ಎಬ್ಬಿಸಬೇಕು

೨೨. ಲಕ್ಷ್ಮಿಯು ಏಳುವ ಸಮಯದಲ್ಲಿ ಆಕೆಯನ್ನು ಎಬ್ಬಿಸಿ ಪೂಜಿಸಬೇಕು. ಹಾಗೆ ಮಾಡಿದ ಮನುಷ್ಯನನ್ನು ಲಕ್ಷ್ಮಿಯು ಆ ವರ್ಷ ಪೂರ್ತಿಯಾಗುವವರೆಗೂ ಬಿಡುವುದಿಲ್ಲ.

ಅಭಯಂ ಪ್ರಾಪ್ಯ ವಿಪ್ರೇಭ್ಯೋ ವಿಷ್ಣುಭೀತಾಸ್ಸುರದ್ವಿಷಃ ।
ಸುಪ್ತಂ ಕ್ಷೀರೋದಧೌ ಜ್ಞಾತ್ವಾ ಲಕ್ಷ್ಮೀಸದ್ಮಾಶ್ರಿತಾಸ್ತಥಾ ॥ ೨೩ ॥

ತ್ವಂ ಜ್ಯೋತಿಃ ಶ್ರೀ ರವಿಶ್ಚಂದ್ರೋ ವಿದ್ಯುತ್ಸೌವರ್ಣತಾರಕಾ ।
ಸರ್ವೇಷಾಂ ಜ್ಯೋತಿಷಾಂ ಜ್ಯೋತಿರ್ದೀಪಜ್ಯೋತಿಸ್ಸ್ಥಿತಾ ತಥಾ ॥ ೨೪ ॥

ಯಾ ಲಕ್ಷ್ಮೀರ್ದಿವಸೇ ಪುಣ್ಯೇ ದೀಪಾವಳ್ಯಾಂ ಚ ಭೂತಳೇ ।
ಗವಾಂ ಗೊಷ್ಠೇ ತು ಕಾರ್ತಿಕ್ಯಾಂ ಸಾ ಲಕ್ಷ್ಮೀರ್ವರದಾ ಮಮ ॥ ೨೫ ॥

ಶಂಕರಶ್ಚ ಭವಾನೀ ಚ ಕ್ರೀಡಯಾ ದ್ಯೂತಮಾಸ್ಥಿತೇ ।
ಭವಾನ್ಯಾಭ್ಯರ್ಚಿತಾ ಲಕ್ಷ್ಮೀರ್ಧೇನುರೂಪೇಣ ಸಂಸ್ಥಿತಾ ॥ ೨೬ ॥

ಗೌರ್ಯಾ ಜಿತ್ವಾ ಪುರಾ ಶಂಭುಃ ನಗ್ನೋ ದ್ಯೂತೇ ವಿಸರ್ಜಿತಃ ।
ಅತೋಽರ್ಥಂ ಶಂಕರೋ ದುಃಖೀ ಗೌರೀ ನಿತ್ಯಂ ಸುಖಾನ್ವಿತಾ ॥ ೨೭ ॥

---

೨೩. ವಿಷ್ಣುವಿನಿಂದ ಹೆದರಿದ ರಾಕ್ಷಸರು ಬ್ರಾಹ್ಮಣರಿಂದ ಅಭಯವನ್ನು ಹೊಂದಿ ವಿಷ್ಣುವು ಕ್ಷೀರಸಮುದ್ರದಲ್ಲಿ ಮಲಗಿರುವುದನ್ನು ತಿಳಿದು ಲಕ್ಷ್ಮಿಯ ಮನೆಯನ್ನು ಹೊಂದಿರುತ್ತಾರೆ.

೨೪. ಎಲೈ ಲಕ್ಷ್ಮಿಯೆ! ನೀನೇ ಜ್ಯೋತಿಸ್ಸು. ನೀನೇ ಶ್ರೀಯು. ನೀನೇ ಸೂರ್ಯನು. ನೀನೇ ಚಂದ್ರನು. ನೀನೇ ಮಿಂಚು. ನೀನೇ ಬೆಳಗುವ ನಕ್ಷತ್ರವು. ನೀನು ಜ್ಯೋತಿಸ್ಸಿಗೆಲ್ಲಾ ಜ್ಯೋತಿಸ್ಸಿನ ರೂಪಳು. ಉತ್ತಮವಾದ ದೀಪದ ಜೋತಿಯಲ್ಲಿಯೇ ನೀನಿದ್ದೀಯೆ.

೨೫. ಪುಣ್ಯತಮವಾದ ಹಗಲಿನಲ್ಲಿ ಯಾವ ಲಕ್ಷ್ಮಿಯು ಇರುವಳೋ ದೀಪಗಳ ಸಾಲಿನಲ್ಲಿ ಯಾವ ಲಕ್ಷ್ಮಿಯು ಇರುವಳೋ ಗೋವಿನ ದೊಡ್ಡಿಗಳಲ್ಲಿಯೂ ಕಾರ್ತಿಕದಲ್ಲಿಯೂ ಯಾವ ಲಕ್ಷ್ಮಿಯು ಇರುವಳೋ ಆ ಲಕ್ಷ್ಮಿಯು ನನಗೆ ವರವನ್ನು ಕೊಡಲಿ.

೨೬–೨೭. ಪೂರ್ವದಲ್ಲಿ ಶಂಕರನೂ ಗೌರಿಯೂ ಜೂಜಾಡುತ್ತಿದ್ದರು. ಆಗ ಗೌರಿಯು ಲಕ್ಷ್ಮಿಯನ್ನು ಪೂಜಿಸಲು ಆ ಲಕ್ಷ್ಮಿಯು ಹಸುವಾಗಿ ಅಲ್ಲಿದ್ದಳು ಇದರಿಂದ ಗೌರಿಯು ಶಂಕರನನ್ನು ಸೋಲಿಸಿದಳು. ಸೋತ ಶಂಕರನು ಇದ್ದುದೆಲ್ಲವನ್ನೂ ಗೌರಿಗೆ ಕೊಟ್ಟುಬಿಟ್ಟನು. ಗೌರಿಯು ಶಂಕರನನ್ನು ಬೆತ್ತಲೆಯಾಗಿ ಓಡಿಸಿದಳು. ಆದುದರಿಂದಲೇ ಗೌರಿಯು ಸುಖವುಳ್ಳವಳಾಗಿಯೂ ಶಂಕರನು ದುಃಖವುಳ್ಳವನಾಗಿಯೂ ಇರವುದು.

ಪ್ರಥಮಂ ವಿಜಯೋ ಯಸ್ಯ ತಸ್ಯ ಸಂವತ್ಸರಂ ಶುಭಂ ।
ಏವಂ ಗತೇ ನಿಶೀಥೇ ತು ಜನೇ ನಿದ್ರಾಂಧಲೋಚನೇ ॥ ೨೮ ॥

ತಾವನ್ನಗರ ನಾರೀಭಿಃ ಶೂರ್ಪಡಿಂಡಿಮವಾದನೈಃ ।
ನಿಷ್ಕಾಸ್ಯತೇ ಪ್ರಹೃಷ್ಟಾಭಿ ರಲಕ್ಷ್ಮೀಸ್ಸ್ವಗೃಹಾಂಗಣಾತ್ ॥ ೨೯ ॥

ಪರಾಜಯೋ ವಿರುದ್ಧಸ್ಸ್ಯಾತ್ ಪ್ರತಿಪದ್ಯುದಿತೇ ರವೌ ।
ಪ್ರಾತರ್ಗೋವರ್ಧನಃ ಪೂಜ್ಯೋ ದ್ಯೂತಂ ರಾತ್ರೌ ಸಮಾಚರೇತ್ ॥ ೩೦ ॥

ಭೂಷಣೀಯಾಸ್ತಥಾ ಗಾವೋ ವರ್ಜ್ಯಾ ವಾಹನದೋಹನಾತ್ ।
ಗೋವರ್ಧನ ಧರಾಧಾರ ಗೋಕುಲತ್ರಾಣಕಾರಕ ॥ ೩೧ ॥

ವಿಷ್ಣುಬಾಹುಕೃತೋಚ್ಛ್ರಾಯ ಗವಾಂಕೋಟಿಪ್ರದೋ ಭವ ।
ಯಾಲಕ್ಷ್ಮೀರ್ಲೋಕಪಾಲಾನಾಂ ಧೇನುರೂಪೇಣ ಸಂಸ್ಥಿತಾ ॥ ೩೨ ॥

---

೨೮-೨೯. ಮೊದಲು ಗೆಲ್ಲುವವನಿಗೆ ವರ್ಷ ಪೂರ್ತಿಯಾಗಿ ಹೋದೆಡೆಗಳಲ್ಲೆಲ್ಲಾ ಶುಭವಾಗಿ ವಿಜಯಗಳಾಗುವುವು. ಹೀಗೆ ರಾತ್ರಿಯೆಲ್ಲವನ್ನೂ ಜೂಜಿನಿಂದ ಕಾಲಕಳೆಯುತ್ತಾ ಜನಗಳು ನಿದ್ದೆಯಿಂದ ಬಿಗಿಯುತ್ತಿರುವ ಕಣ್ಣುಗಳುಳ್ಳವರಾಗುತ್ತಿರಲು ಆಗ ಊರಿನ ಹೆಂಗಸರೆಲ್ಲರೂ ತಮ್ಮ ತಮ್ಮ ಮನೆಗಳಲ್ಲಿ ಮೊರವನ್ನೂ ಡಿಂಡಿಮವೆಂಬ ಬುಡುಬುಡುಕೆಯಂತಿರುವ ವಾದ್ಯವನ್ನೂ ಬಡಿಯುತ್ತಾ ಸಂತೋಷದಿಂದ ತಮ್ಮ ತಮ್ಮ ಮನೆಯ ಅಂಗಳದಿಂದ ಅಲಕ್ಷ್ಮಿಯನ್ನು ಓಡಿಸುತ್ತಾರೆ.

೩೦. ಸೋತರೆ ಆತನಿಗೆ ಆ ವರ್ಷವೆಲ್ಲವೂ ಅಶುಭವಾಗುತ್ತದೆ. ಮಾರನೆಯ ದಿವಸ ಸೂರ್ಯೋದಯವಾಗುತ್ತಲೂ ಪ್ರತಿಪತ್ತು (ಪಾಡ್ಯವು) ಬಂದಾಗ ಗೋವರ್ಧನನ ಪೂಜೆಯನ್ನು ಮಾಡಬೇಕು. ಆದಿನ ರಾತ್ರಿಯಲ್ಲಿ ಜೂಜನ್ನು ಆಡಬೇಕು.

೩೧-೩೨. ಆದಿನ ಗೋವುಗಳನ್ನು ಅಲಂಕರಿಸಬೇಕು. ಅದನ್ನು ಉಳುವುದಕ್ಕಾಗಲೀ ಗಾಡಿ ಮುಂತಾದುವುಕ್ಕಾಗಲೀ ಕಟ್ಟಬಾರದು. ಕೆಲಸವನ್ನು ಅವುಗಳಿಂದ ಮಾಡಿಸಬಾರದು. ಹಸುಗಳಿಂದ ಹಾಲನ್ನು ಕರೆಯಬಾರದು. ಕರುಗಳಿಗೆ ಬಿಡಬೇಕು. ಎಲೈ ಗೋವರ್ಧನನೆ! ಧರೆಗೆ ಆಧಾರನೆ! ಗೋವುಗಳನ್ನು ಕಾಪಾಡುವವನೆ! ಎಲ್ಲ ಕಡೆಯಲ್ಲಿಯೂ ಕೈಯನ್ನು ಎತ್ತಿಕೊಂಡಿರುವವನೆ! ಕೋಟಿ ಗೋವುಗಳನ್ನು ನನಗೆ ಕೊಡು.

ಘೃತಂ ವಹತಿ ಯಜ್ಞಾರ್ಥೇ ಮಮ ಪಾಪಂ ವ್ಯಪೋಹತು ।
ಅಗ್ರತಸ್ಸಂತು ಮೇ ಗಾವೋ ಗಾವೋ ಮೇ ಸನ್ತು ಪೃಷ್ಠತಃ ।
ಗಾವೋ ಮೇ ಹೃದಯೇ ಸನ್ತು ಗವಾಂ ಮಧ್ಯೇ ವಸಾಮ್ಯಹಂ ॥ ೩೩ ॥

॥ ಇತಿ ಗೋವರ್ಧನ ಪೂಜಾ ॥

ಸದ್ಭಾವೇನೈವ ಸಂತೋಷ್ಯ ದೇವಾನ್ ಸತ್ಪುರುಷಾನ್ ನರಾನ್ ।
ಇತರಾಂಶ್ಚಾನ್ನಪಾನೇನ ವಾಕ್ಯದಾನೇನ ಪಂಡಿತಾನ್ ॥ ೩೪ ॥

ವಸ್ತ್ರೈಸ್ತಾಂಬೂಲದಾನೈಶ್ಚ ಪುಷ್ಪಕರ್ಪೂರಕುಂಕುಮೈಃ ।
ಭಕ್ಷ್ಯೈರುಚ್ಚಾವಚೈರ್ಭೋಜ್ಯೈರಂತಃಪುರನಿವಾಸಿನಃ ॥ ೩೫ ॥

ಗ್ರಾಮೈಃ ವೃಷಭದಾನೈಶ್ಚ ಸಾಮಂತಾನ್ ನೃಪತಿರ್ಧನೈಃ ।
ಪದಾತಿಜನಸಂಘಾಂಶ್ಚ ಗ್ರೈವೇಯೈಃ ಕಟಕೈಶ್ಶುಭೈಃ ॥ ೩೬ ॥

---

೩೩. ಲೋಕಪಾಲಕರ ಯಾವ ಲಕ್ಷ್ಮಿಯು ಧೇನುವಿನ ರೂಪದಿಂದ ಇರುವುದೋ ಯಾವ ಗೋವು ಯಜ್ಞಕ್ಕೋಸ್ಕರ ತುಪ್ಪವನ್ನು ಹೊಂದಿದೆಯೋ ಅಂತಹ ಹಸುವು ನನ್ನ ಪಾಪವನ್ನು ನಾಶಮಾಡಲಿ. ನನ್ನ ಮುಂದೆಯೂ ಹಸುಗಳಿರಲಿ. ನನ್ನ ಹಿಂದೆಯೂ ಹಸುಗಳಿರಲಿ. ನನ್ನ ಹೃದಯದಲ್ಲಿಯೂ ಹಸುಗಳಿರಲಿ. ಗೋವುಗಳ ಮಧ್ಯದಲ್ಲಿ ನಾನು ವಾಸಮಾಡುತ್ತೇನೆ.

ಹೀಗೆ ಗೋವರ್ಧನನ ಪೂಜೆಯು.

೩೪–೩೫. ಆದಿನ ರಾಜನಾದವನು ದೇವತೆಗಳನ್ನೂ ಸತ್ಪುರುಷರನ್ನೂ ಒಳ್ಳೆಯತನದಿಂದ ಸಂತೋಷಪಡಿಸಬೇಕು. ಇತರರನ್ನು ಅನ್ನ ಹಾಕುವುದರಿಂದಲೂ ಪಾನಕ ಮುಂತಾದುವುಗಳಿಂದಲೂ ಸಂತೋಷಪಡಿಸಬೇಕು ಪಂಡಿತರನ್ನು ಒಳ್ಳೆಯ ಜಾಣತನದ ಮಾತಿನಿಂದಲೂ ಸಂತೋಷಪಡಿಸಬೇಕು. ಅಂತಃಪುರದಲ್ಲಿರುವ ಹೆಂಗಸರಿಗೂ ಆಳುಗಳಿಗೂ ಬಟ್ಟೆ ತಾಂಬೂಲ ಹೂವು ಪಚ್ಚೆಕರ್ಪೂರ ಕುಂಕುಮಕೇಸರಿಗಳನ್ನು ಕೊಟ್ಟು ಉತ್ತಮವಾದ ಭಕ್ಷ್ಯಗಳಿಂದಲೂ ಊಟಗಳಿಂದಲೂ ಸಂತೋಷಪಡಿಸಬೇಕು.

೩೬–೩೯. ಸಾಮಂತರಾಜರಿಗೆ ಗ್ರಾಮಗಳನ್ನೂ ಹೋರಿಗಳನ್ನೂ ಕೊಟ್ಟು ಗೌರವಿಸಬೇಕು. ಯುದ್ಧದ ಕಾಲಾಳುಗಳಿಗೆ ಕತ್ತಿಗೆ ಹಾಕಿಕೊಳ್ಳುವ ಹಾರಗಳನ್ನೂ ಕೈಬಳೆ (ತೋಡ) ಗಳನ್ನೂ ಕೊಟ್ಟು ಗೌರವಿಸಬೇಕು. ತನ್ನ ಕಡೆಯ ಜನರಿಗೆ

ಸ್ವನಾಮಾಂಕೈಶ್ಚ ತಾನ್ರಾಜಾ ತೋಷಯೇತ್ ಸ್ವಜನಾನ್ ಪೃಥಕ್ ।
ಯಥಾರ್ಥಂ ತೋಷಯಿತ್ವಾ ತು ತತೋ ಮಲ್ಲಾನ್ ಭಟಾಂಸ್ತಥಾ ॥ ೩೭ ॥

ವೃಷಭಾನ್ಮಹಿಷಾಂಶ್ಚೈವ ಯುದ್ಧ್ಯಮಾನಾನ್ಪರೈಸ್ಸಹ ।
ರಾಜ್ಞಶ್ಚಾಪಿ ಹಿ ಯೋಧಾಂಶ್ಚ ಪದಾತೀನ್ಸಮಲಂಕೃತಾನ್ ॥ ೩೮ ॥

ಮಂಚಾರೂಢಸ್ಸ್ವಯಂ ಪಶ್ಯೇನ್ನಟನರ್ತಕಚಾರಣಾನ್ ।
ಯುದ್ಧಾಪಯೇದ್ವಾಸಯೇಚ್ಚ ಗೋಮಹಿಷ್ಯಾದಿಕಂ ಚ ಯತ್ ॥ ೩೯ ॥

ವತ್ಸಾನಾಕರ್ಷಯೇದ್ಗೋಭಿರುಕ್ತಿ ಪ್ರತ್ಯುಕ್ತಿವಾದನಾತ್ ।
ತತೋಽಪರಾಹ್ಣಸಮಯೇ ಪೂರ್ವಸ್ಯಾಂ ದಿಶಿ ಭಾಮಿನಿ ॥ ೪೦ ॥

ಮಾರ್ಗಪಾಲೀಂ ಪ್ರಬಧ್ನೀಯಾದ್ದುರ್ಗೇ ಸ್ತಂಭೇಥ ಪಾದಪೇ ।
ಕುಶಕಾಶಮಯೀಂ ದಿವ್ಯಾಂ ಲಂಬಕೈರ್ಬಹುಭಿಃ ಪ್ರಿಯೇ ॥ ೪೧ ॥

---

ರಾಜನಾದವನು ತನ್ನ ಹೆಸರಿರುವ ಯಾವುದಾದರೂ ಪದಾರ್ಥಗಳನ್ನು ಕೊಟ್ಟು ಗೌರವಿಸಬೇಕು. ತನ್ನ ಭಟರನ್ನೂ ಜಟ್ಟಿಗಳನ್ನೂ ಅವರವರಿಗೆ ಯೋಗ್ಯತೆಗೆ ತಡೆಯುವಂತೆ ಸಂಭಾವನೆಗಳನ್ನು ಕೊಟ್ಟು ಗೌರವಿಸಬೇಕು. ಹೋರಿಗಳನ್ನೂ ಕೋಣಗಳನ್ನೂ ಗುದ್ದಾಟಕ್ಕೆ ಬಿಡಬೇಕು. ತನ್ನ ಪದಾತಿಗಳನ್ನು ಅಲಂಕರಿಸಿ ಜೂಜಿಗೆ ಬಿಡಬೇಕು, ರಾಜನಾದವನು ತಾನು ಮಂಚದ ಮೇಲೆ ಕುಳಿತುಕೊಂಡು ನೋಡುತ್ತಿರಬೇಕು. ಮತ್ತು ಕುಣಿಯುವವರನ್ನೂ ಗಾನ ಮಾಡುವವರನ್ನೂ ಒಂದುಕಡೆ ಅವರವರ ಕೆಲಸದಲ್ಲಿ ನಿಯಮಿಸಿ ಅದನ್ನು ನೋಡುತ್ತಿರಬೇಕು. ಹೋರಿಗಳು ಕೋಣಗಳು ಟಗರುಗಳು ಇವೆಲ್ಲವನ್ನೂ ಹಿಂವಕ್ಕೆ ಎಳೆವೆಳೆದು ಕುಸ್ತಿ ಮಾಡಿಸಬೇಕು

೪೦–೪೩. ಹಸುಗಳನ್ನೂ ಕರುಗಳನ್ನೂ ಎಳೆದಾಡುತ್ತ ಪ್ರೈಪ್ರೋಟಿಯ ಮಾತುಗಳನ್ನಾಡುತ್ತಿರಬೇಕು. ಆಮೇಲೆ ಅಪರಾಹ್ಣದಲ್ಲಿ ಪೂರ್ವದಿಕ್ಕಿನಲ್ಲಿ ಮಾರ್ಗಪಾಲಿಯನ್ನು ದುರ್ಗದಲ್ಲಿಯಾಗಲೀ ಎತ್ತರವಾದ ಜಾಗದಲ್ಲಿಯಾಗಲಿ ಕಂಬ ಅಥವಾ ಮರದಲ್ಲಿಯಾಗಲೀ ಮೇಲಕ್ಕೆ ಕಟ್ಟಬೇಕು. ಆ ಮಾರ್ಗಪಾಲಿಯ ಬೊಂಬೆಯನ್ನು ದರ್ಭೆಯಿಂದಾಗಲೀ ಲಾಲೆಯ ಹುಲ್ಲಿನಿಂದಾಗಲೀ ಮಾಡಿಸಬೇಕು. ಇಂತಹ ಮಾರ್ಗಪಾಲಿ ಬೊಂಬೆಗಳು ಅನೇಕವಾಗಿರಬೇಕು. ಅವನ್ನು ನೇತಾಡುವಂತೆ ಉದ್ದಕ್ಕೂ ಕಟ್ಟಿರಬೇಕು. ಕುದುರೆ ಆನೆಗಳನ್ನು ತೊಳೆದು

ದೀಕ್ಷಯಿತ್ವಾ ಗಜಾನಶ್ವಾನ್ ಸಾಯಮಸ್ಯಾಸ್ತಲೇ ನಯೇತ್ ।
ಗಾ ವೈ ವೃಷಾಂಶ್ಚ ಮಹಿಷ್ಯಾ ಮಹಿಷೀರ್ಘಂಟಿಕೋತ್ಕಟಾಃ ॥ ೪೨ ॥

ಕೃತಹೋಮೈರ್ದ್ವಿಜೇಂದ್ರೈಸ್ತು ಬಧ್ನೀಯಾನ್ಮಾರ್ಗಪಾಲಿಕಾಂ ।
ನಮಸ್ಕಾರಂ ತತಃ ಕುರ್ಯಾನ್ಮಂತ್ರೇಣಾನೇನ ಸುವ್ರತ ॥ ೪೩ ॥

ಮಾರ್ಗಪಾಲಿ ನಮಸ್ತುಭ್ಯಂ ಸರ್ವಲೋಕಸುಖಪ್ರದೇ ।
ಮಾರ್ಗಪಾಲೀತಲೇ ಚೇತ್ಥಂ ಯಾನ್ತಿ ಗಾವೋ ಮಹಾವೃಷಾಃ ॥ ೪೪ ॥

ರಾಜಾನೋ ರಾಜಪುತ್ರಾಶ್ಚ ಬ್ರಾಹ್ಮಣಾಶ್ಚ ವಿಶೇಷತಃ ।
ಮಾರ್ಗಪಾಲೀಂ ಸಮುಲ್ಲಂಘ್ಯ ನೀರುಜಸ್ಸುಖಿನೋ ಹಿ ತೇ ॥ ೪೫ ॥

ಕೃತ್ವೈತತ್ಸರ್ವಮೇವೇಹ ರಾತ್ರೌ ದೈತ್ಯಪತೇರ್ಬಲೇಃ ।
ಪೂಜಾಂ ಕುರ್ಯಾತ್ ಪ್ರಿಯೇ ಸಾಕ್ಷಾದ್ಭೂಮೌ ಮಂಡಲಕೇ ಕೃತೇ॥ ೪೬ ॥

---

ಪೂಜಿಸಿ ನಿಯಮದಿಂದ ಆ ಮಾರ್ಗಪಾಲಿಯ ಕೆಳಭಾಗದಲ್ಲಿ ತೆಗೆದುಕೊಂಡ್ರು ಹೋಗಬೇಕು. ಆ ಆನೆ ಕುದುರೆಗಳಿಗೆ ಅನೇಕವಾಗಿ ಹಾರಾದಿಗಳನ್ನು ಹಾಕಿ ಅಲಂಕರಿಸಿರಬೇಕು. ಹಸುಗಳು ಎತ್ತುಗಳು ಎಮ್ಮೆಗಳು ಇವುಗಳಿಗೆಲಾ ಗಂಟೆಗಳನ್ನು ಕಟ್ಟಿರಬೇಕು. ಆ ಮಾರ್ಗಪಾಲಿಯನ್ನು ಕಟ್ಟುವ ಸ್ಥಳದಲ್ಲಿ ಪುರೋಹಿತನಿಂದ ಹೋಮ ಮುಂತಾದುವುಗಳನ್ನು ಮಾಡಿಸಿ ಅಲ್ಲಿ ಆ ಮಾರ್ಗ ಪಾಲಿಕೆಯನ್ನು ಕಟ್ಟಬೇಕು. ಅನಂತರ ಅದಕ್ಕೆ ಈ ಮಂತ್ರವನ್ನು ಹೇಳುತ್ತ ನಮಸ್ಕರಿಸಬೇಕು.

೪೪–೪೫. ಎಲ್ಲ ಜನರಿಗೂ ಸುಖವನ್ನು ಕೊಡುವ ಮಾರ್ಗಪಾಲಿಯೇ ! ನಿನಗೆ ನಮಸ್ಕಾರವೆಂದು ಹೇಳಬೇಕು. ಈರೀತಿ ಹೇಳಿ ನಮಸ್ಕರಿಸುತ್ತ ಆ ಮಾರ್ಗಪಾಲಿಯ ಕೆಳಗೆ ಗೋವುಗಳೂ ವೃಷಭಗಳೂ ರಾಜರೂ ರಾಜಪುತ್ರರೂ ಬ್ರಾಹ್ಮಣರೂ ಅಲ್ಲಿ ಬಂದಿರತಕ್ಕವರೆಲ್ಲರೂ ಪಶುಪಕ್ಷಿಗಳೆಲ್ಲವೂ ಹೋಗಬೇಕು. ಹೀಗೆ ಹೋದರೆ ಅವರೆಲ್ಲರೂ ರೋಗವಿಲ್ಲದೆ ಸುಖಿಗಳಾಗಿರುತ್ತಾರೆ.

೪೬–೪೯. ಈರೀತಿಯಾಗಿ ಮಾರ್ಗಪಾಲೀ ಪೂಜೆಯನ್ನು ಮಾಡಿ ರಾತ್ರಿಯಲ್ಲಿ ದೈತ್ಯರಾಜನಾದ ಬಲೀಂದ್ರನ ಪೂಜೆಯನ್ನು ಮಾಡಬೇಕು.

ಬಲಿಮಾಲಿಖ್ಯ ದೈತ್ಯೇಂದ್ರಂ ವರ್ಣಕೈಃ ಪಂಚರಂಗಕೈಃ ।
ಸರ್ವಾಭರಣಸಂಪೂರ್ಣಂ ವಿಂಧ್ಯಾವಳ್ಯಾ ಸಮನ್ವಿತಂ ॥ ೪೭ ॥

ಕೂಶ್ಮಾಂಡಮಯಜಂಭೋರುಮಧುದಾನವಸಂವೃತಂ ।
ಸಂಪೂರ್ಣಂ ಹೃಷ್ಟವದನಂ ಕಿರೀಟೋತ್ಕಟಕುಂಡಲಂ ॥ ೪೮ ॥

ದ್ವಿಭುಜಂ ದೈತ್ಯರಾಜಾನಂ ಕಾರಯಿತ್ವಾ ಸ್ವಕೇ ಪುನಃ ।
ಗೃಹಸ್ಯ ಮಧ್ಯೇ ಶಾಲಾಯಾಂ ವಿಶಾಲಾಯಾಂ ತತೋರ್ಚಯೇತ್ ॥೪೯॥

ಮಾತೃಭ್ರಾತೃಜನೈಸ್ಸಾರ್ಧಂ ಸಂತುಷ್ಟೋ ಬಂಧುಭಿಸ್ಸಹ ।
ಕಮಲೈಃ ಕುಮುದೈಃ ಪುಷ್ಪೈಃ ಕಹ್ಲಾರೈರಕ್ತಕೋತ್ಪಲೈಃ ॥ ೫೦ ॥

ಗಂಧಪುಷ್ಪಾನ್ನನೈವೇದ್ಯೈಃ ಸಕ್ಷೀರೈರ್ಗುಡಪಾಯಸೈಃ ।
ಮದ್ಯಮಾಂಸಸುರಾಲೇಹ್ಯಚೋಷ್ಯಭಕ್ಷ್ಯೋಪಹಾರಕೈಃ ॥ ೫೧ ॥

---

ಮನೆಯ ಮಧ್ಯದಲ್ಲಿ ನೆಲದಮೇಲೆ ಮಂಡಲವನ್ನು ಮಾಡಬೇಕು. ಅಲ್ಲಿ ಐದು ಬಗೆಯ ಬಣ್ಣಗಳಿಂದ ದೈತ್ಯೇಂದ್ರನಾದ ಬಲಿಯನ್ನು ಬರೆಯಬೇಕು. ಅವನಿಗೆ ಎರಡು ಕೈಗಳಿರಬೇಕು. ಸಮಸ್ತವಾದ ಆಭರಣಗಳಿಂದ ಅಲಂಕರಿಸಬೇಕು. ಅವನ ಹೆಂಡತಿಯಾದ ವಿಂಧ್ಯಾವಳಿಯನ್ನು ಬರೆಯಬೇಕು. ಕೂಶ್ಮಾಂಡ ಮಯ ಜಂಭೋರು ಮಧು ಮುಂತಾದ ಮುಖ್ಯರಾದ ದಾನವರನ್ನು ಬರೆಯಬೇಕು. ಮುಖದಲ್ಲಿ ಸಂತೋಷವು ಕಾಣುವಂತಿರಬೇಕು. ಕಿರೀಟವೂ ಕುಂಡಲಗಳೂ ಇರಬೇಕು. ಈರೀತಿಯಾದ ದೈತ್ಯರಾಜನಾದ ಬಲಿಯನ್ನು ತನ್ನ ಮನೆಯ ಮಧ್ಯದ ಅಂಗಳದಲ್ಲಿ ಬರೆದು ಪೂಜಿಸಬೇಕು.

೫೦–೫೧. ತಾಯಿ ತಂದೆ ಸಹೋದರರು ಬಂಧುಗಳು ಇವರೊಡನೆ ಕುಳಿತುಕೊಂಡು ಸಂತೋಷದಿಂದ ಪೂಜೆ ಮಾಡಬೇಕು. ಕಮಲ ಕುಮುದ ಕಹ್ಲಾರ ರಕ್ತೋತ್ಪಲಗಳಿಂದಲೂ ಹೂವುಗಳಿಂದಲೂ ಪೂಜಿಸಿ ಹಾಲು ಬೆಲ್ಲ ಪಾಯಸ ಮದ್ಯ ಮಾಂಸ ಸುರೆ ಗೊಜ್ಜು ಚಟ್ನಿ ಭಕ್ಷ್ಯ ಅನ್ನ ಮುಂತಾದುವುಗಳನ್ನು ನಿವೇದಿಸಿ ಪೂಜಿಸಬೇಕು.

ಮಂತ್ರೇಣಾನೇನ ರಾಜೇಂದ್ರಃ ಸಮಂತ್ರೀ ಸಪುರೋಹಿತಃ ।
ಪೂಜಾಂ ಕರಿಷ್ಯತೇ ಯೋ ವೈ ಸೌಖ್ಯಂ ಸ್ಯಾತ್ತಸ್ಯ ವತ್ಸರಂ ॥ ೫೨ ॥

ಬಲಿರಾಜ ನಮಸ್ತುಭ್ಯಂ ವಿರೋಚನಸುತ ಪ್ರಭೋ ।
ಭವಿಷ್ಯೇಂದ್ರ ಸುರಾರಾತೇ ಪೂಜೇಯಂ ಪ್ರತಿಗೃಹ್ಯತಾಂ ॥ ೫೩ ॥

ಏವಂ ಪೂಜಾಂ ಪ್ರಿಯೇ ಕೃತ್ವಾ ರಾತ್ರೌ ಜಾಗರಣಂ ತತಃ ।
ಕಾರಯೇತ್ಪ್ರೇಕ್ಷಣೀಯಾದಿ ನಟನೃತ್ಯಕಥಾನಕೈಃ ॥ ೫೪ ॥

ಲೋಕಶ್ಚಾಪಿ ಗೃಹಸ್ಯಾಂತೇ ಪರ್ಯಂಕೇ ಶುಕ್ಲತಂಡುಲೈಃ ।
ಸಂಸ್ಥಾಪ್ಯ ಬಲಿರಾಜಾನಂ ಫಲೈಃ ಪುಷ್ಪೈಶ್ಚ ಪೂಜಯೇತ್ ॥ ೫೫ ॥

ಬಲಿಮುದ್ದಿಶ್ಯ ದೀಯೇತ ತತ್ರ ಸರ್ವಂ ಚ ಭಾಮಿನಿ ।
ದತ್ತಾನಿ ಚಾಕ್ಷಯಾಣ್ಯಾಹುರ್ಮುನಯಸ್ತತ್ವದರ್ಶಿನಃ ॥ ೫೬ ॥

---

೫೨. ಮಂತ್ರಗಳನ್ನು ಹೇಳುತ್ತಾ ರಾಜನೂ ಮಂತ್ರಿಗಳೂ ಪುರೋಹಿತನೂ ಪೂಜೆ ಮಾಡಿದರೆ ಅವರಿಗೆ ಒಂದು ವರ್ಷ ಪರ್ಯಂತರ ಸುಖವಾಗಿರುವುದು.

೫೩. ಎಲೈ ಪ್ರಭುವೂ ವಿರೋಚನನ ಮಗನೂ ಆದ ಬಲಿರಾಜನೇ ! ನಿನಗೆ ನಮಸ್ಕಾರವು. ಎಲೈ ಮುಂದೆ ಇಂದ್ರನಾಗುವವನೆ ! ದೇವತೆಗಳ ಶತ್ರುವೆ ! ಈ ನನ್ನ ಪೂಜೆಯನ್ನು ಸ್ವೀಕರಿಸು.

೫೪. ರಾಜನು ಈ ರೀತಿಯಾಗಿ ಪೂಜಿಸಿ ರಾತ್ರಿಯಲ್ಲಿ ಜಾಗರಣೆಯನ್ನು ಮಾಡಬೇಕು ಆ ಜಾಗರಣೆಯಲ್ಲಿ ರಾತ್ರಿಯೆಲ್ಲಾ ನೋಡಲು ಚೆನ್ನಾಗಿರುವ ಆಟ ನಾಟಕ ಕಥೆ ನರ್ತನಗಳನ್ನು ಆಚರಿಸುತ್ತಿರಬೇಕು.

೫೫. ಇತರ ಜನಗಳೂ ಕೂಡ ಮನೆಯಲ್ಲಿ ಮಂಚದಮೇಲೆ ಬಲಿರಾಜನ ಪ್ರತಿಮೆಯನ್ನಿಟ್ಟು ಹೂವು ಹಣ್ಣುಗಳಿಂದಲೂ ಬಿಳಿಯ ಅಕ್ಕಿಯಿಂದಲೂ ಪೂಜಿಸಬೇಕು.

೫೬. ಎಲೈ ಸತ್ಯಭಾಮೆಯೆ ! ಬಲಿಚಕ್ರವರ್ತಿಯನ್ನುದ್ದೇಶಿಸಿಕೊಂಡು ಎಲ್ಲವನ್ನೂ ಕೊಡಬೇಕು. ಹಾಗೆ ಕೊಟ್ಟುದೆಲ್ಲವೂ ಅಕ್ಷಯವಾಗುವುದೆಂದು ತಿಳಿದ ಋಷಿಗಳು ಹೇಳುತ್ತಾರೆ.

ಯದಸ್ಯ ದೀಯತೇ ದಾನಂ ಸ್ವಲ್ಪಂ ವಾ ಯದಿ ವಾ ಬಹು ।
ತದಕ್ಷಯಂ ಭವೇತ್ಸರ್ವಂ ವಿಷ್ಣೋಃ ಪ್ರೀತಿಕರಂ ಶುಭಂ || ೫೭ ||

ರಾತ್ರೌ ಯೇ ನ ಕರಿಷ್ಯಂತಿ ತವ ಪೂಜಾಂ ಬಲೇ ನರಾಃ ।
ತೇಷಾಂ ಚ ಶ್ರೋತ್ರಿಯೋ ಧರ್ಮೋಽಕರ್ಮತ್ವಮುಪತಿಷ್ಠತೇ || ೫೮ ||

ವಿಷ್ಣುನಾ ವಸುಧಾಂ ಲಬ್ಧ್ವಾ ತುಷ್ಟೇನ ಬಲಯೇ ಪುನಃ ।
ಉಪಕಾರಕರಂ ದತ್ತಮಸುರಾಣಾಂ ಮಹೋತ್ಸವಂ || ೫೯ ||

ತತಃ ಪ್ರಭೃತಿ ರಂಭೋರು ಪ್ರವೃತ್ತಾ ಕೌಮುದೀ ಶುಭಾ ।
ಸರ್ವೋಪದ್ರವಸಂಹರ್ತ್ರೀ ಸರ್ವವಿಘ್ನವಿನಾಶಿನೀ || ೬೦ ||

ಲೋಕಶೋಕಹರಾ ಕಾಮ್ಯಾ ಧನಪುಷ್ಟಿಸುಖಾವಹಾ ।
ಕುಶಬ್ದೇನ ಮಹೀಜ್ಞೇಯಾ ಮುದ ಹರ್ಷೇ ತತೋ ದ್ವಯಾ || ೬೧ ||

---

೫೭–೫೮. ಬಲಿಯನ್ನುದ್ದೇಶಿಸಿ ಕೊಡತಕ್ಕ ದಾನವು ಹೆಚ್ಚಾಗಿರಲಿ ಕಡಿಮೆ ಯಾಗಿರಲಿ ಅದು ಅಕ್ಷಯವಾಗುವುದಲ್ಲದೆ ವಿಷ್ಣುವಿಗೆ ಪ್ರೀತಿಯನ್ನು ಉಂಟು ಮಾಡುತ್ತದೆ. ಎಲೈ ಬಲಿಯೆ! ರಾತ್ರಿಯಲ್ಲಿ ಯಾವ ಮನುಷ್ಯರು ನಿನ್ನ ಪೂಜೆಯನ್ನು ಮಾಡುವುದಿಲ್ಲವೋ ಅವರು ಮಾಡತಕ್ಕ ಶ್ರುತ್ಯುಕ್ತವಾದ ಕರ್ಮಗಳು ಶ್ರುತ್ಯುಕ್ತವಾದ ಕರ್ಮಗಳಾಗುವುದಿಲ್ಲ.

೫೯. ವಿಷ್ಣುವು ಬಲಿಯಿಂದ ರಾಜ್ಯವನ್ನು ತೆಗೆದುಕೊಂಡು ಸಂತೋಷದಿಂದ ಅವನಿಗೆ ಉಪಕಾರಕವಾದ ದೈತ್ಯರಿಗೆ ಸಂತೋಷ ರೂಪವಾದ ಈ ಉತ್ಸವವನ್ನು ಕೊಟ್ಟಿರುವನು.

೬೦. ಎಲೈ ಸತ್ಯಭಾಮೆಯೆ! ಆಗಿನಿಂದ ಮೊದಲು ಮಾಡಿಕೊಂಡು ಎಲ್ಲಾ ರೋಗಗಳನ್ನೂ ನಾಶಮಾಡುವ ಎಲ್ಲಾ ವಿಘ್ನಗಳನ್ನೂ ಪರಿಹರಿಸುವ ಈ ಕೌಮುದ್ಯುತ್ಸವವು ಲೋಕದಲ್ಲಿ ಪ್ರಚಾರಕ್ಕೆ ಬಂದಿತು.

೬೧. ಈ ಕೌಮುದ್ಯುತ್ಸವವು ಲೋಕದ ದುಃಖವನ್ನು ನಾಶಮಾಡುತ್ತದೆ. ಧನ ಸಂಪತ್ತು ಸೌಖ್ಯ ಇನ್ನೂ ಬೇಕಾದುದೆಲ್ಲವನ್ನೂ ಕೊಡುತ್ತದೆ. "ಕು" ಎಂಬ ಪದಕ್ಕೆ ಭೂಮಿಯೆಂದು "ಮುದ" ಶಬ್ದಕ್ಕೆ ಸಂತೋಷವೆಂದೂ ಅರ್ಥವಿರುತ್ತದೆ. ಅವೆರಡೂ ಸೇರಿ ಕೌಮುದೀಪದವಾಗಿ ಪ್ರಪಂಚಕ್ಕೆ ಸಂತೋಷ ಕರವೆಂದು ಅರ್ಥವನ್ನು ಕೊಡುತ್ತದೆ.

ಧಾತುಜ್ಞೈರ್ನಿಗಮಜ್ಞೈಶ್ಚ ತೇನೈಷಾ ಕೌಮುದೀ ಸ್ಮೃತಾ ।
ಕೌಮುದೀತಿ ಜನಾ ಯಸ್ಮಾನ್ನಾನಾಭಾವೈಃ ಪರಸ್ಪರಂ ॥ ೬೨ ॥

ಹೃಷ್ಟತುಷ್ಟಾಸ್ಸುಖಾಪನ್ನಾಸ್ತೇನೈಷಾ ಕೌಮುದೀ ಸ್ಮೃತಾ ।
ಕುಮುದಾನಿ ಬಲೇರ್ಯಸ್ಮಾದ್ದೀಯಂತೇ ತತ್ರ ಭಾಮಿನಿ ॥ ೬೩ ॥

ಅರ್ಥಾಢ್ಯಪಾರ್ಥಿವೈರ್ಭಾವೋ ತೇನೈಷಾ ಕೌಮುದೀ ಸ್ಮೃತಾ ।
ಏಕಮೇವಮಹೋರಾತ್ರಂ ವರ್ಷೇ ವರ್ಷೇ ಚ ಭಾಮಿನಿ ॥ ೬೪ ॥

ದತ್ತಂ ದಾನವರಾಜಸ್ಯ ಆದರ್ಶಮಿವ ಭೂತಳೇ ।
ಯಃ ಕರೋತಿ ನೃಪೋ ರಾಜ್ಯೇ ತಸ್ಯ ವ್ಯಾಧಿಭಯಂ ಕುತಃ ॥ ೬೫ ॥

ಸುಭಿಕ್ಷಂ ಕ್ಷೇಮಮಾರೋಗ್ಯ ತಸ್ಯ ಸಂಪದ ಉತ್ತಮಾಃ ।
ನೀರುಜಶ್ಚ ಜನಾಸ್ಸರ್ವೇ ಸರ್ವೋಪದ್ರವವರ್ಜಿತಾಃ ॥ ೬೬ ॥

---

೬೨–೬೩. ಧಾತುವಿನ ಅರ್ಥವನ್ನು ಬಲ್ಲವರೂ ಕೋಶವನ್ನು ಬಲ್ಲವರೂ ಈ ರೀತಿಯಾಗಿ ಸೇರಿಸಿ ಹೇಳಿರುವುದರಿಂದ ಕೌಮುದೀ ಎಂಬ ಪದವಾಗಿದೆ. ಜನಗಳೂ ಕೌಮುದಿ ಕೌಮುದಿ ಎಂಬುದಾಗಿ ಅನೇಕ ಬಗೆಯ ಅಭಿಪ್ರಾಯಗಳಿಂದ ಸಂತೋಷದಿಂದಲೂ ತೃಪ್ತಿಯಿಂದಲೂ ಇರುವುದರಿಂದ ಆ ಸುಖವನ್ನು ನೋಡಿ ಅದಕ್ಕೆ ಕೌಮುದಿ ಎಂದು ಹೆಸರು ಬಂದಿದೆ. ಎಲೈ ಸತ್ಯಭಾಮೆಯೆ! ಧನವಂತರಾದ ರಾಜರು ಆದಿನ ಬಲಿಯ ತೃಪ್ತಿಗೋಸ್ಕರ ಎಲ್ಲರಿಗೂ ಸಂತೋಷಕರವಾಗುವಂತೆ ದಾನ ಮಾನಗಳನ್ನು ಮಾಡುವುದರಿಂದ ಕೌಮುದಿ ಎಂಬ ಹೆಸರು ಬಂದಿದೆ.

೬೪–೬೫. ಎಲೈ ಸತ್ಯಭಾಮೆಯೆ ! ಪ್ರತಿವರ್ಷವೂ ಇದು ಒಂದು ಉತ್ಸವವುಳ್ಳ ರಾತ್ರಿಯನ್ನು ಆದಾನವ ರಾಜನಾದ ಬಲಿಗೆ ವಿಷ್ಣುವು ಕೊಟ್ಟಿರುವನು ಇದು ಭೂಮಿಯಲ್ಲಿರುವ ಜನರಿಗೆ ದೃಷ್ಟಾಂತವಾಗಿರುವುವು. ಈ ಉತ್ಸವವನ್ನು ಯಾವನು ತನ್ನ ರಾಜ್ಯದಲ್ಲಿ ಮಾಡುತ್ತಾನೆಯೋ ಆ ರಾಜನಿಗೆ ರೋಗದ ಭಯುವು ಇರುವುದಿಲ್ಲ.

೬೬. ಅಂತಹವನ ರಾಜ್ಯದಲ್ಲಿ ಸುಭಿಕ್ಷವೂ ಕ್ಷೇಮವೂ ಆರೋಗ್ಯವೂ ಉಂಟಾಗಿ ಹೆಚ್ಚಾದ ಸಂಪತ್ತು ಇರುತ್ತದೆ. ಜನಗಳು ರೋಗಗಳಿಲ್ಲದೆ. ತೊಂದರೆಯನ್ನು ಹೊಂದದೆ ಸುಖಿಸುತ್ತಾರೆ.

ಕೌಮುದೀ ಕ್ರಿಯತೇ ಯಸ್ಮಾದ್ಭವಂತೀಹ ಮಹೀತಳೇ ।
ಯೋ ಯಾದೃಶೇನ ಭಾವೇನ ತಿಷ್ಠತ್ಯಸ್ಯಾಂ ತು ಭಾಮಿನಿ　　|| ೬೭ ||

ಹರ್ಷದುಃಖಾದಿಭಾವೇನ ತಸ್ಯ ವರ್ಷಂ ಪ್ರಯಾತಿ ಹಿ ।
ರುದಿತೋ ರೋದಿತೋ ವರ್ಷಂ ಹೃಷ್ಟೋ ವರ್ಷಂ ಪ್ರಹೃಷ್ಯತಿ　|| ೬೮ ||

ಭುಕ್ತೋ ಭೋಕ್ತಾ ಭವೇದ್ವರ್ಷಂ ಸ್ವಸ್ಥಃ ಸ್ವಸ್ಥೋ ಭವಿಷ್ಯತಿ
ತಸ್ಮಾತ್ಪ್ರಹೃಷ್ಟೈಸ್ತುಷ್ಟೈಶ್ಚ ಕರ್ತವ್ಯಾ ಕೌಮುದೀ ನರೈಃ ।
ವೈಷ್ಣವೀ ದಾನವೀ ಚೇಯಂ ತಿಥಿಃ ಪ್ರೋಕ್ತಾ ಚ ಭಾಮಿನಿ　|| ೬೯ ||

ದೀಪೋತ್ಸವಂ ಜನಿತಸರ್ವಜನಪ್ರಮೋದಂ
ಕುರ್ವಂತಿ ಯೇ ಸುಮತಯೋ ಬಲಿರಾಜಪೂಜಾಂ ।
ದಾನೋಪಭೋಗಸುಖಬುದ್ಧಿಮತಾಂ ಕುಲಾನಾಂ
ಹರ್ಷಂ ಪ್ರಯಾನ್ತಿ ಸಕಲಂ ಕುಮುದಂ ಚ ವರ್ಷಂ　|| ೭೦ ||

---

೬೭. ಈ ಕೌಮುದ್ಯುತ್ಸವವನ್ನು ಆಚರಿಸುವುದರಿಂದ ಲೋಕದಲ್ಲಿ ಒಳ್ಳೆಯದು ಕೆಟ್ಟದ್ದುಗಳು ಆಗುತ್ತವೆ. ಎಲೈ ಸತ್ಯಭಾಮೆಯೆ! ಯಾವನು ಯಾವ ಬಗೆಯ ಭಾವದಿಂದ ಈದಿನ ಇರುತ್ತಾನೆಯೋ ಅವನು ಆ ವರ್ಷ ವೆಲ್ಲವನ್ನೂ ಅದೇ ರೀತಿಯಾದ ಭಾವದಿಂದಲೇ ಕಳೆಯುತ್ತಾನೆ.

೬೮. ಆದಿನ ಅಳುತ್ತಿದ್ದವನು ಆ ವರ್ಷವೆಲ್ಲವೂ ಅಳುತ್ತಲೇ ಇರುವನು. ಆದಿನ ಸಂತೋಷದಿಂದ ಇದ್ದವನು. ಆವರ್ಷವೆಲ್ಲವನ್ನೂ ಸಂತೋಷದಿಂದಲೇ ಕಳೆಯುತ್ತಾನೆ. ಆದಿನ ಊಟಮಾಡಿದವನು ವರ್ಷವೆಲ್ಲವೂ ಸುಖದಿಂದ ಊಟ ಮಾಡುತ್ತಾನೆ. ಆದಿನ ಸ್ವಸ್ಥವಾಗಿದ್ದವನು ಆವರ್ಷವೆಲ್ಲವೂ ಸ್ವಸ್ಥವಾಗಿರುವನು.

೬೯. ಆದುದರಿಂದ ಸಂತೋಷದಿಂದಲೂ ತೃಪ್ತಿಯಿಂದಲೂ ಈ ಕೌಮುದ್ಯುತ್ಸವವನ್ನು ಆಚರಿಸಬೇಕು. ಈ ತಿಥಿಯು ವೈಷ್ಣವ ಸಂಬಂಧ ವಾಗಿಯೂ ದಾನವ ಸಂಬಂಧವಾಗಿಯೂ ಇರುವುದು.

೭೦. ಎಲ್ಲ ಜನರಿಗೂ ಸಂತೋಷವನ್ನುಂಟುಮಾಡುವ ಈ ದೀಪೋತ್ಸವವನ್ನೂ ಬಲಿಚಕ್ರವರ್ತಿಯ ಪೂಜೆಯನ್ನೂ ಯಾರು ಮಾಡುತ್ತಾರೆಯೋ ಅವರು ಆ ವರ್ಷವೆಲ್ಲವೂ ದಾನ ಮಾಡುತ್ತ ಸುಖಗಳನ್ನು ಅನುಭವಿಸುತ್ತ ಬುದ್ಧಿವಂತರಾಗಿ ತಮ್ಮಕುಲವನ್ನೇ ಹರ್ಷಗೊಳಿಸುತ್ತಾರೆ.

॥ ಶ್ರೀಕೃಷ್ಣ ಉವಾಚ ॥

ಸತ್ಯೇ ತಾ ಸ್ಥಿತಯೋ ನೂನಂ ದ್ವಿತೀಯಾದ್ಯಾಶ್ಚ ವಿಶ್ರುತಾಃ ।
ಮಾಸೈಶ್ಚತುರ್ಭಿಶ್ಚ ತತಃ ಪ್ರಾವೃಟ್ಕಾಲೇ ಶುಭಾವಹಾಃ ॥ ೭೧ ॥

ಪ್ರಥಮಾ ಶ್ರಾವಣೇ ಮಾಸಿ ತಥಾ ಭಾದ್ರಪದೇ ಪರಾ ।
ತೃತೀಯಾಶ್ವಯುಜೇ ಮಾಸಿ ಚತುರ್ಥೀ ಕಾರ್ತಿಕೇ ಭವೇತ್ ॥ ೭೨ ॥

ಕಲುಷಾ ಶ್ರಾವಣೇ ಮಾಸಿ ತಥಾಭಾದ್ರಪದೇ ಮಲಾ ।
ಆಶ್ವಿನೇ ಪ್ರೇತಸಂಚಾರಾ ಕಾರ್ತಿಕೇ ಯಾಮ್ಯಕಾ ಮತಾ ॥ ೭೩ ॥

॥ ಸತ್ಯೋವಾಚ ॥

ಕಸ್ಮಾತ್ಸಾ ಕಲುಷಾ ಪ್ರೋಕ್ತಾ ಕಸ್ಮಾತ್ಸಾ ನಿರ್ಮಲಾ ಮತಾ ।
ಕಸ್ಮಾತ್ಸಾ ಪ್ರೇತಸಂಚಾರಾ ಕಸ್ಮಾದ್ಯಾಮ್ಯಾ ಪ್ರಕೀರ್ತಿತಾ ॥ ೭೪ ॥

॥ ಸೂತ ಉವಾಚ ॥

ಇತಿ ಸತ್ಯಾವಚಶ್ಶ್ರುತ್ವಾ ಭಗವಾನ್ಭೂತಭಾವನಃ ।
ಉವಾಚ ವಚನಂ ಶ್ಲಕ್ಷ್ಣಂ ಪ್ರಹಸನ್ ಗರುಡಧ್ವಜಃ ॥ ೭೫ ॥

---

೭೧. ಶ್ರೀ ಕೃಷ್ಣನು ಹೇಳಿದನು-ಎಲೈ ಸತ್ಯಭಾಮೆಯೆ! ದ್ವಿತೀಯಾ ತಿಥಿಯು ಮಳೆಗಾಲದ ನಾಲ್ಕು ತಿಂಗಳಲ್ಲಿಯೂ ಪ್ರಸಿದ್ಧವಾಗಿ ಶುಭಕರಗಳಾಗಿದೆ.

೭೨. ಮೊದಲನೆಯ ದ್ವಿತೀಯೆಯು ಶ್ರಾವಣದಲ್ಲಿಯೂ ಎರಡನೆಯ ದ್ವಿತೀಯೆಯು ಭಾದ್ರಪದ ಮಾಸದಲ್ಲಿಯೂ ಮೂರನೆಯ ದ್ವಿತೀಯೆಯು ಆಶ್ವಯುಜ ಮಾಸದಲ್ಲಿಯೂ ನಾಲ್ಕನೆಯದು ಕಾರ್ತಿಕ ಮಾಸದಲ್ಲಿಯೂ ಪ್ರಸಿದ್ಧವಾಗಿದೆ. ಈ ದ್ವಿತೀಯೆಗಳೆಲ್ಲವನ್ನೂ ಶುದ್ಧದ ದ್ವಿತೀಯೆಗಳೆಂದು ತಿಳಿಯಬೇಕು.

೭೩. ಶ್ರಾವಣ ಮಾಸದ ದ್ವಿತೀಯೆಗೆ ಕಲುಷ ಎಂದೂ ಬಾದ್ರಪದದ ದ್ವಿತೀಯೆಗೆ ಅಮಲಾ ಎಂದೂ ಆಶ್ವಯುಜದ ದ್ವಿತೀಯೆಗೆ ಪ್ರೇತಸಂಚಾರಾ ಎಂದೂ ಕಾರ್ತಿಕ ಮಾಸದ ದ್ವಿತೀಯೆಗೆ ಯಾಮ್ಯಕಾ ಎಂದೂ ಹೆಸರು ಬಂದಿವೆ.

೭೪. ಸತ್ಯೆಯು ಹೇಳಿದಳು-ಕಲುಷಾ ನಿರ್ಮಲ ಪ್ರೇತಸಂಚಾರಾ ಯಾಮ್ಯ ಎಂಬುದಾಗಿ ಆಯಾಯ ದ್ವಿತೀಯೆಗಳಿಗೆ ಹೆಸರು ಬರಲು ಕಾರಣವೇನು?

೭೫. ಸೂತನು ಹೇಳಿದನು-ಸತ್ಯಭಾಮೆಯು ಹೇಳಿದ ಈ ರೀತಿಯಾದ ಮಾತನ್ನು ಕೇಳಿ ಭೂತ ಭವಿಷ್ಯದ್ವರ್ತಮಾನಗಳನ್ನು ಬಲ್ಲ ಕೃಷ್ಣನು ನಗುತ್ತ ನಿದಾನವಾಗಿ ಆಕೆಗೆ ಇಂತೆಂದನು.

॥ ಶ್ರೀಕೃಷ್ಣ ಉವಾಚ ॥

ಪುರಾ ವೃತ್ರವಧೇ ವೃತ್ತೇ ಪ್ರಾಪ್ತರಾಜ್ಯೇ ಪುರಂದರೇ ।
ಬ್ರಹ್ಮಹತ್ಯಾಪನೋದಾರ್ಥಮಶ್ವಮೇಧಃ ಪ್ರಕೀರ್ತಿತಃ ॥ ೨೬ ॥

ಕ್ರೋಧಾದಿಂದ್ರೇಣ ವಜ್ರೇಣ ಬ್ರಹ್ಮಹತ್ಯಾ ನಿಷೂದಿತಾ ।
ಷಡ್ವಿಧಾ ಸಾ ಕ್ಷಿತೌ ಕ್ಷಿಪ್ತಾ ವೃಕ್ಷೇ ತೋಯೇ ಮಹೀತಳೇ ॥ ೨೭ ॥

ನಾರ್ಯಾಂ ಭ್ರೂಣಹನಿ ವಹ್ನೌ ಸಂವಿಭಜ್ಯ ಯಥಾಕ್ರಮಂ ।
ತತ್ಪಾಪಶ್ರವಣಾತ್ಪೂರ್ವಂ ದ್ವಿತೀಯಾಯಾ ವಿನೋದಯೇ ॥ ೨೮ ॥

ನಾರೀವೃಕ್ಷನದೀಭೂಮಿವಹ್ನಿಭ್ರೂಣಹನಸ್ತಥಾ ।
ಕಲುಷೀಭವನಂ ಜಾತಾ ಹ್ಯತಸ್ಸಾ ಕಲುಷಾ ಮತಾ ॥ ೨೯ ॥

ಮಧುಕೈಟಭಯೋ ರಕ್ತೇ ಪುರಾ ಮಗ್ನಾ ತು ಮೇದಿನೀ ।
ಅಷ್ಟಾಂಗುಳಾಽಪವಿತ್ರಾ ಸಾ ನಾರೀಣಾಂ ತು ರಜೋಮಲಂ ॥ ೩೦ ॥

---

೨೬. ಶ್ರೀ ಕೃಷ್ಣನು ಹೇಳಿದನು–ಪೂರ್ವದಲ್ಲಿ ಇಂದ್ರನು ವೃತ್ರಾಸುರನನ್ನು ಕೊಂದು ರಾಜ್ಯವನ್ನು ವಶಪಡಿಸಿಕೊಳ್ಳಲು ಆ ವೃತ್ರನನ್ನು ಕೊಂದುಬಂದ ಬ್ರಹ್ಮ ಹತ್ಯೆಯು ಹೋಗುವುದಕ್ಕೋಸ್ಕರ ಆತನನ್ನು ಅಶ್ವಮೇಧವನ್ನು ಮಾಡೆಂದು ಹೇಳಿದರು.

೨೭–೨೯. ಆಗ ಕೋಪಗೊಂಡ ಇಂದ್ರನು ಆ ಬ್ರಹ್ಮಹತ್ಯೆಯನ್ನು ವಜ್ರಾಯುಧದಿಂದ ಆರು ಭಾಗವನ್ನಾಗಿ ಕತ್ತರಿಸಿ ನೆಲದಮೇಲೆ ಎಸೆದನು. ಹೀಗ ಎಸೆಯಲ್ಪಟ್ಟ ಆರು ಭಾಗಗಳಲ್ಲಿ ಒಂದು ಮರದಲ್ಲಿಯೂ ಒಂದು ನೀರಿನಲ್ಲಿಯೂ ಒಂದು ಭೂಮಿಯಲ್ಲಿಯೂ ಒಂದು ಹೆಂಗಸಿನಲ್ಲಿಯೂ ಒಂದು ಗರ್ಭಘಾತಕ ನಲ್ಲಿಯೂ ಒಂದು ಬೆಂಕಿಯಲ್ಲಿಯೂ ಈರೀತಿಯಾಗಿ ಭಾಗವಾದುವು. ಆಗ ಆ ಪಾಪವು ತಮಗೆ ಬರುತ್ತದೆಂದು ಕೇಳುವುದಕ್ಕೆ ಮೊದಲೇ ಬಂದಿದ್ದ ದ್ವಿತೀಯೆಯು ದಿವಸ ಹೆಂಗಸು ಮರ ನದಿ ಭೂಮಿ ವಹ್ನಿ ಮಕ್ಕಳುಗಡುಕರು ಕಾಂತಿಹೀನರಾದರು. ಆದುದರಿಂದ ಆ ದ್ವಿತೀಯೆಯು ಕಲುಷ ಎಂದೆನಿಸಿಕೊಂಡಿತು.

೩೦. ಪೂರ್ವದಲ್ಲಿ ಮಧುಕೈಟಭರನ್ನು ಕೊಂದಾಗ ಭೂಮಿಯು ಎಂಟು ಅಂಗುಲದಷ್ಟು ಉದ್ದಕ್ಕೆ ಅವರ ರಕ್ತದಲ್ಲಿ ಮುಳುಗಿದ್ದಿತು. ಆದುದರಿಂದ ಅದಕ್ಕೆ ಅಪವಿತ್ರ ಎಂದರೆ ಮಲವುಳ್ಳದ್ದೆಂದು ಹೆಸರು ಬಂದಿತು. ನಾರಿಯರ ರಜಸ್ಸು ಮಲರೂಪವಾದುದರಿಂದ ಅದಕ್ಕೆ ಮಲವೆಂದು ಹೆಸರು ಬಂದಿತು.

ಪದ್ಯಃ ಪ್ರಾನ್ನೃಣ್ಮಲಾಸ್ತ್ವರ್ತ್ವಾಃ ವಹ್ನೇರೂರ್ಧ್ವಂ ಮಷೀ ಮಲಂ।
ನಿರ್ಯಾಸಮಲಿನೋ ವೃಕ್ಷಾಃ ಸಂಗಾದ್ಭ್ರೂಣಹನೋ ಮಲಾಃ ॥ ೮೧ ॥

ಕಲುಷಾಣಿ ಚರಂತ್ಯಸ್ಯಾಂ ತೇನೈಷಾ ಕಲುಷಾ ಮತಾ।
ದೇವರ್ಷಿ ಪಿತೃ ಧರ್ಮಾಣಾಂ ನಿಂದಕಾ ನಾಸ್ತಿಕಾಶಠಾಃ ॥ ೮೨ ॥

ತೇಷಾಂ ಸಾ ವಾಜ್ಮಲಾ ಪ್ರೋಚಾ ದ್ವಿತೀಯಾ ತೇನ ನಿರ್ಮಲಾ।
ಅಸಧ್ಯಾಯೇಷು ಶಾಸ್ತ್ರಾಣಿ ಪಾಠಯಂತಿ ಪಠಂತಿ ಚ ॥ ೮೩ ॥

ಸಾಂಖ್ಯ ಕಾಸ್ತಾರ್ತಿಕಾಶ್ಚ್ಯೈತಾಸ್ತೇಷಾಂ ಶಬ್ದಾಪಶಬ್ದ ಜಾತ್ ।
ಮಲಾತ್ಪೂತಾ ದ್ವಿತೀಯಾಯಾಂ ತತೋರ್ಥಂ ನಿರ್ಮಲಾ ಮತಾ ॥ ೮೪ ॥

ಅಗ್ನಿಷ್ವಾತ್ತಾ ಬರ್ಹಿಷದ ಆಜ್ಯಪಾಸ್ಸೋಮಪಾಸ್ತಥಾ।
ಪಿತೃಪಿತಾಮಹಪ್ರೇತಸಂಚಾರಾತ್ಪ್ರೇತಸಂಚರಾ ॥ ೮೫ ॥

---

೮೧. ಮಳೆಗಾಲದಲ್ಲಿ ನದಿಗಳೆಲ್ಲವೂ ಮಲಗಳು ಬೆಂಕಿಯ ಮೇಲುಭಾಗದಲ್ಲಿರುವ ಮಷಿಯು ಮಲವಾಗಿರುವುದರಿಂದ ಮಲವು ಮರಗಳು ಹಾಲು ಅಥವಾ ಗೋಂದು ಬರುವುದರಿಂದ ಮಲಗಳು ಕಾಲವಲ್ಲದ ಕಾಲದಲ್ಲಿ ರಮಿಸುವುದರಿಂದಲೂ ರಮಿಸಬೇಕಾದ ಕಾಲದಲ್ಲಿ ರಮಿಸದಿರುವುದರಿಂದಲೂ ಭ್ರೂಣಹನನು ಮಲನು.

೮೨-೮೪. ಈರೀತಿಯಾಗಿ ಕಲುಷವಾದ ಪದಾರ್ಥಗಳು ಈ ದ್ವಿತೀಯೆಯಲ್ಲಿ ಸಂಚರಿಸುವುದರಿಂದ ಅದಕ್ಕೆ ಕಲುಷಾ ಎಂದು ಹೆಸರು ಬಂದಿರುವುದು ದೇವತೆಗಳು ಋಷಿಗಳು ಧರ್ಮಗಳು ಇವುಗಳನ್ನು ನಿಂದಿಸುವ ನಾಸ್ತಿಕರು ಶಠರು ಎಂದರೆ ಅಯೋಗ್ಯರು ಅಂತಹವರ ಮಾತು ಮಲವುಳ್ಳದ್ದು ಅದರಿಂದ ಆ ದ್ವಿತೀಯೆಗೆ ನಿರ್ಮಲೆಯೆಂದು ಹೆಸರು ಬಂದಿದೆ. ಅನ ಧ್ಯಾಯಗಳಲ್ಲಿ ಶಾಸ್ತ್ರಗಳನ್ನು ಓದುತ್ತಾರೆ. ಓದಿಸುತ್ತಾರೆ. ಅಲ್ಲದೆ ಸಾಂಖ್ಯದವರು ತರ್ಕದವರು ಹೇಳುವ ಶಬ್ದದಲ್ಲಿ ಅಪಶಬ್ದಗಳು ಅನೇಕವಾಗಿವೆ. ಆ ಮಲದಿಂದ ಈದ್ವಿತೀಯೆಯು, ಪವಿತ್ರ ಮಾಡುವುದರಿಂದ ಅದು ನಿರ್ಮಲವೆಂದು ಹೆಸರು ಹೊಂದಿದೆ.

೮೫. ಅಗ್ನಿಷ್ವಾತಾದಿ ಬರ್ಹಿಷದವರು ಆಜ್ಯಪರು ಸೋಮಪರು ಪಿತೃ ಪಿತಾಮಹರು ಆ ದ್ವಿತೀಯೆಯಲ್ಲಿ ಸಂಚಾರ ಮಾಡುವುದರಿಂದ ಅದು ಪ್ರೇತ ಸಂಚಾರವೆಂದು ಹೆಸರು ಹೊಂದಿದೆ.

ಪ್ರೇತಾಸ್ತು ಪಿತರಃ ಪ್ರೋಕ್ತಾಸ್ತೇಷಾಂ ತಸ್ಯಾಂ ತು ಸಂಚರಃ ।
ಪುತ್ರಪೌತ್ರೈಸ್ತು ದೌಹಿತ್ರೈಃ ಸ್ವಧಾಮಂತ್ರೈಸ್ತು ಪೂಜಿತಾಃ ॥ ೮೬ ॥

ಶ್ರಾದ್ಧ ದಾನ ಮಖೈಸ್ತೃಪ್ತಾ ಯಾಂತ್ಯತಃ ಪ್ರೇತಸಂಚರಾ ।
ಕಾರ್ತಿಕೇ ತು ದ್ವಿತೀಯಾಯಾಂ ಪೂರ್ವಾಹ್ನೇ ಯಮಮರ್ಚಯೇತ್ ॥ ೮೭ ॥

ಭಾನುಜಾಯಾಂ ನರಸ್ನಾತ್ವಾ ಯಮಲೋಕಂ ನ ಪಶ್ಯತಿ ।
ಕಾರ್ತಿಕೇ ಶುಕ್ಲಪಕ್ಷೇ ತು ದ್ವಿತೀಯಾಯಾಂ ತು ಭಾಮಿನಿ ॥ ೮೮ ॥

ಯಮೋ ಯಮುನಯಾ ಪೂರ್ವಂ ಭೋಜಿತಸ್ಸ್ವಗೃಹೇರ್ಚಿತಃ ।
ದ್ವಿತೀಯಾಯಾಂ ಮಹೋತ್ಸರ್ಗೋ ನಾರಕೀಯಾಶ್ಚ ತರ್ಪಿತಾಃ ॥ ೮೯ ॥

ಪಾಪೇಭ್ಯೋ ವಿಪ್ರಯುಕ್ತಾಸ್ತೇ ಮುಕ್ತಾಸ್ಸರ್ವನಿಬಂಧನಾತ್ ।
ಅತ್ರಾಸಿತಾಶ್ಚ ಸಂತುಷ್ಟಾಃ ಸ್ಥಿತಾಸ್ಸರ್ವೇ ಯದೃಚ್ಛಯಾ ॥ ೯೦ ॥

---

೮೬. ಪಿತೃಗಳೇ ಪ್ರೇತರೆಂದೆನಿಸಿಕೊಳ್ಳುತ್ತಾರೆ. ಅವರು ಆ ದ್ವಿತೀಯೆಯಲ್ಲಿ ಸಂಚಾರಮಾಡುತ್ತಾರೆ ಅವರು ಆ ದಿನ ಮಕ್ಕಳುಮೊಮ್ಮಕ್ಕಳು ದೌಹಿತ್ರರುಗಳಿಂದ ಸ್ವಧಾ ಮಂತ್ರವನ್ನು ಹೇಳುತ್ತಾ ಪೂಜಿಸಲ್ಪಡುತ್ತಾರೆ. ಆ ದಿನ ಅವರು ಶ್ರಾದ್ಧಮುಖಗಳಿಂದ ತೃಪ್ತರಾಗಿ ಹೋಗುತ್ತಾರೆ ಆದುದರಿಂದ ಆ ದ್ವಿತೀಯೆಯು ಪ್ರೇತಸಂಚಾರವೆಂದು ಹೆಸರು ಹೊಂದಿದೆ.

೮೭. ಯಮುನೆಯಲ್ಲಿ ಸ್ನಾನಮಾಡಿ ಕಾರ್ತಿಕಮಾಸದ ದ್ವಿತೀಯೆಯ ದಿನ ಪೂರ್ವಾಹ್ಣದಲ್ಲಿ ಯಮನನ್ನು ಪೂಜಿಸಬೇಕು. ಅವನು ಯಮಲೋಕವನ್ನು ನೋಡುವುದಿಲ್ಲ ಎಂದರೆ ನರಕಭಾಗಿಯಾಗುವುದಿಲ್ಲ.

೮೮. ಕಾರ್ತಿಕ ಶುದ್ಧ ದ್ವಿತೀಯೆಯ ದಿವಸ ಯಮನು ಯಮುನೆಯ ಕೈಯ್ಯಲ್ಲಿ ಆಕೆಯ ಮನೆಯಲ್ಲಿ ಮೊದಲು ಊಟಮಾಡಿದನು. ಮತ್ತು ಗೌರವವನ್ನು ಹೊಂದಿದನು.

೮೯. ಕಾರ್ತಿಕ ಶುದ್ಧ ದ್ವಿತೀಯೆಯ ದಿವಸ ನರಕದವರನ್ನು ಬಿಟ್ಟು ಅವರೆಲ್ಲರಿಗೂ ತೃಪ್ತಿಪಡಿಸಿ ಅವರನ್ನು ಪಾಪಗಳಿಂದ ಮುಕ್ತಿ ಹೊಂದಿಸಿದನು ಮತ್ತು ತೊಂದರೆಗಳೆಲ್ಲವನ್ನೂ ತಪ್ಪಿಸಿದನು,

೯೦-೯೧. ಆ ದಿನ ಪಾಪಿಗಳೆಲ್ಲರನ್ನೂ ಯಮನು ಹೆದರಿಸದಿದ್ದುದರಿಂದಲೂ ಅವರು ಸಂತೋಷವಾಗಿದ್ದುದರಿಂದಲೂ ಅವರೆಲ್ಲರೂ ಸ್ವತಂತ್ರರಾಗಿ

ತೇಷಾಂ ಮಹೋತ್ಸವೋ ವೃತ್ತೋ ಯಮರಾಷ್ಟ್ರೇ ಸುಖಾವಹಃ ।
ಅತೋ ಯಮದ್ವಿತೀಯೇಯಂ ತ್ರಿಷು ಲೋಕೇಷು ವಿಶ್ರುತಾ ॥ ೯೧ ॥

ತಸ್ಮಾನ್ನಿಜಗೃಹೇ ವಿಪ್ರ ನ ಭೋಕ್ತವ್ಯಂ ತತೋ ಬುಧೈಃ ।
ಸ್ನೇಹೇನ ಭಗಿನೀಹಸ್ತಾದ್ಭೋಕ್ತವ್ಯಂ ಪುಷ್ಟಿವರ್ಧನಂ ॥ ೯೨ ॥

ದಾನಾನಿ ಚ ಪ್ರದೇಯಾನಿ ಭಗಿನೀಭ್ಯೋ ವಿಧಾನತಃ ।
ಸ್ವರ್ಣಾಲಂಕಾರವಸ್ತ್ರಾಣಿ ಪೂಜಾಸತ್ಕಾರಪೂರ್ವಕಂ ॥ ೯೩ ॥

ಭೋಕ್ತವ್ಯಂ ಸಹಜಾಯಾಶ್ಚ ಭಗಿನ್ಯಾ ಹಸ್ತತಃ ಪರಂ ।
ಸರ್ವೈಸ್ತು ಭಗಿನೀಹಸ್ತಾದ್ಭೋಕ್ತವ್ಯಂ ಬಲವರ್ಧನಂ ॥ ೯೪ ॥

ಊರ್ಜೇ ಶುಕ್ಲದ್ವಿತೀಯಾಯಾಂ ಪೂಜಿತಸ್ತರ್ಪಿತೋ ಯಮಃ ।
ಮಹಿಷಾಸನಮಾರೂಢೋ ದಂಡಮುದ್ಗರಭೃತ್ಪ್ರಭುಃ ॥ ೯೫ ॥

---

ಮನಸ್ಸು ಬಂದಂತೆ ಇದ್ದುದರಿಂದಲೂ ಅವರಿಗೆ ಬಹು ಸಂತೋಷವಾಗಿದ್ದಿತು ಆದಿನ ಯಮನ ದೇಶವೇ ಸುಖವಾಗಿದ್ದಿತು. ಆದುದರಿಂದ ಈ ಯಮದ್ವಿತೀಯೆಯು ಮೂರು ಲೋಕದಲ್ಲಿಯೂ ಪ್ರಸಿದ್ಧವಾಗಿರುವುದು.

೯೨. ಆದುದರಿಂದ ಆ ದಿನ ತನ್ನ ಮನೆಯಲ್ಲಿ ಬುದ್ಧಿವಂತನು ಊಟ ಮಾಡಬಾರದು. ಸ್ನೇಹದಿಂದ ಸೋದರಿಯರ ಕೈಯ್ಯಿಂದ ಊಟಮಾಡಿದರೆ ಪುಷ್ಟಿಯು ಉಂಟಾಗುತ್ತದೆ.

೯೩. ಆಗ ಅಕ್ಕ ತಂಗಿಯರಿಗೆ ಶಾಸ್ತ್ರವಿಧಾನದಿಂದ ಅನೇಕ ದಾನಗಳನ್ನು ಕೊಡಬೇಕು. ಚಿನ್ನದ ಒಡವೆ ಸೀರೆ ಕುಪ್ಪಸಗಳು ಪೂಜೆಯ ಪದಾರ್ಥಗಳು ಮುಂತಾದುವುಗಳನ್ನು ಅವರನ್ನು ಗೌರವಿಸಿ ಕೊಡಬೇಕು.

೯೪. ಎಲ್ಲರೂ ತನ್ನ ಜೊತೆಯಲ್ಲಿ ಹುಟ್ಟಿದ ಅಕ್ಕತಂಗಿಯರ ಕೈಯಿಂದಲೇ ಊಟಮಾಡಬೇಕು. ಹಾಗೆ ಮಾಡಿದರೆ ಬಲವು ಹೆಚ್ಚುತ್ತದೆ.

೯೫. ಕಾರ್ತಿಕ ಶುಕ್ಲ ದ್ವಿತೀಯೆಯ ದಿವಸ ಯಮನು ಪೂಜಿತನಾಗಿ ತೃಪ್ತಿಗೊಂಡನು. ಕೋಣನ ಮೇಲೆ ಕುಳಿತುಕೊಂಡು ದಂಡ ಮುದ್ಗರಗಳನ್ನು ಧರಿಸಿ ಸಂತೋಷದಿಂದಿದ್ದನು.

ವೇಷ್ಟಿತಃ ಕಿಂಕರೈರ್ಜುಷ್ಟೈಸ್ತಸ್ಮೈ ಯಮಾತ್ಮನೇ ನಮಃ ।
ಯೈರ್ಭಗಿನ್ಯಸ್ಸುಖಾಸಿನ್ಯೋ ವಸ್ತ್ರದಾನಾದಿತೋಷಿತಾಃ ॥ ೯೬ ॥

ನ ತೇಷಾಂ ವತ್ಸರಂ ಯಾವತ್ಕಲಹೋ ನ ರಿಪೋರ್ಭಯಂ ।
ಧನ್ಯಂ ಯಶಸ್ಯಮಾಯುಷ್ಯಂ ಧರ್ಮಕಾಮಾರ್ಥ ಸಾಧನಂ ।
ವ್ಯಾಖ್ಯಾತಂ ಸಕಲಂ ಸತ್ಯೇ ಸರಹಸ್ಯಂ ಮಯಾನಘೇ ॥ ೯೭ ॥

ಯಸ್ಯಾಂ ತಿಥೌ ಯಮುನಯಾ ಯಮರಾಜ ದೇವಃ
ಸಂಭೋಜಿತಃ ಪಿತೃಪತಿಃ ಸ್ವಸೃಸೌಹೃದೇನ ।
ತಸ್ಯಾಂ ಸ್ವಸುಃ ಕರತಳಾದಿಹ ಯೋ ಭುನಕ್ತಿ
ಪ್ರಾಪ್ನೋತಿ ವಿತ್ತಶುಭಸಂಪದ ಮುತ್ತಮಾಂ ಸಃ ॥ ೯೮ ॥

ಇತಿ ಶ್ರೀ ಮಹಾಪುರಾಣೇ ಪಾದ್ಮೇ ಉತ್ತರಖಂಡೇ ಕಾರ್ತಿಕ ಮಾಹಾತ್ಮ್ಯೇ
ಶ್ರೀ ಕೃಷ್ಣ ಸತ್ಯಭಾಮಾ ಸಂವಾದೇ ಯಮ ದ್ವಿತೀಯ ಮಾಹಾತ್ಮ್ಯಂ
ನಾಮ ಚತುರ್ವಿಂಶತ್ಯಧಿಕಶತತಮೋಽಧ್ಯಾಯಸ್ಸಮಾಪ್ತಃ

---

೯೬. ಮತ್ತು ಆ ದಿನ ಯಮನು ತಂಗಿಯರ ಕೈಯಲ್ಲಿ ಊಟಮಾಡಿ ಅವರಿಗೆ ಬಟ್ಟೆ ಬರೆಗಳನ್ನು ಕೊಟ್ಟು ಸಂತೋಷಪಡಿಸಿದನು. ತನ್ನ ಆಳುಗಳಿಂದಲೂ ಸುತ್ತುವರಿಯಲ್ಪಟ್ಟನು.

೯೭. ಹೀಗೆ ಅಕ್ಕತಂಗಿಯರ ಕೈಯಲ್ಲಿ ಊಟಮಾಡಿ ಅವರಿಗೆ ಬಹು ಮಾನವನ್ನು ಕೊಟ್ಟವರಿಗೆ ವರ್ಷದವರೆಗೂ ಜಗಳವಿರುವುದಿಲ್ಲ. ಇದು ಧನ್ಯವಾದುದು ಯಶಸ್ಸನ್ನು ಕೊಡತಕ್ಕದ್ದು. ಧರ್ಮ ಅರ್ಥ ಕಾಮುಗಳಿಗೆ ಸಾಧನವಾದುದು. ಇಂತಹ ರಹಸ್ಯವನ್ನು ನಿನಗೆ ಹೇಳಿದ್ದೇನೆ.

೯೮. ಯಮರಾಜನು ಸಹೋದರಿಯರಲ್ಲಿರುವ ಪ್ರೀತಿಯಿಂದ ಯಾವ ತಿಥಿಯಲ್ಲಿ ಭೋಜನ ಮಾಡಿಸಲ್ಪಟ್ಟನೋ ಆ ತಿಥಿಯ ದಿವಸ ಸೋದರಿಯರ ಕೈಯಿಂದ ಯಾವನು ಊಟಮಾಡುತ್ತಾನೆಯೋ ಅವನು ಸರ್ವ ಸಂಪತ್ತನ್ನೂ ಹೊಂದುತ್ತಾನೆ.

ಇಂತು ಶ್ರೀ ಪದ್ಮಮಹಾಪುರಾಣದ ಉತ್ತರಖಂಡದ ಕಾರ್ತಿಕ ಮಹಿಮೆಯ
ಶ್ರೀ ಕೃಷ್ಣ ಸತ್ಯಭಾಮೆಯರ ಸಂವಾದದಲ್ಲಿ ಯಮದ್ವಿತೀಯೆಯ ಮಹಿಮೆ
ಎಂಬ ನೂರ ಇಪ್ಪತ್ತನಾಲ್ಕನೆಯ ಅಧ್ಯಾಯವು ಮುಗಿದುದು.



॥ ಶ್ರೀಃ ॥

–X–

# ಅಥ ಶ್ರೀ ಮಹಾಪುರಾಣೇ ಪಾದ್ಮೇ ಉತ್ತರಖಂಡೇ

## ॥ ಪಂಚವಿಂಶತ್ಯಧಿಕಶತತಮೋಽಧ್ಯಾಯಃ ॥



॥ ಈಶ್ವರ ಉವಾಚ ॥

**ಪ್ರಬೋಧಿನ್ಯಾಶ್ಚ ಮಾಹಾತ್ಮ್ಯಂ ಪಾಪಘ್ನಂ ಪುಣ್ಯವರ್ಧನಂ ।**
**ಮುಕ್ತಿದಂ ತತ್ವಬುದ್ಧೀನಾಂ ಶೃಣುಷ್ವ ಸುರಸತ್ತಮ ॥ ೧ ॥**

**ತಾವದ್ಗರ್ಜತಿ ಸೇನಾನೀರ್ಗಂಗಾಭಾಗೀರಥೀ ಕ್ಷಿತೌ ।**
**ಯಾವನ್ನಾಯಾತಿ ಪಾಪಘ್ನೀ ಕಾರ್ತಿಕೇ ಹರಿಬೋಧಿನೀ ॥ ೨ ॥**

**ತಾವದ್ಗರ್ಜಂತಿ ತೀರ್ಥಾನಿ ಆಸಮುದ್ರಸರಾಂಸಿ ಚ ।**
**ಯಾವತ್ಪ್ರಬೋಧಿನೀ ವಿಷ್ಣೋಸ್ತಿಥಿರ್ನಾಯಾತಿ ಕಾರ್ತಿಕೇ ॥ ೩ ॥**

---

## ನೂರ ಇಪ್ಪತ್ತೈದನೆಯ ಅಧ್ಯಾಯವು



೧. ಈಶ್ವರನು ಹೇಳಿದನು—ಎಲೈ ಕುಮಾರಸ್ವಾಮಿಯೇ! ಪ್ರಬೋಧಿನಿ ಏಕಾದಶಿಯ ಮಹಿಮೆಯನ್ನು ಕೇಳು. ಅದು ಪಾಪವನ್ನು ನಾಶಮಾಡುತ್ತದೆ. ಪುಣ್ಯವನ್ನು ಹೆಚ್ಚಿಸುತ್ತದೆ. ಜ್ಞಾನಿಗಳಿಗೆ ಮೋಕ್ಷವನ್ನು ಕೊಡುತ್ತದೆ. ಅದರ ವಿಷಯವನ್ನು ಹೇಳುತ್ತೇನೆ. ಕೇಳು.

೨. ಎಲೈ ಗುಹನೆ! ಪಾಪನಾಶಕವಾದ ಕಾರ್ತಿಕೆಯ ಹರಿಬೋಧಿನೀ ಏಕಾದಶಿಯು ಬರುವವರೆಗೂ ಭಗೀರಥನು ತಂದ ಗಂಗೆಯು ಗರ್ಜಿಸುತ್ತವೆ.

೩. ವಿಷ್ಣುವಿನ ತಿಥಿಯಾದ ಪ್ರಬೋಧಿನೀ ಏಕಾದಶಿಯು ಕಾರ್ತಿಕ ಮಾಸದಲ್ಲಿ ಬರುವವರೆಗೂ ಸಮುದ್ರದವರೆಗೂ ಇರುವ ಎಲ್ಲಾ ತೀರ್ಥಗಳೂ ಗರ್ಜಿಸುತ್ತವೆ.

**ಅಶ್ವಮೇಧಸಹಸ್ರಾಣಿ ರಾಜಸೂಯಶತಾನಿ ಚ ।**
**ಏಕೇ ನೈವೋಪವಾಸೇನ ಪ್ರಬೋಧಿನ್ಯಾಃ ಫಲಂ ಲಭೇತ್ ॥ ೪ ॥**

**ದುರ್ಲಭಂ ಚೈವ ದುಷ್ಪ್ರಾಪ್ಯಂ ತ್ರೈಲೋಕ್ಯೇ ಸಚರಾಚರೇ ।**
**ತದಪಿ ಪ್ರಾರ್ಥಿತಂ ವಿಪ್ರ ದದಾತಿ ಪ್ರತಿಬೋಧಿನೀ ॥ ೫ ॥**

**ಐಶ್ವರ್ಯಂ ಸಂತತಿಂ ಜ್ಞಾನಂ ರಾಜ್ಯಂ ಚ ಸುಖಸಂಪದಃ ।**
**ದದಾತ್ಯುಪೋಷಿತಾ ವಿಪ್ರ ಹೇಲಯಾ ಹವಬೋಧಿನೀ ॥ ೬ ॥**

**ಮೇರುಮಂದರತುಲ್ಯಾನಿ ಪಾಪಾನ್ಯುಪಾರ್ಜಿತಾನಿ ಚ ।**
**ಏಕೇನೈವೋಪವಾಸೇನ ದಹತೇ ಹರಿಬೋಧಿನೀ ॥ ೭ ॥**

**ಉಪವಾಸಂ ಪ್ರಬೋಧಿನ್ಯಾಂ ಯಃ ಕರೋತಿ ಸ್ವಭಾವತಃ ।**
**ವಿಧಿನಾ ನರಶಾರ್ದೂಲ ಯಥೋಕ್ತಂ ಲಭತೇ ಫಲಂ ॥ ೮ ॥**

---

೪. ಸಾವಿರ ಅಶ್ವಮೇಧಗಳೂ ನೂರು ರಾಜಸೂಯ ಯಾಗಗಳ ಫಲಗಳೂ ಒಂದೇ ಒಂದು ಪ್ರಬೋಧಿನೀ ಏಕಾದಶಿಯ ಉಪವಾಸ ಮಾಡುವುದರಿಂದ ಸಿಕ್ಕುತ್ತವೆ.

೫. ಸ್ಥಾವರ ಜಂಗಮಾತ್ಮಕವಾದ ಈ ಮೂರು ಲೋಕಗಳಲ್ಲಿಯೂ ಯಾವುದು ಹೊಂದಲು ಅಸಾಧ್ಯವೋ ಮತ್ತು ಯಾವುದು ಸಿಕ್ಕಲು ಕಷ್ಟವಾಗುತ್ತದೆಯೋ ಅದನ್ನು ಕೂಡ ಆಚರಿಸಲ್ಪಟ್ಟ ಈ ಪ್ರಬೋಧಿನೀ ಏಕಾದಶಿಯು ಕೊಡುತ್ತದೆ.

೬. ಈ ಹರಿಬೋಧಿನೀ ಏಕಾದಶಿಯ ದಿವಸ ಉಪವಾಸ ಮಾಡಿದರೆ ಅದು ಬಹು ಸರಾಗವಾಗಿಯೇ ಐಶ್ವರ್ಯ ಸಂತತಿ ಜ್ಞಾನ ರಾಜ್ಯ ಸುಖ ಮುಂತಾದುವುಗಳನ್ನು ಕೊಡುತ್ತದೆ.

೭. ಈ ಹರಿಬೋಧಿನೀ ಏಕಾದಶಿಯೊಂದನ್ನು ಉಪವಾಸದಿಂದ ಆಚರಿಸಿದರೆ ಆ ಮನುಷ್ಯನಿಗೆ ಮೇರು ಮಂದರಗಳಷ್ಟು ಹೆಚ್ಚಾದ ಪಾಪಗಳಿದ್ದರೂ ಅದನ್ನು ನಾಶ ಮಾಡುತ್ತದೆ.

೮. ಯಾವನು ಸ್ವಭಾವವಾಗಿ ಎಲ್ಲಾ ಏಕಾದಶಿಗಳಂತೆ ವಿಧಿವತ್ತಾಗಿ ಈ ಪ್ರಬೋಧಿನಿಯ ಏಕಾದಶಿಯಲ್ಲಿಯೂ ಉಪವಾಸ ಮಾಡುತ್ತಾನೆಯೋ ಅವನು ಶಾಸ್ತ್ರದಲ್ಲಿ ಹೇಳಿರುವಂತೆ ಫಲವನ್ನು ಹೊಂದುತ್ತಾನೆ.

ಪೂರ್ವಜನ್ಮಸಹಸ್ರೇಷು ಪಾಪಂ ಯತ್ಸಮುಪಾರ್ಜಿತಂ ।
ಜಾಗರೇಣ ಪ್ರಬೋಧಿನ್ಯಾಂ ದಹ್ಯತೇ ತೂಲರಾಶಿವತ್ ॥ ೯ ॥

ಶೃಣು ಷಣ್ಮುಖ ವಕ್ಷ್ಯಾಮಿ ಜಾಗರಸ್ಯ ಚ ಲಕ್ಷಣಂ ।
ಯಸ್ಯ ವಿಜ್ಞಾನಮಾತ್ರೇಣ ದುರ್ಲಭೋ ನ ಜನಾರ್ದನ ॥ ೧೦ ॥

ಗೀತಂ ವಾದ್ಯಂ ಚ ನೃತ್ಯಂ ಚ ಪುರಾಣ ಪಠನಂ ತಥಾ ।
ಧೂಪೋ ದೀಪಶ್ಚ ನೈವೇದ್ಯಃ ಪುಷ್ಪಗಂಧಾನುಲೇಪನಂ ॥ ೧೧ ॥

ಫಲಮರ್ಘ್ಯಂ ಚ ಶ್ರದ್ಧಾ ಚ ದಾನಮಿಂದ್ರಿಯಸಂಯಮಃ ।
ಸತ್ಯಾನ್ವಿತಂ ವಿನಿದ್ರಂ ಚ ಮುದಾ ಯುಕ್ತಂ ಕ್ರಿಯಾನ್ವಿತಂ ॥ ೧೨ ॥

ಸಾಶ್ಚರ್ಯಂ ಚೈವ ಸೋತ್ಸಾಹಮಾಲಸ್ಯಾದಿ ವಿವರ್ಜಿತಂ ।
ಪ್ರದಕ್ಷಿಣಾದಿಸಂಯುಕ್ತಂ ನಮಸ್ಕಾರಪುರಸ್ಸರಂ ॥ ೧೩ ॥

ನೀರಾಜನಸಮಾಯುಕ್ತಮನಿರ್ವಿಣ್ಣೇನ ಚೇತಸಾ ।
ಯಾಮೇ ಯಾಮೇ ಮಹಾಭಾಗೆ ಕುರ್ವನ್ನೀರಾಜನಂ ಹರೇಃ ॥ ೧೪ ॥

---

೯. ಪೂರ್ವದ ಸಾವಿರ ಜನ್ಮಗಳಲ್ಲಿ ಎಷ್ಟು ಪಾಪಗಳನ್ನು ಮಾಡಿದ್ದರೂ ಈ ಪ್ರಬೋಧಿನೀ ಏಕಾದಶಿಯು ಆ ದಿನ ಜಾಗರಣೆ ಮಾಡುವುದರಿಂದ ಬೆಂಕಿಯು ಹತ್ತಿಯ ರಾಶಿಯನ್ನು ಸುಡುವಂತೆ ಆ ಪಾಪವನ್ನು ಸುಡುತ್ತದೆ.

೧೦. ಎಲೈ ಷಣ್ಮುಖನೆ! ಜಾಗರಣೆಯ ಲಕ್ಷಣವನ್ನು ಹೇಳುತ್ತೇನೆ. ಕೇಳು. ಅದನ್ನು ತಿಳಿದುಕೊಳ್ಳುವುದರಿಂದ ಜನಾರ್ದನನನ್ನು ತಿಳಿದಂತೆಯೇ ಆಗುತ್ತದೆ.

೧೧-೧೪. ಗೀತ ವಾದ್ಯ ಕುಣಿತ ಪುರಾಣವನ್ನು ಓದುವುದು ಧೂಪ ದೀಪ ನೈವೇದ್ಯ ಹೂವು ಗಂಧ ಶ್ರೀಗಂಧ ಹಣ್ಣು ಅರ್ಘ್ಯ ಶ್ರದ್ಧೆ ದಾನ ಇಂದ್ರಿಯ ನಿಗ್ರಹ ಸತ್ಯ ನಿದ್ರೆಯಿಲ್ಲದಿರುವಿಕೆ ಸಂತೋಷದಿಂದ ಕೆಲಸಗಳನ್ನು ಮಾಡುವುದು ಆಶ್ಚರ್ಯವಾಗುವಂತೆಯೂ ಉತ್ಸಾಹದಿಂದ ಕೂಡಿರುವಂತೆಯೂ ಕೆಲಸಗಳನ್ನು ಮಾಡುವುದು ಸೋಮಾರಿತನ ಮಾಡದಿರುವಿಕೆ ಪ್ರದಕ್ಷಿಣೆ ನಮಸ್ಕಾರಗಳನ್ನು ಮಾಡುತ್ತಿರುವುದು ಆರತಿಯೆತ್ತುವುದು ಪ್ರೀತಿಯ ಮನಸ್ಸಿನಿಂದ ಕೂಡಿರುವುದು ಇವೆಲ್ಲವನ್ನೂ ಪ್ರತಿ ಯಾಮದಲ್ಲಿಯೂ ಆಚರಿಸುತ್ತಾ ಹರಿಗೆ ಆರತಿಯನ್ನು ಬೆಳಗುತ್ತಿರಬೇಕು.

ಐಶ್ವೈರ್ಗುಣೈಸ್ಸಮಾಯುಕ್ತಂ ಕುರ್ಯಾಜ್ಜಾಗರಣಂ ವಿಭೋಃ ।
ಏಕಾಗ್ರಮನಸಾ ಯಸ್ತು ನಪುರ್ಜಾಯತೇ ಭುವಿ || ೧೫ ||

ಯ ಏವಂ ಕುರುತೇ ಭಕ್ತ್ಯಾ ವಿತ್ತಶಾಠ್ಯವಿವರ್ಜಿತಃ ।
ಜಾಗರಂ ವಾಸರೇ ವಿಷ್ಣೋರ್ಲೀಯತೇ ಪರಮಾತ್ಮನಿ || ೧೬ ||

ಪುರುಷಸೂಕ್ತೇನ ಯೋ ನಿತ್ಯಂ ಕಾರ್ತಿಕೇ ಹ್ಯರ್ಚಯೇದ್ಧರಿಂ ।
ವರ್ಷಕೋಟಿ ಸಹಸ್ರಾಣಿ ಪೂಜಿತಸ್ತೇನ ಕೇಶವಃ || ೧೭ ||

ಯಥೋಕ್ತೇನ ವಿಧಾನೇನ ಪಾಂಚರಾತ್ರೋದಿತೇನ ವೈ ।
ಕಾರ್ತಿಕೇತ್ವರ್ಚಯೇನ್ನಿತ್ಯಂ ಮುಕ್ತಿಭಾಗೀ ಭವೇನ್ನರಃ || ೧೮ ||

ನಮೋ ನಾರಾಯಣಾಯೇತಿ ಕಾರ್ತಿಕೇ ಯೋಽರ್ಚಯೇದ್ಧರಿಂ ।
ಸ ಮುಕ್ತೋ ನಾರಕೈರ್ದುಃಖೈಃ ಪದಂ ಗಚ್ಛತ್ಯನಾಮಯಂ || ೧೯ ||

---

ಈ ರೀತಿಯಾದ ಗುಣಗಳಿಂದ ಕೂಡಿರುತ್ತಾ ಜಾಗರಣೆಯನ್ನು ಮಾಡುತ್ತಿರಬೇಕು. ಒಂದೇ ಮನಸ್ಸಿನಿಂದ ಹೀಗೆ ಮಾಡಿದರೆ ಅವನಿಗೆ ಪುನರ್ಜನ್ಮವಿರುವುದಿಲ್ಲ.

೧೬. ಲೋಭಿತನ ಮಾಡದೆ ಭಕ್ತಿಯಿಂದ ಈರೀತಿಯಾಗಿ ಜಾಗರಣೆಯನ್ನು ಮಾಡಿದವನು ಆ ಪರಮಾತ್ಮನಾದ ವಿಷ್ಣುವಿನಲ್ಲಿ ಐಕ್ಯನಾಗುತ್ತಾನೆ.

೧೭. ಯಾವನು ಕಾರ್ತಿಕ ಮಾಸದಲ್ಲಿ ಪುರುಷಸೂಕ್ತದಿಂದ ಹರಿಯನ್ನು ನಿತ್ಯವೂ ಪೂಜಿಸುತ್ತಾನೆಯೋ ಅವನು ಸಾವಿರ ಕೋಟಿ ವರ್ಷಗಳವರೆಗೂ ವಿಷ್ಣುವನ್ನು ಪೂಜಿಸಿದಂತಾಗುತ್ತದೆ.

೧೮. ಪಾಂಚರಾತ್ರಾಗಮ ವಿಧಾನದಂತೆ ಕಾರ್ತಿಕ ಮಾಸದಲ್ಲಿ ವಿಷ್ಣುವನ್ನು ಪೂಜಿಸಿದರೆ ಅವನು ಮುಕ್ತಿಯನ್ನು ಹೊಂದುತ್ತಾನೆ.

೧೯. "ಓಂ ನಮೋ ನಾರಾಯಣಾಯ" ಎಂಬುವ ಮಂತ್ರದಿಂದ ಕಾರ್ತಿಕದಲ್ಲಿ ಯಾವನು ಹರಿಯನ್ನು ಅರ್ಚಿಸುವನೋ ಅದನು ನರಕದ ದುಃಖಗಳನ್ನು ತಪ್ಪಿಸಿಕೊಂಡು ವಿಷ್ಣುವಿನ ಸ್ಥಾನವಾದ ವೈಕುಂಠವನ್ನು ಹೊಂದುತ್ತಾನೆ.

ಹರೇರ್ನಾಮಸಹಸ್ರಾಖ್ಯಂ ನಾಗರಾಜಸ್ಯ ಮೋಕ್ಷಣಂ ।
ಕಾರ್ತಿಕೇ ಪಠತೇ ಯಸ್ತು ಪುನರ್ಜನ್ಮ ನ ವಿಂದತಿ ॥ ೨೦ ॥

ಯುಗಕೋಟಿ ಸಹಸ್ರಾಣಿ ಮನ್ವಂತರಶತಾನಿ ಚ ।
ದ್ವಾದಶ್ಯಾಂ ಕಾರ್ತಿಕೇ ಮಾಸಿ ಜಾಗರೀ ವಸತೇ ದಿವಿ ॥ ೨೧ ॥

ಕುಲೇ ತಸ್ಯ ಚ ಯೇ ಜಾತಾಃ ಶತಶೋಥ ಸಹಸ್ರಶಃ।
ಪ್ರಾಪ್ನುವಂತಿ ಪದಂ ವಿಷ್ಣೋಸ್ತಸ್ಮಾತ್ಕುರ್ವೀತ ಜಾಗರಂ ॥ ೨೨ ॥

ಕಾರ್ತಿಕೇ ಪಶ್ಚಿಮೇ ಯಾಮೇ ಸ್ತವಗಾನಂ ಕರೋತಿ ಯಃ ।
ಶ್ವೇತದ್ವೀಪೇ ತು ವಸತೇ ಪಿತೃಭಿಸ್ಸಹ ಷಣ್ಮುಖ ॥ ೨೩ ॥

ನೈವೇದ್ಯದಾನಂ ಹರಯೇ ಕಾರ್ತಿಕೇ ದಿನಸಂಕ್ಷಯೇ ।
ಯುಗಾನಿ ವಸತೇ ಸ್ವರ್ಗೇ ತಾವಂತಿ ಮುನಿಸತ್ತಮ ॥ ೨೪ ॥

---

೨೦. ಕಾರ್ತಿಕದಲ್ಲಿ ಗಜೇಂದ್ರಮೋಕ್ಷಕವಾದ ಹರಿಯ ಸಹಸ್ರನಾಮವನ್ನು ಯಾರು ಓದುತ್ತಾರೆಯೋ ಅವರಿಗೆ ಪುನರ್ಜನ್ಮವಿಲ್ಲ.

೨೧. ಕಾರ್ತಿಕ ಮಾಸದ ದ್ವಾದಶಿಯ ದಿವಸ ಜಾಗರಣೆ ಮಾಡಿದವನು ಕೋಟಿ ಸಾವಿರ ಯುಗಗಳೂ ನೂರು ಮನ್ವಂತರಗಳೂ ಕಳೆಯುವವರೆಗೆ ಸ್ವರ್ಗದಲ್ಲಿ ವಾಸಿಸುತ್ತಾನೆ.

೨೨. ಹಾಗೆ ಜಾಗರಣೆ ಮಾಡಿದವರ ಕುಲದಲ್ಲಿ ಹುಟ್ಟಿದ ಸಾವಿರಾರು ಜನರು ವಿಷ್ಣುವಿನ ಸ್ಥಾನವಾದ ವೈಕುಂಠವನ್ನು ಹೊಂದುತ್ತಾರೆ. ಆದುದರಿಂದ ಆ ಪ್ರಬೋಧಿನೀ ಏಕಾದಶಿಯಲ್ಲಿ ಜಾಗರಣೆಯನ್ನು ಮಾಡಬೇಕು.

೨೩. ಕಾರ್ತಿಕಮಾಸದ ಕೊನೆಯ ಯಾಮವಾದ ಬೆಳಗಿನ ಜಾವದಲ್ಲಿ ಯಾವನು ನಿನ್ನ ಸ್ತೋತ್ರವನ್ನು ಮಾಡುತ್ತಾನೆಯೋ ಅವನು ಶ್ವೇತದ್ವೀಪದಲ್ಲಿ ಅವನ ಪಿತೃಗಳನ್ನು ಜೊತೆಗೆ ಕರೆದುಕೊಂಡು ವಾಸಮಾಡುತ್ತಾನೆ.

೨೪. ಕಾರ್ತಿಕ ಮಾಸದಲ್ಲಿ ಸಾಯಂಕಾಲದಲ್ಲಿ ಹರಿಗೆ ನೈವೇದ್ಯವನ್ನು ಸಮರ್ಪಿಸಿದವನು ಸ್ವರ್ಗದಲ್ಲಿ ತಾನು ನೈವೇದ್ಯವನ್ನು ಸಮರ್ಪಿಸಿದವ ದಿನಗಳಷ್ಟು ಯುಗಗಳ ವರೆಗೂ ವಾಸಮಾಡುತ್ತಾನೆ.

ಅಕ್ಷಯಂ ಮುನಿಶಾರ್ದೂಲ ಮಾಲತೀಕಮಲಾರ್ಚನಂ ।
ಅರ್ಚಯೇದ್ದೇವದೇವೇಶಂ ಸ ಯಾತಿ ಪರಮಂ ಪದಂ ॥ ೨೫ ॥

ಕಾರ್ತಿಕೇ ಶುಕ್ಲಪಕ್ಷೇ ತು ಕೃತ್ವಾಹ್ಯೇಕಾದಶೀಂ ನರಃ ।
ಪ್ರಾತರ್ದತ್ವಾ ಶುಭಾನ್ಕುಂಭಾನ್ ಪ್ರಯಾತಿ ಹರಿಮಂದಿರಂ ॥ ೨೬ ॥

॥ ಕಾರ್ತಿಕೇಯ ಉವಾಚ ॥

ಯದೇತದ್ವಚನಂ ಪುಣ್ಯಂ ವ್ರತಾನಾಂ ಪರಮಂ ವ್ರತಂ ।
ಕರ್ತವ್ಯಂ ಕಾರ್ತಿಕೇ ಮಾಸಿ ಭವತಾ ಭೀಷ್ಮಪಂಚಕಂ ॥ ೨೭ ॥

ವಿಧಾನಂ ತಸ್ಯ ಚ ಫಲಂ ತಥೈವ ಸುರಸತ್ತಮ ।
ಕಥಯಸ್ವ ಪ್ರಸಾದಾನ್ಮೇ ಮುನೀನಾಂ ಚ ಪಿತಾಮಹ ॥ ೨೮ ॥

॥ ಈಶ್ವರ ಉವಾಚ ॥

ಪ್ರವಕ್ಷ್ಯಾಮಿ ಮಹಾಪುಣ್ಯಂ ವ್ರತಂ ವ್ರತವತಾಂ ವರ ।
ಭೀಷ್ಮೇಣೈತದ್ಯತಃ ಪ್ರಾಪ್ತಂ ವ್ರತಂ ಪಂಚದಿನಾತ್ಮಕಂ ॥ ೨೯ ॥

---

೨೫. ಮಾಲತಿ (ಜಾಜಿ) ಹೂವಿನಿಂದ ಕಾರ್ತಿಕಮಾಸದಲ್ಲಿ ಪೂಜೆಮಾಡುವುದು ಅಕ್ಷಯಕರವು. ಅದರಿಂದ ವಿಷ್ಣುವನ್ನು ಪೂಜಿಸಿದರೆ ಅವನಿಗೆ ಪರಮಪದವು ಸಿಕ್ಕುತ್ತದೆ.

೨೬. ಕಾರ್ತಿಕ ಮಾಸದ ಶುದ್ಧ ಏಕಾದಶಿಯನ್ನಾಚರಿಸಿ ಮಾರನೆಯ ದಿನ ಬೆಳಗ್ಗೆ ಕಲಶದಾನವನ್ನು ಮಾಡಿದರೆ ಅವನು ವೈಕುಂಠಕ್ಕೆ ಹೋಗುವನು.

೨೭. ಕುಮಾರಸ್ವಾಮಿಯು ಹೇಳಿದನು—ಲೋಕದಲ್ಲಿ ವ್ರತಗಳೆಲ್ಲೆಲ್ಲಾ ಉತ್ತಮವಾದ ಭೀಷ್ಮಪಂಚಕವೊಂದಿರುವುದು. ಅದನ್ನು ಕಾರ್ತಿಕ ಮಾಸದಲ್ಲಿ ಮಾಡಬೇಕು. ಎಂದು ಹೇಳುತಾರಷ್ಟೆ.

೨೮. ಆ ಭೀಷ್ಮಪಂಚಕದ ವಿಧಾನವನ್ನೂ ಅದರ ಫಲವನ್ನೂ ನನ್ನಲ್ಲಿ ಅನುಗ್ರಹಮಾಡಿ ಹೇಳು. ನೀನು ಮುನಿಗಳಿಗೆಲ್ಲರಿಗೂ ಕೂಡ ದೊಡ್ಡವನಾಗಿದ್ದೀಯೆ.

೨೯. ಈಶ್ವರನು ಹೇಳಿದನು—ಎಲೈ ವ್ರತಿಗಳಲ್ಲಿ ಉತ್ತಮನೆ! ಮಹಾಪುಣ್ಯಪ್ರದವಾದ ಆ ವ್ರತವನ್ನು ಹೇಳುತ್ತೇನೆ. ಐದು ದಿನಗಳವರೆಗೂ ಮಾಡುವ ಭೀಷ್ಮಪಂಚಕವು ಮೊದಲು ಭೀಷ್ಮನಿಂದಲೇ ಮಾಡಲ್ಪಟ್ಟಿತು.

ಸಕಾಶಾದ್ವಾಸುದೇವಸ್ಯ ತೇನೋಕ್ತಂ ಭೀಷ್ಮಪಂಚಕಂ ।
ವ್ರತಸ್ಯಾಸ್ಯ ಗುಣಾನ್ವಕ್ತುಂ ಕಶ್ಶಕ್ತಃ ಕೇಶವಾದ್ಯೃತೇ ॥ ೩೦ ॥

ಕಾರ್ತಿಕೇ ಶುಕ್ಲಪಕ್ಷೇ ತು ಶೃಣು ಧರ್ಮಂ ಪುರಾತನಂ ।
ವಸಿಷ್ಠಭೃಗುಗರ್ಗಾದ್ಯೈಶ್ಚೀರ್ಣಂ ಕೃತಯುಗಾದಿಷು ॥ ೩೧ ॥

ಅಂಬರೀಷೇಣ ಭೋಗಾದ್ಯೈಶ್ಚೀರ್ಣಂ ತ್ರೇತಾಯುಗಾದಿಷು ।
ಬ್ರಾಹ್ಮಣೈರ್ಬ್ರಹ್ಮಚರ್ಯೇಣ ಜಪಹೋಮ ಕ್ರಿಯಾದಿಭಿಃ ॥ ೩೨ ॥

ಕ್ಷತ್ರಿಯೈಶ್ಚ ತಥಾ ವೈಶ್ಯೈಃ ಸತ್ಯಶೌಚಪರಾಯಣೈಃ ।
ದುಷ್ಕರಂ ಸತ್ಯಹೀನಾನಾಮಶಕ್ಯಂ ಬಾಲಚೇತಸಾಂ ॥ ೩೩ ॥

ದುಷ್ಕರಂ ಭೈಷ್ಮಮಿತ್ಯಾಹುರ್ನ ಶಕ್ಯಂ ಪ್ರಾಕೃತೈರ್ನರೈಃ ।
ಯಸ್ತತ್ಕರೋತಿ ವಿಪ್ರೇಂದ್ರ ತೇನ ಸರ್ವಂ ಕೃತಂ ಭವೇತ್ ॥ ೩೪ ॥

---

೩೦. ವಾಸುದೇವನು ಆ ಭೀಷ್ಮನಿಗೆ ಆ ವ್ರತವನ್ನು ಉಪದೇಶಮಾಡಿದನು. ಈ ವ್ರತದ ಗುಣಗಳನ್ನು ಹೇಳಲು ಕೇಶವನು ಹೊರತಾಗಿ ಮತ್ತಾರಿಗೆ ತಾನೆ ಸಾಧ್ಯವಾದೀತು ?

೩೧. ಕಾರ್ತಿಕ ಶುಕ್ಲಪಕ್ಷದಲ್ಲಿ ಆ ವ್ರತವನ್ನು ಮಾಡಬೇಕು. ಅದು ಧರ್ಮವಾದುದು. ಬಹು ಹಿಂದಿನದು. ವಸಿಷ್ಠ ಭೃಗು ಗರ್ಗರು ಕೃತಯುಗವೇ ಮುಂತಾದ ಯುಗಗಳಲ್ಲಿ ಆಚರಿಸಿರುವರು.

೩೨. ಅಂಬರೀಷನು ತನ್ನ ಸಕಲ ಭೋಗಗಳಿಂದಲೂ ತ್ರೇತಾಯುಗದ ಆದಿಯಲ್ಲಿ ಆಚರಿಸಿದನು. ಬ್ರಾಹ್ಮಣರು ಬ್ರಾಹ್ಮಚರ್ಯದಿಂದಿದ್ದುಕೊಂಡು ಜಪ ಹೋಮ ಮುಂತಾದ ಕ್ರಿಯೆಗಳಿಂದ ಆಚರಿಸಿದರು. ಅಂತೆಯೇ ಕ್ಷತ್ರಿಯರೂ ವೈಶ್ಯರೂ ಕೂಡ ಸತ್ಯದಿಂದಲೂ ಆಚಾರದಲ್ಲಿ ಆಸಕ್ತಿಯಿಂದಲೂ ಮಾಡಿದರು.

೩೩-೩೪. ಸತ್ಯವನ್ನಾಡದವರು ಆ ಭೀಷ್ಮ ವ್ರತವನ್ನು ಮಾಡಲಾಗುವುದಿಲ್ಲ. ಬುದ್ಧಿಯು ಸರಿಯಾಗಿ ಪಕ್ವವಾಗದವರಿಗೆ ಮಾಡಲು ಸಾಧ್ಯವಾಗುವುದಿಲ್ಲ. ದಡ್ಡರಿಗಂತೂ ಈ ಭೀಷ್ಮವ್ರತವು ಮಾಡಲು ಬಹು ಕಷ್ಟವು. ಎಲೈ ಷಣ್ಮುಖನೆ ! ಈ ಭೀಷ್ಮವ್ರತವನ್ನು ಮಾಡಿದವರು ಎಲ್ಲಾ ವ್ರತವನ್ನೂ ಮಾಡಿದಂತೆಯೇ ಆಗುತ್ತದೆ.

ವ್ರತಂ ಚೈತನ್ಮಹಾಪುಣ್ಯಂ ಮಹಾಪಾತಕನಾಶನಂ ।
ಅತೋ ನರೈಃ ಪ್ರಯತ್ನೇನ ಕರ್ತವ್ಯಂ ಭೀಷ್ಮಪಂಚಕಂ ॥ ೩೫ ॥

ಕಾರ್ತಿಕಸ್ಯಾಮಲೇ ಪಕ್ಷೇ ಸ್ನಾತ್ವಾ ಸಮ್ಯಗ್ವಿಧಾನತಃ ।
ಏಕಾದಶ್ಯಾಂ ತು ಗೃಹ್ಣೀಯಾತ್ ವ್ರತಂ ಪಂಚದಿನಾತ್ಮಕಂ ॥ ೩೬ ॥

ಪ್ರಾತಸ್ಸ್ನಾತ್ವಾ ವಿಶೇಷೇಣ ಮಧ್ಯಾಹ್ನೇ ಚ ತಥಾ ವ್ರತೀ ।
ನದ್ಯಾಂ ನಿರ್ಝರಗರ್ತೇ ವಾ ಸಮಾಲಭ್ಯ ಚ ಗೋಮಯಂ ॥ ೩೭ ॥

ಯವವ್ರೀಹಿತಿಲೈಸ್ಸಮ್ಯಕ್ ಪಿತ್ರ್ಯಾನ್ ಸಂತರ್ಪಯೇತ್ಕ್ರಮಾತ್ ।
ಸ್ನಾತ್ವಾ ಮೌನಂ ನರಃ ಕೃತ್ವಾ ಧೌತವಾಸಾ ದೃಢವ್ರತಃ ॥ ೩೮ ॥

ಭೀಷ್ಮಾಯೋದಕದಾನಂ ಚ ಹ್ಯರ್ಘ್ಯಂ ಚೈವ ಪ್ರಯತ್ನತಃ ।
ಪೂಜಾ ಭೀಷ್ಮಸ್ಯ ಕರ್ತವ್ಯಾ ದಾನಂ ದದ್ಯಾತ್ಪ್ರಯತ್ನತಃ ॥ ೩೯ ॥

---

೩೫. ಈ ವ್ರತವು ಮಹಾಪುಣ್ಯಕರವಾದುದು. ಪಾಪನಾಶಕವಾದುದು. ಆದುದರಿಂದ ಮನುಷ್ಯರು ಈ ಭೀಷ್ಮಪಂಚಕವನ್ನು ಪ್ರಯತ್ನಪಟ್ಟು ಮಾಡಬೇಕು.

೩೬. ಕಾರ್ತಿಕ ಶುದ್ಧದ ಏಕಾದಶಿಯ ದಿವಸ ವಿಧಿಯಂತೆ ಸ್ನಾನಮಾಡಿ ಈ ಐದುದಿನಗಳ ಅವಧಿಯ ಭೀಷ್ಮಪಂಚಕವನ್ನು ಮಾಡಲು ಮೊದಲು ಮಾಡಬೇಕು.

೩೭–೩೮. ಪ್ರಾತಸ್ಸ್ನಾನವನ್ನು ಮಾಡಿ ನಿತ್ಯ ಕರ್ಮಗಳನ್ನು ಮಾಡಿರಬೇಕು. ಅನಂತರ ಮಧ್ಯಾಹ್ನದಲ್ಲಿ ವ್ರತಾಂಗವಾಗಿ ನದಿಯಲ್ಲಾಗಲೀ ಜಿನುಗಿನಿಂದ ಬರುವ ಹಳ್ಳಗಳಲ್ಲಿಯಾಗಲೀ ಹೋಗಿ ಸ್ನಾನ ಮಾಡಬೇಕು. ಸ್ನಾನಮಾಡುವಾಗ ಮೈಗೆಲ್ಲಾ ಗೋವಿನ ಸಗಣಿಯನ್ನು ಹಚ್ಚಿಕೊಂಡು ಸ್ನಾನಮಾಡಬೇಕು. ಅನಂತರ ಯವ (ಅಕ್ಕಿ) ಎಳ್ಳುಗಳಿಂದ ಪಿತೃಗಳಿಗೆ ದೇವತೆಗಳಿಗೆ ಋಷಿಗಳಿಗೆ ತರ್ಪಣವನ್ನು ಕೊಡಬೇಕು. ಸ್ನಾನಮಾಡಿದ ಮೇಲೆ ಮಡಿ ಬಟ್ಟೆಗಳನ್ನುಟ್ಟುಕೊಂಡು ಮೌನದಿಂದಿರಬೇಕು.

೩೯. ಭೀಷ್ಮನಿಗೆ ಅರ್ಘ್ಯಾದಿಗಳನ್ನು ಕೊಡಬೇಕು. ಅನಂತರ ಭೀಷ್ಮನಿಗೆ ಪೂಜೆಯನ್ನು ಮಾಡಿ ಅನೇಕ ದಾನಗಳನ್ನು ಮಾಡಬೇಕು.

ಪಂಚರತ್ನಂ ವಿಶೇಷೇಣ ದತ್ವಾ ವಿಪ್ರಾಯ ಯತ್ನತಃ ।
ವಾಸುದೇವೋಽಪಿ ಸಂಪೂಜ್ಯೋ ಲಕ್ಷ್ಮೀಯುಕ್ತಸ್ಸದಾ ಪ್ರಭುಃ ॥ ೪೦ ॥

ಪಂಚಕೇ ಪೂಜಯಿತ್ವಾ ತು ಕೋಟಿಜನ್ಮಾನಿ ತುಷ್ಯತಿ ।
ಯತ್ಕಿಂಚಿತ್ಕ್ರಿಯತೇ ಸರ್ವಂ ಪಂಚಧಾ ತು ಪ್ರಕಲ್ಪಯೇತ್ ॥ ೪೧ ॥

ಸಂವತ್ಸರವ್ರತಾನಾಂ ಚ ಲಭತೇ ಸಕಲಂ ಫಲಂ ।
ಕೃತ್ವಾ ತೂದಕದಾನಂ ತು ತಥಾರ್ಘ್ಯಸ್ಯ ಚ ಪೂಜನಂ ॥ ೪೨ ॥

ಮಂತ್ರೇಣಾನೇನ ಯಃ ಕುರ್ಯಾತ್ ಮುಕ್ತಿಭಾಗೀ ಭವೇನ್ನರಃ ।
ವೈಯಾಘ್ರಪದ್ಯಗೋತ್ರಾಯ ಸಾಂಕೃತ್ಯಪ್ರವರಾಯ ಚ ॥ ೪೩ ॥

ಅನಪತ್ಯಾಯ ಭೀಷ್ಮಾಯ ಉದಕಂ ಭೀಷ್ಮವರ್ಮಣೇ ।
ವಸೂನಾಮವತಾರಾಯ ಶಂತನೋರಾತ್ಮಜಾಯ ಚ ।
ಅರ್ಘ್ಯಂ ದದಾಮಿ ಭೀಷ್ಮಾಯ ಆಜನ್ಮಬ್ರಹ್ಮಚಾರಿಣೇ ॥ ೪೪ ॥

॥ ಇತ್ಯರ್ಘ್ಯ ಮಂತ್ರಃ ॥

---

೪೦. ಐದುಬಗೆಯ ರತ್ನಗಳನ್ನು ಬ್ರಾಹ್ಮಣರಿಗೆ ಪ್ರಯತ್ನಪಟ್ಟು ದಾನಮಾಡಬೇಕು. ವಾಸುದೇವನನ್ನೂ ಲಕ್ಷ್ಮಿಯನ್ನೂ ಕೂಡ ಪೂಜಿಸಬೇಕು.

೪೧. ಈ ಭೀಷ್ಮಪಂಚಕದಲ್ಲಿ ವಾಸುದೇವನನ್ನು ಪೂಜಿಸಿದರೆ ಅವನು ಕೋಟಿಜನ್ಮಗಳವರೆಗೂ ತುಷ್ಟನಾಗಿರುತ್ತಾನೆ. ಈ ಭೀಷ್ಮ ಪಂಚಕದಲ್ಲಿ ನಾವೇನನ್ನು ಮಾಡಬೇಕಾದರೂ ಅವನ್ನು ಐದುಭಾಗವಾಗಿ ಪಾಲುಮಾಡಬೇಕು.

೪೨. ಹಾಗೆ ಮಾಡಿದರೆ ಆ ವರ್ಷ ಮಾಡತಕ್ಕ ವ್ರತಗಳ ಫಲವನ್ನೆಲ್ಲಾ ಹೊಂದುತ್ತಾನೆ. ಅರ್ಘ್ಯ ಪೂಜೆಯನ್ನು ಮಾಡಿ ಭೀಷ್ಮನಿಗೆ ಅರ್ಘ್ಯವನ್ನು ಕೊಟ್ಟರೆ ಅವನಿಗೆ ಮುಕ್ತಿಯು ಬರುತ್ತದೆ. ಆ ಅರ್ಘ್ಯವನ್ನು ಕೊಡುವಾಗ ಈ ಮುಂದಿನ ಮಂತ್ರವನ್ನು ಹೇಳಬೇಕು.

೪೩. ವ್ಯಾಘ್ರಪದ್ಯಗೋತ್ರದ ಸಾಂಕೃತ್ಯ ಪ್ರವರದ ಮಕ್ಕಳನ್ನು ಹೊಂದದ ಭೀಷ್ಮ ವರ್ಮನಿಗೆ ಈ ಉದಕವು. ಎಂದು ಕೊಡಬೇಕು.

೪೪. ವಸುವಿನ ಅವತಾರನಾದ ಶಂತನುವಿನ ಮಗನಾದ ಹುಟ್ಟಿದ ಮೊದಲುಗೊಂಡು ಬ್ರಹ್ಮಚಾರಿಯಾಗಿರುವ ಭೀಷ್ಮನಿಗೆ ಈ ಅರ್ಘ್ಯವನ್ನು ಕೊಡುತ್ತೇನೆ.

ಇದು ಅರ್ಘ್ಯನ ಮಂತ್ರವು.

ಅನೇನ ವಿಧಿನಾ ಯಸ್ತು ಪಂಚಕಂ ತು ಸಮಾಪಯೇತ್ ।
ಅಶ್ವಮೇಧಸಮಂ ಪುಣ್ಯಂ ಪ್ರಾಪ್ನೋತ್ಯತ್ರ ನ ಸಂಶಯಃ ॥ ೪೫ ॥

ಪಂಚಾಹಮಪಿ ಕರ್ತವ್ಯಂ ನಿಯಮಂ ಚ ಪ್ರಯತ್ನತಃ ।
ನಿಯಮೇನ ವಿನಾ ಯತ್ರ ನ ಭಾವ್ಯಂ ವರ್ಣಿನಾ ॥ ೪೬ ॥

ಉತ್ತರಾಯಣಹೀನಾಯ ಭೀಷ್ಮಾಯ ಪ್ರದದೌ ಹರಿಃ ।
ಉತ್ತರಾಯಣಹೀನೋಽಪಿ ಶುದ್ಧಿಂ ಲಗ್ನಂ ವಿನಾ ಶುಭಃ ॥ ೪೭ ॥

ತತಃ ಸಂಪೂಜ್ಯಯೇದ್ದೇವಂ ಸರ್ವಪಾಪಹರಂ ಹರಿಂ ।
ಅನಂತರಂ ಪ್ರಯತ್ನೇನ ಕರ್ತವ್ಯಂ ಭೀಷ್ಮಪಂಚಕಂ ॥ ೪೮ ॥

ಸ್ನಾಪಯೇತ ಜಲೈರ್ಭಕ್ತ್ಯಾ ಮಧುಕ್ಷೀರ ಘೃತೇನ ಚ ।
ತಥೈವ ಪಂಚಗವ್ಯೇನ ಗಂಧಚಂದನವಾರಿಣಾ ॥ ೪೯ ॥

---

೪೫. ಈ ರೀತಿಯಾದ ವಿಧಿಯಿಂದ ಯಾವನು ಈ ಭೀಷ್ಮ ಪಂಚಕವನ್ನು ಮಾಡಿ ಮುಗಿಸುವನೋ ಅವನಿಗೆ ಅಶ್ವಮೇಧದ ಪುಣ್ಯವು ಬರುತ್ತದೆ. ಸಂದೇಹವೇ ಇಲ್ಲ.

೪೬. ಐದು ದಿನಗಳವರೆಗೂ ನಿಯಮವನ್ನು ಪ್ರಯತ್ನಪಟ್ಟು ನಡೆಸಬೇಕು ಯಾವನೂ ಕೂಡ ಇದರಲ್ಲಿ ನಿಯಮವನ್ನು ಮೀರಕೂಡದು.

೪೭ ಈ ಭೀಷ್ಮವ್ರತಕ್ಕೆ ಉತ್ತರಾಯಣವಿಲ್ಲದ್ದಿದರೂ ಹರಿಯು ಆತನಿಗೆ ಈ ವ್ರತವನ್ನು ಉಪದೇಶಿಸಿರುವನು. ಆದುದರಿಂದ ಈ ವ್ರತಕ್ಕೆ ಉತ್ತರಾಯಣ ವಿಲ್ಲದಿದ್ದರೂ ದಿವಸವು ಶುದ್ಧವಾಗಿಲ್ಲದಿದ್ದರೂ ಲಗ್ನದಲ್ಲಿ ಗುಣಗಳಿಲ್ಲದೇ ದೋಷವೇ ಇದ್ದರೂ ಕೂಡ ಅದು ಶುಭವು.

೫೮. ಮೊದಲು ಸರ್ವ ಪಾಪಗಳನ್ನೂ ನಾಶಮಾಡುವ ಹರಿಯನ್ನು ಪೂಜಿಸಿ ಆಮೇಲೆ ಈ ಭೀಷ್ಮ ಪಂಚಕವ್ರತವನ್ನು ಮಾಡಬೇಕು.

೪೯-೫೦. ನೀರಿನಿಂದ ಅಭಿಷೇಕವನ್ನು ಮಾಡಬೇಕು. ಅನಂತರ ಹಾಲು ತುಪ್ಪ ಮೊಸರು ಜೇನು ಸಕ್ಕರೆಗಳಿಂದ ಅಭಿಷೇಕ ಮಾಡಬೇಕು. ಅನಂತರ ಚಂದನದಿಂದಲೂ ಪಚ್ಚಕರ್ಪೂರ ಕುಂಕುಮ ಕೇಸರಿಗಳನ್ನು ಹಾಕಿರುವ

ಚಂದನೇನ ಸುಗಂಧೇನ ಕುಂಕುಮೇನಾಥ ಕೇಶವಂ ।
ಕರ್ಪೂರರೋಶೀರಮಿಶ್ರೇಣ ಲೇಪಯೇದ್ಗರುಡಧ್ವಜಂ ॥ ೫೦ ॥

ಅರ್ಚಯೇದ್ರುಚಿರೈಃ ಪುಷ್ಪೈರ್ಗಂಧಧೂಪಸಮನ್ವಿತೈಃ ।
ಗುಗ್ಗುಲುಂ ಘೃತಸಂಯುಕ್ತಂ ದಹೇತ್ಕೃಷ್ಣಾಯ ಭಕ್ತಿಮಾನ್ ॥ ೫೧ ॥

ದೀಪಕಂ ತು ದಿವಾ ರಾತ್ರೌ ದದ್ಯಾತ್ಪಂಚ ದಿನಾನಿ ತು ।
ನೈವೇದ್ಯಂ ದೇವದೇವಸ್ಯ ಪರಮಾನ್ನಂ ನಿವೇದಯೇತ್ ॥ ೫೨ ॥

ಏವಮಭ್ಯರ್ಚಯೇದ್ದೇವಂ ಸಂಸ್ಮೃತ್ಯ ಚ ಪ್ರಣಮ್ಯ ಚ ।
ಓಂ ನಮೋ ವಾಸುದೇವಾಯೇತಿ ಜಪೇದಷ್ಟೋತ್ತರಂ ಶತಂ ॥ ೫೩ ॥

ಜುಹುಯಾಚ್ಚ ಘೃತಾಭ್ಯಕ್ತೈಸ್ತಿಲವ್ರೀಹಿಯವಾದಿಭಿಃ ।
ಷಡಕ್ಷರೇಣ ಮಂತ್ರೇಣ ಸ್ವಾಹಾಕಾರಾನ್ವಿತೇನ ಚ । ॥ ೫೪ ॥

---

ನೀರಿನಿಂದಲೂ ಸ್ನಾನಮಾಡಿಸಬೇಕು. ಅನಂತರ ಪಚ್ಚಕರ್ಪೂರ ಲಾಮಂಚಗಳನ್ನು ಸ್ವಾಮಿಗೆ ಲೇಪಿಸಬೇಕು

೫೧. ಅನಂತರ ಒಳ್ಳೆಯ ಹೂವುಗಳನ್ನು ತಂದು ಪೂಜಿಸಬೇಕು. ಗಂಧವನ್ನು ಅರ್ಪಿಸಬೇಕು. ಧೂಪ ಗುಗ್ಗುಲ ತುಪ್ಪಗಳ ಹೊಗೆಯನ್ನು ಹಾಕಬೇಕು.

೫೨. ಐದು ದಿನಗಳವರೆಗೂ ಹಗಲು ರಾತ್ರಿಯಲ್ಲಿ ದೀಪವು ಉರಿಯುತ್ತಿರಬೇಕು. ಆ ದೇವದೇವನಿಗೆ ಪರಮಾನ್ನದ ನೈವೇದ್ಯವನ್ನು ಅರ್ಪಿಸಬೇಕು.

೫೩. ಈ ರೀತಿಯಾಗಿ ವಾಸುದೇವನನ್ನು ಪೂಜಿಸಿ ಅವನನ್ನು ಸ್ಮರಣೆ ಮಾಡುತ್ತ ನಮಸ್ಕರಿಸಿ ಅನಂತರ "ಓಂ ನಮೋ ವಾಸುದೇವಾಯ" ಎಂಬ ಮಂತ್ರವನ್ನು ನೂರೆಂಟು ಬಾರಿ ಜಪಿಸಬೇಕು.

೫೪-೫೫. ಎಳ್ಳು ಅರಳು ಯವಗಳನ್ನು ತುಪ್ಪದಲ್ಲಿ ನೆನೆಸಿಕೊಂಡು ಷಡಕ್ಷರೀ ಮಂತ್ರವನ್ನು ಹೇಳುತ್ತಾ "ಸ್ವಾಹಾ" ಎಂದು ಕೊನೆಯಲ್ಲಿ ಹೇಳುತ್ತಾ

ಉಪಾಸ ಪಶ್ಚಿಮಾಂ ಸಂಧ್ಯಾಂ ಪ್ರಣಮ್ಯ ಗರುಡಧ್ವಜಂ ।
ಜಪಿತ್ವಾ ಪೂರ್ವವನ್ಮಂತ್ರಂ ಕ್ಷಿತಿಶಾಯೀ ಭವೇದ್ವ್ರತೀ ॥ ೫೫ ॥

ಸರ್ವಮೇತದ್ವಿಧಾನಂ ತು ಕಾರ್ಯಂ ಪಂಚ ದಿನಾನಿ ತು ।
ವಿಶೇಷೋತ್ರ ವ್ರತೇ ಹ್ಯಸ್ಮಿನ್ಯದನ್ಯೂನಂ ಶೃಣುಷ್ವ ತತ್ ॥ ೫೬ ॥

ಪ್ರಥಮೇಹ್ನಿ ಹರೇಃ ಪಾದೌ ಪೂಜಯೇತ್ಕಮಲೈರ್ವ್ರತೀ ।
ದ್ವಿತೀಯೇ ಬಿಲ್ವಪತ್ರೇಣ ಜಾನುದೇಶಂ ಸಮರ್ಚಯೇತ್ ॥ ೫೭ ॥

ತತೋನು ಪೂಜಯೇಚ್ಛೀರ್ಷಂ ಮಾಲತ್ಯಾ ಚಕ್ರಪಾಣಿನಃ ।
ಕಾರ್ತಿಕ್ಯಾಂ ದೇವದೇವಸ್ಯ ಭಕ್ತ್ಯಾ ತದ್ಗತಮಾನಸಃ ॥ ೫೮ ॥

ಅರ್ಚಿತ್ವಾ ತಂ ಹೃಷೀಕೇಶಮೇಕಾದಶ್ಯಾಂ ಸಮಾಸತಃ ।
ನಿಷ್ಪ್ರಾಶ್ಯ ಗೋಮಯಂ ಸಮ್ಯಗೇಕಾದಶ್ಯಾಮುಪಾವಸೇತ್ ॥ ೫೯ ॥

---

ನೂರೆಂಟುಬಾರಿ ಹೋಮಮಾಡಬೇಕು. ಅನಂತರ ಸಾಯಂಕಾಲದ ಸಂಧ್ಯಾವಂದನೆಯನ್ನು ಮಾಡಿಕೊಂಡು ಸ್ವಾಮಿಯಾದ ಗರುಡಧ್ವಜನಿಗೆ ನಮಸ್ಕರಿಸಿ ಹಿಂದೆ ಹೇಳಿದ "ಓಂ ನಮೋ ವಾಸುದೇವಾಯ" ಎಂಬ ಮಂತ್ರವನ್ನು ಜಪಿಸಿ ರಾತ್ರಿಯೆಲ್ಲಾ ನೆಲದಮೇಲೆ ಮಲಗಿರಬೇಕು.

೫೬. ಈ ವಿಧಾನವನ್ನೆಲ್ಲಾ ಐದು ದಿನಗಳೂ ಮಾಡಬೇಕು. ಸರಿಯಾಗಿ ಸಾಂಗವಾಗಿ ನೆರವೇರಬೇಕಾದರೆ ಇದರಲ್ಲಿ ಮಾಡಬೇಕಾದ ವಿಶೇಷವನ್ನೂ ಹೇಳುತ್ತೇನೆ. ಕೇಳು.

೫೭. ಈ ವ್ರತದ ಮೊದಲನೆಯ ದಿವಸ ಹರಿಯ ಪಾದ ಪ್ರದೇಶಗಳನ್ನು ಕಮಲಗಳಿಂದಲೂ ಎರಡನೆಯ ದಿವಸ ಆ ಸ್ವಾಮಿಯ ಮಂಡಿಯ ಪ್ರದೇಶವನ್ನು ಬಿಲ್ವಪತ್ರೆಯಿಂದಲೂ ಪೂಜಿಸಬೇಕು.

೫೮. ಆಮೇಲೆ ದೇವದೇವನಾದ ವಾಸುದೇವನ ತಲೆಯ ಭಾಗವನ್ನು ಜಾಜಿಯ ಹೂವಿನಿಂದ ಪೂಜಿಸಬೇಕು.

೫೯-೬೧. ಕಾರ್ತಿಕ ಶುದ್ಧ ಏಕಾದಶಿಯ ದಿವಸ ಸ್ನಾನಮಾಡಿ ಕೇಶವನನ್ನು ಪೂಜಿಸಿ ಕರೆಯುವ ಹಸುವಿನ ಸಗಣಿಯನ್ನು ನೆಲದ ಮೇಲೆ ಬೀಳುವುದಕ್ಕೆ ಮೊದಲೇ ಹಿಡಿದು ತಂದು ಅದನ್ನು ಶಾಸ್ತ್ರೋಕ್ತ ರೀತಿಯಲ್ಲಿ ಸೇವಿಸಿ ಆ ದಿನ ಉಪವಾಸವಿರಬೇಕು. ದ್ವಾದಶಿಯ ದಿವಸ ಸ್ನಾನಮಾಡಿ ದೇವತಾರ್ಚನೆ ಮಾಡಿ

ಗೋಮೂತ್ರಂ ಮಂತ್ರವದ್ಭೂವನೌ ದ್ವಾದಶ್ಯಾಂ ಪ್ರಾಶಯೇದ್ವ್ರತೀ ।
ಕ್ಷೀರಂ ಚೈವ ತ್ರಯೋದಶ್ಯಾಂ ಚತುರ್ದಶ್ಯಾಂ ತಥಾ ದಧಿ ॥ ೬೦ ॥

ಸಂಪ್ರಾಶ್ಯ ಕಾಯಶುದ್ಧ್ಯರ್ಥಂ ಲಂಘಯಿತ್ವಾ ಚತುರ್ದಿನಂ ।
ಪಂಚಮೇ ದಿವಸೇ ಸ್ನಾತ್ವಾ ವಿಧಿವತ್ಪೂಜ್ಯ ಕೇಶವಂ ॥ ೬೧ ॥

ಭೋಜಯೇದ್ಬ್ರಾಹ್ಮಣಾನ್ಭಕ್ತ್ಯಾ ತೇಭ್ಯೋದದ್ಯಾಚ್ಚ ದಕ್ಷಿಣಾಂ ।
ಪಾಪಬುದ್ಧಿಂ ಪರಿತ್ಯಜ್ಯ ಬ್ರಹ್ಮಚರ್ಯೇಣ ಧೀಮತಾ ॥ ೬೨ ॥

ಮದ್ಯಂ ಮಾಂಸಂ ಪರಿತ್ಯಜ್ಯ ಮೈಥುನಂ ಪಾಪಕಾರಿಣಃ ।
ಶಾಕಾಹಾರೇಣ ಮುನ್ಯನ್ನೈಃ ಕೃಷ್ಣಾರ್ಚನಪರೋ ನರಃ ॥ ೬೩ ॥

ತತೋ ನಕ್ತಂ ಸಮಶ್ನೀಯಾತ್ಪಂಚಗವ್ಯ ಪುರಸ್ಸರಂ ।
ಏವಂ ಸಮ್ಯಕ್ಸಮಾಪ್ಯಂ ಸ್ಯಾದ್ಯಥೋಕ್ತಂ ಫಲಮಾಪ್ನುಯಾತ್ ॥ ೬೪ ॥

---

ನೆಲದ ಮೇಲೆ ಬಿದ್ದಿರುವ ಕರೆಯುವ ಹಸುವಿನ ಗಂಜಲವನ್ನು ತಂದು ಶಾಸ್ತ್ರ ವಿಧಾನದಿಂದ ಕುಡಿಯಬೇಕು. ತ್ರಯೋದಶಿಯ ದಿವಸ ಸ್ನಾನ ದೇವತಾರ್ಚನೆ ಗಳನ್ನು ಮಾಡಿ ಕರುವಿರುವ ಹಸುವಿನ ಹಾಲನ್ನು ಶಾಸ್ತ್ರ ವಿಧಾನದಂತೆ ಕುಡಿಯ ಬೇಕು. ಚತುರ್ದಶಿಯ ದಿವಸ ಸ್ನಾನ ಪೂಜೆಗಳನ್ನು ಮಾಡಿಕೊಂಡು ಕರುವಿ ರುವ ಹಸುವಿನಿಂದ ಮಾಡಿದ ಮೊಸರನ್ನು ಶಾಸ್ತ್ರರೀತಿಯಿಂದ ಕುಡಿಯಬೇಕು. ಈ ರೀತಿಯಾಗಿ ನಾಲ್ಕು ದಿನಗಳು ಗೋಮಯವೇ ಮುಂತಾದುವನ್ನು ತಿಂದು ಉಪವಾಸವಿರಬೇಕು. ಐದನೆಯ ದಿವಸ ಸ್ನಾನಮಾಡಿ ಕೇಶವನನ್ನು ಪೂಜಿಸಿ ಬ್ರಾಹ್ಮಣರಿಗೆ ಭಕ್ತಿಯಿಂದ ಭೋಜನ ಮಾಡಿಸಿ ಅವರಿಗೆ ಶಕ್ತ್ಯನುಗುಣವಾಗಿ ದಕ್ಷಿಣೆಯನ್ನು ಕೊಡಬೇಕು.

೬೨-೬೪. ಪಾಪಬುದ್ಧಿಯನ್ನು ಬಿಟ್ಟು ಆ ದಿನಗಳಲ್ಲಿ ಬ್ರಹ್ಮಚರ್ಯದಿಂದ ಇರಬೇಕು. ಮದ್ಯ ಮಾಂಸಗಳನ್ನು ಬಿಟ್ಟಿರಬೇಕು. ಸ್ತ್ರೀಸಂಯೋಗವು ಕೂಡದು. ಶಾಕಾಹಾಸರವನ್ನು ಮಾಡಿಕೊಂಡು ಮುನಿಗಳು ತಿನ್ನುವ ಅನ್ನವನ್ನು ತಿಂದು ಕೊಂಡು ಕೃಷ್ಣನ ಪೂಜೆಯನ್ನು ಇಂತು ಮಾಡುತ್ತಿರಬೇಕು. ಅನಂತರ ರಾತ್ರಿ ಯಲ್ಲಿ ಮೊದಲು ಪಂಚಗವ್ಯವನ್ನು ತೆಗೆದುಕೊಂಡು ಊಟಮಾಡಬೇಕು. ಈರೀತಿ ಯಾಗಿ ಈ ಭೀಷ್ಮಪಂಚಕವನ್ನು ಮಾಡಿ ಮುಗಿಸಬೇಕು. ಹೀಗಾದರೆ ಶಾಸ್ತ್ರೋಕ್ತ ವಾದ ಫಲವು ಬರುತ್ತದೆ.

ಮದ್ಯಪೋ ಯಸ್ತು ತನ್ಮಧ್ಯೇ ಜನ್ಮತೋ ಮರಣಾಂತಿಕಂ ।
ಏತದ್ಭೀಷ್ಮವ್ರತಂ ಕೃತ್ವಾ ಪ್ರಾಪ್ನೋತಿ ಪರಮಂ ಪದಂ　　॥ ೬೫ ॥

ಸ್ತ್ರೀಭಿರ್ಭ್ರಾ ಭರ್ತೃವಾಕ್ಯೇನ ಕರ್ತವ್ಯಂ ಧರ್ಮವರ್ಧನಂ ।
ವಿಧವಾಭಿಶ್ಚ ಕರ್ತವ್ಯಂ ಮೋಕ್ಷಸೌಖ್ಯವಿವೃದ್ಧಯೇ　　॥ ೬೬ ॥

ಸರ್ವಕಾಮಸಮೃದ್ಧ್ಯರ್ಥಂ ಪುಣ್ಯಾರ್ಥಮಪಿ ಪಾವಕೇ ।
ನಿತ್ಯಸ್ನಾನೇ ತಥಾ ದಾನೇ ಯೋ ಕಾರ್ತಿಕಮುಪಾಸತೇ　　॥ ೬೭ ॥

ವೈಶ್ವದೇವಶ್ಚ ಕರ್ತವ್ಯೋ ವಿಷ್ಣುಧ್ಯಾನಪರಾಯಣೈಃ ।
ಆರೋಗ್ಯಪುತ್ರದೋ ವತ್ಸ ಮಹಾಪಾತಕನಾಶನಃ　　॥ ೬೮ ॥

॥ ಶ್ರೀಕೃಷ್ಣ ಉವಾಚ ॥

ತೀರ್ಥೇಷು ಕಾರ್ತಿಕೀಂ ಕುರ್ಯಾತ್ ಸರ್ವಯತ್ನೇನ ಭಾಮಿನಿ ।
ಸಂವತ್ಸರವ್ರತಾನಾಂ ತು ಸಮಾಪ್ತಿಃ ಕಾರ್ತಿಕೋ ಮತಃ　　॥ ೬೯ ॥

---

೬೫. ಮದ್ಯವನ್ನು ಕುಡಿಯುವವನು ಹುಟ್ಟಿದಂದಿನಿಂದ ಸಾಯುವವರೆಗೂ ಕುಡಿಯುತ್ತಿದ್ದರೂ ಅದರ ಮಧ್ಯದಲ್ಲಿ ಯಾವಾಗಲಾದರೂ ಈ ವ್ರತವನ್ನು ಮಾಡಿದರೆ ಉತ್ತಮ ಸ್ಥಾನವನ್ನು ಹೊಂದುತ್ತಾನೆ

೬೬. ಹೆಂಗಸರೂ ಕೂಡ ಗಂಡನ ಅಪ್ಪಣೆಯನ್ನು ತೆಗೆದುಕೊಂಡು ಈ ಭೀಷ್ಮಪಂಚಕವ್ರತವನ್ನು ಮಾಡಿದರೆ ಧರ್ಮವು ವರ್ಧಿಸುತ್ತದೆ. ವಿಧವೆಯರು ಈ ವ್ರತವನ್ನು ಮಾಡಿದರೆ ಮೋಕ್ಷವೂ ಸೌಖ್ಯವೂ ಹೆಚ್ಚುತ್ತವೆ.

೬೭-೬೮ ಎಲ್ಲಾ ಇಷ್ಟಾರ್ಥಗಳೂ ಕೈಗೂಡುವುದಕ್ಕೂ ಪುಣ್ಯಕ್ಕೋಸ್ಕರವೂ ನಿತ್ಯ ಸ್ನಾನ ದಾನಗಳನ್ನು ಕಾರ್ತಿಕದಲ್ಲಿ ಮಾಡುತ್ತ ವೈಶ್ವದೇವನನ್ನು ಮಾಡುತ್ತ ವಿಷ್ಣುವಿನ ಧ್ಯಾನವನ್ನು ಮಾಡುತ್ತಿದ್ದರೆ ಆರೋಗ್ಯವುಂಟಾಗುತ್ತದೆ. ಮಕ್ಕಳು ಆಗುತ್ತಾರೆ. ಪಾಪಗಳೆಲ್ಲವೂ ಹೋಗುತ್ತವೆ.

೬೯. ಶ್ರೀ ಕೃಷ್ಣನು ಹೇಳಿದನು—ಎಲೈ ಸತ್ಯಭಾಮೆಯೇ! ಕಾರ್ತಿಕ ವ್ರತವನ್ನು ತೀರ್ಥಗಳಲ್ಲಿ ಪ್ರಯತ್ನಪಟ್ಟು ಮಾಡಬೇಕು. ವರ್ಷದ ವ್ರತಗಳೆಲ್ಲಕ್ಕೂ ಕಾರ್ತಿಕ ಮಾಸವೇ ಕೊನೆಯು. ಎಂದು ಹೇಳಲ್ಪಟ್ಟಿದೆ.

ಪಾಪಸ್ಯ ಪ್ರತಿಮಾ ಕಾರ್ಯಾ ರೌದ್ರವಸ್ತ್ರಾದಿಭೀಷಣಾ ।
ಖಡ್ಗಹಸ್ತಾ ವಿನಿಷ್ಕ್ರಾಂತಾ ಲೋಹದಂಷ್ಟ್ರಾ ಕರಾಳಿನೀ ॥ ೭೦ ॥

ತಿಲಪ್ರಸ್ಥೋಪರಿ ಸ್ಥಾಪ್ಯ ಕೃಷ್ಣವಸ್ತ್ರಾಭಿವೇಷ್ಟಿತಾ ।
ರಕ್ತಪುಷ್ಪಕೃತಾಪೀಡಾಂ ಜ್ವಲತ್ಕಾಂಚನಕುಂಡಲಾಂ ॥ ೭೧ ॥

ಸಂಪೂಜ್ಯ ಪರಯಾ ಭಕ್ತ್ಯಾ ಧರ್ಮರಾಜಸ್ಯ ನಾಮಭಿಃ ।
ಇಮಮುಚ್ಚಾರಯೇನ್ಮಂತ್ರಂ ಗೃಹೀತಕುಸುಮಾಂಜಲಿಃ ॥ ೭೨ ॥

ಯದನ್ಯಜನ್ಮನಿ ಕೃತಂ ಇಹಜನ್ಮನಿ ವಾ ಪುನಃ ।
ಪಾಪಂ ಪ್ರಶಮಮಾಯಾತು ತವ ಪಾದಪ್ರಸಾದತಃ ॥ ೭೩ ॥

ಏವಂ ಸಂಪೂಜ್ಯ ವಿಧಿವತ್ಪ್ರತಿಮಾಂ ತಾಂ ಚ ಕಾಂಚನೀಂ ।
ಕೃತ್ವಾ ಪೂಜಾಂ ಯಥಾಶಕ್ತಿ ವಿಪ್ರಾಣಾಂ ವೇದವಾದಿನಾಂ ॥ ೭೪ ॥

---

೭೦. ಪಾಪದ ಒಂದು ಪ್ರತಿಮೆಯನ್ನು ಮಾಡಬೇಕು. ಅದಕ್ಕೆ ಭಯಂಕರವಾಗುವಂತೆ ಬಟ್ಟೆಗಳನ್ನೂ ಅಲಂಕಾರವನ್ನೂ ಹಾಕಬೇಕು. ಕೋರೆ ಹಲ್ಲುಗಳನ್ನು ಕಬ್ಬಿಣದಲ್ಲಿ ಮಾಡಿರಬೇಕು. ಭಯಂಕರ ಸ್ವರೂಪವಾಗಿರಬೇಕು.

೭೧. ಒಂದು ಕೊಳಗ ಎಳ್ಳನ್ನು ಹಾಕಿ ಅದರ ಮೇಲೆ ಆ ಪಾಪಪುರುಷನನ್ನು ಕೂರಿಸಬೇಕು. ಕಪ್ಪು ಬಟ್ಟೆಯನ್ನು ಹೊದ್ದಿಸಬೇಕು. ಕೆಂಪು ಹೂವನ್ನು ತಲೆಗೆ ಮುಡಿಸಬೇಕು. ಕರ್ಣಾಭರಣವನ್ನು ಹಾಕಿರಬೇಕು.

೭೨. ಧರ್ಮರಾಜನ ನಾಮಗಳನ್ನು ಹೇಳಿ ಆ ಪಾಪ ಪುರುಷನನ್ನು ಪೂಜಿಸಬೇಕು. ಬೊಗಸೆಯಲ್ಲಿ ಹೂವನ್ನು ತುಂಬಿಕೊಂಡು ಈ ಮಂತ್ರವನ್ನು ಹೇಳಬೇಕು.

ಬೇರೆಯಾದ ಜನ್ಮಗಳಲ್ಲಿ ಮತ್ತು ಈ ಜನ್ಮದಲ್ಲಿ ಯಾವ ಯಾವ ಪಾಪವನ್ನು ಮಾಡಿದ್ದೇನೆಯೋ ಅವೆಲ್ಲವೂ ನಿನ್ನ ಪಾದಗಳ ಅನುಗ್ರಹದಿಂದ ನಾಶವಾಗಲಿ.

೭೪–೭೫. ಈರೀತಿಯಾಗಿ ಆ ಪಾಪಪುರುಷನ ಚಿನ್ನದ ಪ್ರತಿಮೆಯನ್ನು ಪೂಜಿಸಿ ದೇವಾಧಿದೇವನಾದ ವಿಷ್ಣುವಿನ ಪ್ರೀತಿಗೋಸ್ಕರ ವೇದವಾದಿಗಳಾದ

ಪ್ರೀತಯೇ ದೇವದೇವಸ್ಯ ಕೃಷ್ಣಸ್ಯಾಕ್ಲಿಷ್ಟಕರ್ಮಣಃ ।
ಬ್ರಾಹ್ಮಣಾಯ ಪ್ರದಾತವ್ಯಂ ಧರ್ಮೋ ಮೇ ಪ್ರಿಯತಾಮಿತಿ ॥ ೭೫ ॥

ವಾಚಕಾಯ ಪ್ರದಾತವ್ಯಂ ಯಥಾಶಕ್ತಿ ಚ ದಕ್ಷಿಣಾ ।
ಪದ್ಯಾದ್ಧಿರಣ್ಯಗಾಶ್ಚೈವ ಕೃಷ್ಣೋ ಮೇ ಪ್ರೀಯತಾಮಿತಿ ॥ ೭೬ ॥

ಕೃತಕೃತ್ಯಃ ಸ್ಥಿತೋ ಭೂತ್ವಾ ವಿರಕ್ತಸ್ಸಂಯತೋ ಭವೇತ್ ।
ಅನ್ಯೇಷಾಮಪಿ ದಾತವ್ಯಂ ಸ್ವಶಕ್ತ್ಯಾ ದಾನಮುತ್ತಮಂ ॥ ೭೭ ॥

ಶಾಂತಚಿತ್ತೋ ನಿರಾಬಾಧಃ ಪರಂ ಪದಮವಾಪ್ನುಯಾತ್ ।
ನೀಲೋತ್ಪಲದಳಶ್ಯಾಮಶ್ಚತುರ್ದಂಷ್ಟ್ರಶ್ಚತುರ್ಭುಜಃ ॥ ೭೮ ॥

ಅಷ್ಟಪಾದೈಕನಯನಃ ಶಂಖಕರ್ಣೋ ಮಹಾಸ್ವನಃ ।
ಜಟೀ ದ್ವಿಜಿಹ್ವಸ್ತಾಮ್ರಾಕ್ಷೋ ಮೃಗರಾಜತನುಚ್ಛದಃ ॥ ೭೯ ॥

---

ಬ್ರಾಹ್ಮಣರಿಗೆ ಆ ಪ್ರತಿಮೆಯನ್ನು ಶ್ರೀ ಧರ್ಮನು ಪ್ರೀತಿ ಹೊಂದಲೆಂದು ಹೇಳಿ ಕೊಡಬೇಕು.

೭೬. ಕಥೆಯನ್ನು ಓದಿದವನಿಗೆ ಶಕ್ತಿಗನುಗುಣವಾಗಿ ದಕ್ಷಿಣೆಯನ್ನು ಕೊಡಬೇಕು. ಅಲ್ಲದೆ ಗೋವುಗಳನ್ನೂ ಸುವರ್ಣಗಳನ್ನೂ ಕೃಷ್ಣನು ಪ್ರೀತನಾಗಲೆಂದು ಹೇಳಿ ಕೊಡಬೇಕು.

೭೭. ಇಷ್ಟು ಕೆಲಸವನ್ನು ಮಾಡಿ ಕೃತಕೃತ್ಯನಾಗಬೇಕು. ವಿರಕ್ತನಾಗಿ ಇಂದ್ರಿಯಗಳನ್ನು ನಿಗ್ರಹಿಸಿರಬೇಕು. ಮತ್ತು ಅಲ್ಲಿ ಬಂದಿರತಕ್ಕ ಎಲ್ಲರಿಗೂ ಶಕ್ತಿಯನ್ನನುಸರಿಸಿ ದಾನಮಾಡಬೇಕು.

೭೮–೮೧. ಈ ರೀತಿಯಾಗಿ ದಾನಮಾಡಿ ಶಾಂತನಾಗಿ ಒಬ್ಬರಿಗೂ ತೊಂದರೆಯನ್ನುಂಟುಮಾಡದಿದ್ದರೆ ಅವನು ಪರಮಪದವನ್ನು ಹೊಂದುತ್ತಾನೆ. ನೀಲೋತ್ಪಲದ ದಳದಂತೆ ಕಾಂತಿಯುಳ್ಳ ನಾಲ್ಕು ಕೋರೆದಾಡೆಗಳುಳ್ಳ ನಾಲ್ಕು ಭುಜಗಳುಳ್ಳ ಎಂಟು ಕಾಲುಗಳುಳ್ಳ ಶಂಖದಂತೆ ಕಿವಿಯುಳ್ಳ ಗಂಭೀರವಾದ ಧ್ವನಿಯುಳ್ಳ ಜಟೆಯನ್ನು ಧರಿಸಿರುವ ಎರಡು ನಾಲಗೆಗಳುಳ್ಳ ಕೆಂಪಗಿರುವ ಸಿಂಹನ

ಚಿಂತನೀಯೋ ಮಹಾದೇವೋ ಯಸ್ಯ ರೂಪಂ ನ ವಿದ್ಯತೇ ।
ಇದಂ ಭೀಷ್ಮೇಣ ಕಥಿತಂ ಶರತಲ್ಪಗತೇನ ಮೇ ॥ ೮೦ ॥

ತದೇತತ್ತೇ ಮಯಾಖ್ಯಾತಂ ದುಷ್ಕರಂ ಭೀಷ್ಮಪಂಚಕಂ ।
ಧನ್ಯಂ ಪುಣ್ಯಂ ಪಾಪಹರಂ ಯುಧಿಷ್ಠಿರ ಮಹಾವ್ರತಂ ॥
ಯತ್ಕೃತ್ವಾ ಬ್ರಹ್ಮಹಾ ಗೋಘ್ನಃ ಸರ್ವಪಾಪೈಃ ಪ್ರಮುಚ್ಯತೇ ॥ ೮೧ ॥

ಯದ್ಭೀಷ್ಮಪಂಚಕಮಿತಿ ಪ್ರಥಿತಂ ಪೃಥಿವ್ಯಾಂ
ಏಕಾದಶೀಪ್ರಭೃತಿ ಪಂಚದಶೀ ನಿರುದ್ಧಂ ।
ಉತ್ಪನ್ನಭೋಜನಪರಸ್ಯ ತದಾ ನಿಷೇಧಃ
ತಸ್ಮಿನ್ವ್ರತೇ ಶುಭಫಲಂ ಪ್ರದದಾತಿ ವಿಷ್ಣುಃ ॥ ೮೨ ॥

॥ ಸೂತ ಉವಾಚ ॥

ಏತತ್ಸರ್ವಾಧಿಕಂ ಪುಣ್ಯಂ ದುರ್ಲಭಂ ಭವತೇ ಕಲೌ ।
ಇದಂ ಗುಹ್ಯಂ ಮಯಾ ಖ್ಯಾತಂ ಶಾಸ್ತ್ರಸಾರಸಮುಚ್ಚಯಂ ॥ ೮೩ ॥

---

ಶರೀರವನ್ನು ಹೊಂದಿರುವ ಆ ಸ್ವಾಮಿಯನ್ನು ಸ್ಮರಿಸಬೇಕು. ಆ ಸ್ವಾಮಿಯು ಸ್ವರೂಪದಿಂದ ರೂಪವಿಲ್ಲದವನಾದರೂ ಭಕ್ತರ ಆರಾಧನೆಯ ರೂಪದಿಂದ ಈ ರೀತಿಯಾಗಿ ಸ್ಮರಿಸಬೇಕು. ಶರತಲ್ಪದಲ್ಲಿ ಮಲಗಿದ್ದ ಭೀಷ್ಮನು ಇದನ್ನು ನನಗೆ ಹೇಳಿದನು. ಅದನ್ನು ನಾನು ನಿನಗೆ ಹೇಳಿದ್ದೇನೆ. ಈ ಭೀಷ್ಮಪಂಚಕವು ದುಷ್ಕರವಾದುದು. ಇದು ಧನ್ಯವಾದುದು. ಪಾಪನಾಶಕವಾದುದು. ಮಹಾ ವ್ರತವು. ಇದನ್ನು ಮಾಡಿದರೆ ಬ್ರಹ್ಮಹತ್ಯೆ ಮಾಡಿದವನೂ ಗೋವನ್ನು ಕೊಂದ ವನೂ ಕೂಡ ಎಲ್ಲಾ ಪಾಪಗಳಿಂದಲೂ ಮುಕ್ತನಾಗುತ್ತಾನೆ.

೮೨. ಲೋಕದಲ್ಲಿ ಭೀಷ್ಮ ಪಂಚಕ ವ್ರತವೆಂಬುದು ಪ್ರಸಿದ್ಧಿಯಾಗಿದೆ. ಅದನ್ನು ಕಾರ್ತಿಕ ಶುದ್ಧ ಏಕಾದಶೀ ಮೊದಲುಗೊಂಡು ಪೂರ್ಣಿಮಾವರೆಗೂ ಐದು ದಿನಗಳು ಮಾಡಬೇಕು. ಆವಾಗ ಊಟಮಾಡಕೂಡದು. ಹಾಗೆ ಊಟ ಮಾಡದಿದ್ದವರಿಗೆ ವಿಷ್ಣುವು ಶುಭ ಫಲವನ್ನು ಕೊಡುತ್ತಾನೆ.

೮೩. ಸೂತನು ಹೇಳಿದನು–ಈ ಭೀಷ್ಮ ಪಂಚಕವು ಎಲ್ಲಕ್ಕಿಂತಲೂ ಹೆಚ್ಚಾದ ಪುಣ್ಯವುಳ್ಳದ್ದು. ಕಲಿಯುಗದಲ್ಲಿ ಇದು ದುರ್ಲಭವು. ಶಾಸ್ತ್ರದ ಸಾರ ವನ್ನು ಶೇಖರಿಸಿ ಈ ಗುಹ್ಯವಾದುದನ್ನು ಹೇಳಿದ್ದೇನೆ.

॥ ಕೃಷ್ಣ ಉವಾಚ ॥

ಸುರಾಣಾಂ ಗೋಪಿತಂ ಸರ್ವಂ ಪರಂ ಗುಹ್ಯಂ ಚ ಮೋಕ್ಷದಂ ।
ಶ್ರುತಂ ಚೈಕಪದೇ ದೇವಿ ಅಗಮ್ಯಾಗಮನೇ ರತಾ ॥ ೮೪ ॥

ಕನ್ಯಾವಿಕ್ರೀ ಸ್ವಸಾವಿಕ್ರೀ ಉಭಯಂ ತು ವಿಮೋಚಯೇತ್ ॥ ೮೫ ॥

॥ ಈಶ್ವರ ಉವಾಚ ॥

ಮೋಕ್ಷದಂ ಚ ಇದಂ ಶಾಸ್ತ್ರಂ ಪ್ರಕಾಶ್ಯಂ ನೇತರೇ ಜನೇ ।
ಶ್ರುತ್ವಾ ಚೈಕಪದೇ ಯಸ್ತು ಮೋಕ್ಷಂ ಗಚ್ಛತಿ ಮಾನವಃ ॥ ೮೬ ॥

ಗೋಪನೀಯಂ ಪ್ರಯತ್ನೇನ ಯೇ ಚಾಪಿ ತ್ಯಾಗಿನೋ ನರಾಃ ।
ನ ತೇಷಾಂ ಕಥ್ಯತೇ ಪುಣ್ಯಂ ಸತ್ಯಂ ಸತ್ಯಂ ಚ ಷಣ್ಮುಖ ॥
ಇತ್ಯೇತತ್ಸರ್ವಮಾಖ್ಯಾತಂ ಕಾರ್ತಿಕಸ್ಯ ತು ಯತ್ಫಲಂ ॥ ೮೭ ॥

---

೮೪–೮೫. ಕೃಷ್ಣನು ಹೇಳಿದನು–ಇದು ಸುರರಿಗೂ ಕೂಡ ತಿಳಿದಿರುವುದಿಲ್ಲ. ಗೋಪ್ಯವಾದುದು. ಮೋಕ್ಷವನ್ನು ಕೊಡತಕ್ಕದ್ದು. ರಮಿಸಬಾರದವರನ್ನು ರಮಿಸಿದವನೂ ಕನ್ಯೆಯನ್ನು ಮಾರಿದವನೂ ಅಕ್ಕತಂಗಿಯರನ್ನು ಮಾರಿದವನೂ ಕೂಡ ಅವುಗಳಿಂದ ಬಂದ ಪಾಪವನ್ನು ಇದನ್ನು ಕೇಳಿದರೆ ನಾಶಮಾಡಿಕೊಳ್ಳುವನು.

೮೬. ಈಶ್ವರನು ಹೇಳಿದನು–ಈ ಶಾಸ್ತ್ರವು ಮೋಕ್ಷವನ್ನು ಕೊಡುತ್ತದೆ. ಇತರರಿಗೆ ಹೇಳಬಾರದು. ಇದನ್ನು ಒಂದುಬಾರಿ ಕೇಳಿದರೂ ಕೂಡ ಮನುಷ್ಯನು ಮೋಕ್ಷವನ್ನು ಹೊಂದುತ್ತಾನೆ.

೮೭. ತ್ಯಾಗಿಗಳಾದ ಮನುಷ್ಯರು ಇದನ್ನು ಗುಟ್ಟಾಗಿಟ್ಟಿರಬೇಕು ಅವರಿಗೆ ಪುಣ್ಯವು ಇದರಿಂದ ಬರುವುದೆಂದು ಹೇಳಬೇಕಾಗಿಲ್ಲ. ಇದು ಸತ್ಯವು ಈ ರೀತಿಯಾಗಿ ಕಾರ್ತಿಕದಲ್ಲಿ ಯಾವ ಫಲವುಂಟೋ ಅದೆಲ್ಲವನ್ನೂ ಹೇಳಿದ್ದೇನೆ.

|| ಶ್ರೀವಿಷ್ಣುರುವಾಚ ||

**ಕಥಿತಂ ದೇವದೇವೇನ ಪುತ್ರಾಯ ಹಿತಕಾಮ್ಯಯಾ ।**
**ಪಿತುಸ್ತದ್ವಾಕ್ಯಮಾಕರ್ಣ್ಯ ಷಣ್ಮುಖೋ ಹರ್ಷನಿರ್ಭರಃ || ೮೮ ||**

**ಊಚುಃ ಪ್ರಾಂಜಲಯಸ್ಸರ್ವೇ ತಂ ದೇವಂ ಜಗದಾಯುಷಂ ।**
**ಕೃತಕೃತ್ಯಾ ವಯಂ ಜಾತಾಃ ಶ್ರುತ್ವಾ ಕಾರ್ತಿಕಜಂ ಫಲಂ || ೮೯ ||**

**ಅಪರಂ ನಾಸ್ತಿ ಶ್ರೋತವ್ಯಂ ಪ್ರಾಪ್ತಂ ನೋ ಜನ್ಮನಃ ಫಲಂ।**
**ಮಾಹಾತ್ಮ್ಯಮೇತದಾಕರ್ಣ್ಯ ಪೂಜಯೇದ್ವ್ಯಸ್ತು ಪಾಠಕಂ || ೯೦ ||**

**ಗೋಭೂಹಿರಣ್ಯವಸ್ತ್ರೈಶ್ಚ ವಿಷ್ಣುತುಲ್ಯೋ ಯತೋ ಹಿ ಸಃ ।**
**ವಾಚಕೇ ಪೂಜಿತೇ ಯಸ್ಮಾದ್ವಿಷ್ಣುರ್ಭವತಿ ಪೂಜಿತಃ || ೯೧ ||**

**ತಸ್ಮಾತ್ತಂ ಪೂಜಯೇನ್ನಿತ್ಯಂ ಯದೀಚ್ಛೇತ್ಸಫಲಂ ಶ್ರುತಂ ।**
**ಧರ್ಮಶಾಸ್ತ್ರಂ ಪುರಾಣಂ ಚ ವೇದವಿದ್ಯಾದಿಕಂ ಚ ಯತ್ || ೯೨ ||**

---

೮೮. ಶ್ರೀ ವಿಷ್ಣುವು ಹೇಳಿದನು–ಈರೀತಿಯಾಗಿ ಮಹಾದೇವನು ಮಗನ ಹಿತಕ್ಕೋಸ್ಕರ ಇದನ್ನು ಹೇಳಿದನು. ತಂದೆಯ ಮಾತನ್ನು ಕೇಳಿ ಷಣ್ಮುಖನು ಸಂತೋಷಗೊಂಡನು.

೮೯. ಜಗತ್ತಿಗೆ ಆಯಸ್ಸನ್ನು ಕೊಡುವ ಆ ಸ್ವಾಮಿಗೆ ನಮಿಸಿ ಎಲ್ಲರೂ ಇಂತೆಂದರು. ನಾವೆಲ್ಲರೂ ಈ ಕಾರ್ತಿಕ ಮಾಸದ ಫಲವನ್ನು ಕೇಳಿದುದರಿಂದ ಕೃತಕೃತ್ಯರಾದೆವು.

೯೦. ಬೇರೆ ಕೇಳತಕ್ಕದ್ದೇ ಇರುವುದಿಲ್ಲ. ನಾವು ಹುಟ್ಟಿದುದಕ್ಕೆ ಫಲವು ಸಿಕ್ಕಿತು. ಈ ಮಹಿಮೆಯನ್ನು ಕೇಳಿ ಪುರಾಣ ಹೇಳುವವರಿಗೂ ಗೋವು ಹಣ ವಸ್ತ್ರ ಭೂಮಿಗಳನ್ನು ಕೊಟ್ಟು ಸಂತೋಷಪಡಿಸಬೇಕು ಪುರಾಣಿಕನು ವಿಷ್ಣುವಿಗೆ ಸಮನಾದವನು.

೯೧. ಪುರಾಣವನ್ನು ಹೇಳಿದವನನ್ನು ಪೂಜಿಸಿದರೆ ವಿಷ್ಣುವನ್ನೇ ಪೂಜಿಸಿದಂತಾಗುತ್ತದೆ. ನಿನಗೆ ಅದರ ಸಮಗ್ರ ಫಲವು ಬೇಕಾದರೆ ಆತನನ್ನು ಪೂಜಿಸಬೇಕು.

೯೨–೯೩. ಧರ್ಮಶಸ್ತ್ರ ಪುರಾಣ ವೇದವಿದ್ಯೆ ಎಲ್ಲವೂ ಕೂಡ ಸಫಲ ವಾಗುತ್ತವೆ. ಆದುದರಿಂದ ಪುರಾಣ ಹೇಳುವವನನ್ನು ಪೂಜಿಸಬೇಕು. ಓದಿದ

ಪುಸ್ತಕಂ ವಾಚಕಾಯೈವ ದಾತವ್ಯಂ ಧರ್ಮಮಿಚ್ಛತಾ ।
ಪುರಾಣವಿದ್ಯಾದಾತಾರೋ ಹ್ಯನಂತಫಲಭೋಜಿನಃ ॥ ೯೩ ॥

ಯಃ ಪಠೇತ ಇದಂ ಭಕ್ತ್ಯಾ ಶ್ರುತ್ವಾ ಚೈವಾವಧಾರಯೇತ್ ।
ಮುಚ್ಯತೇ ಸರ್ವಪಾಪೇಭ್ಯೋ ವಿಷ್ಣು ಲೋಕಂ ಸ ಗಚ್ಛತಿ ॥ ೯೪ ॥

ಧನಂ ಧಾನ್ಯಂ ಯಶಃ ಪುತ್ರಾನಾಯುರಾರೋಗ್ಯ ಮೇವ ಚ ।
ಮಾಹಾತ್ಮ್ಯಶ್ರವಣಾದೇವ ಲಭ್ಯತೇ ಚ ನ ಸಂಶಯಃ ॥ ೯೫ ॥

ಇತಿ ಶ್ರೀ ಮಹಾಪುರಾಣೇ ಪಾದ್ಮೇ ಉತ್ತರಖಂಡೇ ಕಾರ್ತಿಕ ಮಾಹಾತ್ಮ್ಯೇ
ಶ್ರೀ ಕೃಷ್ಣ ಸತ್ಯಭಾಮಾ ಸಂವಾದೇ ಭೀಷ್ಮ ಪಂಚಕವ್ರತ ಕಥನಂ
ನಾಮ ಪಂಚವಿಂಶತ್ಯಧಿಕಶತತಮೋಽಧ್ಯಾಯಸ್ಸಮಾಪ್ತಃ

---

ಪುರಾಣದ ಪುಸ್ತಕವನ್ನು ಓದಿದವನಿಗೇ ಕೊಟ್ಟುಬಿಡಬೇಕು. ಅದರಿಂದ ಧರ್ಮವು ಬರುತ್ತದೆ. ಪುರಾಣವನ್ನು ಹೇಳಿದವನೂ ಕೂಡ ಬಹುವಾದ ಫಲವನ್ನು ಹೊಂದುತ್ತಾನೆ.

೯೪. ಇದನ್ನು ಭಕ್ತಿಯಿಂದ ಓದಿದವನೂ ಕೇಳಿದವನೂ ಮರೆಯದಿರಬೇಕು. ಆಗ ಪಾಪಗಳನ್ನು ಕಳೆದುಕೊಂಡು ವಿಷ್ಣುಲೋಕವನ್ನೇ ಹೊಂದುತ್ತಾರೆ.

೯೫. ಈ ಕಾರ್ತಿಕ ಮಹಿಮೆಯನ್ನು ಕೇಳುವುದರಿಂದಲೇ ಧನ ಧಾನ್ಯ ಯಶಸ್ಸು ಪುತ್ರರು ಆಯುಸ್ಸು ಆರೋಗ್ಯ ಇವೆಲ್ಲವನ್ನೂ ಹೊಂದುತ್ತಾನೆ. ಇದರಲ್ಲಿ ಸ್ವಲ್ಪವೂ ಸಂಶಯವಿಲ್ಲ.

ಇಂತು ಶ್ರೀ ಪದ್ಮಮಹಾಪುರಾಣದ ಉತ್ತರಖಂಡದ ಕಾರ್ತಿಕ ಮಹಿಮೆಯು
ಶ್ರೀ ಕೃಷ್ಣ ಸತ್ಯಭಾಮೆಯರ ಸಂವಾದದಲ್ಲಿ ಭೀಷ್ಮ ಪಂಚಕವ್ರತ ಕಥನ
ಎಂಬ ನೂರ ಇಪ್ಪತ್ತೈದನೆಯ ಅಧ್ಯಾಯವು ಮುಗಿದುದು.

